ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ — ೩೭

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಭವಿಷ್ಯಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅನುವಾದ ವಿವರಣೆಗಳೊಡನೆ)

ಭಾಗ — ೫

## ಮಧ್ಯಮಪರ್ವ — ಪ್ರಥಮ ಸಂಪುಟ



ಅನುವಾದಕ

ಪಂಡಿತ ಬಿ. ಚನ್ನಕೇಶವಯ್ಯ

ಆಸ್ಥಾನ ವಿದ್ವಾನ್

ಮೈಸೂರು

ಶ್ರೀ ಚಾಮುಂಡೇಶ್ವರಿ ಎಲೆಕ್ಟ್ರಿಕ್ ಪ್ರೆಸ್

೧೯೬೪

# ಮುನ್ನುಡಿ

॥ ಶ್ರೀ ಗಣೇಶ ಶಾರದಾಗುರುಭ್ಯೋನಮಃ ॥

---

ಮಾನವಜೀವನ ದುಃಖಭೂಯಿಷ್ಠವಾದುದೆನ್ನಬಹುದು. ರಥವನ್ನು ಹಳ್ಳಕ್ಕೆ ಎಳೆಯುವ ಕುದುರೆಗಳಂತೆ ಸಕಲೇಂದ್ರಿಯಗಳೂ ಮಾನವನ ಚಪಲಚಿತ್ತವನ್ನು ಅಪಮಾರ್ಗಕ್ಕೆ ಸೆಳೆಯುವುವು. ಇದನ್ನರಿತೂ ಮಾನವವೃಂದವು ಮಾತ್ರ ತನ್ನ ಚಿತ್ತವನ್ನು ಹಿಡಿದು ನಿಲ್ಲಿಸಲಾರದು. ವೇದಾಧ್ಯಯನ, ವಿಧ್ಯುಕ್ತಕರ್ಮಾನುಷ್ಠಾನ, ಸತ್ಸಹವಾಸ ಮುಂತಾದ ಸಾಧನಗಳಿಂದ ಎಲ್ಲೋ ಒಬ್ಬೊಬ್ಬರು ಮಹನೀಯರು ಶ್ರಮಸಾಧ್ಯವಾದ ಈ ಕಾರ್ಯವನ್ನು ಸಾಧಿಸಿರುವರು. ಉಪಾಯದಿಂದ ರಾಜ್ಯಕೋಶಾದಿಗಳನ್ನು ಗೆಲ್ಲಬಹುದು. ನವನಿಧಿಗಳನ್ನು ವಶಪಡಿಸಿಕೊಳ್ಳಬಹುದು. ರಾವಣಾದಿ ರಾಕ್ಷಸರಂತೆ ಕಷ್ಟಸಾಧ್ಯವಾದ ತಪಶ್ಚರ್ಯಾದಿಗಳನ್ನು ಮಾಡಬಹುದು ಆದರೆ ಇಂದ್ರಿಯ ಗ್ರಾಮಕ್ಕೆ ಮುತ್ತಿಗೆ ಹಾಕಿ ಅದನ್ನು ಸ್ವಾಧೀನಪಡಿಸಿಕೊಳ್ಳುವುದು ಸಾಧ್ಯವಲ್ಲ. ತಪಶ್ಚರ್ಯಾದಿಗಳು ತಪಸ್ಸಿನ ಫಲ ದೊರೆಯುವವರೆಗೆ ಮಾನವನನ್ನು ಹಿಂಬಾಲಿಸುವುವು. ಫಲ ದೊರೆತನಂತರ ಮತ್ತೆ ಮನೋರಾಜ್ಯವು ವಿಶಾಲವಾಗಿ ಗುಡಿಗೋಪುರಗಳನ್ನು ಕಟ್ಟಿ, ಅತ್ತಿತ್ತ ಚಲಿಸಲಾರಂಭಿಸುವುದು. ನಮ್ಮ ಪೂಜ್ಯ ಮಹರ್ಷಿಗಳು ಇದನ್ನೆಲ್ಲಾ ಅರಿತು ಅಜ್ಞಾನಿಗಳೂ, ಚಂಚಲಸ್ವಭಾವದವರೂ, ಕಾಮಕ್ರೋಧಾದಿ ಷಡ್ವರ್ಗಗಳಿಗೆ ಸಿಲುಕಿದವರೂ ಆದ, ಮಾನವಸಮಾಜಕ್ಕೆ, ವರ್ಷದ ಪ್ರತಿಮಾಸದಲ್ಲೂ ನಾನಾದಿನಗಳಲ್ಲಿ ಆಚರಿಸತಕ್ಕ ವ್ರತವನ್ನು ಕಲ್ಪಿಸಿದರು. ಪ್ರತಿ ವ್ರತದಲ್ಲಿಯೂ ಭಿನ್ನಭಿನ್ನ ದೇವತೆಗಳು, ಬೇರೆಬೇರೆಯಾದ ಪೂಜಾಕ್ರಮ, ವಿವಿಧ ಭಕ್ಷ್ಯಭೋಜ್ಯಾದಿಗಳ ನಿವೇದನ, ಬಗೆಬಗೆಯಾಗಿ ದಾನಕೊಡುವ ನಿಯಮ, ಮುಂತಾದ ಕ್ರಮಗಳನ್ನು ವಿಧಿಸಿ ಈ ಕರ್ಮಗಳಿಗೆ ಶ್ರುತಿಮುದ್ರೆಯನ್ನೊತ್ತಿ ಪ್ರಚಾರ ಪಡಿಸಿದರು. ಈ ವ್ರತಾಚರಣೆಯಿಂದ ಮೊದಲು ಭಕ್ತಿ, ಕಷ್ಟಸಹಿಷ್ಣುತೆ, ದಾನ, ಶೀಲತ್ವ ಈ ಸುಗುಣಗಳು ವ್ರತಿಗಳಲ್ಲಿ ಸ್ವತಏವ ಸ್ಥಿರಪಡುವಂತೆ ಮಾರ್ಗವನ್ನು ತೋರಿಸಿದರು. ಇದರಿಂದ ಮೇಲ್ಮಟ್ಟಕ್ಕೇರಿದ ಮನುಜರಿಗೆ ಹೋಮ, ಯಾಗ, ಪ್ರತಿಷ್ಠಾಪನ ಮುಂತಾದ ವೈದಿಕಕರ್ಮಗಳನ್ನು ವಿಧಿಸಿದರು. ಈ ಕರ್ಮಗಳ ಸ್ವರೂಪ, ವಿಧಾನ, ಅವುಗಳ ಅನುಷ್ಠಾನದಿಂದ ಸಿದ್ಧಿಪಡೆದವರ ನಿದರ್ಶನ, ಇವುಗಳನ್ನು ನಿರೂಪಿಸಲು ತಾವೇ ಶ್ರಮವಹಿಸಿ ಪುರಾಣೇತಿಹಾಸಗಳಲ್ಲಿ ವಿಸ್ತಾರವಾಗಿ ಬರೆದಿಟ್ಟರು. "ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್" ಎಂಬತತ್ವವೇ ಈ ಪುರಾಣಾದಿಗಳ ರಚನೆಗೆ ತಳಹದಿ.

ಈ ಭವಿಷ್ಯಮಹಾಪುರಾಣದ ಪರ್ವಗಳಲ್ಲಿ ಎರಡನೆಯದಾದ **ಮಧ್ಯಮಪರ್ವವು** ಈ ಸಂಪುಟದಿಂದ ಆರಂಭವಾಗುವುದು. ಪ್ರಕೃತ ಈ ಭಾಗದಲ್ಲಿ ಹೋಮಕುಂಡ, ಮಂಡಲ, ಅಗ್ನ್ಯಾಧಾನ, ಅಗ್ನಿಸಂಸ್ಕಾರ, ಹೋಮದ್ರವ್ಯಪ್ರಮಾಣ, ಪೂರ್ಣಾಹುತಿ ಕ್ರಮ, ಮಧ್ಯೆ ಸಂಭವಿಸಬಹುದಾದ ಲೋಪದೋಷಗಳು, ಅವಕ್ಕೆ ಪ್ರಾಯಶ್ಚಿತ್ತಾದಿಗಳು, ಈ ವಿಷಯಗಳೆಲ್ಲಾ ವಿಸ್ತಾರವಾಗಿ ನಿರೂಪಿತವಾಗಿವೆ. ಪ್ರತಿಮಾಪ್ರತಿಷ್ಠೆ, ಆರಾಮಪ್ರತಿಷ್ಠೆ, ತಟಾಕಪ್ರತಿಷ್ಠೆ, ವಾಸ್ತುಮಂಡಲರಚನೆ, ಪೂಜಾವಿಧಿ ಮುಂತಾದ ಅಪೂರ್ವವಿಷಯಗಳು ಈ ಭವಿಷ್ಯಮಹಾಪುರಾಣವನ್ನು ಬಿಟ್ಟರೆ ಮತ್ತೆ ಯಾವ ಪುರಾಣದಲ್ಲಿಯೂ ಇಷ್ಟು ವಿಸ್ತಾರವಾಗಿ ದೊರಕಲಾರವು. ಪ್ರತಿತಿಥಿಗಳಲ್ಲಿಯೂ ಆಚರಿಸಬೇಕಾದ ವ್ರತಗಳು, ಭುಂಜಿಸಬೇಕಾದ ಆಹಾರ, ವಾಸಿಸಬೇಕಾದ ಕ್ಷೇತ್ರಗಳು, ಏಕಾದಶೀ ಉಪವಾಸದ ನಿಯಮ, ದ್ವಾದಶೀಪಾರಣೆಯ ಪ್ರಾಶಸ್ತ್ಯ ಮುಂತಾದ ಇಲ್ಲಿ ನಿರೂಪಿತ ವಿಷಯಗಳೆಲ್ಲವೂ ನಮ್ಮ ಚಿತ್ತಶುದ್ಧಿ, ಶರೀರಾರೋಗ್ಯ ಇವುಗಳನ್ನು ಹೆಚ್ಚಿಸುವ ದಿವ್ಯೌಷಧಗಳೆಂದರೆ ತಪ್ಪಾಗಲಾರದು. ಈ ವಿಷಯಗಳ ಅರಿವಿಗೆ ಈ ಪುರಾಣದ ಪಠನೆಯೇ ಅತ್ಯಾವಶ್ಯಕ.

ವೈದಿಕರತ್ನಪ್ರಾಯಗಳಾದ ಇಂತಹ ಪ್ರಾಚೀನಗ್ರಂಥಗಳ ಮೂಲಾನುವಾದಗಳನ್ನು ಕನ್ನಡಿಗರ ಹಸ್ತಗತವಾಗುವಂತೆ ಮಾಡಿ ಕನ್ನಡಜನಾಂಗವನ್ನೇ ಉದ್ಧಾರಗೊಳಿಸಲು ಉದ್ಯುಕ್ತರಾಗಿರುವ ನಮ್ಮನ್ನಾಳುವ **ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರಿಗೂ ಅವರ ಕುಟುಂಬವರ್ಗಕ್ಕೂ ಸಹ ಜಗತ್ಪತಿಯಾದ ಮಹಾದೇವನೂ, ಜಗನ್ಮಾತೆಯಾದ ಶ್ರೀ ಚಾಮುಂಡೇಶ್ವರೀದೇವಿಯೂ ಆಯುರಾರೋಗ್ಯೈಶ್ವರ್ಯಾದಿ ಸಕಲ ಸನ್ಮಂಗಳಗಳನ್ನೂ ಅನುಗ್ರಹಿಸುತ್ತಿರಲೆಂದು ಸರ್ವದಾ ಪ್ರಾರ್ಥಿಸುವೆನು.

ಸರ್ವಜಿನ್ನಾಮಸಂವತ್ಸರದ
ಆಶ್ವಯುಜ ಶುದ್ಧ ಪ್ರತಿಪತ್ ಬುಧವಾರ,
೧೫—೧೦—೧೯೪೭.

ಸಜ್ಜನ ವಿಧೇಯ,
**ಬಿ. ಚೆನ್ನಕೇಶವಯ್ಯ,**
ಆಸ್ಥಾನ ವಿದ್ವಾನ್,



# ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ
# ವಿಷಯಾನುಕ್ರಮಣಿಕೆ.

---

## ಪ್ರಥಮ ಭಾಗ.

ಪುಟ ಸಂಖ್ಯೆ

ಪುಟ ಸಂಖ್ಯೆ

ಏಳನೆಯ ಅಧ್ಯಾಯ—

## ದೇವಕರ್ಮ ಪಿತೃಕರ್ಮಗಳಿಗೆ ಯುಕ್ತವಾದ ಕಾಲ, ಆ ಕರ್ಮಗಳಿಗೆ ತಿಥಿನಿರ್ಣಯ.



ಎಂಟನೆಯ ಅಧ್ಯಾಯ—

## ನಾನಾಮಾಸಗಳ ಪ್ರತಿಪತ್ತಿನಿಂದ ಅಮಾವಾಸ್ಯಾವರೆಗಿನ ತಿಥಿಗಳಲ್ಲಿ ಮಾಡುವ ಪೂಜಾದಿಕರ್ಮಗಳು.

॥ ಶ್ರೀ ಗಣೇಶಶಾರದಾಗುರುಭ್ಯೋ ನಮಃ ॥

ಓಂ ನಮಃ ಕಮಲದಲನಯನಾಭಿರಾಮಾಯ । ಶ್ರೀ ರಾಮಚಂದ್ರಾಯ ।

# ಮ ಧ್ಯ ಮ ಪ ರ್ವ

## ಅಥ ಶ್ರೀ ಭವಿಷ್ಯೇ ಮಹಾಪುರಾಣೇ

### ಮಧ್ಯಮ ಪರ್ವಣಿ ಪ್ರಥಮಭಾಗೇ

## ಪ್ರಥಮೋಽಧ್ಯಾಯಃ

---

ಸ್ವಚ್ಛಂ ಚಂದ್ರಾವದಾತಂ ಕವಿಕರಮಕರಕ್ಷೋಭಸಂಜಾತಫೇನಂ ।
ಬ್ರಹ್ಮೋದ್ಭೂತಿಪ್ರಸೂಕ್ತೈಃ ವ್ರತನಿಯಮಪರೈಃ ಸೇವಿತಂವಿ
ಪ್ರಮುಖ್ಯೈಃ ॥
ಓಂಕಾರಾಲಂಕೃತೇನ ತ್ರಿಭುವನಗುರುಣಾ ಬ್ರಹ್ಮಣಾ ದೃಷ್ಟಪೂತಂ ।
ಸಂಭೋಗಾಭೋಗಗಮ್ಯಂ ಜನಕಲುಷಹರಂ ಪೌಷ್ಕರಂ ವಃ ಪುನಾತು
॥ ೧ ॥

---

॥ ಶ್ರೀ ಗಣೇಶಾಯನಮಃ ಶ್ರೀ ಚಾಮುಂಡಾಂಬಾಯೈನಮಃ ॥

### ಒಂದನೆಯ ಅಧ್ಯಾಯ

೧. ಕವಿಹಸ್ತವೆಂಬ ಮೊಸಳೆಯ ಚಲನೆಯಿಂದ ಉಂಟಾದುದೂ, ನಿರ್ಮಲವಾಗಿಯೂ, ಚಂದ್ರನಂತೆ ಶುಭ್ರವಾಗಿಯೂ ಇರುವ ನೊರೆಯುಳ್ಳದ್ದೂ, ವೇದೋತ್ಪನ್ನಗಳಾದ ಶ್ರೇಷ್ಠಸೂಕ್ತಗಳುಳ್ಳದ್ದೂ, ವ್ರತನಿಯಮಗಳಲ್ಲಿ ಆಸಕ್ತರಾದ ಬ್ರಾಹ್ಮಣರಿಂದ ಸೇವಿಸಲ್ಪಟ್ಟದ್ದೂ, ಓಂಕಾರಾಲಂಕೃತನೂ ತ್ರಿಲೋಕಗುರುವೂ ಆದ ಬ್ರಹ್ಮನಿಂದ ದೃಷ್ಟವಾದುದೂ, ಶುದ್ಧವಾದುದೂ, ಅನುಭವಾತಿಶಯದಿಂದ ವೇದ್ಯವಾದುದೂ, ಭಕ್ತಜನರ ಪಾಪನಾಶಕವಾದುದೂ ಆಗಿ, ಅಂತರಿಕ್ಷದಲ್ಲಿ ಕಾಣುವ ದಿವ್ಯತೇಜಸ್ಸು ನಿಮ್ಮನ್ನು ಪರಿಶುದ್ಧರನ್ನಾಗಿ ಮಾಡಲಿ.

ಜಯತಿ ಭುವನದೀಪೋ ಭಾಸ್ಕರೋ ಲೋಕಕರ್ತಾ ।
ಜಯತಿ ಚ ಶಿತಿದೇಹಃ ಶಾರ್ಙ್ಗಧನ್ವಾ ಮುರಾರಿಃ ॥
ಜಯತಿ ಚ ಶಶಿಮೌಲೀ ರುದ್ರನಾಮಾಭಿಧೇಯಃ ।
ಜಯತಿ ಸಕಲಮೌಲಿರ್ಭಾನುಮಾಂಶ್ಚಿತ್ರಭಾನುಃ ॥ ೨ ॥

ನಮಸ್ಕೃತ್ಯಾಪ್ರಮೇಯಾಯ ದೇವಾಯ ಬ್ರಹ್ಮರೂಪಿಣೇ ।
ಪುರಾಣಂ ಸಂಪ್ರವಕ್ಷ್ಯಾಮಿ ಯದುಕ್ತಂ ಬ್ರಹ್ಮಯೋಗಿನಾ ॥ ೩ ॥

ಪುರಾಣಸಂಹಿತಾಂ ಪುಣ್ಯಾಂ ಪಪ್ರಚ್ಛುರ್ಲೋಮಹರ್ಷಿಣೀಂ ।
ವಕ್ತುಮರ್ಹಸಿ ಚಾಸ್ಮಾಕಂ ಪುರಾಣಾರ್ಥವಿಶಾರದ ॥ ೪ ॥

ಮುನೀನಾಂ ವಚನಂ ಶ್ರುತ್ವಾ ಸೂತಃ ಪೌರಾಣಿಕೋತ್ತಮಃ ।
ಪ್ರಣಮ್ಯ ಮನಸಾ ಪ್ರಾಹ ಗುರುಂ ಸತ್ಯವತೀಸುತಂ ॥ ೫ ॥

---

೨. ಸೂರ್ಯದೇವನು ಲೋಕಗಳನ್ನು ಸೃಷ್ಟಿಸಿ ಬೆಳಗಿಸುವನು. ಶಾರ್ಙ್ಗ ಧನುರ್ಧಾರಿಯಾಗಿ ನೀಲಮೇಘಶ್ಯಾಮನೆನಿಸಿದ ಮಹಾವಿಷ್ಣುವು ಜಗತ್ತನ್ನು ಪಾಲಿಸುವನು. ಚಂದ್ರಶೇಖರನಾಗಿ ರುದ್ರನಾಮದಿಂದ ಮಹೇಶ್ವರನು ಪ್ರಪಂಚವನ್ನು ಲಯಗೊಳಿಸುವನು. ಹೀಗೆ ತ್ರಿಮೂರ್ತಿಗಳಿಂದ ಕಾಂತಿಯನ್ನು ಪಡೆದು ಯಜ್ಞೇಶ್ವರನು ದೇವದೇವನಾಗಿರುವನು. ಇಂತಹ ಸೂರ್ಯಪರಮಾತ್ಮನೂ, ವಿಷ್ಣು, ಮಹೇಶ್ವರರೂ, ಅಗ್ನಿದೇವನೂ ಸರ್ವೋತ್ಕೃಷ್ಟರಾಗಿ ವರ್ಧಿಸಲಿ.

೩. ಅಳತೆಮಾಡಲು ಅಶಕ್ಯವಾದಷ್ಟು (ಅಪರಿಮಿತ) ಶಕ್ತಿಯುಳ್ಳ ಬ್ರಹ್ಮದೇವನಿಗೆ ನಮಸ್ಕರಿಸಿ, ಬ್ರಹ್ಮಯೋಗಿಯು ಹೇಳಿದ ಪುರಾಣವನ್ನು ಚೆನ್ನಾಗಿ ವಿವರಿಸಿ ಹೇಳುತ್ತೇನೆ.

೪. "ಪುರಾಣವನ್ನು ನಿರೂಪಣೆ ಮಾಡುವುದರಲ್ಲಿ ಜಾಣನಾದ ಎಲೈ ಪೂಜ್ಯನೇ! ಪುಣ್ಯಕರವಾದ ಪುರಾಣಸಂಹಿತೆಯನ್ನು ನಮಗೆ ಹೇಳುವುದಕ್ಕೆ ನೀನೇ ತಕ್ಕವನಾಗಿದ್ದೀ" ಎಂಬದಾಗಿ ರೋಮಹರ್ಷಣ ಪುತ್ರನಾದ ಸೂತನನ್ನು ಶೌನಕಾದಿ ಋಷಿಗಳು ಪ್ರಶ್ನೆಮಾಡಿದರು.

೫. ಋಷಿಗಳು ಹೇಳಿದ ಈ ಮಾತನ್ನು ಕೇಳಿ, ಪೌರಾಣಿಕರಲ್ಲಿ ಶ್ರೇಷ್ಠನಾದ ಸೂತನು ತನ್ನ ಗುರುವೂ ಸತ್ಯವತೀ ಪುತ್ರನೂ ಆದ ವ್ಯಾಸನನ್ನು ಮನಸ್ಸಿನಲ್ಲಿಯೇ ವಂದಿಸಿ ಅನಂತರ ಪುರಾಣವನ್ನು ಹೇಳಲು ಉದ್ದೇಶಿಸಿದನು.

॥ ಸೂತ ಉವಾಚ ॥

ನಮಸ್ಕೃತ್ಯ ಜಗದ್ಯೋನಿಂ ಬ್ರಹ್ಮರೂಪಧರಂ ಹರಿಂ ।
ವಕ್ಷ್ಯೇ ಪೌರಾಣಿಕೀಂ ದಿವ್ಯಾಂ ಕಥಾಂ ಪಾಪಪ್ರಣಾಶಿನೀಂ ॥ ೬ ॥

ಯಚ್ಛ್ರುತ್ವಾ ಪಾಪಕರ್ಮಾಣಿ ಸ ಗಚ್ಛೇತ್ಪರಮಾಂ ಗತಿಂ ।
ಪುಣ್ಯಂ ಪವಿತ್ರಮಾಯುಷ್ಯಮಿದಾನೀಂ ಶೃಣುತ ದ್ವಿಜಾಃ ॥ ೭ ॥

ಭವಿಷ್ಯಪುರಾಣಮಖಿಲಂ ಯಜ್ಜಗಾದ ಗದಾಧರಃ ।
ಮಧ್ಯಪರ್ವ ಹ್ಯಥೋ ವಕ್ಷ್ಯೇ ಪ್ರತಿಷ್ಠಾದಿವಿನಿರ್ಣಯಂ ॥ ೮ ॥

ಧರ್ಮಪ್ರಶಂಸನಂ ಚಾತ್ರ ಬ್ರಾಹ್ಮಣಾದಿಪ್ರಶಂಸನಂ ।
ಆಪದ್ಧರ್ಮಸ್ಯ ಕಥನಂ ವಿದ್ಯಾಮಾಹಾತ್ಮ್ಯವರ್ಣನಂ ॥ ೯ ॥

ಪ್ರತಿಮಾಕರಣಂ ಚೈವ ಸ್ಥಾಪನಾಚಿತ್ರಲಕ್ಷಣಂ ।
ಕಾಲವ್ಯವಸ್ಥಾ ಸರ್ಗಾದಿಪ್ರತಿಸರ್ಗಾದಿಲಕ್ಷಣಂ ॥ ೧೦ ॥

---

೬. ಸೂತನು ಶೌನಕಾದಿಗಳನ್ನು ಕುರಿತು ಹೇಳುತ್ತಾನೆ—ಜಗತ್ಕಾರಣನೂ, ಬ್ರಹ್ಮಸ್ವರೂಪವನ್ನು ಧರಿಸಿದವನೂ ಆದ ಶ್ರೀಹರಿಗೆ ನಮಸ್ಕರಿಸಿ, ಪಾಪನಾಶಕರವೂ, ಶ್ರೇಷ್ಠವೂ ಆದ ಪುರಾಣಕಥೆಯನ್ನು ಹೇಳುತ್ತೇನೆ.

೭. ಇದನ್ನು ಶ್ರವಣಮಾಡಿದವನಿಗೆ ಪಾಪಗಳೆಲ್ಲವೂ ನಾಶವಾಗಿ. ಅವನು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ. ಎಲೈ ಬ್ರಾಹ್ಮಣರೇ! ಪುಣ್ಯಕರವೂ, ಪರಿಶುದ್ಧಿಕರವೂ, ಆಯುರ್ವೃದ್ಧಿಕರವೂ ಆದ ಪುರಾಣವನ್ನು ಈಗ ಹೇಳುವೆನು ಕೇಳಿರಿ.

೮. ಆ ಭವಿಷ್ಯಪುರಾಣವೆಲ್ಲವನ್ನೂ ಗದಾಧರನಾದ ವಿಷ್ಣುವು ಹೇಳಿದನು. ಅದರಲ್ಲಿ ಈಗ ಮಧ್ಯಮಪರ್ವವನ್ನು ಹೇಳುತ್ತೇನೆ.

೮-೧೦. ಎಲೈ ಬ್ರಾಹ್ಮಣೋತ್ತಮರೇ! ಇದರಲ್ಲಿ ಪ್ರತಿಮಾ ತಟಾಕ ವೃಕ್ಷಾದಿಗಳ ಪ್ರತಿಷ್ಠಾದಿ ವಿಚಾರಗಳು ವರ್ಣಿತವಾಗಿದೆ. ಅಲ್ಲದೆ ಧರ್ಮಶ್ರೇಷ್ಠತೆಯ ಪ್ರಶಂಸೆ, ಬ್ರಾಹ್ಮಣಾದಿಗಳ ಪ್ರಶಂಸೆ, ಆಪದ್ಧರ್ಮನಿರೂಪಣೆ, ವಿದ್ಯಾಮಾಹಾತ್ಮ್ಯವರ್ಣನೆ, ಪ್ರತಿಮಾನಿರ್ಮಾಣ ವಿಚಾರ, ಬಗೆಬಗೆಯ ಪ್ರಾಕಾರದ ಪ್ರತಿಮಾಸಂಸ್ಥಾಪನೆ, ಪ್ರತಿಮಾ ಪ್ರತಿಷ್ಠೆಯ ಕಾಲವ್ಯವಸ್ಥೆ, ಸರ್ಗ ಪ್ರತಿಸರ್ಗ ಮೊದಲಾದ ವಿಭಾಗವುಳ್ಳ ಪುರಾಣಲಕ್ಷಣ ಇವುಗಳು ವಿವರಿಸಲ್ಪಟ್ಟಿವೆ.

ಪುರಾಣಲಕ್ಷಣಂ ಚೈವ ಭೂಗೋಲಸ್ಯ ಚ ನಿರ್ಣಯಂ ।
ನಿರೂಪಣಂ ತಿಥೀನಾಂ ಚ ಶ್ರಾದ್ಧಸಂಕಲ್ಪಮಂತರಾ ॥ ೧೧ ॥

ಮೂಮೂರ್ಷೋಃ ರಪಿ ಯತ್ಕರ್ಮ ದಾನಮಾಹಾತ್ಮ್ಯಮೇವ ಚ ।
ಭೂತಂ ಭವ್ಯಂ ಭವಿಷ್ಯಂ ಚ ಯುಗಧರ್ಮಾನುಶಾಸನಂ ॥ ೧೨ ॥

ಉಚ್ಚಾವಚಾವಧಾನಂ ಚ ಪ್ರಾಯಶ್ಚಿತ್ತಾದಿಕಂ ಚ ಯತ್ ।
ಷಷ್ಟ್ಯಧಿಕಾಷ್ಟಸಾಹಸ್ರ ನವಶ್ಲೋಕಶತೋದ್ಭವಂ ॥ ೧೩ ॥

ಪಂಚತಂತ್ರಸಮಾಯುಕ್ತಂ ಪ್ರತಿತಂತ್ರೇ ಚ ವಿಂಶತಿಃ ।
ಪಂಚೋತ್ತರಂ ತಥಾಧ್ಯಾಯಾಃ ಪುರಾಣೇಽಸ್ಮಿನ್ ದ್ವಿಜೋತ್ತಮಾಃ ॥೧೪॥

ತ್ರಯಾಣಾಮಾಶ್ರಮಾಣಾಂ ಚ ಗೃಹಸ್ಥೋ ಯೋನಿರುಚ್ಯತೆ ।
ಅನ್ಯೇಽಪಿ ಸೂಪಜೀವಂತಿ ತಸ್ಮಾಚ್ಛ್ರೇಷ್ಠೋ ಗೃಹಾಶ್ರಮೀ ॥ ೧೫ ॥

---

೧೧-೧೨. ಮತ್ತು ಭೂಗೋಳದ ಅವಸ್ಥಾನ ಪರಿಮಾಣಗಳ ನಿರ್ಣಯ, ತಿಥಿಗಳ ಉತ್ಪತ್ತಿನಿರೂಪಣ, ಶ್ರಾದ್ಧದ ಉತ್ತಮ ಕಲ್ಪ, ಉತ್ಕ್ರಮಣ ಕಾಲವೊದಗಿದಾಗ ಮಾಡಬೇಕಾದ ಆತುರ ದಾನಾದಿ ಕರ್ಮಗಳು, ಹಾಗೆ ದಾನಮಾಡುವುದರ ಫಲ ಇವುಗಳೂ.

೧೨-೧೪. ಹಾಗೆಯೇ ಹಿಂದೆ ನಡೆದ, ಈಗ ನಡೆಯುತ್ತಿರುವ, ಮತ್ತು ಮುಂದೆ ನಡೆಯುವ, ಯುಗಧರ್ಮ ನಿರೂಪಣವೂ, ನಾನಾಪ್ರಕಾರವಾದ ಅವಧಾನ, ಪ್ರಾಯಶ್ಚಿತ್ತ, ಮೊದಲಾದ ವಿಚಾರಗಳೂ ಉಕ್ತವಾಗಿವೆ. ಇದರೊಳಗೆ ಎಂಟು ಸಾವಿರದ ಒಂಭೈನೂರ ಅರವತ್ತೈದು ಶ್ಲೋಕಗಳಿವೆ. ಐದು ತಂತ್ರಗಳಾಗಿ ವಿಭಾಗಿಸಲ್ಪಟ್ಟು, ಪ್ರತಿ ತಂತ್ರದಲ್ಲೂ ಇಪ್ಪತ್ತು ಅಧ್ಯಾಯಗಳು ಮೇಲೆ ಐದು ಅಧ್ಯಾಯಗಳುಳ್ಳದಾಗಿ ಹೇಳಲ್ಪಟ್ಟಿವೆ.

೧೫. ಗೃಹಸ್ಥನೇ ಬ್ರಹ್ಮಚರ್ಯಾದಿ ಮೂರು ಆಶ್ರಮಗಳಿಗೂ ಕಾರಣನೆಂದು ಹೇಳಬಹುದು. ಇತರ ಆಶ್ರಮಗಳವರೆಲ್ಲರೂ ಗೃಹಸ್ಥನನ್ನೇ ಅನುಸರಿಸಿ ಸುಖವಾಗಿ ಜೀವಿಸುತ್ತಾರೆ. ಆದುದರಿಂದ ಗೃಹಸ್ಥಾಶ್ರಮಿಯೇ ಶ್ರೇಷ್ಠನು.

**ಏಕಾಶ್ರಮಂ ಗೃಹಸ್ಥಸ್ಯ ತ್ರಯಾಣಾಂ ಸೂತಿದರ್ಶನಂ ।**
**ತಸ್ಮಾದ್ಗಾರ್ಹಸ್ಥ್ಯಮೇವೈಕಂ ವಿಜ್ಞೇಯಂ ಧರ್ಮಶಾಸನಂ ॥ ೧೬ ॥**

**ಪರಿತ್ಯಜೇದರ್ಥಕಾಮೌ ಯೌ ಸ್ಯಾತಾಂ ಧರ್ಮವರ್ಜಿತೌ ।**
**ಸರ್ವಲೋಕವಿರುದ್ಧಂ ಚ ಧರ್ಮಮಪ್ಯಾಚರೇನ್ನ ತು ॥ ೧೭ ॥**

**ತಡಾಗಸ್ಯ ಚ ಸಾನ್ನಿಧ್ಯೇ ತಡಾಗಂ ಪರಿವರ್ಜಯೇತ್ ।**
**ಪ್ರಪಾಸ್ಥಾನೇ ಪ್ರಪಾ ವರ್ಜ್ಯಾ ಮಠಸ್ಥಾನೇ ಮಠಂ ತ್ಯಜೇತ್ ॥ ೧೮ ॥**

**ಧರ್ಮಾತ್ಸಂಜಾಯತೇ ಹ್ಯರ್ಥಃ ಧರ್ಮಾತ್ಕಾಮೋಽಭಿಜಾಯತೆ ।**
**ಧರ್ಮಾದೇವಾಪವರ್ಗೋಽಯಂ ತಸ್ಮಾದ್ಧರ್ಮಂ ಸಮಾಶ್ರಯೇತ್ ॥೧೯॥**

---

೧೬. ಗೃಹಸ್ಥಾಶ್ರಮವೊಂದೇ ಇತರ ಆಶ್ರಮಗಳ ಉತ್ಪತ್ತಿಗೆ ಸಾಧನವಾಗುತ್ತದೆ. ಆದುದರಿಂದ ಗೃಹಸ್ಥಾಶ್ರಮವೊಂದೇ ಧರ್ಮೋಪದೇಶಕವಾದುದೆಂದು ತಿಳಿಯಬೇಕು.

೧೭. ಧರ್ಮವಿರುದ್ಧವಾಗಿ ಸಂಪಾದಿಸಿದ ಹಣವನ್ನು ವರ್ಜ್ಯಮಾಡಬೇಕು. ಕಾಮಾಭಿಲಾಷೆಯು ಧರ್ಮವಿರುದ್ಧವಾಗಿ ಉಂಟಾಗುವುದಾದರೆ ಅದನ್ನೂ ಪರಿತ್ಯಾಗ ಮಾಡಬೇಕು. ಇದರಲ್ಲಿ ಒಂದು ವಿಚಾರವುಂಟು ಲೋಕದಲ್ಲಿ ಬಹುಜನರಿಗೆ ವಿರೋಧವಾಗುವಂತಹ ವಿಷಯವು ಧರ್ಮಸಮ್ಮತವಾಗಿದ್ದರೂ ಅದನ್ನು ಬಿಟ್ಟುಬಿಡಬಹುದು.

೧೮. ಒಂದುಕೆರೆಯ ಸಮೀಪದಲ್ಲಿ ಮತ್ತೊಂದು ಕೆರೆಯನ್ನು ಕಟ್ಟಿಸುವುದು ಧರ್ಮವಿರುದ್ಧವಾದರೆ, ಆ ತಟಾಕ ನಿರ್ಮಾಣಪ್ರಯತ್ನವನ್ನೇ ಬಿಡಬೇಕು. ಒಂದು ಅರವಟ್ಟಿಗೆ ಇಟ್ಟಿರುವ ಸ್ಥಳದಲ್ಲಿ ಮತ್ತೊಂದು ಅರವಟ್ಟಿಗೆಯನ್ನು ಇಡುವುದು ಧರ್ಮವಿರೋಧವೆಂದು ತೋರಿದರೆ ಹಾಗೆ ಮಾಡಬಾರದು. ಒಂದು ಮಠವಿರುವ ಜಾಗದಲ್ಲಿ ಮತ್ತೊಂದು ಮಠವನ್ನೇರ್ಪಡಿಸುವುದು ಧರ್ಮವಿರುದ್ಧವಾದರೆ ಹಾಗೆ ಬೇರೆ ಮಠವನ್ನು ಕಟ್ಟಬಾರದು.

೧೯. ಧರ್ಮಾಚರಣವಿಂದಲೇ ಅರ್ಥಸಂಗ್ರಹವಾಗುವುದು. ಧರ್ಮಾಚರಣದಿಂದಲೇ-ಕಾಮ (ಇಷ್ಟಾರ್ಥ) ಸಾಧನೆಯುಂಟಾಗುವುದು. ಧರ್ಮಾಚರಣದಿಂದಲೇ ಮೋಕ್ಷವೂ ಉಂಟಾಗುವುದು.ಆದುದರಿಂದ ಮುಖ್ಯವಾಗಿ ಧರ್ಮವನ್ನಾಶ್ರಯಿಸಬೇಕು.

ಧರ್ಮಶ್ಚಾರ್ಥಶ್ಚ ಕಾಮಶ್ಚ ತ್ರಿವರ್ಗಸ್ತ್ರಿಗುಣೋ ಮತಃ ।
ಸತ್ತ್ವಂ ರಜಸ್ತಮಶ್ಚೇತಿ ತಸ್ಮಾದ್ಧರ್ಮಂ ಸಮಾಶ್ರಯೇತ್ ॥ ೨೦ ॥

ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾಃ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾಃ ಅಧೋ ಗಚ್ಛಂತಿ ತಾಮಸಾಃ ॥ ೨೧ ॥

ಯಸ್ಮಿನ್ ಧರ್ಮ ಸಮಾಯುಕ್ತಃ ಹ್ಯರ್ಥಕಾಮೌ ವ್ಯವಸ್ಥಿತೌ ।
ಇಹಲೋಕೇ ಸುಖೀ ಭೂತ್ವಾ ಪ್ರೇತ್ಯಾನಂತ್ಯಾಯ ಕಲ್ಪತೆ ॥ ೨೨ ॥

ತಸ್ಮಾದರ್ಥಂ ಚ ಕಾಮಂ ಚ ಯುಕ್ತ್ವಾ ಧರ್ಮಂ ಸಮಾಶ್ರಯೇತ್ ।
ಧರ್ಮಾತ್ಸಂಜಾಯತೇ ಕಾಮೋ ಧರ್ಮಾದರ್ಥೋಽಭಿಜಾಯತೆ ॥ ೨೩ ॥

---

೨೦. ಧರ್ಮಾರ್ಥಕಾಮಗಳು ಸತ್ವ, ರಜಸ್ಸು, ತಮಸ್ಸು, ಎಂಬ ಗುಣತ್ರಯ ಗಳನ್ನು ಆಶ್ರಯಿಸಿರುವುವು. ಧರ್ಮಾದಿಗಳು ಮೂರೂ ತ್ರಿವರ್ಗವೆನಿಸಿಕೊಳ್ಳುತ್ತವೆ. ಆದುದರಿಂದ ಧರ್ಮವನ್ನು ಎಂದೂ ಅತಿಕ್ರಮಿಸದೆ ಧರ್ಮಾನುಸಾರವಾಗಿಯೇ ನಡೆ ಯಬೇಕು.

೨೧. ಸತ್ವಗುಣಪ್ರಧಾನರಾದ ಜನರು ಊರ್ಧ್ವಲೋಕ (ಇಂದ್ರಾದಿ ಲೋಕ) ಗಳನ್ನು ಹೊಂದುವರು. ರಜೋಗುಣಪ್ರಧಾನರಾದವರು ಮನುಷ್ಯಲೋಕವನ್ನು ಹೊಂದುವರು. ತಮೋಗುಣಪ್ರಧಾನರಾದವರು ನೀಚವೃತ್ತಿಯವರಾದ ಕಾರಣ ಅಧೋಗತಿಯನ್ನು ಹೊಂದುತ್ತಾರೆ.

೨೨ ಧರ್ಮವನ್ನು ಚೆನ್ನಾಗಿ ಅನುಸರಿಸಿ, ಅರ್ಥಕಾಮಗಳಲ್ಲೂ ಕೂಡ ಬಂದು ನಿಯಮಾನುಸಾರವಾಗಿರುವಂಥವನು, ಇಹಲೋಕದಲ್ಲಿ ಸುಖಿಯೆನಿಸಿದ್ದು ದೇಹಾವಸಾ ನದಲ್ಲಿ ಮುಕ್ತಿಯನ್ನು ಪಡೆಯುತ್ತಾನೆ.

೨೩. ಆದುದರಿಂದ ಅರ್ಥಕಾಮ ಇವುಗಳಿಂದ ಕೂಡಿದವರಾಗಿರುತ್ತಾ ಧರ್ಮವನ್ನು ಆಶ್ರಯಿಸಬೇಕು. ಧರ್ಮದಿಂದ ಅರ್ಥವುಂಟಾಗುವುದು. ಧರ್ಮದಿಂದ ಕಾಮವೂ ಉಂಟಾಗುವುದು.

ಏವಂ ಧರ್ಮಸ್ಯ ಮಧ್ಯೇಽಯಂ ಚತುರ್ವರ್ಗಃ ಪ್ರದರ್ಶಿತಃ ।
ಏವಂ ಚ ಧರ್ಮಕಾಮಾರ್ಥಂ ಮೋಕ್ಷಾರ್ಥಮಪಿ ಮಾನವಃ ॥ ೨೪ ॥

ಮಾಹಾತ್ಮ್ಯಂ ಚಾನುತಿಷ್ಠೇದ್ವಾ ಸಚಾನಂತ್ಯಾಯ ಕಲ್ಪತೇ ।
ತಸ್ಮಾದರ್ಥಂ ಚ ಕಾಮಂ ಚ ಮುಕ್ತ್ವಾ ಧರ್ಮಂ ಸಮಾಚರೇತ್ ॥
ಧರ್ಮಾತ್ಸಂಜಾಯತೇ ಸರ್ವಮಿತ್ಯಾಹುರ್ಬ್ರಹ್ಮವಾದಿನಃ ॥ ೨೫ ॥

ಧರ್ಮೇಣ ಧಾರ್ಯತೇ ಸರ್ವಂ ಜಗತ್ ಸ್ಥಾವರಜಂಗಮಂ ।
ಅನಾದಿನಿಧನಾ ಶಕ್ತಿಃ ಸೈಷಾ ಬ್ರಾಹ್ಮೀ ದ್ವಿಜೋತ್ತಮ ॥ ೨೬ ॥

ಕರ್ಮಣಾ ಪ್ರಾಪ್ಯತೇ ಧರ್ಮಃ ಜ್ಞಾನೇನ ಚ ನ ಸಂಶಯಃ ।
ತಸ್ಮಾಜ್ಜ್ಞಾನೇನ ಸಹಿತಂ ಕರ್ಮಯೋಗಂ ಸಮಾಚರೇತ್ ॥ ೨೭ ॥

---

೨೪. ಹೀಗೆ ಚತುರ್ವರ್ಗದ ಮಧ್ಯದಲ್ಲಿ ಧರ್ಮವೊಂದೆಂದು ವ್ಯಕ್ತಪಡಿಸಿದುದಾಯಿತು. ಒಟ್ಟಿನಲ್ಲಿ ಧರ್ಮಕಾಮಗಳಿಗಾಗಿಯೂ, ಮೋಕ್ಷಕ್ಕಾಗಿಯೂ ಮನುಷ್ಯನು ತನ್ನಲ್ಲಿ ಮಾಹಾತ್ಮ್ಯವನ್ನು ಸಂಪಾದಿಸಿಕೊಳ್ಳಬೇಕು. ಹೀಗೆ ಮಾಡಿಕೊಂಡರೆ ಅವನು ಮೋಕ್ಷಪ್ರಾಪ್ತಿಗೆ ಸಿದ್ಧನಾಗುತ್ತಾನೆ.

೨೫. ಆದುದರಿಂದ ಅರ್ಥಕಾಮ ಇವುಗಳಲ್ಲಿ ಪ್ರಾಧಾನ್ಯದೃಷ್ಟಿಯುನ್ನಿಡದೆ ಧರ್ಮವನ್ನೇ ಮುಖ್ಯವಾಗಿ ಆಚರಿಸಬೇಕು. ಧರ್ಮದಿಂದ ಇವೆಲ್ಲವೂ ಲಭಿಸುತ್ತವೆ" ಎಂದು ಬ್ರಹ್ಮಜ್ಞರು ಹೇಳುತ್ತಾರೆ.

೨೬. ಸ್ಥಾವರಜಂಗಮಗಳಿಂದ ಕೂಡಿದ ಪ್ರಪಂಚವೆಲ್ಲವೂ ಧರ್ಮದಿಂದಲೇ ನಿಂತಿರುವುದು. ಎಲೈ ಬ್ರಾಹ್ಮಣೋತ್ತಮರೇ! ಜಗತ್ತನ್ನು ಉಳಿಸುವುದು ಬ್ರಾಹ್ಮಣನ ಶಕ್ತಿಯೆಂದು ತಿಳಿಯಬೇಡಿ. ಅದು ಧರ್ಮದ ಶಕ್ತಿಯಾಗಿದೆ. ಈ ಧರ್ಮದ ಶಕ್ತಿಗೆ ಕೊನೆ ಮೊದಲು ಇಲ್ಲ ಎನ್ನಬಹುದು.

೨೭. ಕರ್ಮ ಜ್ಞಾನ ಇವುಗಳಿಂದ ಧರ್ಮವು ಸಂಪಾದನೆಯಾಗುವುದು. ಇದರಲ್ಲಿ ಸಂಶಯವಿಲ್ಲ. ಆದುದರಿಂದ ಧರ್ಮಸಾಧನೆಯಾಗುವಂತೆ ಜ್ಞಾನಸಹಿತವಾದ ಕರ್ಮಯೋಗವನ್ನು ಆಚರಿಸಬೇಕು.

ಪ್ರವೃತ್ತಿಶ್ಚ ನಿವೃತ್ತಿಶ್ಚ ದ್ವಿವಿಧಂ ಕರ್ಮ ವೈದಿಕಂ ।
ಜ್ಞಾನಪೂರ್ವಾ ನಿವೃತ್ತಿಃ ಸ್ಯಾತ್ಪ್ರವೃತ್ತಿರ್ವರ್ತತೇಽನ್ಯಥಾ ॥ ೨೮ ॥

ನಿವೃತ್ತಿಂ ಸೇವಮಾನಸ್ತು ಯಾತಿ ತತ್ಪರಮಂ ಪದಂ ।
ತಸ್ಮಾನ್ನಿವೃತ್ತಿಂ ಸಂಸೇವ್ಯಮನ್ಯಥಾ ಸಂಸರೇತ್ಪುನಃ ॥ ೨೯ ॥

ಶಮೋ ದಮೋ ದಯಾ ದಾನಮಲೋಭಸ್ತ್ಯಾಗ ಏವ ಚ ।
ಆರ್ಜವಂ ಚಾನಸೂಯಾ ಚ ತೀರ್ಥಾನುಸರಣಂ ತಥಾ ॥ ೩೦ ॥

ಸತ್ಯಂ ಸಂತೋಷ ಆಸ್ತಿಕ್ಯಂ ಶ್ರದ್ಧಾ ಚೇಂದ್ರಿಯನಿಗ್ರಹಃ ।
ದೇವತಾಭ್ಯರ್ಚನಂ ಪೂಜಾ ಬ್ರಾಹ್ಮಣಾನಾಂ ವಿಶೇಷತಃ ॥ ೩೧ ॥

ಅಹಿಂಸಾ ಸತ್ಯವಾದಿತ್ವಮಪೈಶುನ್ಯಂ ಸುಕಲ್ಪತಾ ।
ಶೌಚಾಚಾರಶ್ಚಾನುಕಂಪಾ ಸರ್ವವರ್ಣೇಽಬ್ರವೀನ್ಮುನಿಃ ॥ ೩೨ ॥

---

೨೮. ವೈದಿಕಧರ್ಮದಲ್ಲಿ ಪ್ರವೃತ್ತಿಮಾರ್ಗ, ನಿವೃತ್ತಿಮಾರ್ಗ, ಎಂದು ಎರಡು ಬಗೆಗಳಿವೆ. ನಿವೃತ್ತಿಮಾರ್ಗವೆಂಬುದು ಜ್ಞಾನಪ್ರಾಧಾನ್ಯವಾಗಿರುತ್ತದೆ. ಪ್ರವೃತ್ತಿಮಾರ್ಗವೆಂಬುದು ಅದಕ್ಕಿಂತ ಬೇರೆ ವಿಧವಾಗಿರುತ್ತದೆ.

೨೯. ನಿವೃತ್ತಿಮಾರ್ಗವನ್ನು ಅವಲಂಬಿಸತಕ್ಕವನು ಶ್ರೇಷ್ಠವಾದ ಪರಮಪದಕ್ಕೆ ಹೋಗುವನು. ಆದುದರಿಂದ ಪ್ರಾಜ್ಞನು ನಿವೃತ್ತಿಧರ್ಮವನ್ನೇ ಅನುಸರಿಸಬೇಕು ಹಾಗಿಲ್ಲದೆ ಪ್ರವೃತ್ತಿಮಾರ್ಗಾವಲಂಬಿಯಾದರೆ ಮತ್ತೆ ಸಂಸಾರಬಂಧನಕ್ಕೆ ಸಿಕ್ಕಿಕೊಳ್ಳುತ್ತಾನೆ.

೩೦. ಅಂತರಿಂದ್ರಿಯನಿಗ್ರಹ (ಶಮ) ಬಹಿರಿಂದ್ರಿಯನಿಗ್ರಹ (ದಮ) ದಯಾ, ದಾನ, ಲೋಭವಿಲ್ಲದಿರುವಿಕೆ, ದಾನಶೀಲತೆ, ಋಜುತ್ವ, ಅಸೂಯೆಯಿಲ್ಲದಿರುವುದು, ಸದಾ ಗುರುಹಿರಿಯರನ್ನಾಶ್ರಯಿಸುವುದು.

೩೧-೩೨. ಸತ್ಯ, ಸದಾ ಸಂತೋಷಚಿತ್ತತೆ, ದೈವಭಕ್ತಿ, ಆಸ್ತಿಕ್ಯಬುದ್ಧಿ, ಶ್ರದ್ಧೆ, ಇಂದ್ರಿಯನಿಗ್ರಹ, ದೇವತಾರ್ಚನೆ ಇವು ಬ್ರಾಹ್ಮಣರಲ್ಲಿ ವಿಶೇಷವಾಗಿ ಇರಬೇಕು. ಅಹಿಂಸೆ, ಸತ್ಯವಾದಿತ್ವ, ಚಾಡಿಯಸಂಪರ್ಕವಿಲ್ಲದಿರುವುದು, ಕಾರ್ಯನಿರ್ವಾಹದಲ್ಲಿ ಒಳ್ಳೆಯಸಾಮರ್ಥ್ಯ, ಪರಿಶುದ್ಧವಾದ ನಡತೆ, ದಯಾವಂತರಾಗಿರುವುದು ಈ ಗುಣಗಳು ಸಮಸ್ತವರ್ಣದವರಲ್ಲಿಯೂ ಇರಬೇಕಾದುವು" ಎಂದು ಮಹರ್ಷಿಗಳು ಹೇಳಿದ್ದಾರೆ.

ಶ್ರದ್ಧಾಪೂರ್ವಾಃ ಸ್ಮೃತಾ ಧರ್ಮಾಃ ಶ್ರದ್ಧಾಮಧ್ಯೇ ತು ಸಂಸ್ಥಿತಾಃ ।
ಶ್ರದ್ಧಾನಿಷ್ಠಾಃ ಪ್ರತಿಷ್ಠಾಶ್ಚ ಧರ್ಮಾಃ ಶ್ರದ್ಧೈವ ಕೀರ್ತಿತಾಃ ॥ ೩೩ ॥

ಪ್ರಾಜಾಪತ್ಯಂ ಬ್ರಾಹ್ಮಣಾನಾಂ ಶ್ರುತಂ ಸ್ಥಾನಂ ಕ್ರಿಯಾವತಾಂ ।
ಸ್ಥಾನಮೈಂದ್ರಂ ಕ್ಷತ್ರಿಯಾಣಾಂ ಸಂಗ್ರಾಮೇಷ್ವಪಲಾಯಿನಾಂ ॥ ೩೪ ॥

ವೈಶ್ಯಾನಾಮನುಮೃತಂ ಸ್ಥಾನಂ ಸ್ವಧರ್ಮಮನುವರ್ತತಾಂ ।
ಗಾಂಧರ್ವಂ ಶೂದ್ರಜೀವಾನಾಂ ಪರಿಚಾರೇಣ ವರ್ತತಾಂ ॥ ೩೫ ॥

ಅಷ್ಟಾಶೀತಿ ಸಹಸ್ರಾಣಾಂ ಮುನೀನಾಮೂರ್ಧ್ವರೇತಸಾಂ ।
ಸ್ಮೃತಂ ಸ್ಥಾನಂ ತು ಯತ್ಸ್ಥಾನಂ ತದೇವ ಗುರುವಾಸಿನಾಂ ॥ ೩೬ ॥

ಸಪ್ತರ್ಷೀಣಾಂ ತು ಯತ್ಸ್ಥಾನಂ ಶ್ರುತಂ ತದ್ವೈ ವನೌಕಸಾಂ ।
ಪ್ರಾಜಾಪತ್ಯಂ ಗೃಹಸ್ಥಾನಾಂ ಸ್ಥಾನಮುಕ್ತಂ ಸ್ವಯಂಭುವಾ ॥ ೩೭ ॥

---

೩೩. ಎಲ್ಲಾ ಧರ್ಮಗಳಿಗೂ ಶ್ರದ್ಧೆಯೇ ಮೂಲವಾದುದು. ಶ್ರದ್ಧೆ ಎಂಬುದು ಈ ಧರ್ಮಗಳಲ್ಲಿ ಸೇರಿರತಕ್ಕದ್ದು. ಶ್ರದ್ಧೆಯೆಂಬುವೇ ನಿಷ್ಠೆ. ಶ್ರದ್ಧೆಯೇ ಪ್ರತಿಷ್ಠೆ. ಶ್ರದ್ಧೆಯೇ ಧರ್ಮಗಳು ಎಂಬದಾಗಿ ಹೇಳಿದೆ.

೩೪. ಕರ್ಮಾನುಷ್ಠಾನ ನಿರತರಾದ ಬ್ರಾಹ್ಮಣರಿಗೆ (ಪ್ರಾಜಾಪತ್ಯ) ಬ್ರಹ್ಮ ಲೋಕವು ಪ್ರಾಪ್ಯಸ್ಥಾನವೆಂದು ಪ್ರಸಿದ್ಧವಾಗಿದೆ. ಯುದ್ಧದಲ್ಲಿ ಹಿಮ್ಮೆಟ್ಟದೆ ಇರುವ ಕ್ಷತ್ರಿಯರಿಗೆ ಇಂದ್ರಲೋಕವು ಪ್ರಾಪ್ತವಾಗುವುದು. ಸ್ವಧರ್ಮವನ್ನು ಅನುಸರಿಸಿ ಕೊಂಡಿರುವ ವೈಶ್ಯರಿಗೆ ಅಮೃತಸ್ಥಾನ ದೊರಕುವುದು.

೩೫-೩೭. ಸೇವಾಧರ್ಮವನ್ನು ಅವಲಂಬಿಸಿರುವುದೇ ಶೂದ್ರರಿಗೆ ಧರ್ಮ ಇದನ್ನು ಅನುವರ್ತಿಸಿದರೆ ಗಂಧರ್ವಲೋಕ ಪ್ರಾಪ್ತಿಯಾಗುವುದು. ಗುರುಸೇವೆ ಮಾಡಿಕೊಂಡಿರುವ ಪುಣ್ಯಾತ್ಮರಿಗೆ, ಊರ್ಧ್ವರೇತಸ್ಕರಾದ ಎಂದರೆ ಮಹಾಯೋಗನಿರತರಾದ ಎಂಭತ್ತೆಂಟು ಸಹಸ್ರಋಷಿಗಳಿಗೆ ಪ್ರಾಪ್ತವಾಗುವ ಶ್ರೇಷ್ಠಸ್ಥಾನ ದೊರೆಯುವುದೆಂದು ನಿರ್ಧರವಾಗಿದೆ. ವಾನಪ್ರಸ್ಥರಿಗೆ ಸಪ್ತರ್ಷಿಲೋಕ ಪ್ರಾಪ್ತಿಯಾಗುವುದೆಂದು ಹೇಳಿದೆ. ಬ್ರಹ್ಮಜ್ಞರಾದ ಗೃಹಸ್ಥರಿಗೆ ಪ್ರಾಜಾಪತ್ಯ (ಬ್ರಹ್ಮಲೋಕ) ಪ್ರಾಪ್ತಿಯೆಂದು ತಿಳಿಯಬೇಕು.

ಯತೀನಾಂ ಯತಚಿತ್ತಾನಾಂ ತದೇವ ವನವಾಸಿನಾಂ ।
ಹಿರಣ್ಯಗರ್ಭಂ ಯತ್‌ಸ್ಥಾನಂ ತಸ್ಮಾನ್ನಾವರ್ತತೇ ಪುನಃ ॥ ೩೮ ॥

ಯೋಗಿನಾಮಮೃತಂ ಸ್ಥಾನಂ ವ್ಯೋಮಾಖ್ಯಂ ಪರಮಾಕರಂ ।
ಆನಂದಮೈಶ್ವರಂ ನಾಮ ಸಾ ಕಾಷ್ಠಾ ಪರಮಾ ಗತಿಃ ॥ ೩೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ
ಪ್ರಥಮೋಽಧ್ಯಾಯಃ.



---

೩೮. ವಾನಪ್ರಸ್ಥಾಶ್ರಮದಲ್ಲಿದ್ದು ಚಿತ್ತನಿಗ್ರಹ ಮಾಡಿರುವ ಯತಿಗಳಿಗೆ ಹಿರಣ್ಯಗರ್ಭಸ್ಥಾನ (ಬ್ರಹ್ಮಲೋಕವು) ಶಾಶ್ವತವಾಗಿ ದೊರೆಯುತ್ತದೆ. ಅಲ್ಲಿಂದ ಯಾವಾಗಲೂ ಅವರಿಗೆ ಪುನರಾವೃತ್ತಿಯಿಲ್ಲ.

೩೯ ಉತ್ಕೃಷ್ಟನಾದ ಯೋಗಾಭ್ಯಾಸಿಗಳಿಗೆ ವ್ಯೋಮವೆಂಬ ಶ್ರೇಷ್ಠವಾದ ಸ್ಥಾನ ದೊರೆಯುವುದು. ಆ ವ್ಯೋಮಸ್ಥಾನವೆಂಬುದು ಈಶ್ವರ ಸಂಬಂಧವಾದ ಆನಂದ ಮಯಸ್ಥಾನವೆಂದು ಪ್ರಸಿದ್ಧವಾಗಿದೆ. ಅದೇ ಅತ್ಯುತ್ತಮ ಸ್ಥಾನ ಎಂದು ಹೇಳಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ
ಒಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮ ಪರ್ವಣಿ ಪ್ರಥಮಭಾಗೇ

## ದ್ವಿತೀಯೋಽಧ್ಯಾಯಃ

---

॥ ಸೂತ ಉವಾಚ ॥

ಇದಾನೀಂ ವಿಸ್ತರಂ ಚೈವ ವಿಭಾಗಂ ರೂಪಮೈಶ್ವರಂ ।
ವಕ್ಷ್ಯೇ ಕಲ್ಪಾನುಸಾರೇಣ ಮನ್ವಂತರಶತಾನುಗಂ ॥ ೧ ॥

ಆಸೀತ್ತಮೋಮಯಂ ಸರ್ವಮಪ್ರಜ್ಞಾತಮಲಕ್ಷಣಂ ।
ತತ್ರ ಚೈಕೋ ಮಹಾನಾಸೀದ್ರುದ್ರಃ ಪರಮಕಾರಣಂ ॥ ೨ ॥

---

### ಎರಡನೆಯ ಅಧ್ಯಾಯ

೧. ಸೂತರು ಶೌನಕಾದಿ ಋಷಿಗಳಿಗೆ ಹೇಳುತ್ತಾರೆ—ಈಗ ಈಶ್ವರಸಂಬಂಧವಾದ ಸ್ವರೂಪವನ್ನೂ, ಅದರ ವಿಭಾಗವನ್ನೂ ಕಲ್ಪಾನುಸಾರವಾಗಿ ವಿಸ್ತರಿಸಿ ಹೇಳುತ್ತೇನೆ. ಇದು ನೂರಾರು ಮನ್ವಂತರಗಳಿಂದ ಅನುಸರಿಸಿ ಬಂದಿರುವುದು.

೨. ಆದಿಯಲ್ಲಿ ಎಲ್ಲಿ ಏನಿದೆ ಎಂಬುದು ಒಬ್ಬರಿಗೂ ತಿಳಿಯದೆ ಅವ್ಯಾಕೃತ ಸ್ವರೂಪವನ್ನು ಹೊಂದಿದ್ದುದರಿಂದ ಎಲ್ಲಾ ಪ್ರಪಂಚವೂ ಮಾಯೆಯಲ್ಲಿ ಲೀನವಾಗಿ ಮಾಯಾಮಯವಾಗಿದ್ದಿತು. ಆಗ ಮುಖ್ಯಕಾರಣನಾದ ಪರಮೇಶ್ವರನೊಬ್ಬನೇ ಇದ್ದನು. "ನಾಸದಾಸೀತ್" ಇತ್ಯಾದಿ ಶ್ರುತಿಯು ಈ ವಿಷಯವನ್ನೇ ಪ್ರತಿಪಾದನೆಮಾಡುತ್ತದೆ. ಅವ್ಯಾಕೃತ, ಮಾಯಾ, ತಮಸ್ಸು ಇವೆಲ್ಲಾ ಒಂದೇ ಅರ್ಥವುಳ್ಳವು.

ಆತ್ಮನಾ ಸ್ವಯಮಾತ್ಮಾನಂ ವಿಚಿಂತ್ಯ ಭಗವಾನ್ವಿಭುಃ ।
ಮನಸ್ಸಂಸ್ಪಜತೇ ಪೂರ್ವಮಹಂಕಾರಂ ಚ ಪೃಷ್ಠತಃ ॥ ೩ ॥

ಅಹಂಕಾರಾತ್ಪ್ರಜಾನಾತಿ ಮಹಾಭೂತಾನಿ ಪಂಚ ಚ ।
ಅಷ್ಟೌ ಪ್ರಕೃತಯಃ ಪ್ರೋಕ್ತಾಃ ವಿಕಾರಾಶ್ಚೈವ ಷೋಡಶ ॥ ೪ ॥

ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಸ್ತಥೈವ ಚ ।
ಪ್ರಾಣೋಽಪಾನಃ ಸಮಾನಶ್ಚೋದಾನವ್ಯಾನೌ ತಥೈವ ಚ ॥ ೫ ॥

---

೩. ಭಗವಂತನಾದ ಆ ಪ್ರಭುವು ಸೃಷ್ಟ್ಯರ್ಥವಾಗಿ ತನ್ನಲ್ಲಿ ತಾನೇ ಆಲೋಚಿಸಿ ಮೊದಲು ಮನಸ್ಸನ್ನೂ, ಎಂದರೆ ಮಹತ್ತತ್ವವನ್ನೂ, ಆ ಮೇಲೆ ಅಹಂಕಾರವನ್ನೂ ಸೃಷ್ಟಿಸಿದನು.

೪. ಅಹಂಕಾರವನ್ನು ಸೃಷ್ಟಿಮಾಡಿದ ಮೇಲೆ ಸಂಕಲ್ಪಪೂರ್ವಕವಾಗಿ ಪಂಚ ಮಹಾಭೂತಗಳನ್ನೂ, ತನ್ಮಾತ್ರಗಳನ್ನೂ ಸೃಷ್ಟಿಮಾಡಿದನು. ಅವ್ಯಕ್ತ ಮಾಯಾ ಮಹತ್ತತ್ವ, ಅಹಂಕಾರ, ಪಂಚತನ್ಮಾತ್ರ ಇವು ಎಂಟೂ ಪ್ರಕೃತಿಗಳೆಂದೂ, ಇನ್ನು ಹದಿನಾರು ಎಂದರೆ ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ಘ್ರಾಣ ಎಂಬ ಐದು ಜ್ಞಾನೇಂದ್ರಿಯಗಳೂ, ವಾಕ್, ಪಾಣಿ, ಪಾದ, ಪಾಯು, ಉಪಸ್ಥಾ ಎಂಬ ಐದು ಕರ್ಮೇಂದ್ರಿಯಗಳೂ, ಮನಸ್ಸು, ಪಂಚೀಕೃತವಾದ ಸ್ಥೂಲ ಪಂಚಭೂತಗಳೂ, ಒಟ್ಟು ಈ ಹದಿನಾರೂ ವಿಕೃತಿಗಳೆಂದು ಹೇಳಲ್ಪಟ್ಟಿದೆ. ಈ ಎಂಟಕ್ಕೂ ಪ್ರಕೃತಿತ್ವ ಬರುವುದು ಹೇಗೆ? ಎಂಬ ಸಂಶಯ ತೋರಬಹುದು. ಮಹತ್ತತ್ವಾದಿ ಏಳುಪದಾರ್ಥಗಳು, ಪೂರ್ವ ಪೂರ್ವ ತತ್ವಗಳ ಕಾರ್ಯಗಳೂ, ಉತ್ತರೋತ್ತರ ತತ್ವಗಳಿಗೆ ಕಾರಣಗಳೂ ಆಗಿವೆ, ಆದುದರಿಂದ ಇವಕ್ಕೂ ಪ್ರಕೃತಿ ಎಂದು ವ್ಯವಹಾರವುಂಟಾಗಿದೆ. ಮೂಲಪ್ರಕೃತಿಯು ಕಾರಣ ಸ್ವರೂಪವಾಗಿರುವುದೇ ಹೊರತು, ತಾನು ಇನ್ನೊಂದರ ಕಾರ್ಯವಲ್ಲ. ಈ ವಿಚಾರಕ್ಕೆ ಗೀತಾದಲ್ಲಿ ಹೇಳಿರುವ " ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ । ಇಂದ್ರಿಯಾಣಿ ದಶೈಕಂ ಚ ಪಂಚಚೇಂದ್ರಿಯಗೋಚರಾಃ" ಎಂಬ ಈ ಹದಿಮೂರನೆಯ ಅಧ್ಯಾಯದ ಐದನೇ ಶ್ಲೋಕವೇ ಪ್ರಮಾಣವು ಈಶ್ವರ ಕೃಷ್ಣರಿಂದ ವಿರಚಿತವಾದ ಸಾಂಖ್ಯಕಾರಿಕೆಯಲ್ಲಿರುವ "ಮೂಲ ಪ್ರಕೃತಿರವಿಕೃತಿಃ ಮಹದಾದ್ಯಾಃಪ್ರಕೃತಿ ವಿಕೃತಯಶ್ಚ॥ ಷೋಡಶಕಸ್ತು ವಿಕಾರಃ ನ ಪ್ರಕೃತಿರ್ನವಿಕೃತಿಃ ಪುರುಷಃ" ಎಂಬ ಶ್ಲೋಕವು ಈ ವಿಷಯದಲ್ಲಿ ಪ್ರಮಾಣವಾಗಿದೆ.

೫. ಆಗ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ತನ್ಮಾತ್ರೆಗಳೂ, ಪ್ರಾಣ

**ಸತ್ತ್ವಂ ರಜಸ್ತಮಶ್ಚೈವ ಗುಣಾಃ ಸೃಷ್ಟಾಸ್ತು ತೇ ತ್ರಯಃ ।**
**ತಸ್ಮಾದ್ಭಾಗವತೋ ಬ್ರಹ್ಮಾ ತಸ್ಮಾದ್ವಿಷ್ಣು ರಜಾಯತ ॥ ೬ ॥**

**ಬ್ರಹ್ಮಾವಿಷ್ಣು ಮೋಹನಾರ್ಥಂ ತತಃ ಶಂಭುಸ್ತು ತೇಜಸಾ ।**
**ಅಶರೀರೋ ವಾಸುದೇವೋ ಹ್ಯನುತ್ಪತ್ತಿರಯೋನಿಜಃ ॥ ೭ ॥**

**ವ್ಯಾಮೋಹಯಿತ್ವಾ ತತ್ಸರ್ವಂ ತೇಜಸಾವ್ಯಾಮೋಹಯಜ್ಜಗತ್ ।**
**ತಸ್ಮಾತ್ಪರತರಂ ನಾಸ್ತಿ ತಸ್ಮಾತ್ಪರತರಂ ನ ಹಿ ॥ ೮ ॥**

**ಬ್ರಹ್ಮಾವಿಷ್ಣುಶ್ಚ ದ್ವಾವೇತಾವುದ್ಭೂತೌ ಭಗವತ್ಸುತೌ ।**
**ಕಲ್ಪೇಕಲ್ಪೇ ತು ತತ್ಸರ್ವಂ ಸೃಜತೇsಸೌ ಜನಂ ಜಗತ್ ॥ ೯ ॥**

---

ಅಪಾನ, ಸಮಾನ, ಉದಾನ, ವ್ಯಾನ ಎಂಬ ಪಂಚಪ್ರಾಣವಾಯುಗಳೂ, ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೂ ಉಂಟಾದುವು.

೬. ರಜೋಗುಣ ಪ್ರಧಾನವಾದ ಮೂಲಪ್ರಕೃತಿಯೇ ಉಪಾಧಿಯಾಗಿ ಉಳ್ಳ ಪರಬ್ರಹ್ಮನಿಂದ ರಜೋಗುಣಪ್ರಧಾನನಾದ ಬ್ರಹ್ಮನು ಹೊರಕ್ಕೆ ಬಂದನು. ಸತ್ವ ಗುಣಪ್ರಧಾನವಾದ ಮೂಲಪ್ರಕೃತಿಯೇ ಉಪಾಧಿಯಾಗಿ ಉಳ್ಳ ಪರಬ್ರಹ್ಮನಿಂದ ಸತ್ವಗುಣವಿಶಿಷ್ಟನಾದ ವಿಷ್ಣುವು ಹುಟ್ಟಿದನು. ಮೋಹಜನಕವಾದ ತಮೋಗುಣ ಪ್ರಧಾನನಾದ ಪರಬ್ರಹ್ಮನು ಆ ಬ್ರಹ್ಮವಿಷ್ಣುಗಳನ್ನು ತನ್ನ ತೇಜಸ್ಸಿನಿಂದ ಮೋಹ ಗೊಳಿಸುವುದಕ್ಕಾಗಿ ಹುಟ್ಟಿದನು.

೭. ವಾಸು ಎಂದರೆ ವ್ಯಾಪಕನೂ, ದೇವ ಎಂದರೆ ಪ್ರಕಾಶಸ್ವರೂಪನೂ ಆಗಿ ಇರುವ ಪರಬ್ರಹ್ಮನು ಸ್ವಭಾವತಃ ಅಶರೀರನೂ, ಉತ್ಪತ್ತಿರಹಿತನೂ, ಅಯೋನಿಜನೂ ಆಗಿರುವನು.

೮. ಹಿಂದೆ ಹೇಳಿದಂತೆ ಬ್ರಹ್ಮಾದಿಗಳನ್ನು ಮೋಹಗೊಳಿಸಿದುದಲ್ಲದೆ ಪ್ರಾಣಿ ಸಾಮಾನ್ಯವೂ ತೇಜಸ್ಸಿನಿಂದ ವ್ಯಾಮೋಹಪಡುವಂತೆ ಮಾಡಿದನು. ಆ ಪರಬ್ರಹ್ಮನಿ ಗಿಂತ ಅತ್ಯಂತ ಶ್ರೇಷ್ಠನಾದವನು ಇನ್ನು ಯಾರೂ ಇಲ್ಲ.

೯. ಬ್ರಹ್ಮ, ವಿಷ್ಣು ಈ ಇಬ್ಬರೂ ಆ ಪರಬ್ರಹ್ಮನಿಗೆ ಪುತ್ರಪ್ರಾಯರಾಗಿ ಹುಟ್ಟಿ ದರು. ಪ್ರತಿಯೊಂದು ಕಲ್ಪದಲ್ಲಿಯೂ ಈ ಪರಬ್ರಹ್ಮನು ಮಹತ್ತತ್ವಾದಿಗಳನ್ನೂ ಸೃಷ್ಟಿಸುವನು. ಮತ್ತು ಕಾರ್ಯರೂಪವಾದ ಜಗತ್ತನ್ನೂ ಸೃಷ್ಟಿಸುವನು.

**ಉಪಸಂಹರತೇ ಚೈವ ನಾನಾಭೂತಾನಿಸ ರ್ವಶಃ ।**
**ದ್ವಾಸಪ್ತತಿಯುಗಾನ್ಯೇವ ಮನ್ವಂತರ ಇತಿ ಸ್ಮೃತಃ ॥ ೧೦ ॥**

**ಚತುರ್ದಶ ತು ತಾನ್ಯೇವ ಕಲ್ಪ ಇತ್ಯಭಿಧೀಯತೆ ।**
**ದಿನೈಕಂ ಬ್ರಹ್ಮಣಃ ಪ್ರೋಕ್ತಂ ನಿಶಾಕಲ್ಪಸ್ತಥೋಚ್ಯತೆ ॥ ೧೧ ॥**

**ಏವಂ ಮಾಸಶ್ಚ ವರ್ಷಂ ಚ ತಥಾ ಚಾಷ್ಟಶತಂ ದ್ವಿಜಾಃ ।**
**ಏವಂ ಬುದ್ಧೀಂದ್ರಿಯಸ್ಯಾಸ್ಯ ವಿಷ್ಣೋಃಶ್ಚ ನಿಮಿಷಃ ಸ್ಮೃತಃ ॥ ೧೨ ॥**

**ಬ್ರಹ್ಮಾದಿಸ್ತಂಬಪರ್ಯಂತಂ ನಿಮೇಷಶ್ಚ ಧ್ರುವಸ್ಯ ವೈ ।**
**ನಿಮೇಷಜೀವನಂ ಸರ್ವಂ ಸರ್ವಲೋಕಚರಾಚರಂ ॥ ೧೩ ॥**

---

೧೦. ಹಾಗೆ ಸೃಷ್ಟವಾದ ನಾನಾಭೂತಗಳೆಲ್ಲವನ್ನೂ, ಪ್ರಳಯಕಾಲದಲ್ಲಿ ಸರ್ವ ಪ್ರಕಾರದಿಂದಲೂ ತನ್ನಲ್ಲಿಯೇ ಲಯವಾಗುವಂತೆ ಮಾಡಿಸುತ್ತಾನೆ. ಎಪ್ಪತ್ತೆರಡು ಯುಗಗಳಿಗೆ ಒಂದು ಮನ್ವಂತರವೆಂದು ನಿರ್ಣಯಿಸಿದ್ದಾರೆ. (ಈ ವಿಚಾರದಲ್ಲಿ ಅಭಿಪ್ರಾಯಭೇದವಿರಬಹುದು. "ಮನ್ವಂತರಂತು ದಿವ್ಯಾನಾಂ ಯುಗಾನಾಮೇಕಸಪ್ತತಿಃ" ಎಂದರೆ ಎಪ್ಪತ್ತೊಂದು ದಿವ್ಯಯುಗಗಳಿಗೆ ಒಂದು ಮನ್ವಂತರವೆಂದು ಅಮರಕೋಶದಲ್ಲಿ ಉಕ್ತವಾಗಿದೆ.)

೧೧. ಅಂತಹ ಮನ್ವಂತರಗಳು ಹದಿನಾಲ್ಕು ಆದರೆ ಒಂದು ಕಲ್ಪ ಎಂದು ಹೇಳುತ್ತಾರೆ. ಹೀಗೆ ಒಂದು ಕಲ್ಪದಷ್ಟು ಕಾಲವು ಬ್ರಹ್ಮನಿಗೆ ಒಂದು ಹಗಲು. ಹಾಗೆಯೇ ಮತ್ತೊಂದು ಕಲ್ಪವಾದರೆ ಬ್ರಹ್ಮನಿಗೆ ಒಂದು ರಾತ್ರಿ ಎನಿಸುತ್ತದೆ.

೧೨. ಓ ದ್ವಿಜರೇ! ಕೇಳಿರಿ; ಈ ಪ್ರಮಾಣ ಮೂವತ್ತು ದಿನಗಳಾದರೆ ಬ್ರಹ್ಮನ ಒಂದುತಿಂಗಳು; ಅಂತಹ ತಿಂಗಳು ಹನ್ನೆರಡಾದರೆ ಒಂದುವರ್ಷ, ಇಂತಹ ಎಂಟು ನೂರುವರ್ಷಗಳಾದರೆ, ಬುದ್ಧೀಂದ್ರಿಯಯುಕ್ತನಾದ ವಿಷ್ಣುವಿಗೆ ಒಂದು ನಿಮಿಷವಾಗುವುದು ಎಂದು ತಿಳಿಯಬೇಕು.

೧೩. ಬ್ರಹ್ಮ ಮೊದಲುಗೊಂಡು ಹುಲ್ಲುಕಡ್ಡಿಯವರೆಗೆ ಇರುವ ಜಗತ್ತಿಗೆ ಈ ಹಿಂದೆ ಹೇಳಿದಷ್ಟು ಕಾಲವಾದರೆ ಧ್ರುವನಿಗೆ ಒಂದು ನಿಮಿಷ. ಆದುದರಿಂದ ಚರಾಚರಾತ್ಮಕವಾದ ಸರ್ವಲೋಕಗಳೂ ಧ್ರುವಮಹಾರಾಯನ ಒಂದುನಿಮಿಷದಷ್ಟು ಕಾಲ ಮಾತ್ರ ಬದುಕಿರತಕ್ಕವು.

**ಭೂಲೋ೯ಕೋsಥ ಭುವಲೋ೯ಕಃ ಸ್ವಲೋ೯ಕಶ್ಚ ಪ್ರಕೀರ್ತಿತಃ ।**
**ಜನಸ್ತಪಶ್ಚ ಸತ್ಯಂ ಚ ಬ್ರಹ್ಮಲೋಕಶ್ಚ ಸಪ್ತಮಃ ॥ ೧೪ ॥**

**ಪಾತಾಲಂ ವಿತಲಂ ತದ್ಧಿ ಅತಲಂ ತಲಮೇವ ಚ ।**
**ಪಂಚಮಂ ವಿದ್ಧಿ ಸುತಲಂ ಸಪ್ತಮಂ ಚ ರಸಾತಲಂ ॥ ೧೫ ॥**

**ಏತೇಷು ಸಪ್ತ ವಿಖ್ಯಾತಾ ಅಧಃಪಾತಾಲವಾಸಿನಃ ।**
**ತೇಷಾಮಾ ದೌ ಚ ಮಧ್ಯೇ ಚ ಅಂತೇ ರುದ್ರಃ ಪ್ರಕೀರ್ತಿತಃ ॥ ೧೬ ॥**

**ಗ್ರಸತೇ ಸೃಜತೇ ಲೋಕಾ೯ ಕ್ರೀಡಾರ್ಥಂ ತು ಮಹೇಶ್ವರಃ ।**
**ಬ್ರಹ್ಮಲೋಕಪರೀಪ್ಸೂನಾಂ ಗತಿರೂರ್ಧ್ವಾ ಪ್ರಕೀರ್ತಿತಾ ॥ ೧೭ ॥**

**ಪೃಥಿವೀಂ ಚಾಂತರಿಕ್ಷಂ ಚ ದಿಶಶ್ಚ ವಿದಿಶಸ್ತಥಾ ।**
**ಸಮುದ್ರಾಣಾಂ ಗಿರೀಣಾಂ ಚ ಅಧಸ್ತಿರ್ಯಕ್ಪ್ರ ಸಂಖ್ಯಯಾ ॥ ೧೮ ॥**

---

೧೪. ಭೂಲೋಕ, ಭುವರ್ಲೋಕ, ಸ್ವರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ, ಏಳನೆಯದು ಬ್ರಹ್ಮಲೋಕ ಎಂಬಿವು ಮೇಲಿನ ಲೋಕಗಳು.

೧೫. ಪಾತಾಳ, ವಿತಲ, ಅತಲ, ತಲ, ಐದನೆಯದು ಸುತಲ, ಆರನೆಯದು ತಲಾತಲ, ಏಳನೆಯದು ರಸಾತಲ ಎಂಬಿವು ಅಧೋಲೋಕಗಳೆಂದು ಹೇಳಿದೆ.

೧೬. ಈ ಏಳುಲೋಕಗಳೂ ಕೂಡ ಭೂಮಿಯ ಅಧೋಭಾಗದಲ್ಲಿ ಇರತಕ್ಕವು ಎಂದು ಪ್ರಸಿದ್ಧವಾಗಿವೆ. ಅವುಗಳ ಸೃಷ್ಟಿ, ಸ್ಥಿತಿ, ಲಯಗಳಿಗೂ ಪರಬ್ರಹ್ಮನೇ ಕಾರಣನೆಂದು ಹೇಳಿದೆ.

೧೭. ಪರಬ್ರಹ್ಮನಾದ ಆ ರುದ್ರನೇ ಕ್ರೀಡಾರ್ಥವಾಗಿ ಲೋಕಗಳನ್ನು ಲಯ ಮಾಡುತ್ತಾನೆ, ಮತ್ತೆ ಅವುಗಳನ್ನು ಸೃಷ್ಟಿಸುತ್ತಾನೆ ಎಂದರೆ ಈ ಮೂರುಲೋಕಗಳ ಸೃಷ್ಟಿಲಯಗಳೂ ಪರಮಾತ್ಮನ ಕೇವಲ ಲೀಲಾರೂಪವಾಗಿವೆ. ಬ್ರಹ್ಮಲೋಕವನ್ನು ಹೊಂದುವ ಇಚ್ಛೆಇರುವವರು ಊರ್ಧ್ವಗತಿಯಿಂದ ಆ ಲೋಕಕ್ಕೆ ಹೋಗಬೇಕು.

೧೮-೧೯. ಪೃಥಿವಿ, ಅಂತರಿಕ್ಷ, ದಿಕ್ಕುಗಳು, ವಿದಿಕ್ಕುಗಳು, ಸಮುದ್ರಗಳ ಮತ್ತು ಗಿರಿಗಳ ಕೆಳಅಳತೆ, ಮತ್ತು ಅಡ್ಡಲಾಗಿರುವಅಳತೆ ಇವನ್ನೂ; ಸಮುದ್ರಗಳ

**ಸಮುದ್ರಾಣಾಂ ಚ ವಿಸ್ತಾರಂ ಪ್ರಮಾಣಂ ಚ ತತಃ ಶೃಣು ।**
**ಸ್ಥಾವರಾಣಾಂ ಚ ಶೈಲಾನಾಂ ದೇವಾನಾಂ ಚ ದಿವೌಕಸಾಂ ॥ ೧೯ ॥**

**ಚತುಷ್ಪದಾನಾಂ ದ್ವಿಪದಾಂ ತಥಾ ಧರ್ಮೈಕಭಾಷಿಣಾಂ ।**
**ಸಹಸ್ರಗುಣಮಾಖ್ಯಾತಂ ಸ್ಥಾವರೇಭ್ಯಃ ಪ್ರಕೀರ್ತಿತಂ ॥ ೨೦ ॥**

**ಸಹಸ್ರಗುಣವಿಖ್ಯಾತಮಿತ್ಯಾಹ ಭಗವಾನ್ಮುನಿಃ ।**
**ಋಷಿಸ್ತು ಪ್ರಥಮಂ ಕುರ್ವನ್ ಪ್ರಕೃತಿಂ ನಾಮ ನಾಮತಃ ॥ ೨೧ ॥**

**ತಸ್ಯಾ ಬ್ರಹ್ಮಾ ಪ್ರಕೃತ್ಯಾಸ್ತು ಉತ್ಪನ್ನಃ ಸಹ ವಿಷ್ಣುನಾ ।**
**ತಸ್ಮಾದ್ಬುದ್ಧ್ಯಾ ಪ್ರಕುರುತೆ ಸೃಷ್ಟಿಂ ನೈಮಿತ್ತಿಕೀಂ ದ್ವಿಜಾಃ ॥ ೨೨ ॥**

**ತಸ್ಮಾತ್ಸ್ವಯಂಭುವೋ ಬ್ರಹ್ಮಾ ಬ್ರಾಹ್ಮಣಾನ್ ಸಮಕಲ್ಪಯತ್ ।**
**ಪಾದಹೀನಾನ್ ಕ್ಷತ್ರಿಯಾಂಶ್ಚ ತಸ್ಮಾದ್ಧೀನಾಂಸ್ತು ವೈಶ್ಯಕಾನ್ ॥ ೨೩ ॥**

---

ವಿಸ್ತಾರವನ್ನೂ, ಚಲನವಿಲ್ಲದೆ ಸ್ಥಿರವಾಗಿ ನಿಂತಿರುವ ಪರ್ವತಗಳ ಪ್ರಮಾಣವನ್ನೂ ಹೇಳುವೆನು ಕೇಳಿ.

೨೦. ಧರ್ಮವೊಂದರಲ್ಲೇ ಆಸಕ್ತರಾಗಿರುವ ಸ್ವರ್ಗವಾಸಿಗಳಾದ ದೇವತೆಗಳೂ ಮತ್ತು ದ್ವಿಪಾದಿಗಳಾದ ಮನುಷ್ಯರ, ಮತ್ತು ಚತುಷ್ಪಾದಿ ಜಂತುಗಳ ಸ್ಥಿತಿಯು ಚಲನರಹಿತಗಳಾದ ಸ್ಥಾವರಗಳಿಗಿಂತ ಸಾವಿರ ಮಡಿಯಾಗಿವೆ ಎಂದು ಮನನಶೀಲನಾದ ಭಗವಂತನೇ ಹೇಳಿದ್ದಾನೆ.

೨೧-೨೨. ಎಲೈ ದ್ವಿಜರೇ! ಕೇಳಿರಿ; ಭಗವಂತನು ಪ್ರಕೃತಿಯೆಂಬ ಹೆಸರಿನಿಂದ ಪ್ರಸಿದ್ಧವಾದುದನ್ನು ಮೊದಲು ಸೃಷ್ಟಿಮಾಡಿದನು. ಬ್ರಹ್ಮನೂ ವಿಷ್ಣುವೂ ಸಹ ಆ ಪ್ರಕೃತಿಯಲ್ಲಿ ಹುಟ್ಟಿದರು. ತನ್ನ ಬುದ್ಧಿಯ ಸಹಾಯದ ಮೂಲಕ ಆ ಪ್ರಕೃತಿಯ ದೆಸೆಯಿಂದ ನೈಮಿತ್ತಿಕಸೃಷ್ಟಿಯನ್ನೂ ಏರ್ಪಡಿಸಿದನು.

೨೩. ಬ್ರಹ್ಮನು ಯಾವ ಉಪಕರಣಗಳೂ ಇಲ್ಲದ ಅನೈಮಿತ್ತಿಕ ಸೃಷ್ಟಿಯಿಂದ ಬ್ರಾಹ್ಮಣರನ್ನು ಸೃಷ್ಟಿಸಿದನು. ಬ್ರಾಹ್ಮಣರಿಗಿಂತ ಕಾಲುಭಾಗ ಕಡಿಮೆ ಮಹಿಮೆಯುಳ್ಳವರಾಗಿ ಕ್ಷತ್ರಿಯರನ್ನೂ, ಅವರಿಗಿಂತ ಕಾಲುಭಾಗ ಕಡಿಮೆ ಮಹಿಮೆಯುಳ್ಳವರಾಗಿ ವೈಶ್ಯರನ್ನೂ, ಅವರಿಗಿಂತ ಕಾಲುಭಾಗ ಕಡಿಮೆ ಮಹಿಮೆಯುಳ್ಳವರಾಗಿ ಆಚಾರ

**ಚತುರ್ಥಾನ್ಪಾದಹೀನಾಂಶ್ಚ ಆಚಾರೇಷು ಬಹಿಷ್ಕೃತಾನ್ ।**
**ಪೃಥಿವೀಂ ಚಾಂತರಿಕ್ಷಂ ಚ ದಿಶಶ್ಚೈವಾಪ್ಯಕಲ್ಪಯತ್ ॥ ೨೪ ॥**

**ಲೋಕಾಲೋಕಸ್ಯ ಸಂಸ್ಥಾ ಚ ದ್ವೀಪಾನಾಮುದಧೇಸ್ತಥಾ ।**
**ಸರಿತಾಂ ಸಾಗರಾಣಾಂ ಚ ತೀರ್ಥಾಯತನಸಂಪದಾಂ ॥ ೨೫ ॥**

**ಮೇಘಸ್ತನಿತನಿರ್ಘೋಷರೋಹಿತೇಂದ್ರಧನೂಂಷಿ ಚ ।**
**ಉಲ್ಕಾನಿರ್ಘಾತಕೇತೂಂಶ್ಚ ಜ್ಯೋತೀಂಷ್ಯಾಯತನಾನಿ ಚ ॥ ೨೬ ॥**

**ಉತ್ಪನ್ನಂ ತಸ್ಯ ದೇಹೇ ತು ಭೂಯಃ ಕಾಲೇನ ಪೀಡಯೇತ್ ॥ ೨೭ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ದ್ವಿತೀಯೋಽಧ್ಯಾಯಃ.**

---

ಪ್ರಾಮುಖ್ಯತೆಯಿಲ್ಲದ ಚತುರ್ಥವರ್ಣದವರನ್ನೂ ಮತ್ತು ಪೃಥ್ವಿ, ಆಕಾಶ, ದಿಕ್ಕುಗಳು ಇವುಗಳೆಲ್ಲವನ್ನೂ ಕಲ್ಪಿಸಿದನು.

೨೫. ಮತ್ತು ಲೋಕಾಲೋಕ ಎಂದರೆ ಮೇರುಪರ್ವತ, ಸಮುದ್ರ ಮಧ್ಯದ ಸಪ್ತದ್ವೀಪಗಳು, ಮುಂತಾದುವುಗಳನ್ನೂ ನಿರ್ಮಿಸಿದನು. ಆ ದ್ವೀಪಗಳಲ್ಲಿ ನದಿಗಳು, ಸರಸ್ಸುಗಳು, ಪುಣ್ಯತೀರ್ಥಗಳು, ಪುಣ್ಯಕರಗಳಾದ ದೇವಾಲಯ ಇವುಗಳನ್ನು ಸಮೃದ್ಧಿಯಾಗಿ ನಿರ್ಮಿಸಿದನು.

೨೬-೨೭. ಗುಡುಗು, ಮಿಂಚು, ನೆಟ್ಟಗಿರುವ ಅಥವಾ ಡೊಂಕಾಗಿರುವ ಕಾಮನಬಿಲ್ಲುಗಳು, ನಿರ್ಗತಜ್ವಾಲೆಯುಳ್ಳ ಉಲ್ಕಾಪಾತಗಳು, ಸಿಡಿಲುಗಳು, ಧೂಮಕೇತುಗಳು, ಇತರ ತೇಜಃಪುಂಜಗಳು, ಇವುಗಳ ಸ್ಥಾನಗಳು, ಎಲ್ಲವೂ ಅವನ ದೇಹದಿಂದಲೇ ಉತ್ಪನ್ನವಾದುವು. ಹೀಗಿದ್ದಾಗ್ಯೂ ಕಾಲವಿಶೇಷದಲ್ಲಿ ಎಂದರೆ ಪ್ರಳಯಕಾಲದಲ್ಲಿ ಮತ್ತೆ ಅವುಗಳೆಲ್ಲವನ್ನೂ ಅವನೇ ಲಯಮಾಡುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಮಧ್ಯಮಪರ್ವದ ಪ್ರಥಮಭಾಗದಲ್ಲಿ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ಪ್ರಥಮಭಾಗೇ

## ತೃತೀಯೋಽಧ್ಯಾಯಃ

---

॥ ಸೂತ ಉವಾಚ ॥

ಧ್ರುವಾದೂರ್ಧ್ವಂ ಮಹರ್ಲೋಕಃ ಕೋಟಿಯೋಜನವಿಸ್ತೃತಃ ।
ಕಲ್ಪಾಭಿಕರಣೇ ತತ್ರ ಸಂಸ್ಥಿತಾ ದ್ವಿಜಪುಂಗವಾಃ ॥ ೧ ॥

ಜನಲೋಕೋ ಮಹರ್ಲೋಕಾತ್ ತಥಾ ಕೋಟಿದ್ವಯಾತ್ಮಕಃ ।
ಸನಂದನಾದಯಸ್ತತ್ರ ಸಂಸ್ಥಿತಾಃ ಬ್ರಹ್ಮಣಃ ಸುತಾಃ ॥ ೨ ॥

ಜನಲೋಕಾತ್ತಪೋಲೋಕಃ ಕೋಟಿತ್ರಯಸಮನ್ವಿತಃ ।
ವಿರಾಜಂತೇ ತು ದೇವಾ ವೈ ಸ್ಥಿತಾ ದಾಹವಿವರ್ಜಿತಾಃ ॥ ೩ ॥

---

## ಮೂರನೆಯ ಅಧ್ಯಾಯ

೧. ಸೂತರು ಶೌನಕಾದಿ ಋಷಿಗಳಿಗೆ ಹೇಳುತ್ತಾರೆ—ಧ್ರುವಮಂಡಲಕ್ಕಿಂತ ಮೇಲೆ ಕೋಟಿಯೋಜನ ವಿಸ್ತಾರವಾಗಿ ವ್ಯಾಪಿಸಿರುವ ಮಹರ್ಲೋಕವಿದೆ. ಕಲ್ಪವನ್ನು ಸೃಷ್ಟಿಸುವಾಗ ಬ್ರಾಹ್ಮಣಶ್ರೇಷ್ಠರು ಅಲ್ಲಿನ ನಿವಾಸಿಗಳೆನಿಸಿದರು.

೨. ಮಹರ್ಲೋಕದಿಂದ ಮೇಲ್ಗಡೆ ಎರಡು ಕೋಟಿಯೋಜನ ವಿಸ್ತಾರವುಳ್ಳ ಜನೋಲೋಕವಿದೆ. ಬ್ರಹ್ಮನ ಪುತ್ರರಾದ ಸನಂದನ ಮೊದಲಾದವರು ಅಲ್ಲಿ ಇರುವರು.

೩. ಜನೋಲೋಕದಿಂದ ಮೇಲುಗಡೆ ಮೂರುಕೋಟಿ ಯೋಜನ ವಿಸ್ತಾರವಾಗಿರುವ ತಪೋಲೋಕವು ಇದೆ. ಅಲ್ಲಿ ದೇವತೆಗಳು ದಾಹಗುಣವಿಲ್ಲದವರಾಗಿ ಪ್ರಕಾಶಿಸುತ್ತಾರೆ

ತಪೋಲೋಕಾತ್ಸತ್ಯಲೋಕಃ ಪಂಚಕೋಟಿಸಮನ್ವಿತಃ ।
ಪ್ರಾಜಾಪತ್ಯಃ ಸತ್ಯಲೋಕಾತ್ ಕೋಟಿಸಪ್ತಕಸಂಯುತಃ ॥
ಸನತ್ಕುಮಾರಕಸ್ತತ್ರ ಬ್ರಹ್ಮಲೋಕಸ್ತು ಸ ಸ್ಮೃತಃ ॥ ೪ ॥

ತತ್ರ ಲೋಕೇ ಗುರುರ್ಬ್ರಹ್ಮಾ ವಿಶ್ವಾತ್ಮಾ ವಿಶ್ವತೋಮುಖಃ ।
ಆಸ್ತೇ ಯದ್ಯೋಗಿಭಿಃ ಪೀತ್ವಾ ಭೋಗಂ ಮೃತ್ಯೋಃ ಪರಂ ಗತಂ ॥ ೫ ॥

ಗಾಯಂತಿ ಯತಯೋ ಗಾಥಾ ಹ್ಯಾಸ್ತಿಕಾ ಬ್ರಹ್ಮವಾದಿನಃ ।
ಯೋಗಿನಸ್ತಾಪಸಾಃ ಸಿದ್ಧಾ ಜಾಪಕಾಃ ಪರಮೇಷ್ಠಿನಂ ॥ ೬ ॥

ದ್ವಾರಂ ತು ಯೋಗಿನಾಮೇಕಂ ಗಚ್ಛತಾಂ ಪರಮಂ ಪದಂ ।
ತತ್ರ ಗತ್ವಾ ನ ಶೋಚಂತಿ ಸ ವಿಷ್ಣುಃ ಸ ಚ ಶಂಕರಃ ॥ ೭ ॥

---

೪. ತಪೋಲೋಕದ ಮೇಲುಗಡೆ ಐದುಕೋಟಿ ಯೋಜನ ವಿಸ್ತಾರವುಳ್ಳ ಸತ್ಯಲೋಕವಿದೆ. ಸತ್ಯಲೋಕದಿಂದ ಮೇಲೆ ಏಳುಕೋಟಿ ಯೋಜನ ವಿಸ್ತಾರವುಳ್ಳ ಪ್ರಾಜಾಪತ್ಯಲೋಕವಿದೆ. ಅಲ್ಲಿ ಸನತ್ಕುಮಾರನು ಇರುತ್ತಾನೆ. ಅದನ್ನೇ ಬ್ರಹ್ಮ ಲೋಕವೆಂದು ಕರೆಯುತ್ತಾರೆ.

೫. ಆ ಲೋಕದಲ್ಲಿ ಪೂಜ್ಯನೂ, ವಿಶ್ವಾತ್ಮನೂ, ವಿಶ್ವತೋಮುಖನೂ, ಗುರುವೂ ಆದ ಬ್ರಹ್ಮನು ಯೋಗಿಗಳ ಸಂಗಡ ಇರುತ್ತಾ ಮೃತ್ಯುಭಯರಹಿತವಾದ ದಿವ್ಯಭೋಗಗಳನ್ನು ಅನುಭವಿಸುತ್ತಿರುತ್ತಾನೆ.

೬. ಅಲ್ಲಿ ಆಸ್ತಿಕರಾದ ಬ್ರಹ್ಮವಾದಿಗಳು, ಯತಿಗಳು, ತಪಸ್ವಿಗಳು, ಯೋಗಿಗಳು, ಸಿದ್ಧರು ಇವರೆಲ್ಲರೂ ಸದಾ ಜಪಶೀಲರಾಗಿ ಬ್ರಹ್ಮನನ್ನು ಗಾಥೆಗಳಿಂದ ಸ್ತುತಿಸುತ್ತಾರೆ.

೭. ಯೋಗಿಗಳಿಗೆ ಪರಮಪದ (ಮೋಕ್ಷ)ಕ್ಕೆ ಹೋಗುವುದಕ್ಕೊಂದೇ ಬಾಗಿಲು ಇದೆ. ಅಲ್ಲಿಗೆ ಹೋದಮೇಲೆ ಅವರಿಗೆ ದುಃಖಾನುಭವವೇ ಇಲ್ಲ. ಅಲ್ಲಿಗೆ ಹೋದವನೇ ವಿಷ್ಣುಸಾರೂಪ್ಯವನ್ನಾಗಲಿ ಶಿವಸಾರೂಪ್ಯವನ್ನಾಗಲಿ ಹೊಂದುತ್ತಾನೆ.

ಸೂರ್ಯಕೋಟಿಪ್ರತೀಕಾಶಂ ಪುರಂ ತಸ್ಯ ದುರಾಸದಂ ।
ನ ಮೇ ವರ್ಣಯಿತುಂ ಶಕ್ಯಂ ಜ್ವಾಲಾಮಾಲಾಸಮಾಕುಲಂ ॥ ೮ ॥

ತತ್ರ ನಾರಾಯಣಸ್ಯಾಪಿ ಭವನಂ ಬ್ರಹ್ಮಣಃ ಪುರೇ ।
ಶೇಷೇ ಶೇತೇ ಹರಿಃ ಶ್ರೀಮಾನ್ ಮಾಯಾಸಹಚರಃ ಪರಃ ॥ ೯ ॥

ಸ ವಿಷ್ಣುಲೋಕಕಥಿತಃ ಪುನರಾವೃತ್ತಿವರ್ಜಿತಃ ।
ಪ್ರಯಾಂತಿ ಚ ಮಹಾತ್ಮಾನಃ ಯೇ ಪ್ರಪನ್ನಾ ಜನಾರ್ದನಂ ॥ ೧೦ ॥

ಊರ್ಧ್ವಂ ಬ್ರಹ್ಮಾಸನಾತ್ಪೂರ್ವಂ ಪರಂ ಜ್ಯೋತಿರ್ಮಯಂ ಶುಭಂ ।
ವಹ್ನಿನಾ ಉಪರಿಕ್ಷಿಪ್ತಂ ತತ್ರಾಸ್ತೇ ಭಗವಾನ್ ಭವಃ ॥ ೧೧ ॥

ದೇವ್ಯಾ ಸಹ ಮಹಾದೇವಶ್ಚಿಂತ್ಯಮಾನೋ ಮನೀಷಿಭಿಃ ।
ಯೋಗಿಭಿಃ ಶತಸಾಹಸ್ರೈರ್ಭೂತೈಶ್ಚೈಕತ್ರ್ಯೈಶ್ಚ ಸಂವೃತಃ ॥ ೧೨ ॥

---

೮. ಕೋಟಿಸೂರ್ಯನಂತೆ ಪ್ರಕಾಶಮಾನವಾದುದೂ, ಜ್ವಾಲೆಗಳ ಮಾಲೆಯಿಂದ ಕೂಡಿದುದೂ, ಗಮಿಸಲು ಕಷ್ಟಸಾಧ್ಯವೆನಿಸಿದುದೂ ಆದ, ಅವನ ಪಟ್ಟಣವನ್ನು ವರ್ಣಿಸಲು ನನಗೆ ಶಕ್ಯವಲ್ಲ.

೯. ಬ್ರಹ್ಮನ ಆ ಪಟ್ಟಣದಲ್ಲಿ ನಾರಾಯಣನಿಗೂ ಒಂದು ಸ್ಥಾನವಿದೆ. ಅಲ್ಲಿ ಶ್ರೇಷ್ಠನಾದ ಶ್ರೀ ಹರಿಯು ಮಾಯಾಸಹಿತನಾಗಿ ಆದಿಶೇಷನ ಮೇಲೆ ಮಲಗಿದ್ದಾನೆ.

೧೦. ಆ ವಿಷ್ಣುಲೋಕಪ್ರಾಪ್ತಿಯು ಪುನರಾವೃತ್ತಿರಹಿತವೆಂದು ಪ್ರಖ್ಯಾತವಾಗಿದೆ. ವಿಷ್ಣುವನ್ನು ಅನನ್ಯತೆಯಿಂದ ಶರಣುಹೊಂದಿದ ಮಹಾತ್ಮರು ಆ ಲೋಕಕ್ಕೆ ಹೋಗುತ್ತಾರೆ.

೧೧. ಬ್ರಹ್ಮಲೋಕದಿಂದ ಮೇಲಕ್ಕೆ ಪೂರ್ವದಿಕ್ಕಿನಲ್ಲಿ ದಿವ್ಯತೇಜೋಮಯವೂ, ಮಂಗಳಕರವೂ, ಮೇಲ್ಗಡೆಯಲ್ಲಿ ವಹ್ನಿಮಂಡಲದಿಂದ ವ್ಯಾಪ್ತವೂ ಆದ ಒಂದು ಸ್ಥಾನವಿದೆ. ಅಲ್ಲಿ ಭಗವಂತನಾದ ಈಶ್ವರನು ದೇವೀಸಹಿತನಾಗಿ ವಾಸಿಸುತ್ತಾನೆ.

೧೨. ಅವನ ಸಾಮೀಪ್ಯವನ್ನು ಹೊಂದಿರುವ ನೂರಾರುಸಾವಿರ ಮಂದಿ ವಿದ್ವಾಂಸರಾದ ಯೋಗಿಗಳು ಸುತ್ತುವರಿದು ಆತನನ್ನು ಧ್ಯಾನಮಾಡುತ್ತಾರೆ.

**ತತ್ರ ತೇ ಯಾಂತಿ ನಿಯತಾ ದ್ವಿಜಾ ವೈ ಬ್ರಹ್ಮವಾದಿನಃ ।**
**ಮಹಾದೇವಪರೇಶಾನಾಸ್ತಾಪಸಾ ಬ್ರಹ್ಮವಾದಿನಃ ॥ ೧೩ ॥**

**ನಿರ್ಮಮಾ ನಿರಹಂಕಾರಾಃ ಕಾಮಕ್ರೋಧವಿವರ್ಜಿತಾಃ ।**
**ದ್ರಕ್ಷ್ಯಂತಿ ಬ್ರಹ್ಮಣಾ ಯುಕ್ತಾ ರುದ್ರಲೋಕಃ ಸ ವೈ ಸ್ಮೃತಃ ॥ ೧೪ ॥**

**ಏತೇ ಸಪ್ತ ಮಹಾಲೋಕಾಃ ಪೃಥಿವ್ಯಾಂ ಪರಿಕೀರ್ತಿತಾಃ ।**
**ಮಹಾತಲಾದಯಶ್ಚಾಧಃ ಪಾತಾಲಾಃ ಸಂತಿ ವೈ ದ್ವಿಜಾಃ ॥ ೧೫ ॥**

**ಮಹಾತಲಂ ಹೈಮತಲಂ ಸರ್ವವರ್ಣೋಪಶೋಭಿತಂ ।**
**ಪ್ರಾಸಾದೈರ್ವಿವಿಧೈಃ ಶುಭ್ರೈಃ ದೇವತಾಯತನೈರ್ಯುತಂ ॥ ೧೬ ॥**

**ಅನಂತೇನ ಸಮಾಯುಕ್ತಂ ಮುಚುಕುಂದೇನ ಧೀಮತಾ ।**
**ನೃಪೇಣ ಬಲಿನಾ ಚೈವ ಪಾತಾಲಂ ಸ್ವರ್ಗವಾಸಿನಾ ॥ ೧೭ ॥**

---

೧೩. ಮಹಾದೇವನೇ ಸರ್ವೋತ್ಕೃಷ್ಟನಾದ ದೇವರೆಂದು ತಿಳಿದುಕೊಂಡು, ತಪೋನಿಯಮಗಳನ್ನು ಆಚರಿಸುವ ಬ್ರಹ್ಮವಾದಿಗಳಾದ ಬ್ರಾಹ್ಮಣರು, ಶಿವಸನ್ನಿಹಿತವಾದ ಆ ಲೋಕಕ್ಕೆ ಹೋಗುತ್ತಾರೆ.

೧೪. ಮಮತೆ, ಅಹಂಕಾರ, ಕಾಮಕ್ರೋಧಾದಿಗಳು, ಇವುಗಳಿಂದ ರಹಿತರಾದ ಬ್ರಾಹ್ಮಣರು ಬ್ರಹ್ಮನ ಸಮೇತ ಭಗವಂತನ ದರ್ಶನಮಾಡುತ್ತಾರೆ. ಅದೇ ರುದ್ರಲೋಕವೆಂದು ತಿಳಿಯಬೇಕು.

೧೫. ಹೀಗೆ ಏಳುಲೋಕಗಳಿವೆಯೆಂಬುದು ಲೋಕದಲ್ಲಿ ಪ್ರಸಿದ್ಧವು. ಓ ಬ್ರಾಹ್ಮಣರೇ! ಕೇಳಿರಿ ಮಹಾತಲವೇ ಮುಂತಾದ ಲೋಕಗಳು ಭೂಲೋಕದ ಕೆಳಗಡೆ ಇವೆ.

೧೬. ವಿವಿಧವಾದ ಬಣ್ಣಗಳಿಂದ ಪ್ರಕಾಶಿಸುವುದೂ, ಸುವರ್ಣದ ಭೂಮಿಯಿಂದ ಕೂಡಿದುದೂ ಆದ, ಮಹಾತಲವೆಂಬ ಲೋಕವು ನಾನಾಬಗೆಯ ಉಪ್ಪರಿಗೆ ಮನೆಗಳಿಂದಲೂ, ನಿರ್ಮಲವಾದ ದೇವಮಂದಿರಗಳಿಂದಲೂ ಯುಕ್ತವಾಗಿದೆ.

೧೭. ನಾಗಶ್ರೇಷ್ಠನಾದ ಅನಂತ, ಬುದ್ಧಿಶಾಲಿಯಾದ ಮುಚುಕುಂದ, ಹಿಂದೆ ಸ್ವರ್ಗಲೋಕಾಧಿಪತಿಯಾಗಿ ಇಂದ್ರಪದವಿಯಲ್ಲಿರುತ್ತಾ ಸ್ವರ್ಗಲೋಕವಾಸಿಯಾಗಿದ್ದ ಬಲಿಚಕ್ರವರ್ತಿ ಇವರುಗಳೆಲ್ಲರೂ ಪಾತಾಳದಲ್ಲಿ ವಾಸಿಸುವರು.

**ಅತಲಂ ಶೈಲಸಂಕಾಶಂ ಸಂಕರಂ ಹಿ ತಲಾತಲಂ ।**
**ಪೀತಂ ಸುತಲಮಿತ್ಯುಕ್ತಂ ವಿತಲಂ ವಿದ್ರುಮಪ್ರಭಂ ॥ ೧೮ ॥**

**ಸಿತಂ ಮಹಾತಲಂ ಪ್ರೋಕ್ತಂ ತಲಂ ಚೈವ ಸಿತೇತರಂ ।**
**ಸುವರ್ಣೇನ ಮುನಿಶ್ರೇಷ್ಠಾಸ್ತಥಾ ವಾಸುಕಿನಾ ಶುಭಂ ॥ ೧೯ ॥**

**ರಸಾತಲಮಿತಿ ಖ್ಯಾತಂ ಸರ್ವಶೋಭಾಸಮನ್ವಿತಂ ।**
**ವೈನತೇಯಾದಿಭಿಶ್ಚೈವ ಕಾಲನೇಮಿಪುರೋಗಮೈಃ ॥ ೨೦ ॥**

**ಶಂಕುಕರ್ಣೇನ ಸಂಭಿನ್ನಂ ತಥಾ ನಮುಚಿಪೂರ್ವಕಂ ।**
**ತಥಾನ್ಯೈರ್ವಿವಿಧೈರ್ನಾಗೈಃ ತಲಂ ಚೈವ ಸುಶೋಭನಂ ॥ ೨೧ ॥**

**ತೇಷಾಮಧಸ್ತಾನ್ನರಕಾ ರೌರವಾದ್ಯಾಶ್ಚ ಕೋಟಿಯಃ ।**
**ಪಾಪಿನಸ್ತೇಷು ಪಾತ್ಯಂತೇ ನ ತೇsವನನಿತುಂ ಕ್ಷಮಾಃ ॥ ೨೨ ॥**

---

೧೮ ಮುನಿಶ್ರೇಷ್ಠರಾದ ಬ್ರಾಹ್ಮಣರೇ! ಕೇಳಿರಿ; ಅತಲಲೋಕವು ಮಣಿ ಶಿಲೆಯಂತೆ ಕಾಂತಿಯುಳ್ಳುದೂ, ತಲಾತಲಲೋಕವು ಮಿಶ್ರವರ್ಣವುಳ್ಳುದೂ ಆಗಿವೆ.

೧೯. ಸುತಲಲೋಕವು ಹಳದಿಯಬಣ್ಣವುಳ್ಳುದು, ವಿತಲಲೋಕವು ಹವಳದ ಬಣ್ಣವಾಗಿದೆ ಮಹಾತಲಲೋಕವು ಬಣ್ಣದಲ್ಲಿ ಬಿಳಿಯದು. ತಲಲೋಕದಬಣ್ಣ ಕಪ್ಪು ಎಂದು ಹೇಳಿದೆ.

೨೦. ವಾಸುಕಿಯ ನಿವಾಸವೆನಿಸಿದ ರಸಾತಲಲೋಕವು ಚಿನ್ನದ ಬಣ್ಣವುಳ್ಳುದಾಗಿ ಶುಭಕರವಾದುದೆನಿಸಿದೆ.

೨೧. ವೈನತೇಯ ಮೊದಲಾದ ಗರುಡರು, ಕಾಲನೇಮಿಯೇ ಮುಂತಾದ ನಾಗರು, ನಮುಚಿ, ಶಂಕುಕರ್ಣ ಮೊದಲಾದ ಸರ್ಪಶ್ರೇಷ್ಠರು ಇವರುಗಳಿಂದಲೂ, ಹೀಗೆ ಬೇರೆಬೇರೆ ಬಗೆಬಗೆಯ ನಾಗರುಗಳಿಂದಲೂ ಕೂಡಿ. ತಲಲೋಕವು ಮಂಗಳಕರವೆನಿಸಿದೆ.

೨೨. ಅವುಗಳ ಕೆಳಗೆ ರೌರವ ಮೊದಲಾದ ನರಕಕೋಟಿಗಳಿವೆ. ಪಾಪಿಗಳನ್ನು ಅವುಗಳಲ್ಲಿ ನೂಕುತ್ತಾರೆ. ಆ ನರಕದ ಕ್ಲೇಶಗಳನ್ನು ಅನುಭವಿಸುವುದು ಬಹು ಕಷ್ಟ.

**ಪಾತಾಳಾನಾಮಧಶ್ಚಾಂತೇ ಶೇಷಾಖ್ಯಾ ವೈಷ್ಣವೀ ತನುಃ ।**
**ಕಾಲಾಗ್ನಿರುದ್ರಯೋಗಾತ್ಮಾ ನಾರಸಿಂಹೋऽಪಿ ಮಾಧವಃ ॥ ೨೩ ॥**

**ಯೋऽನಂತಃ ಪಠ್ಯತೇ ದೇವೋ ನಾಗರೂಪೀ ಜನಾರ್ದನಃ ।**
**ತದಾಧಾರಮಿದಂ ಸರ್ವಂ ಸಕಲಾಗ್ನಿಮುಪಾಶ್ರಿತಂ ॥ ೨೪ ॥**

**ತಮಾವಿಶ್ಯ ಮಹಾಯೋಗೀ ಕಾಲಸ್ತದ್ವದನಾನಲಃ ।**
**ವಿಷಜ್ವಾಲಾಸಮೋऽನಂತೋ ಜಗತ್ಸಂಹರತಿ ಸ್ವಯಂ ॥ ೨೫ ॥**

**ತಾಮಸೀ ಶಾಂಭವೀ ಮೂರ್ತಿಃ ಕಾಲಾತ್ಮಾ ಪರಮೇಶ್ವರಃ ।**
**ಸ ಏವ ಗರ್ಭಮಾಶ್ರಿತ್ಯ ಪ್ರಕಾಶಯತಿ ನಿತ್ಯಶಃ ॥ ೨೬ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ಪಾತಾಲವರ್ಣನಂ ನಾಮ ತೃತೀಯೋऽಧ್ಯಾಯಃ.**

---

೨೩. ಈ ಅನೇಕ ವಿಧಗಳಾದ ಪಾತಾಳಗಳ ಕೆಳಗಡೆ ಕೊನೆಯಲ್ಲಿ ಶೇಷ ಸಂಜ್ಞಕನಾದ ವಿಷ್ಣುವಿನ ಶರೀರವಿದೆ. ಜಗತ್ಪ್ರಳಯಕಾರಿಯೂ, ಯೋಗಾತ್ಮನೂ ಆದ ಕಾಲಾಗ್ನಿರುದ್ರನೆಂದೂ.

೨೪. ನರಸಿಂಹ, ಮಾಧವ, ಜನಾರ್ಧನ ಮುಂತಾದ ನಾಮಗಳಿಂದಲೂ ಸರ್ವರೂಪನಾಗಿ ವ್ಯವಹರಿಸಲ್ಪಡುವವನಾದ ಪರಮಾತ್ಮನೇ ಅನಂತನೆಂದು ಹೇಳಿಸಿ ಕೊಳ್ಳುತ್ತಾನೆ.

೨೫. ಸಮಸ್ತ ಅಗ್ನಿಗಳಿಗೂ ಆಶ್ರಯವಾಗಿರುವ ಅವನ ಶಿರಸ್ಸಿನ ಮೇಲೆ ಈ ಲೋಕಗಳೆಲ್ಲವೂ ಸ್ಥಾಪಿತವಾಗಿವೆ. ಮಹಾಯೋಗಿಯಾದ ಅವನ ಮುಖ (ಬಾಯಿ) ದಲ್ಲಿರುವ ಕಾಲಾಗ್ನಿಯು ಅವನಲ್ಲಿಯೇ ಹುಟ್ಟಿದುದರಿಂದ ಜ್ವಾಲಾಸದೃಶ ನಾದ ಆ ಅನಂತನು ಜಗತ್ತನ್ನೆಲ್ಲಾ ತಾನೇ ಸಂಹರಿಸುತ್ತಾನೆ

೨೬. ತಮೋಗುಣಪ್ರಧಾನವೆನಿಸಿದ ರುದ್ರನ ಸಂಬಂಧಿಯಾದ ಮೂರ್ತಿಯು ಕಾಲಾತ್ಮನಾದ ಪರಮೇಶ್ವರನೆನಿಸಿಕೊಂಡು ಭೂಗರ್ಭಭಾಗವನ್ನು ಆಶ್ರಯಿಸಿಕೊಂಡಿರುತ್ತಾ ನಿತ್ಯವೂ ಪ್ರಕಾಶಿಸುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ ಪಾತಾಳವರ್ಣನೆಯೆಂಬ ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ಪ್ರಥಮಭಾಗೇ

## ಚತುರ್ಥೋಽಧ್ಯಾಯಃ

॥ ಸೂತ ಉವಾಚ ॥

ಏತದ್ಬ್ರಹ್ಮಾಂಡಮಾಖ್ಯಾತಂ ಚತುರ್ವಿಧಮಿದಂ ಮಹತ್ ।
ಅತಃ ಪರಂ ಪ್ರವಕ್ಷ್ಯಾಮಿ ಭೂಲೋಕಸ್ಯ ವಿನಿರ್ಣಯಂ ॥ ೧ ॥

ತದ್ದ್ವೀಪಪ್ರಧಾನೋ ಜಂಬೂಃ ಪ್ಲಕ್ಷಃ ಶಾಲ್ಮಲ ಏವ ಚ ।
ಕುಶಃ ಕ್ರೌಂಚಶ್ಚ ಶಾಕಶ್ಚ ಪುಷ್ಕರಶ್ಚೈವ ಸಪ್ತಮಃ ॥ ೨ ॥

ಏತೇ ಸಪ್ತ ಮಹಾದ್ವೀಪಾಃ ಸಮುದ್ರೈಃ ಸಪ್ತಭಿರ್ವೃತಾಃ ।
ದ್ವೀಪಾದ್ದ್ವೀಪೋ ಮಹಾನುಕ್ತಃ ಸಾಗರಾದಪಿ ಸಾಗರಃ ॥ ೩ ॥

---

## ನಾಲ್ಕನೆಯ ಅಧ್ಯಾಯ

೧. ಸೂತರು ಶೌನಕಾದಿಗಳನ್ನು ಕುರಿತು ಹೇಳುತ್ತಾರೆ—ದೊಡ್ಡದಾದ ಬ್ರಹ್ಮಾಂಡಸ್ವರೂಪವು ಈ ನಾಲ್ಕುಬಗೆಯೆಂದು ಹೇಳಲಾಗಿದೆ. ಇಲ್ಲಿಂದ ಮುಂದೆ ಭೂಲೋಕದ ವಿವರಣವನ್ನು ಹೇಳುವೆನು.

೨. ಆ ಭೂಲೋಕದಲ್ಲಿ ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರವೆಂಬಿವು ಮುಖ್ಯವಾದ ದೊಡ್ಡ ದ್ವೀಪಗಳು.

೩. ಈ ಏಳು ಮಹಾದ್ವೀಪಗಳೂ ಏಳು ಮಹಾಸಮುದ್ರಗಳಿಂದ ಆವರಿಸಲ್ಪಟ್ಟಿವೆ. ಒಂದು ದ್ವೀಪಕ್ಕಿಂತ ಮತ್ತೊಂದು ದ್ವೀಪವು ದೊಡ್ಡದು. ಒಂದು ಸಾಗರಕ್ಕಿಂತ ಮತ್ತೊಂದು ಸಾಗರವು ದೊಡ್ಡದು. ಈ ಪ್ರಕಾರ ಇದೆ.

**ಸುರೋದೇಕ್ಷುರಸೋದೋऽಥ ಕ್ಷಾರೋದಶ್ಚ ಘೃತೋದಕಃ ।**
**ದಧ್ಯೋದಃ ಕ್ಷೀರಸಲಿಲೋ ಜಲೋದಶ್ಚೇತಿ ಸಾಗರಾಃ ॥ ೪ ॥**

**ಪಂಚಾಶತ್ಕೋಟಿವಿಸ್ತೀರ್ಣಾ ಸಮುದ್ರವಲಯಾ ಸ್ಮೃತಾ ।**
**ದ್ವೀಪೈಶ್ಚ ಸಪ್ತಭಿರ್ಯುಕ್ತಾಃ ಯೋಜನಾನಾಂ ಸಮಾನತಃ ॥ ೫ ॥**

**ಜಂಬೂದ್ವೀಪಂ ಸಮಸ್ತಾನಾಂ ದ್ವೀಪಾನಾಂ ಮಧ್ಯತಃ ಶುಭಃ ।**
**ತಸ್ಯ ಮಧ್ಯೇ ಮಹಾಮೇರುರ್ವಿಶ್ರುತಃ ಕನಕಪ್ರಭಃ ॥ ೬ ॥**

**ಚತುರಾಶೀತಿಸಾಹಸ್ರ್ಯೋಜನೈರಸ್ಯ ಚೋಚ್ಛ್ರಯಃ ।**
**ಪ್ರವಿಷ್ಟಃ ಷೋಡಶಾಧಸ್ತಾದ್ದ್ವಾತ್ರಿಂಶನ್ಮೂರ್ಧ್ನಿ ವಿಸ್ತೃತಃ ॥ ೭ ॥**

**ಮೂಲೇ ಷೋಡಶಸಾಹಸ್ರಂ ವಿಸ್ತಾರಸ್ತಸ್ಯ ಸರ್ವತಃ ।**
**ಭೂಪ್ರಮುಖ್ಯಶ್ಚ ಶೈಲೋऽಸೌ ಕಲಿಕಾತ್ವೇನ ಸಂಸ್ಥಿತಃ ॥ ೮ ॥**

---

೪. ಮದ್ಯದ (ಹೆಂಡದ) ಸಮುದ್ರ, ಇಕ್ಷುರಸ (ಕಬ್ಬಿನಹಾಲಿನ) ಸಮುದ್ರ, ಉಪ್ಪುನೀರಿನ ಸಮುದ್ರ, ತುಪ್ಪದ ಸಮುದ್ರ, ದಧಿಸಮುದ್ರ, ಕ್ಷೀರಸಮುದ್ರ, ಶುದ್ಧೋದಕ ಸಮುದ್ರ, ಎಂಬಿವು ಸಪ್ತ ಸಮುದ್ರಗಳು.

೫. ಸಮುದ್ರದಿಂದ ಆವೃತವಾಗಿರುವ ಭೂಮಿಯು ಐವತ್ತುಕೋಟಿ ಯೋಜನಗಳ ಅಳತೆಯುಳ್ಳದು. ಇದು ಏಳು ದ್ವೀಪಗಳಿಂದ ಕೂಡಿ, ಯೋಜನಗಟ್ಟಲೆ ಅಳತೆಯುಳ್ಳದ್ದಾಗಿದೆ.

೬. ಶುಭವಾದ ಜಂಬೂದ್ವೀಪವು ಎಲ್ಲಾ ದ್ವೀಪಗಳಿಗೂ ಮಧ್ಯದಲ್ಲಿದೆ. ಅದರ ಮಧ್ಯದಲ್ಲಿ ಚಿನ್ನದ ಕಾಂತಿಯುಳ್ಳ ಮಹಾ ಮೇರುಪರ್ವತವು ಪ್ರಸಿದ್ಧವಾಗಿದೆ.

೭ ಇದರ ಎತ್ತರವು ಎಂಬತ್ತುನಾಲ್ಕು ಸಹಸ್ರಯೋಜನಗಳಿವೆ. ನೆಲದೊಳಗೆ (ಕೆಳಗಡೆ) ಹದಿನಾರುಸಾವಿರ ಯೋಜನಗಳ ಆಳದವರೆಗೆ ಪ್ರಸರಿಸಿದೆ. ಮೇಲ್ಗಡೆ ಮೂವತ್ತೆರಡುಸಹಸ್ರ ಯೋಜನಗಳ ವಿಸ್ತಾರವಿದೆ.

೮. ಬುಡದಲ್ಲಿ ಪರ್ವತದ ಸುತ್ತಲೂ ಹದಿನಾರುಸಾವಿರ ಯೋಜನಗಳ ವಿಸ್ತಾರವಿದೆ. ಭೂಮಿಯ ಮಧ್ಯದಲ್ಲಿರುವ ಈ ಪರ್ವತವು ಮೊಗ್ಗಿನ ಹಾಗೆ ಎದ್ದು ಕಾಣುತ್ತಾ ಬಹು ಪ್ರಾಮುಖ್ಯವಾಗಿದೆ.

**ಹಿಮವಾನ್ ಹೇಮಕೂಟಶ್ಚ ನಿಷಧಸ್ತಸ್ಯ ದಕ್ಷಿಣೇ ।**
**ನೀಲಃ ಶ್ವೇತಶ್ಚ ಶೃಂಗೀ ಚ ಉತ್ತರೇ ವರ್ಷಪರ್ವತಃ ॥ ೯ ॥**

**ಲಕ್ಷಪ್ರಮಾಣೌ ದ್ವೌ ಮಧ್ಯೇ ದಶಹೀನಾಸ್ತಥಾಪರೇ ।**
**ಸಹಸ್ರದ್ವಿತಯಂ ದೀರ್ಘಾಸ್ತಾವದ್ವಿಸ್ತಾರಿಣಶ್ಚ ತೇ ॥ ೧೦ ॥**

**ಭಾರತಂ ದಕ್ಷಿಣಂ ವರ್ಷಂ ತತಃ ಕಿಂಪುರುಷಂ ಸ್ಮೃತಂ ।**
**ಹರಿವರ್ಷಂ ತಥೈವಾನ್ಯನ್ಮೇರೋರ್ದಕ್ಷಿಣತೋ ದ್ವಿಜಾಃ ॥ ೧೧ ॥**

**ಚಂಪಕಂ ಚೋತ್ತರಂ ವರ್ಷಂ ತಥೈವಾಶ್ವಹಿರಣ್ಮಯಂ ।**
**ಉತ್ತರಾಃ ಕುರವಶ್ಚೈವ ಯಥೈತೇ ಭಾರತಾಸ್ತಥಾ ॥ ೧೨ ॥**

---

೯. ಅದರ ದಕ್ಷಿಣದಲ್ಲಿ ಹಿಮವಂತ, ಹೇಮಕೂಟ, ನಿಷಧ ಈ ಮೂರು ಪರ್ವತಗಳಿವೆ. ನೀಲಪರ್ವತ, ಶ್ವೇತಪರ್ವತ, ಶೃಂಗೀಪರ್ವತ, ವರ್ಷಪರ್ವತ ಇವು ಉತ್ತರದಲ್ಲಿರುವುವು.

೧೦. ಇವುಗಳಲ್ಲಿ ಮೊದಲಿನ ಎರಡು ಪರ್ವತಗಳು, ಎತ್ತರದಲ್ಲಿ ಒಂದು ಲಕ್ಷ ಯೋಜನ ಪ್ರಮಾಣವುಳ್ಳುವು. ಮಿಕ್ಕವು ಪ್ರತಿಯೊಂದೂ ಅನುಕ್ರಮವಾಗಿ ಹತ್ತು ಹತ್ತು ಯೋಜನಗಳು ಕಡಿಮೆಯಾಗಿದೆ. ಅವು ಒಂದೊಂದೂ ಎರಡುಸಾವಿರ ಯೋಜನ ಉದ್ದವೂ ಅಷ್ಟೇ ಅಗಲವೂ ಉಳ್ಳವುಗಳಾಗಿವೆ.

೧೧. ಎಲೈ ದ್ವಿಜರೇ! ದಕ್ಷಿಣದಿಕ್ಕಿನಲ್ಲಿರುವುದು ಭರತವರ್ಷ. ಅಲ್ಲಿಂದ ಮೇಲೆ ಕಿಂಪುರುಷವರ್ಷ. ಅಲ್ಲಿಂದ ಮೇಲಕ್ಕೆ ಹರಿವರ್ಷವೆಂಬುದು ಮತ್ತೊಂದು. ಇವುಗಳು ಮೇರುವಿನ ದಕ್ಷಿಣದಲ್ಲಿವೆ.

೧೨. ಚಂಪಕವರ್ಷವೆಂಬುದೂ ಹಾಗೆಯೇ ಅಶ್ವಹಿರಣ್ಮಯವೆಂಬುದೂ ಉತ್ತರ ಕುರುವರ್ಷವೂ ಮೇರುವಿನ ಉತ್ತರದಲ್ಲಿರುವುವು. ಇವೆಲ್ಲಾ ಭರತವರ್ಷದಂತೆಯೇ ಇವೆ.

ನವಸಾಹಸ್ರಮೇಕೈಕಂ ಏತೇಷಾಂ ದ್ವಿಜಸತ್ತಮಾಃ ।
ಇಲಾವೃತಶ್ಚ ತನ್ಮಧ್ಯೇ ತನ್ಮಧ್ಯೇ ಮೇರುರುಚ್ಛ್ರಿತಃ ॥ ೧೩ ॥

ಮೇರೋಶ್ಚತುರ್ದಿಕ್ಷು ತತ್ರ ನವಸಾಹಸ್ರವಿಸ್ತೃತಂ ।
ಇಲಾವೃತಂ ಮಹಾಭಾಗಾಶ್ಚತ್ವಾರಸ್ತತ್ರ ಪರ್ವತಾಃ ॥ ೧೪ ॥

ವಿಷ್ಕಂಭಾ ರಚಿತಾ ಮೇರೋರ್ಯೋಜನಾಯುತಮುಚ್ಛ್ರಿತಾಃ ।
ಪೂರ್ವೇಣ ಮಂದರೋ ನಾಮ ದಕ್ಷಿಣೇ ಗಂಧಮಾದನಃ ॥ ೧೫ ॥

ವಿಪುಲಃ ಪಶ್ಚಿಮೇ ಭಾಗೇ ಸು ಪಾರ್ಶ್ವಶ್ಚೋತ್ತರೇ ಸ್ಥಿತಃ ।
ಕದಂಬೇಷ್ವೇಷು ನದ್ಯಶ್ಚ ಪಿಪ್ಪಲೋ ವಟ ಏವ ಚ ॥ ೧೬ ॥

ಜಂಬೂದ್ವೀಪಸ್ಯ ಸಾ ಜಂಬೂರ್ನಾಮಹೇತೋರ್ಮಹರ್ಷಯಃ ।
ಮಹಾಗಜಪ್ರಮಾಣಾನಿ ಜಂಬೂನ್ಯಸ್ಯ ಫಲಾನಿ ಚ ॥ ೧೭ ॥

---

೧೩. ಎಲೈ ಬ್ರಾಹ್ಮಣಶ್ರೇಷ್ಠರೇ! ಕೇಳಿರಿ; ಇವುಗಳಲ್ಲಿ ಒಂದೊಂದೂ ಒಂಭತ್ತು ಸಹಸ್ರ ಯೋಜನ ಪ್ರಮಾಣವುಳ್ಳದ್ದು. ಇವುಗಳ ಮಧ್ಯೆ ಇಲಾವೃತವರ್ಷವೆಂಬುದಿದೆ. ಅದರ ಮಧ್ಯದಲ್ಲಿ ಎತ್ತರವಾದ ಮೇರುಪರ್ವತವಿದೆ.

೧೪. ಆ ಇಳಾವೃತವರ್ಷವು ಮೇರುಪರ್ವತದ ನಾಲ್ಕು ಕಡೆಗಳಲ್ಲಿಯೂ ಒಂಭತ್ತುಸಾವಿರ ಯೋಜನ ವಿಸ್ತಾರವಾಗಿ ಪ್ರಸರಿಸಿದೆ. ಎಲೈ ಮಹಾಭಾಗರಾದ ದ್ವಿಜರೇ! ಕೇಳಿರಿ; ಆ ಇಳಾವೃತವರ್ಷದಲ್ಲಿ ನಾಲ್ಕುಪರ್ವತಗಳಿವೆ. ಇವು ಆ ಮೇರು ಪರ್ವತಕ್ಕೆ ಸೀಮಾಸ್ತಂಭಗಳಂತೆ ರಚಿತವಾಗಿ ಹತ್ತುಸಾವಿರ ಯೋಜನ ಎತ್ತರವಾಗಿದೆ.

೧೫–೧೬. ಆ ನಾಲ್ಕುಪರ್ವತಗಳಲ್ಲಿ ಮೇರುವಿನ ಪೂರ್ವದಿಕ್ಕಿನಲ್ಲಿ ಮಂದರ ಪರ್ವತ, ಗಂಧಮಾದನಪರ್ವತ ದಕ್ಷಿಣದಿಕ್ಕಿನಲ್ಲಿ, ಪಶ್ಚಿಮಭಾಗದಲ್ಲಿ ವಿಪುಲಪರ್ವತ, ಉತ್ತರದಲ್ಲಿ ಸುಪಾರ್ಶ್ವಪರ್ವತ ಈ ಪ್ರಕಾರ ಸೇರಿವೆ. ಈ ಪರ್ವತಸ್ತೋಮವಲ್ಲಿ ಅನೇಕ ನದಿಗಳೂ, ಆನೆಗಳಿಗೆ ಪ್ರಿಯವಾದ ಪಿಪ್ಪಲವೃಕ್ಷಗಳೂ, ವಟವೃಕ್ಷ (ಆಲದ ಮರ) ಗಳೂ ಇವೆ.

೧೭ ಅಸಾಧಾರಣವಾದ ಜಂಬೂಫಲವಿರುವ ಕಾರಣದಿಂದಲೇ ಮಹರ್ಷಿಗಳು ಈ ದ್ವೀಪವನ್ನು ಜಂಬೂದ್ವೀಪವೆಂದು ಕರೆಯುವರು. ಈ ಜಂಬೂಫಲಗಳು ದೊಡ್ಡ ಆನೆಗಳಷ್ಟು ಗಾತ್ರಗಳಾಗಿವೆ.

**ಪತಂತಿ ಭೂಭೃತಃ ಪ್ರಸ್ಥೇ ಶೀರ್ಯಮಾಣಾನಿ ಸರ್ವಶಃ ।**
**ರಸೇನ ಚೈವ ಪ್ರಖ್ಯಾತಾ ತತ್ರ ಜಂಬೂನದೀ ಇತಿ ॥ ೧೮ ॥**

**ಸರಿತ್ಸು ವರ್ತತೇ ಸಾಪಿ ಪೀಯತೇ ತತ್ರ ವಾಸಿಭಿಃ ।**
**ನ ಖೇದೋ ನ ಚ ದೌರ್ಗಂಧ್ಯಂ ನ ಜರಾ ನೇಂದ್ರಿಯಕ್ಷಯಃ ।**
**ಉತ್ಪನ್ನಾಃ ಸ್ವಚ್ಛಮನಸೋ ನರಾಸ್ತತ್ರ ಭವಂತಿ ವೈ ॥ ೧೯ ॥**

**ತೀರಸೂತ್ರಂ ಸಮಂ ಪ್ರಾಪ್ಯ ವಾಯುನಾ ಚ ವಿಶೋಷಿತಂ ।**
**ಜಾಂಬೂನದಾಖ್ಯಂ ಭವತಿ ಸುವರ್ಣಂ ಸಿದ್ಧಭೂಷಣಂ ॥ ೨೦ ॥**

**ಭದ್ರಾಶ್ವಃ ಪಾರ್ಶ್ವತೋ ಮೇರೋಃ ಕೇತುಮಾಲಶ್ಚ ಪಶ್ಚಿಮೇ ।**
**ವರ್ಷೇ ಸ್ವೇ ತು ಮುನಿಶ್ರೇಷ್ಠಾಸ್ತಯೋರ್ಮಧ್ಯೇ ಇಲಾವೃತಂ ॥ ೨೧ ॥**

---

೧೮. ಇವು ಚೆನ್ನಾಗಿ ಪಕ್ವವಾಗಿ, ಸುತ್ತಲೂ ಬಿರಿದುಹೋಗಿ, ಈ ಪರ್ವತದ ತಪ್ಪಲಿನಲ್ಲಿ ಬೀಳುತ್ತವೆ. ಆ ಜಂಬೂಫಲದ ರಸಪ್ರವಾಹದಿಂದಲೇ ಆ ಪರ್ವತದಲ್ಲಿ ಒಂದು ನದಿಯು ಉಂಟಾಗುವುದು. ಅದು ಜಂಬೂನದಿಯೆಂದು ಪ್ರಸಿದ್ಧವಾಗಿದೆ.

೧೯. ಅಲ್ಲಿನ ನಿವಾಸಿಗಳು ಆ ಜಂಬೂನದಿಯ ಜಲವನ್ನೇ ಪಾನಮಾಡುತ್ತಾರೆ. ಈ ನದಿಯ ಜಲಪಾನದಿಂದ ಅವರಿಗೆ ಬಾಹ್ಯಾಂತರಿಕ ಖೇದ, ದುರ್ಗಂಧ, ಮುಪ್ಪು, ಇಂದ್ರಿಯದೌರ್ಬಲ್ಯ, ಇವುಗಳೊಂದೂ ಪ್ರಾಪ್ತವಾಗುವುದಿಲ್ಲ ಅಲ್ಲಿನ ಮನುಷ್ಯರೆಲ್ಲಾ ಪರಿಶುದ್ಧಮನಸ್ಸುಳ್ಳವರಾಗಿ ಆವಿರ್ಭವಿಸುವರು.

೨೦. ಈ ನದಿಯ ಪ್ರವಾಹವು ತೀರದಲ್ಲಿ ಸಮವಾಗಿ ಹರಿದುಕೊಂಡು ಹೋಗುತ್ತಾ ದಡದ ಕೆಸರು ಗಾಳಿಗೆ ಆರಿದರೆ ಅದು ಚಿನ್ನವಾಗುತ್ತದೆ ಅದಕ್ಕೆ ಜಾಂಬೂನದ ಎಂದು ಹೆಸರು. ಅದು ಸಿದ್ಧಜನರಿಗೂ ಭೂಷಣವೆನಿಸುವುದು.

೨೧. ಶ್ರೇಷ್ಠರಾದ ಮುನಿವರ್ಯರೇ! ಕೇಳಿರಿ; ಮೇರುವಿನ ಪೂರ್ವಪಾರ್ಶ್ವದಲ್ಲಿ ಭದ್ರಾಶ್ವವರ್ಷವೂ, ಪಶ್ಚಿಮಪಾರ್ಶ್ವದಲ್ಲಿ ಕೇತುಮಾಲವರ್ಷವೂ ಇವೆ. ಆ ಎರಡು ವರ್ಷಗಳ ಮಧ್ಯೆ ಇಲಾವೃತವರ್ಷವಿದೆ.

ಮೇರೋರುಪರಿ ವಿಪ್ರೇಂದ್ರಾ ಬ್ರಹ್ಮಣಃ ಸ್ಥಾನಮುತ್ತಮಂ ।
ತದೂರ್ಧ್ವೇ ವಾಸವಸ್ಥಾನಂ ತದೂರ್ಧ್ವೇ ಶಂಕರಸ್ಯ ಚ ॥ ೨೨ ॥

ತದೂರ್ಧ್ವಂ ವೈಷ್ಣವೋ ಲೋಕಃ ದುರ್ಗಾಲೋಕಸ್ತದೂರ್ಧ್ವತಃ ।
ಜ್ಯೋತಿರ್ಮಯಂ ಪರಂ ಸ್ಥಾನಂ ನಿರಾಕಾರಂ ಹಿರಣ್ಮಯಂ ॥ ೨೩ ॥

ಭಕ್ತಸ್ಥಾನಂ ತದೂರ್ಧ್ವಂ ಚ ದೇವೋ ಹಿ ಭಗವಾನ್ ರವಿಃ ।
ಜ್ಯೋತಿಶ್ಚಕ್ರಸ್ಥಿತಃ ಶುದ್ಧೋ ನಿಶ್ಚಲಃ ಪರಮೇಶ್ವರಃ ॥
ರಾಶಿಚಕ್ರೇ ಚ ಭ್ರಮತಿ ಮೇರೋರುಪರಿ ಸತ್ತಮಾಃ ॥ ೨೪ ॥

ಬಿಂಬಷಟ್ಕೇಽದ್ರಿನಾಭೌ ಚ ರಥಚಕ್ರಂ ದಿವಾನಿಶಂ ।
ವಾತರಜ್ಜುನಿಬಂಧೇನ ಧ್ರುವಾಧಾರೇ ಪ್ರತಿಷ್ಠಿತಂ ॥ ೨೫ ॥

---

೨೨. ಮೇರುಪರ್ವತದ ಮೇಲುಗಡೆ ಉತ್ತಮವಾದ ಬ್ರಹ್ಮನ ಸ್ಥಾನವಿದೆ. ಆ ಬ್ರಹ್ಮಸ್ಥಾನದ ಮೇಲುಗಡೆ ಇಂದ್ರನ ಸ್ಥಾನವಿದೆ. ಅದಕ್ಕಿಂತಲೂ ಮೇಲೆ ಶಂಕರನ ಸ್ಥಾನವಿದೆ.

೨೩. ಅದಕ್ಕಿಂತ ಮೇಲೆ ವಿಷ್ಣುಲೋಕವಿದೆ. ಅದಕ್ಕಿಂತ ಮೇಲೆ ದುರ್ಗಾ ಲೋಕವಿದೆ. ಅದಕ್ಕೂ ಮೇಲೆ ಪ್ರಕಾಶಮಯವೂ, ನಿರಾಕಾರವೂ, ಸುವರ್ಣಮಯವೂ ಆದ ಶ್ರೇಷ್ಠವಾದ ಸ್ಥಾನವೊಂದಿದೆ ಅದೇ ಸೂರ್ಯಭಕ್ತರಸ್ಥಾನ.

೨೪. ಅದಕ್ಕಿಂತ ಮೇಲುಗಡೆ ಭಗವಂತನಾದ ಸೂರ್ಯದೇವನಿದ್ದಾನೆ. ಜ್ಯೋತಿರ್ಮಂಡಲದ ಮಧ್ಯದಲ್ಲಿರುವವನೂ, ಶುದ್ಧನೂ, ನಿಶ್ಚಲನೂ, ಸರ್ವೇಶ್ವರನೂ ಆದ ಸೂರ್ಯನು ಹೀಗೆ ಮೇರುಪರ್ವತದ ಮೇಲ್ಭಾಗದಲ್ಲಿ ರಾಶಿಚಕ್ರದಲ್ಲಿ ಸುತ್ತುತ್ತಾನೆ.

೨೫. ಆರುಬಿಂಬಗಳಲ್ಲಿಯೂ, ಪರ್ವತದ ನಾಭಿಪ್ರದೇಶದಲ್ಲಿಯೂ, ಸೂರ್ಯರಥ ಚಕ್ರವು ಹಗಲೂ ರಾತ್ರಿಯೂ ಗಾಳಿಯೆಂಬ ಹಗ್ಗದ ಬಂಧನಕ್ಕೊಳಗಾಗಿ ಧ್ರುವಮಂಡಲದ ಆಧಾರದ ಮೇಲೆ ನಿಂತಿದೆ.

ದಿಕ್ಪಾಲಾದ್ಯಾ ಗ್ರಹಾಸ್ತತ್ರ ದಕ್ಷಿಣಾದುತ್ತರಾಯಣಂ ।
ಪ್ರತಿಮಾಸಂ ಗತಃ ಪಂಥಾ ಹ್ರಾಸವೃದ್ಧಿದಿನಕ್ಷಯಃ ॥ ೨೬ ॥

ರವಿಣಾ ಲಂಘಿತೋ ಮಾಸಶ್ಚಾಂದ್ರಃ ಖ್ಯಾತೋ ಮಲಿಮ್ಲುಚಃ ।
ದ್ವಾದಶೇ ಭಗವತ್ಸೂರ್ಯೇ ಪ್ರತ್ಯಹಂ ಭಕ್ತಸೇವಕೇ ॥ ೨೭ ॥

ಕೃತ್ವಾ ತ್ರಿಷುತ್ವಹೋರಾತ್ರಂ ತಾರಾಪಾದಗತಂ ವಿಭುಂ ।
ಯಾಮೇಯಾಮೇ ಚೋದಯಶ್ಚ ದೇಶೇದೇಶೇ ಚ ಶರ್ವರೀ ॥ ೨೮ ॥

ದಿವಾ ಚರತಿ ಯಃ ಸೂರ್ಯೋ ರಾತ್ರೌ ಚರತಿ ಚಂದ್ರಮಾಃ ।
ನಕ್ಷತ್ರಾಣಿ ದಿವಾ ರಾತ್ರೌ ಸೂರ್ಯಚಕ್ರೇ ಪ್ರತಿಷ್ಠಿತಂ ॥ ೨೯ ॥

---

೨೬. ಮಂಡಲಸ್ಥರಾದ ದಿಕ್ಪಾಲಕರು ಗ್ರಹಗಳ ಸಮೇತ ದಕ್ಷಿಣದಿಂದ ಉತ್ತರದ ಕಡೆ ಸಂಚರಿಸುವುದರಿಂದ ಆ ದಾರಿಯು ಪ್ರತಿತಿಂಗಳಲ್ಲಿಯೂ ಸ್ವಲ್ಪಸ್ವಲ್ಪ ಒತ್ತಿಕೊಂಡು ಹೋಗುತ್ತಾ ಅಹಃಪ್ರಮಾಣದ ವೃದ್ಧಿಕ್ಷಯಗಳನ್ನೂ ತಿಥಿಗಳ ವೃದ್ಧಿಕ್ಷಯಗಳನ್ನೂ ಮಾಡುವುದು.

೨೭. ಸೂರ್ಯನು ಯಾವ ರಾಶಿಗೂ ಸಂಕ್ರಮಿಸದೆ ಇರುವ ಮಾಸವು ಮಲಿನ ಚಾಂದ್ರಮಾಸ ಅಥವಾ ಅಧಿಕಮಾಸ (ಮಲಮಾಸ) ವೆಂದು ಪ್ರಸಿದ್ಧವಾಗಿದೆ. ದ್ವಾದಶಾತ್ಮಕನೂ, ಭಗವಂತನೂ ಆದ ಸೂರ್ಯನು ಭಕ್ತರನ್ನು ಪ್ರತಿದಿನವೂ ಅನುಗ್ರಹಿಸುತ್ತಿರುತ್ತಾನೆ.

೨೮. ವಿಭುವಾದ ಸೂರ್ಯನು ಒಂದೊಂದು ನಕ್ಷತ್ರದ ಪಾದದಲ್ಲಿ ಮೂರು ಅಹೋರಾತ್ರಿ ಇರುವನೆಂದು ಲೆಕ್ಕಮಾಡಿಕೊಂಡು, ಈ ದಿನ ಪ್ರಥಮಯಾಮದಲ್ಲಿ ಒಂದು ದೇಶದಲ್ಲಿಯೂ, ದ್ವಿತೀಯಯಾಮದಲ್ಲಿ ಇನ್ನೊಂದು ದೇಶದಲ್ಲಿಯೂ, ಬೇರೆ ಬೇರೆ ದೇಶಗಳಲ್ಲಿ ಈ ರೀತಿ ಬೇರೆಬೇರೆ ಯಾಮಗಳಲ್ಲಿ ಸೂರ್ಯೋದಯವಾಗುವುದನ್ನು ಲೆಕ್ಕಾಚಾರಮಾಡಿಕೊಂಡು, ಆಯಾ ಸ್ಥಳಗಳಲ್ಲಿ ಪ್ರತಿದಿನವೂ ಹಗಲುರಾತ್ರಿಗಳ ಪರಿಮಾಣವನ್ನು ನಿಷ್ಕರ್ಷೆಮಾಡಬಹುದು.

೨೯. ಸೂರ್ಯನು ಹಗಲಿನಲ್ಲಿ ಚಲಿಸುವನು. ಚಂದ್ರನು ರಾತ್ರಿಯಲ್ಲಿ ಚಲಿಸುವನು. ನಕ್ಷತ್ರಗಳು ಹಗಲೂ ರಾತ್ರಿಯೂ ಸಹ ಸೂರ್ಯಚಕ್ರದಲ್ಲಿ ಸ್ಥಾಪಿತವಾಗಿವೆ.

**ದೇಶಾನ್ಯಂ ಚಾವಗಮನಂ ಯತ್ರ ತಸ್ಮಾದ್ದಿವಾಽಭವತ್ ।**
**ಯತ್ರ ಚಂದ್ರಕ್ಷಯೋ ಭವತಿ ತತ್ರ ಸೂರ್ಯಃ ಪ್ರವರ್ತತೇ ॥ ೩೦ ॥**

**ರಾತ್ರಿಂದಿವಂ ವಿಜಾನೀಯಾತ್ ಜ್ಯೋತಿಶ್ಚಕ್ರೇ ಪ್ರತಿಷ್ಠಿತಂ ।**
**ಉದಯಾಸ್ತಮನಂ ನಾಸ್ತಿ ನಕ್ಷತ್ರಾಣಾಂ ವಿಶೇಷತಃ ॥ ೩೧ ॥**

**ಯನ್ನಕ್ಷತ್ರೇ ಚ ಯೋ ದೇಶಃ ಸ ತೇಷಾಮುದಯಃ ಸ್ಮೃತಃ ।**
**ತತ್ರಾಸ್ತೋ ಜೀವಶುಕ್ರಾಣಾಂ ಸೂರ್ಯಾದೀನಾಂ ಚ ಸರ್ವಶಃ ॥ ೩೨ ॥**

**ತದಾ ಕಾಲೇ ನಿಯೋಕ್ತವ್ಯಾ ಭಾರ್ಗವಾಸ್ತಾದಿಕೇ ಕ್ರಿಯಾಂ ।**
**ಸೂರ್ಯಃ ಸೋಮೋ ಬುಧೋ ಭೌಮಃ ಭಾರ್ಗವಶ್ಚೈವ ಶೀಘ್ರತಃ ॥ ೩೩ ॥**

---

೩೦. ಸೂರ್ಯನು ಸಂಚರಿಸುತ್ತಾ ಒಂದು ಪ್ರದೇಶದಿಂದ ದಾಟಿ ಇನ್ನೊಂದು ಪ್ರದೇಶಕ್ಕೆ ಕಾಣಿಸಿಕೊಳ್ಳುವಾಗ ಆ ದೇಶದಲ್ಲಿ ಹಗಲಾಗುವುದು. ಅದೇ ಕಾಲದಲ್ಲಿ ಸೂರ್ಯನು ಕಾಣಿಸದ ಇನ್ನೊಂದು ದೇಶದಲ್ಲಿ ಚಂದ್ರೋದಯವಾಗುವುದು. ಚಂದ್ರನು ರಾತ್ರಿಯಲ್ಲಿ ಕಾಣಿಸುವನು. ಸೂರ್ಯನು ಹಗಲಿನಲ್ಲಿ ಕಾಣಿಸುವನು.

೩೧. ಹೀಗೆ ಚಂದ್ರನಿಲ್ಲದಾಗ ಸೂರ್ಯನೂ, ಸೂರ್ಯನಿಲ್ಲದಾಗ ಚಂದ್ರನೂ ಕಾಣಿಸುವರು. ಜ್ಯೋತಿಶ್ಚಕ್ರದಲ್ಲಿ ಹೇಳಿರುವಂತೆ ಹೀಗೆ ಹಗಲು ರಾತ್ರಿಗಳೆರಡನ್ನೂ ತಿಳಿದುಕೊಳ್ಳಬೇಕು. ನಕ್ಷತ್ರಗಳಿಗೆ ವಿಶೇಷತಃ ಸೂರ್ಯನಂತೆ ಉದಯಾಸ್ತಗಳಿಲ್ಲ.

೩೨. ಯಾವಾಗ ಯಾವ ನಕ್ಷತ್ರದ ನೇರದಲ್ಲಿ ಚಲಿಸುವ ಭೂಮಿಯ ಮೇಲೆ ಯಾವ ದೇಶವಿರುತ್ತದೆಯೋ ಆ ದೇಶಕ್ಕೆ ಆ ವೇಳೆಯಲ್ಲಿ ಆ ನಕ್ಷತ್ರಗಳು ಉದಯವಾದುವೆಂದು ತಿಳಿಯಬೇಕು. (ನಕ್ಷತ್ರೋದಯವು ಸೂರ್ಯೋದಯಾದಿಗಳಂತೆ ಅಲ್ಲ.) ಚಲನಕ್ರಮದಿಂದ ಸೂರ್ಯನು ಯಾವ ನಕ್ಷತ್ರಕ್ಕೆ ಬಂದಿರುವನೋ ಅದೇ ನಕ್ಷತ್ರಸ್ಥಾನಕ್ಕೆ ಗುರುಶುಕ್ರಾದಿಗಳು ಬಂದಾಗ ಆ ಗುರುಶುಕ್ರಾದಿಗಳಿಗೆ ಅಸ್ತವೇ ಹೊರತು ಪ್ರತಿನಿತ್ಯವೂ ಆ ಗುರುವು ಶುಕ್ರಾದಿಗಳ ಉದಯಾಸ್ತಗಳೆಂಬುದು ಇಲ್ಲ. (ಸೂರ್ಯನ ಜೊತೆಯಲ್ಲಿ ಮತ್ತೊಂದು ಗ್ರಹ ಸೇರಿದಾಗ ಸೂರ್ಯನ ಪ್ರಬಲಕಾಂತಿಯಿಂದ ಅವು ಕಾಣಿಸದುದರಿಂದ ಹಾಗೆ ಸೇರಿದ ಗ್ರಹ ಅಸ್ತವಾಯಿತೆಂದು ಹೇಳಬಹುದೇ ವಿನಾ, ಅದೇ ಗ್ರಹದ ಸೇರುವಿಕೆಯಿಂದ ಸೂರ್ಯನಿಗೆ ಅಸ್ತವೆಂಬುದು ಇಲ್ಲ.)

೩೩. ಹಾಗೆ ಸೂರ್ಯನ ಸೇರಿದ ಕಾಲದಲ್ಲಿ ಗುರುಶುಕ್ರಾದಿಗಳು ಅಸ್ತವಾಗುವರೆಂದು ಹೇಳಬೇಕು. ಸೂರ್ಯ, ಬುಧ, ಚಂದ್ರ, ಕುಜ, ಶುಕ್ರ ಇವರು ಶೀಘ್ರವಾಗಿ ಚಲಿಸುವರು.

ದಕ್ಷಿಣಾಯನಮಾಸ್ಥಾಯ ಯದಾ ಚರತಿ ರಶ್ಮಿಮಾನ್ ।
ತದಾ ಸರ್ವಗ್ರಹಾಣಾಂ ಸ ಸೂರ್ಯೋಽಧಸ್ತಾತ್ಪ್ರಸರ್ಪತಿ ॥ ೩೪ ॥

ವಿಸ್ತೀರ್ಣಮಂಡಲಂ ಕೃತ್ವಾ ತಸ್ಯೋರ್ಧ್ವೇ ಚರತೇ ಶಶೀ ।
ನಕ್ಷತ್ರಮಂಡಲಂ ಕೃತ್ಸ್ನಂ ಸೋಮಾದೂರ್ಧ್ವಂ ಪ್ರಸರ್ಪತಿ ॥ ೩೫ ॥

ನಕ್ಷತ್ರೇಭ್ಯೋ ಬುಧಶ್ಚೋರ್ಧ್ವಂ ಬುಧಾದೂರ್ಧ್ವಂ ತು ಭಾರ್ಗವಃ ।
ಚಂದ್ರಸ್ತು ಭಾರ್ಗವಾದೂರ್ಧ್ವಂ ಚಂದ್ರಾದೂರ್ಧ್ವಂ ಶನೈಶ್ಚರಃ ॥ ೩೬ ॥

ತಸ್ಮಾಚ್ಛನೈಶ್ಚರಾದೂರ್ಧ್ವಂ ತತಃ ಸಪ್ತರ್ಷಿಮಂಡಲಂ ।
ಋಷೀಣಾಂ ಚೈವ ಸಪ್ತಾನಾಂ ಧ್ರುವಶ್ಚೋರ್ಧ್ವಂ ವ್ಯವಸ್ಥಿತಃ ॥ ೩೭ ॥

ಕಾಲಚಕ್ರಮಯೇ ಚಕ್ರೇ ಸೂರ್ಯೋ ಭವತಿ ಸರ್ವದಾ ।
ರಾಶ್ಯರ್ಧೇಷು ಗತಿರ್ಯತ್ರ ತಿಥೀನಾಂ ಚ ತಿಥೌ ಸ್ಮೃತಾ ॥ ೩೮ ॥

---

೩೪. ಸೂರ್ಯನು ದಕ್ಷಿಣಾಯದಲ್ಲಿ ಸಂಚರಿಸುವಾಗ ಆ ಸೂರ್ಯನು ಎಲ್ಲಾ ಗ್ರಹಗಳ ಕೆಳಗೆ ಸಂಚರಿಸುತ್ತಾನೆ.

೩೫. ಆಗ ಚಂದ್ರನು ತನ್ನ ಮಂಡಲವನ್ನು ವಿಸ್ತಾರಮಾಡಿಕೊಂಡು ಅವನ ಮೇಲ್ಗಡೆ ಸಂಚರಿಸುತ್ತಾನೆ. ಸಮಸ್ತವಾದ ನಕ್ಷತ್ರಮಂಡಲವು ಚಂದ್ರನಿಗಿಂತ ಮೇಲುಗಡೆ ಸಂಚರಿಸುತ್ತದೆ.

೩೬. ಈ ನಕ್ಷತ್ರಗಳಿಗಿಂತ ಮೇಲೆ ಬುಧನು, ಬುಧನಿಗಿಂತ ಮೇಲೆ ಶುಕ್ರನೂ, ಶುಕ್ರನಿಗಿಂತ ಮೇಲೆ ಚಂದ್ರನೂ, ಚಂದ್ರನಿಗಿಂತ ಮೇಲೆ ಶನೈಶ್ಚರನೂ ಸುತ್ತುತ್ತಾರೆ.

೩೭. ಆ ಶನೈಶ್ಚರನಿಗಿಂತ ಮೇಲೆ ಸಪ್ತರ್ಷಿಮಂಡಲವೂ, ಸಪ್ತರ್ಷಿಮಂಡಲದ ಮೇಲೆ ಧ್ರುವಮಂಡಲವೂ ಇದೆ.

೩೮–೩೯. ಸೂರ್ಯನು ಯಾವಾಗಲೂ ಕಾಲಚಕ್ರಮಯವಾದ ಚಕ್ರದಲ್ಲಿ ಇರುತ್ತಾನೆ. ಯಾವ ಸಂದರ್ಭದಲ್ಲಿ ಸೂರ್ಯನಿಗೆ ರಾಶ್ಯರ್ಧಗಳಲ್ಲಿ ಗತಿಯಿರುವುದು; ಮತ್ತು ಒಂದು ತಿಥಿಯಲ್ಲಿ ಇತರ ತಿಥಿಗಳಿಗೆ ಪ್ರವೇಶವಿರುವುದು, ಸ್ತಂಭಿಸುವುದು,

**ಸ್ತಂಭತೇ ಚರತೇ ಶೀಘ್ರಂ ಹ್ರಾಸೇ ಚಾಪಿ ದಿನಕ್ಷಯಃ ।**
**ಪಾದಾಸ್ತಂ ಚಾಪಿ ಶುಕ್ರಸ್ಯ ಮಹಾಸ್ತಂ ತತ್ರ ದೃಶ್ಯತೇ ॥ ೩೯ ॥**

**ಪಾದಾಸ್ತೇ ಪಕ್ಷಮಾತ್ರಂ ಸ್ಯಾನ್ಮಹಾಸ್ತೇ ಯಾಮಮಾತ್ರಕಂ ।**
**ಚಕ್ರೇ ಪಕ್ಷಾರ್ಧಮಾಸಃ ಸ್ಯಾದತಿಚಾರೋಽಷ್ಟವಾಸರಾ ॥ ೪೦ ॥**

**ನ ಗಣ್ಯತೇ ದೇಶಭೇದೇ ನಕ್ಷತ್ರೇಣ ಚ ಗಣ್ಯತೆ ।**
**ಬಾಲವೃದ್ಧಸ್ತು ಶುಕ್ರಸ್ಯ ದೇಶಸ್ಥೇ ಬ್ರಾಹ್ಮಣಸ್ಯ ಚ ॥ ೪೧ ॥**

**ಬಾಲ್ಯವಾರ್ಧ್ಯೇ ಕ್ಷತ್ರಿಯಸ್ಯ ನ ಗಣ್ಯೇತೇ ಸದಾ ಬುಧೈಃ ।**
**ಪಾದಾದೂರ್ಧ್ವಂ ಮಹಾಸ್ತಸ್ಯ ವೈಶ್ಯಸ್ಯ ದ್ವಿಜಸತ್ತಮಾಃ ॥ ೪೨ ॥**

---

ಶೀಘ್ರವಾಗಿ ಚರಿಸುವುದು (ಅತಿಚಾರ). ವಕ್ರಹ್ರಾಸದಲ್ಲಿ ದಿನಪ್ರಮಾಣವು ಕಡಿಮೆಯಾಗುವುದು ಈ ರೀತಿ ಆದಾಗ ಶುಕ್ರನಿಗೆ ಪಾದಾಸ್ತವೂ ಮಹಾಸ್ತವೂ ಕಾಣುವುವು.

೪೦. ಪಾದಾಸ್ತವು ಒಂದು ಪಕ್ಷಕಾಲವೂ, ಮಹಾಸ್ತವು ಒಂದುಯಾಮ ಕಾಲವೂ, ಚಕ್ರದಲ್ಲಿ ಪಕ್ಷ ಎಂದರೆ ಅರ್ಧಮಾಸವೂ, ಅತಿಚಾರವೆಂಬುದು ಎಂಟು ದಿನಗಳ ಪ್ರಮಾಣವೂ ಉಳ್ಳದ್ದು.

೪೧. ನಕ್ಷತ್ರಭೇದದಿಂದ ಇದನ್ನು ಗಣಿಸಬೇಕೇ ವಿನಾ ದೇಶಭೇದವಾದರೆ ಇದು ಲೆಕ್ಕಕ್ಕೆ ಬರುವುದಿಲ್ಲ. ಬ್ರಾಹ್ಮಣನಿಗೆ ಶುಕ್ರನ ಬಾಲತ್ವವೃದ್ಧತ್ವಗಳನ್ನು ಈರೀತಿ ದೇಶಕ್ಕನುಸಾರವಾಗಿ ಗಣನೆಮಾಡಬೇಕು.

೪೨. ಕ್ಷತ್ರಿಯ ಜಾತಿಯವನಿಗೆ ಈ ಬಾಲ್ಯ ವೃದ್ಧತ್ವಗಳನ್ನು ವಿದ್ವಾಂಸರು ಯಾವಾಗಲೂ ಗಣಿಸಬೇಕಾಗಿಲ್ಲ. ಪಾದಾಸ್ತಕ್ಕಿಂತಲೂ ಮೀರಿದ ಮಹಾಸ್ತವನ್ನು ವೈಶ್ಯನಿಗೆ ಮಾತ್ರ ನಿಷೇಧವೆಂದು ಗಣಿಸಬೇಕು.

**ಶೇಷಾರ್ಧಂ ಭಾರ್ಗವಾಸ್ತಸ್ಯ ಶೂದ್ರಾಣಾಮಥ ಗರ್ಹಿತಂ ।**
**ಅತಿಚಾರೇ ಚ ವಕ್ರೇ ಚ ನ ಶೂದ್ರಸ್ಯ ವಿಧೀಯತೆ ॥ ೪೩ ॥**

**ವರ್ಜಯೇದ್ವಾಸರಾ್ ಸಪ್ತ ಇತಿ ಚಾಥರ್ವಣೀ ಶ್ರುತಿಃ । ॥ ೪೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ಜ್ಯೋತಿಶ್ಚಕ್ರೇ ಚತುರ್ಥೋಽಧ್ಯಾಯಃ.**



---

೪೩. ಶುಕ್ರಾಸ್ತದ ಕೊನೆಯ ಅರ್ಧವು ಶೂದ್ರರಿಗೆ ನಿಂದಿತವು. ಆದರೆ ಅತಿ ಚಾರದಲ್ಲೂ ವಕ್ರಗತಿಯಲ್ಲೂ ಶೂದ್ರನಿಗೆ ನಿಷೇಧವನ್ನು ಎಲ್ಲೂ ವಿಧಿಸುವುದಿಲ್ಲ.

ಅಂಥ ಸಂದರ್ಭದಲ್ಲಿ ಏಳುದಿವಸಗಳನ್ನು ಮಾತ್ರ ವರ್ಜ್ಯಮಾಡಬೇಕೆಂದು ಅಥರ್ವಣವೇದದಲ್ಲಿ ಹೇಳಿದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಮಧ್ಯಮಪರ್ವದಲ್ಲಿ ಪ್ರಥಮಭಾಗದಲ್ಲಿ ಜ್ಯೋತಿಶ್ಚಕ್ರವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ಪ್ರಥಮಭಾಗೇ
## ಪಂಚಮೋಽಧ್ಯಾಯಃ

---

॥ ಸೂತ ಉವಾಚ ॥

ತ್ರಯಾಣಾಮೇವ ವರ್ಣಾನಾಂ ಬ್ರಾಹ್ಮಣೋ ಜನ್ಮತಃ ಪ್ರಭುಃ ।
ಸಂಸೃಷ್ಟಾಃ ಬ್ರಾಹ್ಮಣಾಃ ಪೂರ್ವಂ ತಪಸ್ತಪ್ತ್ವಾ ದ್ವಿಜೋತ್ತಮಾಃ ॥ ೧ ॥

ಹವ್ಯಾನಾಮಿಹ ಕವ್ಯಾನಾಂ ಸರ್ವಸ್ಯಾಪಿ ಚ ಗುಪ್ತಯೆ ।
ಅಶ್ನಂತಿ ಚ ಮುಖೇನಾಸ್ಯ ಹವ್ಯಾನಿ ತ್ರಿದಿವೌಕಸಃ ॥ ೨ ॥

ಕವ್ಯಾನಿ ಚೈವ ಪಿತರಃ ಕಿಂಭೊ ತಮಧಿಕಂ ತತಃ ।
ಜನ್ಮನಾ ಚೋತ್ತಮೋಽಯಂ ಚ ಸರ್ವಾರ್ಚಾ ಬ್ರಾಹ್ಮಣೋಽರ್ಹತಿ ॥೩॥

---

## ಐದನೆಯ ಅಧ್ಯಾಯ

೧. ಸೂತರು ಆ ವಿಷಯವನ್ನೇ ಮುಂದುವರಿಸಿ ಹೇಳುತ್ತಾರೆ—ಎಲೈ ಬ್ರಾಹ್ಮಣಶ್ರೇಷ್ಠರೇ! ಕೇಳಿರಿ. ಬ್ರಾಹ್ಮಣನು ಜನ್ಮತಃ ಮೂರು ವರ್ಣದವರಿಗೂ ಪ್ರಭುವೆನಿಸುವನು. ಹವ್ಯಕವ್ಯಗಳೆಲ್ಲವನ್ನೂ ನಿರ್ವಹಿಸುವುದಕ್ಕಾಗಿ ಸೃಷ್ಟಿಕರ್ತನು ಪೂರ್ವದಲ್ಲಿ ತಪಸ್ಸುಮಾಡಿ (ಆಲೋಚಿಸಿ) ಬ್ರಾಹ್ಮಣರನ್ನು ಸೃಷ್ಟಿಮಾಡಿದನು.

೨. ದೇವತೆಗಳು ಈ ಬ್ರಾಹ್ಮಣನ ಮುಖದಿಂದ ಹವ್ಯಗಳನ್ನು ಪರಿಗ್ರಹ ಮಾಡುತ್ತಾರೆ. ಎಂದರೆ ಬ್ರಾಹ್ಮಣನನ್ನು ತೃಪ್ತಿಪಡಿಸಿದರೆ ದೇವತೆಗಳು ತೃಪ್ತರಾಗುತ್ತಾರೆ.

೩. ಶ್ರಾದ್ಧದಲ್ಲಿ ಬ್ರಾಹ್ಮಣರು ಕವ್ಯಗಳನ್ನು ಭೋಜನಮಾಡಿದರೆ ಪಿತೃಗಳು ತೃಪ್ತರಾಗುತ್ತಾರೆ. ಇದಕ್ಕಿಂತ ಹೆಚ್ಚಿನದಿನ್ನೇನಾಗಬೇಕು. ಈ ಬ್ರಾಹ್ಮಣನು

ಸ್ವಕೀಯಂ ಬ್ರಾಹ್ಮಣೋ ಭುಂಕ್ತೇ ವಿದಧಾತಿ ದ್ವಿಜೋತ್ತಮಾಃ ।
ತ್ರಯಾಣಾಮಿಹ ವರ್ಣಾನಾಂ ಭಾವಭಾವಾಯ ವೈ ದ್ವಿಜಃ ॥ ೪ ॥

ಭವೇದ್ವಿಪ್ರೋ ನ ಸಂದೇಹಃ ತುಷ್ಟೋ ಭಾವಾಯ ವೈ ಭವೇತ್ ।
ಅಭಾವಾಯ ಭವೇತ್ಕ್ರುದ್ಧಸ್ತಸ್ಮಾತ್ಪೂಜ್ಯಃ ಸದಾ ಹಿ ಸಃ ॥ ೫ ॥

ಗರ್ಭಾಧಾನಾದಯಶ್ಚೇಹ ಸಂಸ್ಕಾರಾ ಯಸ್ಯ ಸತ್ತಮಾಃ ।
ಚತ್ವಾರಿಂಶತ್ತಥಾ ಚಾಷ್ಟೌ ನಿರ್ವೃತ್ತಾಃ ಶಾಸ್ತ್ರತೋ ದ್ವಿಜಾಃ ॥ ೬ ॥

ಸ ಯಾತಿ ಬ್ರಹ್ಮಣಃ ಸ್ಥಾನಂ ಬ್ರಾಹ್ಮಣತ್ವೇನ ಸಂಯುತಃ ।
ಸಂಸ್ಕಾರಪೂತಃ ಪ್ರಥಮಃ ವೇದಪೂತೋ ದ್ವಿತೀಯಕಃ ॥ ೭ ॥

---

ಹುಟ್ಟಿನಲ್ಲಿಯೂ ಶ್ರೇಷ್ಠನು. ಸರ್ವಪ್ರಕಾರವಾದ ಪೂಜೆಗಳಿಗೂ ಯೋಗ್ಯನಾಗಿದಾನೆ.

೪. ಅಯ್ಯಾ ವಿಪ್ರಶ್ರೇಷ್ಠರೆ! ಕೇಳಿ; ಬ್ರಾಹ್ಮಣನು ತನ್ನ ಸ್ವಂತವಸ್ತುವನ್ನು ಪಾಕಮಾಡಿಕೊಂಡು, ಭೋಜನಮಾಡುವನು. ಮಿಕ್ಕ ಮೂರುವರ್ಣಗಳವರ ಶುಭಾಶುಭಗಳಿಗೂ ಬ್ರಾಹ್ಮಣನೇ ಕಾರಣನು.

೫. ಸದ್ಬ್ರಾಹ್ಮಣನು ಮಾನಪೂಜಾದಿಗಳಿಂದ ಸಂತುಷ್ಟನಾಗುವಂತೆ ನಾವು ನೋಡಿಕೊಳ್ಳಬೇಕು. ಅವನು ಕುಪಿತನಾದರೆ ನಾಶಕರನಾಗುತ್ತಾನೆ. ಅವನು ಯಾವಾಗಲೂ ಪೂಜಾರ್ಹನು.

೬. ಎಲೈ ಬ್ರಾಹ್ಮಣಶ್ರೇಷ್ಠರೇ! ಕೇಳಿ ಗರ್ಭಾಧಾನಾದಿ ನಲವತ್ತೆಂಟು ಸಂಸ್ಕಾರಗಳು ಶಾಸ್ತ್ರಾನುಸಾರ ನೆರವೇರುರಿವ ಸತ್ಕುಲಪ್ರಸೂತನು ಬ್ರಾಹ್ಮಣತ್ವದಿಂದ ಕೂಡಿದವನಾಗಿ, ಬ್ರಹ್ಮನು ಇರುವ ಸ್ಥಾನಕ್ಕೆ ಹೋಗುತ್ತಾನೆ.

೭ ಗರ್ಭಾಧಾನ ಕರ್ಮದಿಂದ ಪರಿಶುದ್ಧವಾದರೆ ಬ್ರಾಹ್ಮಣ್ಯದ ಪ್ರಥಮಾವಸ್ಥೆ ಲಭಿಸಿದಂತಾಯಿತು. ಉಪನಯನವಾಗಿ ವೇದಾಭ್ಯಾಸಮಾಡಿ ಪರಿಶುದ್ಧನಾದರೆ ದ್ವಿತೀಯಾವಸ್ಥೆಗೆ ಏರುವನು. ವೇದಾಧ್ಯಯನದ ಜೊತೆಗೆ ಶಾಸ್ತ್ರಾದಿಷಡಂಗಗಳನ್ನೂ ಅಭ್ಯಸಿಸಿದವನು ಮೂರನೆಯ ಅಂತಸ್ತನ್ನು ಏರುತ್ತಾನೆ. ಗಂಗಾದಿ ಪುಣ್ಯತೀರ್ಥಸ್ನಾನ, ಕ್ಷೇತ್ರಯಾತ್ರೆ, ಇವುಗಳಿಂದ ಪರಿಶುದ್ಧನಾದವನು ಇನ್ನೂ ಶ್ರೇಷ್ಠವಾದ ಅಂತಸ್ತನ್ನು ಏರುವನು.

ವಿದ್ಯಾ ಪೂತಸ್ತ್ರೃತೀಯಃ ಸ್ಯಾತ್ತೀರ್ಥಪೂತಸ್ತ್ವನಂತರಂ ।
ಕ್ಷೇತ್ರಪೂತಂ ಪ್ರವಿಜ್ಞಾಯ ವಿಪ್ರೂತಂ ಪೂಜಯೇದ್ದ್ವಿಜಾಃ ॥
ಸ್ವರ್ಗಾಪವರ್ಗಫಲದಮನ್ಯಥಾ ಶ್ರಮತಾಮಿಯಾತ್ ॥ ೮ ॥

ಪೂತಾನಾಂ ಪರಮಃ ಪೂತೋ ಗುರೂಣಾಂ ಪರಮೋ ಗುರುಃ ।
ಸರ್ವಸತ್ವಾನ್ವಿತೋ ವಿಪ್ರೋ ನಿರ್ಮಿತೋ ಬ್ರಹ್ಮಣಾ ಪುರಾ ॥ ೯ ॥

ಪೂಜಯಿತ್ವಾ ದ್ವಿಜಾನ್ ದೇವಾಃ ಸ್ವರ್ಗಂ ಭುಂಜಂತಿ ಚಾಕ್ಷಯಂ ।
ಮನುಷ್ಯಾಶ್ಚಾಪಿ ದೇವತ್ವಂ ಸ್ವಂಸ್ವಂ ರಾಜ್ಯಂ ಗತೇನಸಃ ॥ ೧೦ ॥

ಯಸ್ಯ ವಿಪ್ರಾಃ ಪ್ರಸೀದಂತಿ ತಸ್ಯ ವಿಷ್ಣುಃ ಪ್ರಸೀದತಿ ।
ತಸ್ಮಾದ್ಬ್ರಾಹ್ಮಣಪೂಜಾಯಾಂ ವಿಷ್ಣುಸ್ತುಷ್ಯತಿ ತತ್ಕ್ಷಣಾತ್ ॥ ೧೧ ॥

---

೮. ಬ್ರಾಹ್ಮಣನು ಈ ಪ್ರಕಾರ ಕ್ಷೇತ್ರಯಾತ್ರಾಪರಿಶುದ್ಧನೆಂದು ನೋಡುವುದಲ್ಲದೆ ಈ ಹಿಂದೆ ಹೇಳಿದ ನಾನಾಪ್ರಕಾರಗಳಲ್ಲಿಯೂ ಪರಿಶುದ್ಧನಾಗಿರುವನೇ ಎಂಬುದನ್ನೂ ನೋಡಿಕೊಂಡು ಪೂಜಿಸಬೇಕು. ಹೀಗೆ ಪೂಜಿಸಿದರೆ ಅದರಿಂದ ಸ್ವರ್ಗಾಪವರ್ಗಫಲವು ಲಭಿಸುವುದು. ಇಂಥವರಲ್ಲದ ನಾಮಮಾತ್ರದ ಬ್ರಾಹ್ಮಣರನ್ನು ಪೂಜಿಸಿದರೆ ವೃಥಾಶ್ರಮ ಮಾತ್ರವಾಗುವುದು.

೯. ಬ್ರಾಹ್ಮಣನು ಪರಿಶುದ್ಧರೊಳಗೆ ಅತಿಪರಿಶುದ್ಧನೂ, ಗುರುಗಳಲ್ಲಿ ಪರಮ ಗುರುವೂ, ಸರ್ವಶಕ್ತಿಗಳಿಂದ ಕೂಡಿದವನೂ ಆಗಿರುವಂತೆ ಪೂರ್ವದಲ್ಲಿ ಬ್ರಹ್ಮನಿಂದ ನಿರ್ಮಿತನಾದನು.

೧೦. ದೇವತೆಗಳೂಕೂಡ ಬ್ರಾಹ್ಮಣರನ್ನು ಪೂಜಿಸಿ ಅಕ್ಷಯವಾದ ಸ್ವರ್ಗವನ್ನನುಭವಿಸುತ್ತಾರೆ. ಸಾಮಾನ್ಯಮನುಷ್ಯರೂಕೂಡ ವಿಪ್ರಪೂಜೆಯಿಂದ ನಿಷ್ಪಾಪರಾಗಿ, ತಮ್ಮ ತಮ್ಮ ಪುಣ್ಯಾನುಗುಣವಾಗಿ ದೇವತ್ವವನ್ನೋ, ರಾಜ್ಯವನ್ನೋ, ಅನುಭವಿಸುತ್ತಾರೆ.

೧೧. ಬ್ರಾಹ್ಮಣರು ಯಾರಲ್ಲಿ ಪ್ರಸನ್ನರಾಗುತ್ತಾರೆಯೋ ಅವರಲ್ಲಿ ವಿಷ್ಣುವು ಪ್ರಸನ್ನನಾಗುತ್ತಾನೆ. ಆದುದರಿಂದ ಬ್ರಾಹ್ಮಣರಿಗೆ ಪೂಜೆಯು ನಡೆದರೆ ವಿಷ್ಣುವು ಆ ಕೂಡಲೆ ತುಷ್ಟನಾಗುತ್ತಾನೆ.

ಯಸ್ಮಾದ್ವಿಷ್ಣುಮುಖಾದ್ವಿಪ್ರಃ ಸಮುದ್ಭೂತಃ ಪುರಾ ದ್ವಿಜಾಃ ।
ವೇದಾಸ್ತತ್ರೈವ ಸಂಜಾತಾಃ ಸೃಷ್ಟಿಸಂಹಾರಹೇತವಃ ॥ ೧೨ ॥

ತಸ್ಮಾದ್ವಿಪ್ರಮುಖೇ ವೇದಾಶ್ಚಾರ್ಪಿತಾಃ ಪುರುಷೇಣ ಹಿ ।
ಪೂಜಾರ್ಥಂ ಬ್ರಹ್ಮಲೋಕಾನಾಂ ಸರ್ವಜ್ಞಾನಾರ್ಥತೋ ಧ್ರುವಂ॥ ೧೩ ॥

ಪಿತೃಯಜ್ಞವಿವಾಹೇಷು ವಹ್ನಿಕಾರ್ಯೇಷು ಶಾಂತಿಷು ।
ಪ್ರಶಸ್ತಾ ಬ್ರಾಹ್ಮಣಾ ನಿತ್ಯಂ ಸರ್ವಸ್ವಸ್ತ್ಯಯನೇಷು ಚ ॥ ೧೪ ॥

ದೇವಾ ಭುಂಜಂತಿ ಹವ್ಯಾನಿ ಬಲಿಂ ಪ್ರೇತಾದ್ಯಯೋಽಸುರಾಃ ।
ಪಿತರೋ ಹವ್ಯಕವ್ಯಾನಿ ವಿಪ್ರಸ್ಯೈವ ಮುಖಾದ್ಧ್ರುವಂ ॥ ೧೫ ॥

ದೇವೇಭ್ಯಶ್ಚ ಪಿತೃಭ್ಯಶ್ಚ ಯೋ ದದ್ಯಾದ್ಯಜ್ಞಕರ್ಮಸು ।
ದಾನಂ ಹೋಮಂ ಬಲಿಂ ಚೈವ ವಿನಾ ವಿಪ್ರೇಣ ನಿಷ್ಫಲಂ ॥ ೧೬ ॥

---

೧೨. ಎಲೈ ಬ್ರಾಹ್ಮಣರೇ! ಕೇಳಿರಿ; ಏಕೆ ಹೀಗೆ ಹೇಳಬೇಕೆಂದರೆ ಪೂರ್ವದಲ್ಲಿ ವಿಪ್ರನು ವಿಷ್ಣುವಿನ ಮುಖದಿಂದ ಹುಟ್ಟಿದನು. ಸೃಷ್ಟಿಸಂಹಾರಕಾರಣಗಳಾದ ವೇದಗಳೂ ಅಲ್ಲಿಯೇ ಹುಟ್ಟಿದುವು.

೧೩. ಆ ಕಾರಣದಿಂದ ಪರಮಪುರುಷನು ಬ್ರಾಹ್ಮಣರ ಮುಖದಲ್ಲಿ ವೇದಗಳನ್ನು ಅರ್ಪಿಸಿದ್ದಾನೆ. ಬ್ರಹ್ಮಲೋಕಗಳ ಪ್ರಾಶಸ್ತ್ಯಕ್ಕಾಗಿಯೂ, ಸರ್ವರಿಗೂ ನಿಶ್ಚಯವಾಗಿ ಜ್ಞಾನಲಭಿಸಲಿ ಎಂಬ ಕಾರಣದಿಂದಲೂ, ಹೀಗೆ ಮಾಡಿದ್ದಾನೆ.

೧೪. ಪಿತೃಯಜ್ಞಗಳು, ವಿವಾಹಗಳು ಇವುಗಳ ನಿರ್ವಾಹಕ್ಕೂ, ಔಪಾಸನಾದಿ ಅಗ್ನಿಕಾರ್ಯಗಳಿಗೂ, ಶಾಂತಿಕರ್ಮಗಳಿಗೂ, ಸರ್ವಸ್ವಸ್ತಿಕರ್ಮಗಳಿಗೂ ಬ್ರಾಹ್ಮಣರು ಶ್ರೇಷ್ಠರೆನಿಸಿದ್ದಾರೆ.

೧೫. ದೇವತೆಗಳು ಹವ್ಯವನ್ನು ಸ್ವೀಕರಿಸುತ್ತಾರೆ. ಪ್ರೇತಗಳು ಅಸುರರು ಮೊದಲಾದವರು ಬಲಿಯನ್ನು ಭುಜಿಸುತ್ತಾರೆ ಪಿತೃಗಳು ಹವ್ಯಕವ್ಯಗಳೆರಡನ್ನೂ ಬ್ರಾಹ್ಮಣ ಮುಖದಿಂದಲೇ ಭುಜಿಸುತ್ತಾರೆ.

೧೬. ಯಾವನು ಯಜ್ಞಕರ್ಮಗಳಲ್ಲಿ ದೇವತೆಗಳಿಗೂ, ಪಿತೃಗಳಿಗೂ ಸಲ್ಲಬೇಕಾದುದನ್ನು ಬ್ರಾಹ್ಮಣರಿಗೆ ಕೊಡದೆ ಇತರರಿಗೆ ದಾನಮಾಡುವನೋ ಅವನು ಮಾಡಿದ ದಾನ, ಹೋಮ, ಬಲಿ ಇವೆಲ್ಲವೂ ನಿಷ್ಫಲವಾಗುವುವು.

ವಿನಾ ವಿಪ್ರಂ ಚ ಯೋ ಧರ್ಮಃ ಪ್ರಯಾಸಫಲಮಾತ್ರಕಃ ।
ಭುಂಜತೇ ಚಾಸುರಾಸ್ತತ್ರ ಪ್ರೇತಾ ಭೂತಾಶ್ಚ ರಾಕ್ಷಸಾಃ ॥ ೧೭ ॥

ತಸ್ಮಾದ್ಬ್ರಾಹ್ಮಣಮಾಹೂಯ ತಸ್ಯ ಪೂಜಾಂ ಚ ಕಾರಯೇತ್ ।
ಕಾಲೇ ದೇಶೇ ಚ ಪಾತ್ರೇ ಚ ಲಕ್ಷಕೋಟಿಗುಣಂ ಭವೇತ್ ॥ ೧೮ ॥

ಶ್ರದ್ಧಯಾ ಚ ದ್ವಿಜಂ ದೃಷ್ಟ್ವಾ ಪ್ರಕುರ್ಯಾದಭಿವಾದನಂ ।
ದೀರ್ಘಾಯುಸ್ತಸ್ಯ ವಾಕ್ಯೇನ ಚಿರಂಜೀವೀ ಭವೇನ್ನರಃ ॥ ೧೯ ॥

ಅನಭಿವಾದಿನಾಂ ವಿಪ್ರೇ ದ್ವೇಷಾದಶ್ರದ್ಧಯಾಪಿ ಚ ।
ಆಯುಃಕ್ಷೀಣಂ ಭವೇತ್ಪುಂಸಾಂ ಭೂಮಿನಾಶಶ್ಚ ದುರ್ಗತಿಃ ॥ ೨೦ ॥

ಆಯುರ್ವೃದ್ಧಿರ್ಯಶೋವೃದ್ಧಿರ್ವೃದ್ಧಿರ್ವಿದ್ಯಾಧನಸ್ಯ ಚ ।
ಪೂಜಯಿತ್ವಾ ದ್ವಿಜಶ್ರೇಷ್ಠಾನ್ ಭವೇನ್ನಾಸ್ತ್ಯತ್ರ ಸಂಶಯಃ ॥ ೨೧ ॥

---

೧೭. ಬ್ರಾಹ್ಮಣರಿಗೆ ದಾನಮಾಡದೆ ಇತರರಿಗೆ ದಾನಮಾಡಿದರೆ, ಕೇವಲ ಶ್ರಮವೇ ಹೊರತು ಇನ್ನು ಯಾವ ಫಲವೂ ಇಲ್ಲ. ಅಂಥ ದಾನವನ್ನು ಅಸುರ, ಪ್ರೇತ, ಭೂತ, ರಾಕ್ಷಸ ಅನುಭವಿಸುತ್ತಾರೆ.

ಆದುದರಿಂದ ಬ್ರಾಹ್ಮಣನನ್ನು ಕರೆದು ಅವನಿಗೆ ಪೂಜಾದಿ ಸತ್ಕಾರಗಳನ್ನು ಮಾಡಬೇಕು. ಪವಿತ್ರಕರವಾದ ಪುಣ್ಯಕ್ಷೇತ್ರಾದಿಗಳಲ್ಲಿ ಗ್ರಹಣಾದಿ ಪರ್ವಕಾಲಗಳಲ್ಲಿ ದಾನಮಾಡಿದರೆ ಲಕ್ಷಗುಣವೂ ಕೋಟಿಗುಣವೂ ಉಳ್ಳದಾಗುವುದು.

೧೯. ಬ್ರಾಹ್ಮಣರನ್ನು ಕಂಡೊಡನೆ ಶ್ರದ್ಧೆಯಿಂದ ನಮಸ್ಕಾರಮಾಡಬೇಕು. ಹೀಗೆ ನಮಸ್ಕರಿಸಿದ ಮನುಷ್ಯನು ಆ ಬ್ರಾಹ್ಮಣನ ಆಶೀರ್ವಾದ ವಾಕ್ಯದಿಂದ ದೀರ್ಘಾಯುಸ್ಸುಳ್ಳವನೂ, ಚಿರಂಜೀವಿಯೂ ಆಗುವನು.

೨೦. ದ್ವೇಷದಿಂದಲೋ ಅಶ್ರದ್ಧೆಯಿಂದಲೋ ಬ್ರಾಹ್ಮಣನಿಗೆ ನಮಸ್ಕಾರ ಮಾಡದೆ ಹೋದವನಿಗೆ, ಆಯುಸ್ಸು ಕ್ಷೀಣವಾಗಿ ಅವನ ಸರ್ವಸ್ವವೂ ನಷ್ಟವಾಗಿ ದರಿದ್ರನಾಗುವನು.

೨೧. ಬ್ರಾಹ್ಮಣಶ್ರೇಷ್ಠರನ್ನು ಪೂಜಿಸುವುದರಿಂದ ಆಯುರ್ವೃದ್ಧಿ, ಯಶೋವೃದ್ಧಿ, ವಿದ್ಯಾಧನಗಳವೃದ್ಧಿ ಇವು ಉಂಟಾಗುತ್ತವೆ ಎಂಬುದರಲ್ಲಿ ಸಂಶಯವಿಲ್ಲ.

ನ ವಿಪ್ರಪಾದೋದಕಕರ್ದಮಾನಿ ನ ವೇದಶಾಸ್ತ್ರಪ್ರತಿಗರ್ಜಿತಾನಿ ।
ಸ್ವಾಹಾಸ್ವಧಾಸ್ವಸ್ತಿ ವಿವರ್ಜಿತಾನಿ ಶ್ಮಶಾನತುಲ್ಯಾನಿ ಗೃಹಾಣಿ ತಾನಿ ॥೨೨॥

ಷಡ್ವಿಂಶತಿದೋಷಮಾಹುರ್ನರಾ ನರಕಭೀರವಃ ।
ವಿಮುಚ್ಯೈವ ವಸೇತ್ತೀರ್ಥೇ ಗ್ರಾಮೇ ವಾ ಪತ್ತನೇ ವನೇ ॥ ೨೩ ॥

ತೇ ಸ್ವರ್ಗೇ ಪಿತೃಲೋಕೇ ಚ ಬ್ರಹ್ಮಲೋಕೇಷ್ವವಸ್ಥಿತಾಃ ।
ಅನ್ಯಥಾ ನ ವಸೇದ್ವಾಸಸ್ತಸ್ಮಾತ್ ಸ್ತೇಯಂ ನ ಪಾಲಯೇತ್ ॥ ೨೪ ॥

ಅಧಮೋ ವಿಷಮಶ್ಚೈವ ಪಶುಶ್ಚ ಪಿಶುನಸ್ತಥಾ ॥ ೨೫ ॥

ಪಾಪಿಷ್ಠೋ ನಷ್ಟಕಷ್ಟೌ ಚ ರುಷ್ಟೋ ದುಷ್ಟಶ್ಚ ಪುಷ್ಟಕಃ ।
ಹೃಷ್ಟಃ ಕುಂಠ ಕುಬ್ಜಶ್ಚ ಅಂಧಶ್ಚ ಕಾಣಶ್ಚೈವ ತಥಾಪಡಃ ॥ ೨೬ ॥

---

೨೨. ಯಾವ ಮನೆಗಳಲ್ಲಿ ಬ್ರಾಹ್ಮಣ ಪಾದೋದಕಗಳ ಕೆಸರುಗಳೂ, ವೇದ ಶಾಸ್ತ್ರ ಪಾಠಗಳ ಪ್ರತಿಧ್ವನಿಗಳೂ, ಸ್ವಾಹಾ, ಸ್ವಧಾ, ಸ್ವಸ್ತಿ, ಎಂಬ ಶಬ್ದಗಳ ಉಚ್ಚಾರಣೆಯೂ ಇರುವುದಿಲ್ಲವೋ ಆ ಮನೆಗಳು ಸ್ಮಶಾನಕ್ಕೆ ಸಮಾನಗಳು.

೨೩. ಇಪ್ಪತ್ತಾರು ದೋಷಗಳು ನರಕಪ್ರಾಪ್ತಿ ಕಾರಣಗಳೆಂದು ತಿಳಿದವರು ಹೇಳುತ್ತಾರೆ. ಪ್ರಾಜ್ಞರು ಇವುಗಳಿಗೆ ಅವಕಾಶವಿಲ್ಲದಂತೆ ತೀರ್ಥ, ಗ್ರಾಮ, ಪಟ್ಟಣ, ವನ ಇವುಗಳಲ್ಲೆಲ್ಲಾದರೂ ವಾಸಿಸಬೇಕು.

೨೪. ಹೀಗೆ ವಾಸಮಾಡಿದವರು ದೇಹಾವಸಾನಕಾಲದಲ್ಲಿ ಸ್ವರ್ಗ, ಪಿತೃ ಲೋಕ, ಬ್ರಹ್ಮಲೋಕ ಇವುಗಳಲ್ಲಿ ಎಲ್ಲಿಯಾದರೂ ಇರುವರು. ಬೇರೆ ಕಡೆಗಳಲ್ಲಿರ ಲಾರರು. ಆದುದರಿಂದ ಕಳ್ಳತನ ಮುಂತಾದ ಈ ದೋಷಗಳನ್ನು ಎಂದೂ ವಹಿಸ ಬಾರದು.

೨೫-೨೬. ಅಧಮ, ವಿಷಮ, ಪಶು, ಪಿಶುನ, ಪಾಪಿಷ್ಠ, ನಷ್ಟ, ಕಷ್ಟ, ರುಷ್ಟ, ದುಷ್ಟ, ಪುಷ್ಟ, ಹೃಷ್ಟ, ಕುಂಠ, ಅಂಧ, ಕಾಣ, ಪಂಡ, ಚಂಡ, ಖಂಡ, ದಂಡ, ವಕ್ತಾ, ದತ್ತಾಪಹಾರ, ನೀಚ, ಖಲ, ವಾಚಾಲ, ಕದರ್ಯ, ಚಪಲ, ಮಲೀಮಸ ಎಂಬ ಈ ಇಪ್ಪತ್ತಾರು ತರಹ ಮಂದಿಯೂ ದೋಷಿಗಳೆನಿಸುವರು. (ಈ ಪದಗಳಿಗೆ ಈಗಿನ ರೂಢಿಯಲ್ಲಿ ವ್ಯವಹರಿಸುವ ಅರ್ಥವು, ಈ ಮುಂದೆ ಇವರೇ ನಿರ್ವಚನಮಾಡುವ

**ಚಂಡಃ ಖಂಡಶ್ಚ ದಂಡಶ್ಚ ವಕ್ತಾ ದತ್ತಾಪಹಾರಕಃ ।**
**ನೀಚಃ ಖಲಶ್ಚ ವಾಚಾಲಃ ಕದರ್ಯಶ್ಚಪಲಸ್ತಥಾ ॥ ೨೭ ॥**

**ಮಲೀಮಸಶ್ಚ ತೇ ದೋಷಾಃ ಷಡ್ವಿಂಶತಿರಮೀ ಮತಾಃ ।**
**ಏತೇಷಾಂ ಚಾಪಿ ವಿಪ್ರೇಂದ್ರಾಃ ಪಂಚಾಶೀತಿರ್ನಿಗದ್ಯತೆ ॥ ೨೮ ॥**

**ಶೃಣುಧ್ವಂ ದ್ವಿಜಶಾರ್ದೂಲಾಃ ಶಾಸ್ತ್ರೇಸ್ಮಿನ್ ಬ್ರುವತಃ ಕ್ರಮಾತ್ ।**
**ಅಧಮೋಽತ್ರ ತ್ರಿಧಾ ವಿದ್ಯಾದ್ವಿಷಮಃ ಸ್ಯಾದ್ದ್ವಿಧೋಚಿತಃ ॥ ೨೯ ॥**

**ಪಶುಶ್ಚತುರ್ವಿಧಶ್ಚೈವ ಕೃಪಣೋಽಪಿ ಹಿ ವೈ ದ್ವಿಧಾ ।**
**ದ್ವಿಧಾ ಯೋಽಪಿ ಚ ಪಾಪಿಷ್ಠೋ ನಷ್ಟಃ ಸಪ್ತವಿಧಃ ಸ್ಮೃತಃ ॥ ೩೦ ॥**

**ಕಷ್ಟಃ ಸ್ಯಾತ್ಪಂಚಧಾ ಜ್ಞೇಯೋ ರುಷ್ಟೋಽಪಿ ಸ್ಯಾದ್ದ್ವಿಧಾ ದ್ವಿಜಾಃ ।**
**ದುಷ್ಟಃ ಸ್ಯಾತ್ ಷಡ್ವಿಧೋ ಜ್ಞೇಯಃ ಪುಷ್ಟಶ್ಚೈವ ಭವೇದ್ದ್ವಿಧಾ ॥ ೩೧ ॥**

**ಹೃಷ್ಟಶ್ಚಾಷ್ಟವಿಧಃ ಪ್ರೋಕ್ತಃ ಕುಂಠಶ್ಚೈವ ತ್ರಿಧೋದಿತಃ ।**
**ಅಂಧಃಕಾಣಶ್ಚ ತೌ ದ್ವೌ ದ್ವೌ ಸ್ಯಾದ್ವೇ ಚ ಸಗುಣೋಽಗುಣಃ ॥ ೩೨ ॥**

---

ಶಾಸ್ತ್ರೀಯವಾದ ಅರ್ಥಕ್ಕೆ ಭಿನ್ನವಾಗಬಾರದೆಂದು ರೂಢಿಯಾಗಿ ವ್ಯವಹಾರದಲ್ಲಿರುವ ಅರ್ಥವನ್ನು ಬರೆಯದೆ ಅದೇ ಪದಗಳನ್ನೇ ಅನುವಾದ ಮಾಡಲಾಗಿದೆ.)

೨೮-೨೯. ಎಲೈ ವಿಪ್ರಶ್ರೇಷ್ಠರೇ! ಕೇಳಿ; ಇವರಲ್ಲೂ ಅನೇಕ ಒಳಭೇದಗಳುಂಟು. ಎಲ್ಲಾ ಸೇರಿದರೆ ಈ ದೋಷಗಳು ಎಂಭತ್ತೈದು ಬಗೆಗಳೆಂದು ಕೆಲವರು ಹೇಳುವರು. ಅಧಮರಲ್ಲಿ ಮೂರುಪ್ರಕಾರಗಳಿವೆಯೆಂದು ತಿಳಿಯಬೇಕು. ವಿಷಮರಲ್ಲಿ ಎರಡು ಬಗೆ.

೩೦. ಪಶುಸದೃಶರಲ್ಲಿ ನಾಲ್ಕುಬಗೆ, ಕೃಪಣರಲ್ಲಿ ಎರಡುಬಗೆಯುಂಟು, ಪಾಪಿಷ್ಠರಲ್ಲೂ ಎರಡು ಬಗೆ, ನಷ್ಟರು ಏಳು ಬಗೆಯಾಗಿದ್ದಾರೆ.

೩೧. ಕಷ್ಟರಲ್ಲಿ ಐದು ಬಗೆಯೆಂದು ತಿಳಿಯಬೇಕು, ರುಷ್ಟರಲ್ಲಿ ಎರಡುಬಗೆ, ದುಷ್ಟರಲ್ಲಿ ಆರು ಬಗೆಯವರಿದಾರೆ, ಪುಷ್ಟರಲ್ಲಿ ಎರಡು ಬಗೆಯವರಿದಾರೆ.

೩೨. ಹೃಷ್ಟರಲ್ಲಿ ಎಂಟುಬಗೆ, ಕುಂಠ (ಕುಬ್ಜ) ರಲ್ಲಿ ಮೂರು ಬಗೆ, ಅಂಧರಲ್ಲೂ ಕಾಣರಲ್ಲೂ ಎರಡೆರಡು ಬಗೆ.

ದ್ವೌ ಚಂಡೌ ಚಪಲಶ್ಚೈಕಾ ಖಂಡಶ್ಚಂಡೌ ದ್ವಿಗುರ್ಭವೇತ್ ।
ದಂಡಪಂಡೌ ತಥಾ ಜ್ಞೇಯೌ ಖಲನೀಚೌ ಚತುರ್ದ್ವಯಂ ॥ ೩೩ ॥

ವಾಚಾಲಶ್ಚ ಕದರ್ಯಶ್ಚ ಕ್ರಮಾತ್ತ್ರಿಭಿರುದಾಹೃತಃ ।
ಕದರ್ಯಶ್ಚಪಲಶ್ಚೈವ ತಥಾ ಜ್ಞೇಯೋ ಮಲೀಮಸಃ ॥ ೩೪ ॥

ದ್ವಾವೇತೌ ಚತುರಶ್ಚೈವ ಸ್ತೇಯಿನಾಚೈಕವಿಧೋ ಭವೇತ್ ।
ಪೃಥಗ್ಲಕ್ಷಣಮೇತೇಷಾಂ ಶೃಣುಧ್ವಂ ದ್ವಿಜಸತ್ತಮಾಃ ॥ ೩೫ ॥

ಸಮ್ಯಗ್ಯಸ್ಯ ಪರಿಜ್ಞಾನಂ ನರೋ ದೇವತ್ವಮಾಪ್ನುಯಾತ್ ।
ಉಪಾನಚ್ಛತ್ರಧಾರೀ ಚ ಗುರುದೇವಾಗ್ರತಶ್ಚರೇ ॥ ೩೬ ॥

ಉಚ್ಚಾಸನಂ ಗುರೋರಗ್ರೇ ತೀರ್ಥಯಾತ್ರಾಂ ಕರೋತಿ ಯಃ ।
ಯಾನಮಾರುಹ್ಯ ವಿಪ್ರೇಂದ್ರಾಃ ಸೋಽಪ್ಯೇಕತ್ರಾಧಮೋ ಮತಃ ॥ ೩೭ ॥

---

೩೩. ಚಂಡ ಚಪಲ ಎಂಬ ಇವರಿಬ್ಬರೂ ಒಂದುಜೊತೆ, ಖಂಡ, ಚಂಡ ಎಂಬ ಇವರಿಬ್ಬರೂ ಒಂದುಜೋಡಿ, ಈ ಜೋಡಿಗಳವರಲ್ಲೂ ಎರಡು ಪ್ರಕಾರದ ನಡವಳಿಕೆಗಳಿವೆ. ದಂಡ, ಪಂಡ ಇವರಿಬ್ಬರೂ ಒಂದುಜೋಡಿ, ಖಲ, ನೀಚ ಇವರು ಒಂದುಜೋಡಿ ಈ ರೀತಿ ನಾಲ್ಕು ಜೋಡಿಗಳು ಇವೆ.

೩೪. ಅಯ್ಯಾ ದ್ವಿಜರೇ ! ಕೇಳಿ ; ವಾಚಾಲ, ಕದರ್ಯ ಇವರಲ್ಲೂ ಮೂರು ಮೂರುಬಗೆಗಳಿವೆ. ಕೃಪಣ, ಚಪಲ, ಮಲೀಮಸ, ಇವರಲ್ಲಿ ನಾಲ್ಕುನಾಲ್ಕು ಬಗೆಗಳಿವೆ. ಸ್ತೇನರಲ್ಲಿ ಬಹುಪ್ರಕಾರಗಳನ್ನು ಗಣಿಸದೆ ಒಂದೇ ಬಗೆಯಾಗಿ ಭಾವಿಸಬೇಕು.

೩೫. ಇವರ ಲಕ್ಷಣವನ್ನು ಬೇರೆಬೇರೆಯಾಗಿ ಹೇಳುವೆನು ಕೇಳು. ಈ ವಿಷಯದ ಸಂಪೂರ್ಣ ಪರಿಜ್ಞಾನವುಳ್ಳ ಮನುಷ್ಯರು ದೇವತ್ವವನ್ನೇ ಹೊಂದುತ್ತಾರೆ.

೩೬. ಗುರುವಿನ ಎದುರಿಗೂ, ದೇವರ ಸಮ್ಮುಖದಲ್ಲಿಯೂ ಛತ್ರಿ, ಪಾದರಕ್ಷೆ, ಇವುಗಳನ್ನು ಧರಿಸಿ ತಿರುಗುವವನು, ಗುರುವು ಎದುರಿಗಿರುವಾಗ ಅವನಿಗಿಂತ ಉನ್ನತ ಪೀಠದಲ್ಲಿ ಕುಳಿತುಕೊಳ್ಳುವವನು, ವಾಹನಾಧಿರೂಢನಾಗಿ ತೀರ್ಥಯಾತ್ರೆ ಮಾಡುವವನು, ಇವರನ್ನು ಅಧಮರೆಂದು ತಿಳಿಯಬೇಕು.

**ನಿಮಜ್ಜ್ಯ ತೀರ್ಥೇ ವಿಧಿವದ್ಗ್ರಾಮ್ಯಧರ್ಮೇಣ ವರ್ತಯೇತ್ ।**
**ದ್ವಿತೀಯಶ್ಚಾಧಮಃ ಪ್ರೋಕ್ತೋ ನಿಂದಿತಃ ಪರಿಕೀರ್ತಿತಃ ॥ ೩೮ ॥**

**ವಾಕ್ಚೈವ ಮಧುರಾ ಶ್ಲಕ್ಷ್ಣಾ ಹೃದಿ ಹಾಲಾಹಲಂ ವಿಷಂ ।**
**ವದತ್ಯನ್ಯತ್ಕರೋತ್ಯನ್ಯತ್ ದ್ವಾವೇತೌ ವಿಷಮೌ ಸ್ಮೃತೌ ॥ ೩೯ ॥**

**ಮೋಕ್ಷಚಿಂತಾಮತಿಕ್ರಮ್ಯ ಯೋಽನ್ಯಚಿಂತಾಪರಿಶ್ರಮಃ ।**
**ಹರಿಸೇವಾವಿಹೀನೋ ಯಃ ಸ ಪಶುರ್ಜ್ಞೇನಿತಃ ಪಶುಃ ॥ ೪೦ ॥**

**ಪ್ರಯಾಗೇ ವಿದ್ಯಮಾನೇಽಪಿ ಯೋಽನ್ಯತ್ರ ಸ್ನಾನಮಾಚರೇತ್ ।**
**ದೃಷ್ಟದೈವಂ ಪರಿತ್ಯಜ್ಯ ಅದೃಷ್ಟಂ ಭಜತೇ ತು ಯಃ ॥ ೪೧ ॥**

**ಆಯುಷಸ್ತು ಕ್ಷಯಾರ್ಥಾಯ ಶಾಸ್ತ್ರೇಯಮೃಷಿಸಂಮತಃ ।**
**ಯೋಗಾಭ್ಯಾಸಂ ತತೋ ಹಿತ್ವಾ ತೃತೀಯಶ್ಚಾಧಮಃ ಪಶುಃ ॥ ೪೨ ॥**

---

೩೮. ವಿಧಿಪ್ರಕಾರ ತೀರ್ಥದಲ್ಲಿ ಸ್ನಾನಮಾಡಿ ನಿಯಮವನ್ನು ಅನುಸರಿಸಿರದೆ, ಗ್ರಾಮ್ಯಧರ್ಮ (ಮೈಥುನ) ವನ್ನು ಆಚರಿಸುವವನು ಎರಡನೆಯತರಹ ಅಧಮನೆನಿಸಿ ಕೊಂಡು ಎಲ್ಲರ ನಿಂದೆಗೂ ಪಾತ್ರನಾಗುತ್ತಾನೆ.

೩೯. ಮೃದುವಾಗಿಯೂ, ಮಧುರವಾಗಿಯೂ ಮಾತನಾಡುವುದು, ಹೃದಯ ದಲ್ಲಿ ಮಹಾವಿಷವನ್ನಿಟ್ಟುಕೊಂಡಿರುವುದು, ಬಾಯಲ್ಲಿ ತುಪ್ಪತೊಟ್ಟಿಕ್ಕುವಂತೆ ಮೃದು ವಾಗಿ ಮಾತಾಡುವುದು, ಮಾಡುವ ಕಾರ್ಯವು ಆ ಮಾತಿಗನುಸಾರವಾಗಿರದೆ ವಿರುದ್ಧ ವಾಗಿರುವುದು, ಈ ಎರಡುತರಹ ಜನರನ್ನೂ ವಿಷಮರೆಂದು ಹೇಳುತ್ತಾರೆ.

೪೦. ಮೋಕ್ಷದ ಚಿಂತೆಯನ್ನೇ ತೊರೆದು ಸದಾ ಬೇರೆ ಚಿಂತೆಯಲ್ಲಿ ಆಸಕ್ತ ನಾಗಿರುವವನು, ವಿಷ್ಣುಸೇವೆಯಲ್ಲಿ ಆಸಕ್ತಿ ಇಲ್ಲದೆ ಇರುವವನು, ಇಂತಹವರು ಪಶು ಸಮಾನರಾದ ಅಜ್ಞರು. ಅವರನ್ನು ಜನ್ಮತಃ ಪಶುವೆಂದೇ ಹೇಳಬೇಕು

೪೧. ಪ್ರಯಾಗದಂತಹ ಪುಣ್ಯತೀರ್ಥವು ಸಾನ್ನಿಧ್ಯದಲ್ಲಿದ್ದರೂ, ಅಲ್ಲಿಗೆ ಹೋಗದೆ, ಬೇರೆ ತೀರ್ಥದಲ್ಲಿ ಸ್ನಾನಮಾಡುವವನು, ಕಣ್ಣಿಗೆ ಗೋಚರವಾಗುವ ದೇವರನ್ನು ಬಿಟ್ಟು ಅಗೋಚರನಾದ ದೇವನನ್ನು ಭಜಿಸುವವನು.

೪೨. ಮತ್ತು ಆಯುಸ್ಸಿನ ಕಾಲಕಳೆಯುವುದಕ್ಕಾಗಿ ಯೋಗಾಭ್ಯಾಸವನ್ನು ಬಿಟ್ಟು ಋಷಿಸಮ್ಮತವಾದ ಶಾಸ್ತ್ರದಲ್ಲಿ ಪ್ರವರ್ತಿಸುವವನು, ಇಂಥವರನ್ನೆಲ್ಲಾ ಅಧಮ ಪಶುಸಮಾನರೆನ್ನಬೇಕು.

ಬಹೂನಿ ಪುಸ್ತಕಾನೀಹ ಶಾಸ್ತ್ರಾಣಿ ವಿವಿಧಾನಿ ಚ ।
ತಸ್ಯ ಸಾರಂ ನ ಜಾನಾತಿ ಸ ಏವ ಜಂಬುಕಃ ಪಶುಃ ॥ ೪೩ ॥

ಬಲೇನ ಛಲಛದ್ಮೇನ ಉಪಾಯೇನ ಪ್ರಬಂಧನಂ ।
ಸೋಽಪಿ ಸ್ಯಾತ್ಪಿಶುನಃ ಖ್ಯಾತಃ ಪ್ರಣಯಾದ್ವಾ ದ್ವಿತೀಯಕಃ ॥ ೪೪ ॥

ಮಧುರಾನ್ನಂ ಪ್ರತಿಷ್ಠಾಪ್ಯ ದೈವೇ ಪಿತ್ರ್ಯೇ ಚ ಕರ್ಮಣಿ ।
ಮ್ಲಾನಂ ಚಾಪಿ ಚ ತಿಕ್ತಾನ್ನಂ ಯಃ ಪ್ರಯಚ್ಛತಿ ಸ ದುರ್ಮತಿಃ ॥ ೪೫ ॥

ಕೃಪಣಃ ಸ ಚ ವಿಜ್ಞೇಯಃ ನ ಸ್ವರ್ಗೀ ನ ಚ ಮೋಕ್ಷಭಾಕ್ ।
ಕುದಾತಾ ಚ ಮುದಾಹೀನಃ ಸಕ್ರೋಧಸ್ತು ಯಜೇತ ಯಃ ॥ ೪೬ ॥

---

೪೩. ಅನೇಕ ಪುಸ್ತಕಗಳನ್ನೂ, ಬಗೆಬಗೆಯ ಶಾಸ್ತ್ರಗಳನ್ನೂ ಸಂಪಾದಿಸಿ ಹತ್ತಿರ ಇಟ್ಟುಕೊಂಡು ಇದ್ದರೂ, ಅವುಗಳ ಸಾರವನ್ನು ತಿಳಿದುಕೊಳ್ಳದೆ ಇದ್ದವನನ್ನು ನರಿಯಂತಹ ಪಶುವೆಂದು ಹೇಳಬೇಕು.

೪೪. ಬಲಾತ್ಕಾರದಿಂದಲೋ, ಮೋಸದಿಂದಲೋ, ಉಪಾಯದಿಂದಲೋ ಇತರರನ್ನು ಇಕ್ಕಟ್ಟಿಗೆ ಸಿಕ್ಕಿಸಿಕೊಂಡು ಕಾರ್ಯಸಾಧನೆ ಮಾಡಿಕೊಳ್ಳುವವನು ಪಿಶುನರಲ್ಲಿ ಒಂದುಬಗೆ. ಪ್ರೀತಿಯನ್ನು ತೋರಿಸಿ ಬಲೆಗೆ ಸಿಕ್ಕಿಸಿಕೊಂಡು ಕಾರ್ಯಸಾಧಿಸುವವನು ಎರಡನೇ ತರಹದ ಪಿಶುನನು.

೪೫. ದೇವಪಿತೃಕರ್ಮಗಳಲ್ಲಿ ಮಾಡಿದ ಮಧುರಾನ್ನವನ್ನು ಒಳಗಿಟ್ಟುಕೊಂಡು ಶುಭ್ರವಲ್ಲದುದೂ, ಕಹಿಯೂ ಆದ ಅನ್ನವನ್ನು ದ್ವಿಜರಿಗೆ ಬಡಿಸುವ ಬ್ರಾಹ್ಮಣನನ್ನು ದುರ್ಮತಿಯೆನ್ನಬೇಕು.

೪೬-೪೮. ಹಾಗೆ ಮಾಡುವವನನ್ನು ಕೃಪಣನೆಂತಲೂ ಹೇಳಬಹುದು. ಅವನಿಗೆ ಸ್ವರ್ಗವೂ ಇಲ್ಲ. ಮೋಕ್ಷವೂ ದೊರೆಯುವುದಿಲ್ಲ. ಆತ್ಮಸಂತೋಷವಿಲ್ಲದೆ ಕುತ್ಸಿತವಾಗಿ ದಾನಮಾಡುವವನೂ, ಕ್ರೋಧಾವಿಷ್ಟನಾಗಿ ಯಜ್ಞಕಾರ್ಯವನ್ನು ನಡೆಯಿಸುವವನೂ ಕೃಪಣನೆಂದೂ, ಧರ್ಮಬಾಹಿರನೆಂದೂ ಪ್ರಸಿದ್ಧನು. ಶುಭಕರ್ಮವನ್ನು ಆಚರಿಸುವುದರಿಂದ ಯಾವ ದೋಷವಿಲ್ಲದಿದ್ದರೂ ಅದನ್ನು ಧಿಕ್ಕಾರಮಾಡುವವನು, ಶುಭಕರವಾದ ಶರೀರವನ್ನು ವಿಕ್ರಯಮಾಡುವವನು, ತಂದೆತಾಯಿ ಗುರು ಇವರನ್ನು

**ಸ ಏವ ಕೃಪಣಃ ಖ್ಯಾತಃ ಸರ್ವಧರ್ಮಬಹಿಷ್ಕೃತಃ ।**
**ಅದೋಷೇಣ ಶುಭತ್ಯಾಗೀ ಶುಭಕಾಯೋಪವಿಕ್ರಯೀ ॥ ೪೭ ॥**

**ಪಿತೃಮಾತೃಗುರುತ್ಯಾಗೀ ಶೌಚಾಚಾರವಿವರ್ಜಿತಃ ।**
**ಪಿತ್ರೋರಗ್ರೇ ಸಮಶ್ನಾತಿ ಸ ಪಾಪಿಷ್ಠತಮಃ ಸ್ಮೃತಃ ॥ ೪೮ ॥**

**ಜೀವನ್ಪಿತೃಪರಿತ್ಯಾಗೀ ಸುತೋ ಜೀವೇನ್ನ ವಾ ಕ್ವಚಿತ್ ।**
**ದ್ವಿತೀಯಸ್ತು ಸ ಪಾಪಿಷ್ಠೋ ಹೋಮಲೋಪೀ ತೃತೀಯಕಃ ॥ ೪೯ ॥**

**ಸಾಧ್ವಾಚಾರಂ ಚ ಪ್ರಚ್ಛಾದ್ಯ ಸೇವನಂ ಚಾಪಿ ದರ್ಶಯೇತ್ ।**
**ಸ ನಷ್ಟ ಇತಿ ವಿಜ್ಞೇಯಃ ಕ್ರಯಕ್ರೀತಂ ಚ ಮೈಥುನಂ ॥ ೫೦ ॥**

**ಜೀವೇದ್ದೇವಲವೃತ್ತಿರ್ಯಃ ಭಾರ್ಯಾವಿಪಣಜೀವಕಃ ।**
**ಕನ್ಯಾಶುಲ್ಕೇನ ಜೀವೇದ್ವಾ ಸ್ತ್ರೀಧನೇನ ಚ ವಾ ಕ್ವಚಿತ್ ॥ ೫೧ ॥**

---

ತ್ಯಾಗಮಾಡುವನು, ಶುಚಿಯಾದ ನಡವಳಿಕೆ ಇಲ್ಲದವನು, ತಂದೆತಾಯಿಗಳು ಹಸಿದಿರುವಾಗ ಅವರನ್ನು ಬಿಟ್ಟು ಅವರೆದುರಿಗೆ ಭೋಜನಮಾಡುವವನು, ಇಂಥವನು ಅತ್ಯಂತ ಪಾಪಿಷ್ಠನು.

೪೯. ತಾನು ಜೀವಂತನಾಗಿದ್ದೂ ತಂದೆತಾಯಿಗಳನ್ನು ತ್ಯಜಿಸಿದರೆ ಅಂಥವನು ಬದುಕಿದ್ದರೂ ಸತ್ತಕೂಟವೇ ಸರಿ. ಅವನು ಎರಡನೆಯ ವಿಧದ ಪಾಪಿಷ್ಠನು. ಅಗ್ನಿಕಾರ್ಯ, ಔಪಾಸನ ಮುಂತಾದ ಹೋಮಕ್ರಿಯೆಯನ್ನು ಮಾಡದೆ ಬಿಟ್ಟವನು ಮೂರನೆಯ ಬಗೆಯ ಪಾಪಿಷ್ಠನು.

೫೦–೫೧ ತನ್ನ ಘನತೆಗೆ ಅನುಗುಣವಾಗಿ ನಡೆದುಕೊಳ್ಳದೆ ಕೇವಲ ಸೇವಕನಂತೆ ವರ್ತಿಸುವವನು, ದ್ರವ್ಯಕೊಟ್ಟು ಸ್ತ್ರೀ ಸುಖಾನುಭವಮಾಡುವವನು, ಪರಾರ್ಥವಾಗಿ ದೇವರ ಪೂಜೆಮಾಡಿ ಜೀವನಮಾಡತಕ್ಕವನು, ಹೆಂಡತಿಯ ದೇಹವಿಕ್ರಯದಿಂದ ಜೀವಿಸುವವನು, ಕನ್ಯೆಗಾಗಿ ತೆಗೆದುಕೊಂಡ (ತೆರೆದಹಣ) ದ್ರವ್ಯದಿಂದ ಜೀವಿಸುವವನು, ಹೆಂಗಸಿನ ದುಡ್ಡನ್ನು ಬಳಸಿಕೊಂಡು ಜೀವಿಸುವವನು, ಈ ಆರು ತರಹದವರನ್ನೂ ನಷ್ಟರು ಎಂದು ಕರೆಯಬೇಕು. ಇವರಿಗೆ ಸ್ವರ್ಗದಲ್ಲಿನ ಭೋಗಗಳೂ ಇಲ್ಲಿ ಮೋಕ್ಷವೂ ಇಲ್ಲ.

ಷಡೇವ ನಷ್ಟಾಃ ಶಾಸ್ತ್ರೇ ಚ ನ ಸ್ವರ್ಗಮೋಕ್ಷಭಾಗಿನಃ ।
ಸದಾ ಕ್ರುದ್ಧಂ ಮನೋ ಯಸ್ಯ ಹೀನಂ ದೃಷ್ಟ್ವಾ ಪ್ರಕೋಪವಾನ್ ॥ ೫೨ ॥

ಭ್ರುಕುಟೀ ಕುಟಿಲಃ ಕ್ರುದ್ಧಃ ರುಷ್ಟಃ ಪಂಚವಿಧೋದಿತಃ ।
ಅಕಾರ್ಯೇ ರಮತೇ ನಿತ್ಯಂ ಧರ್ಮಾರ್ಥೇ ನ ವ್ಯವಸ್ಥಿತಃ ॥ ೫೩ ॥

ನಿದ್ರಾಲುರ್ವ್ಯಸನಾಸಕ್ತೋ ಮದ್ಯಪಃ ಸ್ತ್ರೀ ನಿಷೇವಕಃ ।
ದುಷ್ಟೈಃ ಸಹ ಸದಾಲಾಪಃ ಸ ದುಷ್ಟಃ ಸಪ್ತಧಾಸ್ಮೃತಃ ॥ ೫೪ ॥

ಏಕಾಕೀ ಮಿಷ್ಟಮಶ್ನಾತಿ ವಂಚಕಃ ಸಾಧುನಿಂದಕಃ ।
ಯಥಾ ಸೂಕರಃ ಪುಷ್ಟಃ ಸ್ಯಾತ್ತಥಾ ಪುಷ್ಟಃ ಪ್ರಕೀರ್ತಿತಃ ॥ ೫೫ ॥

ನಿಗಮಾಗಮತಂತ್ರಾಣಿ ನಾಧ್ಯಾಪಯತಿ ಯೋ ದ್ವಿಜಃ ।
ನ ಶೃಣೋತಿ ಚ ಪಾಪಾತ್ಮಾ ಸ ದುಷ್ಟ ಇತಿ ಚೋಚ್ಯತೇ ॥ ೫೬ ॥

---

೫೨–೫೩. ರುಷ್ಟರಲ್ಲಿ; ಯಾವಾಗಲೂ ಕೋಪಯುಕ್ತವಾದ ಮನಸ್ಸುಳ್ಳವನು, ಹೀನಮನುಷ್ಯನನ್ನು ನೋಡಿ ಸಿಡಿಗುಟ್ಟುವವನು, ಸದಾ ಹುಬ್ಬು ಗಂಟುಹಾಕಿಕೊಂಡು ವಕ್ರವಾದ ಮುಖವುಳ್ಳವನು, ಆಗ್ರಹಯುಕ್ತನು, ರೋಷಾವೇಶವುಳ್ಳವನು, ಈ ರೀತಿ ಐದು ವಿಧವೆಂದು ಹೇಳಬೇಕು.

೫೪. ಯಾವಾಗಲೂ ಕೆಟ್ಟಕೆಲಸವನ್ನು ಮಾಡುವುದರಲ್ಲಿ ಆಸಕ್ತನಾದ ಮನುಷ್ಯ, ಧರ್ಮಬದ್ಧವಾದ ವ್ಯವಸ್ಥೆ ಇಲ್ಲದವನು. ಸದಾನಿದ್ದೆಯಲ್ಲಿ ಆಸಕ್ತ, ಇತರ ದುರ್ವ್ಯಸನಗಳಲ್ಲಿ ಆಸಕ್ತ, ಹೆಂಡ ಕುಡಿದವನು, ಹೆಂಗಸರಲ್ಲಿ ಅತ್ಯಾಸಕ್ತ, ಯಾವಾಗಲೂ ಕೆಟ್ಟವರೊಡನೆ ಏಕಾಂತಮಾಡುವವನು, ಎಂದು ದುಷ್ಟರಲ್ಲಿ ಏಳುಬಗೆ.

೫೫. ತನ್ನ ಮನೆಯಲ್ಲಿ ಮೃಷ್ಟಾನ್ನವನ್ನು ಮಾಡಿಸಿದಾಗಲೂ ಯಾರನ್ನೂ ಊಟಕ್ಕೆ ಕರೆಯದೆ ತಾನೊಬ್ಬನೇ ಕುಳಿತು ಭೋಜನಮಾಡುವವನು, ಮೋಸಗಾರ, ಸಾಧುಗಳನ್ನು ದೂಷಿಸುವನು, ಎಂಬದಾಗಿ ಪುಷ್ಟರಲ್ಲಿ ಮೂರುಬಗೆ ಇದೆ. ಇವರು ಕೊಬ್ಬಿದ ಹಂದಿಯಂಥವರು.

೫೬. ವೇದಶಾಸ್ತ್ರ ತಂತ್ರಾದಿಗಳನ್ನು ಅಧ್ಯಯನಮಾಡದೆ ಇರುವ ಬ್ರಾಹ್ಮಣ, ಇನ್ನು ಯಾರಾದರೂ ವೇದವನ್ನು ಹೇಳುತ್ತಿದ್ದರೂ ಅದನ್ನು ಕೇಳುವುದಕ್ಕೂ ಇಷ್ಟಪಡದವನು, ಇಂತಹ ಪಾಪಾತ್ಮರನ್ನು ದುಷ್ಟರೆಂದು ಹೇಳಬೇಕು.

**ಶ್ರುತಿಃ ಸ್ಮೃತಿಶ್ಚ ವಿಪ್ರಾಣಾಂ ನಯನೇ ದ್ವೇ ವಿನಿರ್ಮಿತೇ ।**
**ಏಕೇನ ವಿಕಲಃ ಕಾಣಃ ದ್ವಾಭ್ಯಾಮಂಧಃ ಪ್ರಕೀರ್ತಿತಃ ॥ ೫೭ ॥**

**ವಿವಾದಃ ಸೋದರ್ಯೈಃ ಸಾರ್ಧಂ ಪಿತ್ರೋರಪ್ರಿಯಕೃದ್ವದೇತ್ ।**
**ದ್ವಿಜಾಧಮಃ ಸ ವಿಜ್ಞೇಯಃ ಸ ಚಂಡಃ ಶಾಸ್ತ್ರನಿಂದಿತಃ ॥ ೫೮ ॥**

**ಪಿಶುನೋ ರಾಜಗಾಮೀ ಚ ಶೂದ್ರಸೇವಕ ಏವ ಚ ।**
**ಶೂದ್ರಾಂಗನಾಗಮೋ ವಿಪ್ರಃ ಸ ಚಂಡಶ್ಚ ದ್ವಿಜಾಧಮಃ ॥ ೫೯ ॥**

**ಪಕ್ವಾನ್ನಂ ಶೂದ್ರಗೇಹೇ ಚ ಯೋ ಭುಂಕ್ತೇ ಸಕೃದೇವ ವಾ ।**
**ಪಂಚರಾತ್ರಂ ಶೂದ್ರಗೇಹೇ ನಿವಾಸೀ ಚಂಡ ಉಚ್ಯತೇ ॥ ೬೦ ॥**

**ಅಷ್ಟಕುಷ್ಠಾನ್ವಿತಃ ಕುಷ್ಠೀ ತ್ರಿಕುಷ್ಠೀ ಶಾಸ್ತ್ರನಿಂದಿತಃ ।**
**ಏತೈಃ ಸಹ ಸದಾಲಾಪಃ ಸ ಭವೇತ್ತತ್ಸಮೋಽಧಮಃ ॥ ೬೧ ॥**

---

೫೭. ಶ್ರುತಿ ಸ್ಮೃತಿ ಇವು ಎರಡೂ ಬ್ರಾಹ್ಮಣರಿಗೆ ಎರಡು ಕಣ್ಣುಗಳು. ಅವುಗಳಲ್ಲಿ ಯಾವುದಾದರೂ ಒಂದರ ಅರಿವು ಇಲ್ಲದಿದ್ದ ವಿಪ್ರನನ್ನು ಕಾಣನೆಂಬದಾಗಿಯೂ ಎರಡೂ ಅತ್ಯಂತವಾಗಿಲ್ಲದವನನ್ನು ಅಂಧನೆಂಬದಾಗಿಯೂ ತಿಳಿಯಬೇಕು.

೫೮. ಸಹೋದರರೊಡನೆ ಜಗಳವಾಡುವವನು, ತಂದೆತಾಯಿಗಳಿಗೆ ಇಷ್ಟವಿಲ್ಲದುದನ್ನೇ ಮಾಡುವವನು, ಅವರಿಗೆ ಅಪ್ರಿಯವಾದ ಮಾತನಾಡುವವನು, ಇಂಥವನನ್ನು ಬ್ರಾಹ್ಮಣಾಧಮನೆಂದು ತಿಳಿಯಬೇಕು. ಅಂಥವನು ಶಾಸ್ತ್ರನಿಂದಿತನಾದ ಚಂಡನೆನಿಸುವನು.

೫೯. ಚಾಡಿಹೇಳುವುದಕ್ಕಾಗಿ ರಾಜನ ಸಮೀಪಕ್ಕೆ ಹೋಗುವವನು, ಶೂದ್ರರ ಬಳಿ ಸೇವೆ ಮಾಡಿಕೊಂಡಿರುವವನು, ಶೂದ್ರಸ್ತ್ರೀಯಲ್ಲಿ ರಮಿಸುವವನು, ಇಂತಹ ನಡವಳಿಕೆಯುಳ್ಳ ವಿಪ್ರನು ಬ್ರಾಹ್ಮಣಾಧಮನಾಗಿ ಚಂಡನೆನಿಸುವನು.

೬೦. ಶೂದ್ರನ ಮನೆಯ ಪಕ್ವಾನ್ನವನ್ನು ಒಂದುಸಲ ತಿಂದರೂ, ಶೂದ್ರನ ಮನೆಯಲ್ಲಿ ಐದುದಿವಸ ತಳುಗಿ ವಾಸಮಾಡಿದರೂ ಅಂತಹ ಬ್ರಾಹ್ಮಣನನ್ನು ಚಂಡನೆನ್ನಬೇಕು.

೬೧. ಎಂಟುಬಗೆಯ ಕುಷ್ಠರೋಗಗಳಲ್ಲಿ ಯಾವುದಾದರೊಂದು ತರಹ ಕುಷ್ಠರೋಗವುಳ್ಳವನು, ಶಾಸ್ತ್ರಪ್ರಕಾರ ನಿಂದಿತವಾದ ಮೂರುಬಗೆಯ ಕುಷ್ಠವುಳ್ಳವನು,

ಕೀಟವದ್ಭ್ರಮಣಂ ಯಸ್ಯ ಕುವ್ಯಾಪಾರೀ ಕುಪಂಡಿತಃ ।
ಅಜ್ಞಾನಾಚ್ಚ ವದೇದ್ಧರ್ಮಮಗ್ರವೃತ್ತಿಃ ಪ್ರಧಾವತಿ ॥ ೬೨ ॥

ಅವಿಮುಕ್ತಂ ಪರಿತ್ಯಜ್ಯ ಯೋಽನ್ಯದೇಶೇ ವಸೇಚ್ಚಿರಂ ।
ಸ ದ್ವಿಧಾ ಶೂಕರಪಶುರ್ನಿಂದಿತಃ ಸಿದ್ಧಸಮ್ಮತಃ ॥ ೬೩ ॥

ಕಪೋಲೇನ ಹಿ ಸಂಯುಕ್ತೋ ಭ್ರುಕುಟೀಕುಟಿಲಾನನಃ ।
ನೃಪವದ್ದಂಡಯೇದ್ಯಸ್ತು ಸ ದಂಡಃ ಸಮುದಾಹೃತಃ ॥ ೬೪ ॥

ಬ್ರಹ್ಮಸ್ವಹರಣಂ ಕೃತ್ವಾ ನೃಪದೇವಸ್ವಮೇವ ಚ ।
ಧನೇನ ತೇನ ಇತರಂ ದೇವಂ ವಾ ಬ್ರಾಹ್ಮಣಾನಪಿ ॥ ೬೫ ॥

---

ಇಂತಹವರೊಡನೆ ಸರ್ವದಾ ಸೇರಿ ಮಾತನಾಡುವವನಿಗೆ ಸಮಾನನಾದ ಅಧಮನು ಬೇರೆ ಯಾರೂ ಇಲ್ಲ.

೬೨. ಯತ್ಕಿಂಚಿತ್ ಜೀವನಾರ್ಥವಾಗಿ ಹುಳುವಿನಂತೆ ಅಲೆಯುವವನೂ, ಕುತ್ಸಿತವಾದ ವ್ಯಾಪಾರವುಳ್ಳವನೂ, ಕುತ್ಸಿತ ಪಂಡಿತನೂ, ತನಗೇ ತಿಳಿಯದೆ ಇತರರಿಗೆ ಧರ್ಮೋಪದೇಶಮಾಡುವವನೂ, ಯಾರೂ ಕರೆಯದೆ ಇದ್ದರೂ ಆದಾಯಕ್ಕಾಗಿ ಮುಂದಾಳಾಗಿ ಓಡಾಡತಕ್ಕವನೂ,

೬೩. ಅವಿಮುಕ್ತ (ಕಾಶಿ) ಕ್ಷೇತ್ರವು ಸ್ವಸ್ಥಳವಾಗಿದ್ದರೂ ಅದನ್ನು ಬಿಟ್ಟು ಬೇರೆಕಡೆ ಬಹುದಿನ ವಾಸಮಾಡುವವನೂ, ಇಂಥವರು ಎರಡು ಗುಂಪಿನವರಿಂದಲೂ ನಿಂದಿತರು, ಮತ್ತು ಹಂದಿಯಂಥವರು ಎಂಬದಾಗಿ ಯೋಗಸಿದ್ಧರು ಸಮ್ಮತಿಸಿದ್ದಾರೆ.

೬೪. ಕೆನ್ನೆಗೆ ಕೆನ್ನೆ ಸೇರಿಸಿ ಕಿವಿಮಾತಾಡುವವನು, ಹುಬ್ಬುಗಂಟಿಕ್ಕಿ ಸೊಟ್ಟ ಮುಖ ಮಾಡಿಕೊಳ್ಳುವವನು, ರಾಜನಂತೆ ಆಜ್ಞೆಮಾಡಿ ಇತರರನ್ನು ಅವ್ಯಾಹತವಾಗಿ ಶಿಕ್ಷಿಸುವ ಸ್ವಭಾವದವನು ಇಂಥವನನ್ನು ದಂಡನೆಂದು ಹೇಳಬೇಕು.

೬೫. ಬ್ರಹ್ಮಸ್ವತ್ತು, ದೇವಸ್ವತ್ತು, ರಾಜಸ್ವತ್ತು ಇದನ್ನು ಅಪಹರಿಸಿ ಆ ದ್ರವ್ಯದಿಂದ ದೇವರಸೇವೆ, ಬ್ರಾಹ್ಮಣರ ಸೇವೆಮಾಡುವುದು.

**ಸಂತರ್ಪಯತಿ ಯೋಽಶ್ನಾತಿ ಯಃ ಪ್ರಯಚ್ಛತಿ ವಾ ಕ್ವಚಿತ್ ।**
**ಸ ಖರಶ್ಚ ಪಶುಶ್ರೇಷ್ಠಃ ಸರ್ವವೇದೇಷು ನಿಂದಿತಃ ॥ ೬೬ ॥**

**ಅಕ್ಷರಾಭ್ಯಾಸನಿರತಃ ಪಠತ್ಯೇವ ನ ಬುದ್ಧ್ಯತೇ ।**
**ಪದಶಾಸ್ತ್ರಪರಿತ್ಯಕ್ತಃ ಸ ಪಶುಃ ಸ್ಯಾನ್ನ ಸಂಶಯಃ ॥ ೬೭ ॥**

**ವದತ್ಯನ್ಯತ್ಕರೋತ್ಯನ್ಯದ್ಗುರುದೇವಾಗ್ರತೋ ಯತಃ ।**
**ಸ ನೀಚ ಇತಿ ವಿಜ್ಞೇಯೋ ಹ್ಯನಾಚಾರಸ್ತಥಾಪರಃ ॥ ೬೮ ॥**

**ಷಡ್ಗುಣಾಲಂಕೃತೇಃ ಸಾಧೋರ್ದೋಷಾನ್ಮೃಗಯತೇ ಖಲಃ ।**
**ವನೇ ಪುಷ್ಪಫಲಾಕೀರ್ಣೇ ಶಲಭಃ ಕಂಟಕಾನಿವ ॥ ೬೯ ॥**

---

೬೬. ಆ ಬ್ರಹ್ಮಸ್ವತ್ತಿನ ದ್ರವ್ಯವನ್ನು ತಾನು ಅನುಭವಿಸುವುದು, ಅಥವಾ ಇನ್ನು ಯಾರಿಗಾದರೂ ದಾನಮಾಡುವುದು, ಹೀಗೆ ಮಾಡುವವನನ್ನು ಸರ್ವ ವೇದಗಳಲ್ಲಿಯೂ ನಿಂದಾರ್ಹನೂ, ಕ್ರೂರನೂ, ಕೇವಲ ಪಶುಸ್ವರೂಪನೂ ಎನ್ನಬೇಕು.

೬೭. ಗುರುಮುಖೇನ ಕಲಿಯದೆ ಸ್ವಂತವಾಗಿ ಬ್ರಹ್ಮವಿದ್ಯಾಭ್ಯಾಸದಲ್ಲಿ ಆಸಕ್ತನಾದವನು ಕೇವಲ ಪಠನಮಾಡಿದವನಾಗುವನೇ ಹೊರತು, ನಿಜವಾದ ತಿಳಿವಳಿಕೆಯನ್ನು ಹೊಂದಲಾರನು. ಪದಗಳ ಮತ್ತು ಶಾಸ್ತ್ರಗಳ ತಿಳಿವಳಿಕೆಯಿಲ್ಲದವನು ಸಾಕ್ಷಾತ್ಪಶುವೇ ಸರಿ.

೬೮. ಗುರುಗಳೆದುರಿಗೂ, ದೇವರೆದುರಿಗೂ ಬಾಯಲ್ಲಿ ಹೇಳುವುದೊಂದು, ಕೈಯ್ಯಲ್ಲಿ ಮಾಡುವುದೊಂದು, ಈ ರೀತಿ ನಡವಳಿಕೆಯುಳ್ಳವನನ್ನು ನೀಚನೆಂದು ತಿಳಿಯಬೇಕು. ಅನಾಚಾರವುಳ್ಳವನನ್ನು ಇನ್ನೊಬ್ಬ ನೀಚನು ಎನ್ನಬೇಕು.

೬೯. ಫಲಗಳೂ, ಪುಷ್ಪಗಳೂ ಸಮೃದ್ಧಿಯಾಗಿರುವ ವನಕ್ಕೆ ಹೋದರೂ ಮುಳ್ಳುಗಿಡವನ್ನೇ ಹುಡುಕುವ ಮಿಡತೆಯ ಹುಳುವಿನಂತೆ, ನೀಚನಾದವನು ಷಡ್ಗುಣಗಳಿಂದ ಕೂಡಿದ ಸಾಧುವಿನ ಗುಣಗಳಲ್ಲಿ ದೋಷವನ್ನೇ ಹುಡುಕುತ್ತಾನೆ.

ದೈವೇನ ಚ ವಿಹೀನೋ ಯಃ ಕುಸಂಭಾಷಾಂ ವದೇತ್ತು ಯಃ ।
ಸ ವಾಚಾಲ ಇತಿ ಖ್ಯಾತೋ ಯೋಽಹ್ಯಪತ್ರಪತಾಯುತಃ ॥ ೭೦ ॥

ಚಾಂಡಾಲೈಃ ಸಹ ಆಲಾಪಃ ಪಕ್ಷಿಣಾಂ ಪೋಷಣೇ ರತಃ ।
ಮಾರ್ಜಾರೈಶ್ಚಾಪಿ ಸಂಭುಂಕ್ತೇ ಯತ್ಕೃತ್ಯಂ ಮರ್ಕಟೋಚಿತಂ ॥ ೭೧ ॥

ತೃಣಚ್ಛೇದಿ ಲೋಷ್ಟಮರ್ದೀ ವೃಥಾ ಮಾಂಸಾಶನಶ್ಚ ಯಃ ।
ಚಪಲಃ ಸ ತು ವಿಜ್ಞೇಯಃ ಪರಭಾರ್ಯ್ಯಾರತಸ್ತಥಾ ॥ ೭೨ ॥

ಸ್ನೇಹೋದ್ವರ್ತನಹೀನೋ ಯೋ ಗಂಧಚಂದನವರ್ಜಿತಃ ।
ನಿತ್ಯಕ್ರಿಯಾ ಅಕುರ್ವಾಣೋ ನಿತ್ಯಂ ಸ ಚ ಮಲೀಮಸಃ ॥ ೭೩ ॥

---

೭೦. ದೇವರಿದ್ದಾನೆ ಎಂಬುದರಲ್ಲೇ ನಂಬಿಕೆ ಇಲ್ಲದವನಾಗಿ, ತನ್ನ ಈ ಅಜ್ಞಾನಕ್ಕೆ ನಾಚಿಕೆ ಇಲ್ಲದೆ, ಜನರೊಡನೆ ಈ ಕುತ್ಸಿತ ವಿಚಾರವನ್ನು ಬಹು ಆಸಕ್ತಿಯಿಂದ ಮಾತನಾಡುವವನು ವಾಚಾಲನೆಂದು ಪ್ರಸಿದ್ಧಿಯಾಗಿದೆ.

೭೧. ಚಂಡಾಲರೊಡನೆ ಆಪ್ತತೆಯಿಂದ ಮಾತಾಡುವುದು, ಪಕ್ಷಿಗಳನ್ನು ಸಾಕುವುದರಲ್ಲಿ ಆಸಕ್ತಿ, ತನ್ನ ಸಂಗಡ (ಎಲೆಯಮುಂದೆ) ಬೆಕ್ಕುಗಳಿಗೆ ಊಟಮಾಡಿಸುವುದು, ಇವೆಲ್ಲಾ ಕಪಿ ಸಹಜವಾದ ಕಾರ್ಯ್ಯಗಳೆಂದು ತಿಳಿಯಬೇಕು.

೭೨. ಮಾಂಸವನ್ನು ತಿನ್ನುವವನು, ಅನ್ಯರ ಹೆಂಡತಿಯಲ್ಲಿ ಆಸಕ್ತನಾದವನು, ಯಾವ ಪ್ರಯೋಜನವೂ ಇಲ್ಲದೆ ಹುಲ್ಲನ್ನೂ ಹಂಚೀಕಡ್ಡಿಯನ್ನೂ ಚಿಗಟುವವನು, ನಿಷ್ಕಾರಣವಾಗಿ ಹೆಂಟೆಗಳನ್ನು ಪುಡಿಮಾಡುವವನು ಇವರೆಲ್ಲರನ್ನೂ ಚಪಲರೆಂದು ಹೇಳಬೇಕು.

೭೩. ಎಣ್ಣೆ ಒತ್ತಿಕೊಂಡು ಅಭ್ಯಂಗಮಾಡದೆ ಇರುವವನು, ಗಂಧ ಮುಂತಾದುವನ್ನು ಮೈಗೆ ತೊಡೆದುಕೊಳ್ಳದೆ ಇರುವವನು, ನಿತ್ಯಕರ್ಮಗಳನ್ನು ಸದಾ ಮಾಡದೆ ಇರತಕ್ಕವನು, ಇಂಥವರನ್ನು ಕೊಳಕರೆಂದು ತಿಳಿಯಬೇಕು.

**ಅನ್ಯಾಯೇನ ಗೃಹಂ ವಿಂದೇದನ್ಯಾಯೇನ ಗೃಹಾನ್ಧನಂ ।**
**ಶಾಸ್ತ್ರಾದನ್ಯದ್ಗೃಹಂ ಮಂತ್ರಂ ಸ ಸ್ತೇಯೀ ಬ್ರಹ್ಮಘಾತಕಃ ॥ ೭೪ ॥**

**ದೇವಪುಸ್ತಕರತ್ನಾನಿ ಮಣಿಮುಕ್ತಾಶ್ವಮೇವ ಚ ।**
**ಗೋಭೂಮಿಸ್ವರ್ಣಹರಣಃ ಸ ಸ್ತೇಯೀತಿ ನಿಗದ್ಯತೆ ॥ ೭೫ ॥**

**ದೇವೋಽಪಿ ಭಾವಯೇತ್ಪಶ್ಚಾನ್ಮಾನುಷೋಽಪಿ ನ ಸಂಶಯಃ ।**
**ಅನೋನ್ಯಭಾವನಾ ಕಾರ್ಯಾ ಸ ಸ್ತೇಯೀ ಯೋ ನ ಭಾವಯೇತ್ ॥ ೭೬ ॥**

**ಗುರೋಃ ಪ್ರಸಾದಾಜ್ಜಯತಿ ಪಿತ್ರೋಶ್ಚಾಪಿ ಪ್ರಸಾದತಃ ।**
**ಕರೋತಿ ಚ ಯಥಾರ್ಹಂ ಚ ಸ ಚ ಸ್ವರ್ಗೇ ಮಹೀಯತೆ ॥ ೭೭ ॥**

**ನ ಪೋಷಯತಿ ದುಷ್ಟಾತ್ಮಾ ಸ ಸ್ತೇಯೀ ಚಾಪರಃ ಸ್ಮೃತಃ ॥ ೭೮ ॥**

---

೭೪. ಅನ್ಯಾಯದಿಂದ ಮನೆ ಸಂಪಾದನೆಮಾಡಿಕೊಳ್ಳುವುದು, ಅನ್ಯಾಯದಿಂದ ಹೆಂಗಸನ್ನೂ ಹಣವನ್ನೂ ವಶಮಾಡಿಕೊಳ್ಳುವುದು, ಶಾಸ್ತ್ರಕ್ಕೆ ವಿರುದ್ಧವಾದ ಮಾರ್ಗದಲ್ಲಿ ಆಲೋಚಿಸುವುದು, ಹೀಗೆ ಮಾಡುವವನನ್ನು ಕಳ್ಳ ಮತ್ತು ಬ್ರಹ್ಮ ಘಾತಕ ಎನ್ನಬೇಕು.

೭೫. ದೇವರು, ಪುಸ್ತಕಗಳು, ರತ್ನಗಳು, ಮಣಿಗಳು ಮತ್ತು ಕುದುರೆಗಳು, ಗೋವುಗಳು, ಭೂಮಿ, ಸುವರ್ಣ ಇವನ್ನಪಹರಿಸುವವನನ್ನು ಕಳ್ಳನೆನ್ನಬೇಕು.

೭೬. ದೇವತೆಗಳಾಗಲಿ, ಮನುಷ್ಯರಾಗಲಿ ಮೇಲೆ ಹೇಳಿದಂತೆ ಮಾಡಿದರೆ ಕಳ್ಳರೆಂದೇ ಭಾವಿಸಬೇಕು. ಹೀಗೆ ಅವನು ಕಳ್ಳನೆಂದು ಪರೋಕ್ಷವಾಗಿ ತಿಳಿದರೂ, ಆರೀತಿ ಭಾವಿಸದೆ ಅನನ್ಯತೆಯಿಂದ ನೋಡಿದರೆ, ಅವನನ್ನೂ ಕಳ್ಳನೆಂದೇ ತಿಳಿಯಬೇಕು.

೭೭. ಯೋಗ್ಯವಾದ ರೀತಿಯಲ್ಲಿ ಕಾರ್ಯವನ್ನು ಮಾಡಿದರೆ, ಗುರುವಿನ ಅನುಗ್ರಹದಿಂದಲೂ, ತಾಯಿತಂದೆಗಳ ಅನುಗ್ರಹದಿಂದಲೂ ಜಯ ಸಂಪಾದಿಸುತ್ತಾನೆ ಮತ್ತು ತಾನೂ ಸ್ವರ್ಗದಲ್ಲಿ ಪೂಜಿತನಾಗುತ್ತಾನೆ.

೭೮. ತನ್ನ ಆಶ್ರಿತರನ್ನು ಪೋಷಿಸದ ದುಷ್ಟಾತ್ಮನನ್ನು ಮತ್ತೊಬ್ಬ ಕಳ್ಳನೆಂದು ಹೇಳಬೇಕು.

ಉಪಕಾರಿಜನಂ ಪ್ರಾಪ್ಯ ನ ಕರೋತಿ ಪರಿಷ್ಕ್ರಿಯಾಂ ।
ಸ ತಪ್ತನರಕೇಶೇತೇ ಶೋಣಿತೇ ಚ ಪತತ್ಯಧಃ ॥ ೭೯ ॥

ಸರ್ವೇಷಾಂ ಚ ಸವರ್ಣಾನಾಂ ಧರ್ಮತೋ ಬ್ರಾಹ್ಮಣಃ ಪ್ರಭುಃ ।
ಪೃಥಿವೀಪಾಲಕೋ ರಾಜಾ ಧರ್ಮಚಕ್ಷುರುದಾಹೃತಃ ॥ ೮೦ ॥

ಪ್ರಜಾಪತೇರ್ಮುಖೋದ್ಭೂತೋ ಹೋರಾತಂತ್ರೇ ಯಥೋದಿತಂ ।
ತದ್ವಿದೋ ಗಣನಾಭಿಜ್ಞಾ ಅನ್ಯವಿಪ್ರಾಃ ಪ್ರಚಕ್ಷತೇ ॥ ೮೧ ॥

ಗಂಗಾಹೀನೋ ಹತೋ ದೇಶಃ ವಿಪ್ರಹೀನಾ ಯಥಾ ಕ್ರಿಯಾ ।
ಹೋರಾಜ್ಞಪ್ತಿವಿಹೀನೋ ಯಃ ದೇಶೋಽಸೌ ವಿಪ್ಲವಪ್ಲವಃ ॥ ೮೨ ॥

ಅಪ್ರದೀಪಾ ಯಥಾ ರಾತ್ರಿರನಾದಿತ್ಯಂ ಯಥಾ ನಭಃ ।
ತಥಾಽಸಾಂವತ್ಸರೋ ರಾಜಾ ಭ್ರಮತ್ಯಂಧ ಇವಾಧ್ವನಿ ॥ ೮೩ ॥

---

೭೯. ತನಗೆ ಉಪಕಾರಮಾಡಿದವರು ತನ್ನಲ್ಲಿಗೆ ಬಂದಾಗ, ಯಾವನು ಅವರಿಗೆ ಉಪಚಾರಮಾಡುವುದಿಲ್ಲವೋ, ಅವನು ಭಯಂಕರವಾದ ತಪ್ತನರಕದಲ್ಲೂ ಮತ್ತು ಶೋಣಿತಕುಂಡದಲ್ಲೂ ಕೆಳಮುಖನಾಗಿ ಬೀಳುವನು.

೮೦. ಸವರ್ಣರಾದವರಿಗೆಲ್ಲಾ ಧರ್ಮಪ್ರಕಾರವಾಗಿ ಬ್ರಾಹ್ಮಣನೇ ಪ್ರಭುವು. ಪೃಥಿವಿಯನ್ನು ಪಾಲಿಸುವ ರಾಜನಿಗೆ ಧರ್ಮವೇ ಕಣ್ಣಾಗಿರಬೇಕೆಂದು ಹೇಳಿದೆ.

೮೧. ಬ್ರಹ್ಮನಮುಖದಿಂದ ಹುಟ್ಟಿದ ವೇದಜ್ಞರಾದ ಈ ವಿಪ್ರರೂ, ಹೋರಾತಂತ್ರದಲ್ಲಿ ಉಕ್ತವಾದ ವಿಷಯವನ್ನು ತಿಳಿದು, ಗಣನಾ ಪ್ರವೀಣರಾದ ಇತರ ಬ್ರಾಹ್ಮಣರೂ ಶ್ರೇಷ್ಠರೆಂದು ಹೇಳುತ್ತಾರೆ.

೮೨. ಗಂಗೆಯಿಲ್ಲದ ದೇಶವು ಹೇಗೆ ಶೋಭಿಸುವುದಿಲ್ಲವೋ, ಬ್ರಾಹ್ಮಣ ಸಹಾಯವಿಲ್ಲದ ಕ್ರಿಯೆಯು ಹೇಗೆ ಅಸಮರ್ಪಕವೋ, ಹೋರಾಜ್ಞಾನಕ್ಕೆ ಅವಕಾಶವಿಲ್ಲದ ದೇಶವು ಹೇಗೆ ತೊಂದರೆಯಲ್ಲಿ ಮುಳುಗಿ ತೇಲುವುದೋ.

೮೩. ದೊಡ್ಡ ದೀಪವನ್ನು ಹಚ್ಚದ ರಾತ್ರಿಯು ಹೇಗೆ ಕ್ಲೇಶಕರವೋ, ಸೂರ್ಯನಿಲ್ಲದ ಅಂತರಿಕ್ಷವು ಹೇಗೆ ರಮ್ಯವಿಲ್ಲವೋ, ಹಾಗೆ ಜ್ಯೋತಿಷಿಕನಿಲ್ಲದ ರಾಜನು; ಮಾರ್ಗದಲ್ಲಿ ತಡವರಿಸಿಕೊಂಡು ಸಾಗುವ ಕುರುಡನಂತೆ, ಮುಂದುಗಾಣದೆ ಕ್ಲೇಶದಿಂದ ಚರಿಸುತ್ತಾನೆ.

**ಸ್ಥಾಪಯೇದ್ಧರ್ಮತೋ ವಿಪ್ರಂ ಭಾವಯೇತ್ಧರ್ಮವೃದ್ಧಯೇ ।**
**ಶ್ಮಶ್ರುಯುಕ್ತೋ ದ್ವಿಜಃ ಪೂಜ್ಯಃ ಸೂರ್ಯೋ ವಿಪ್ರಸ್ತು ಶ್ಮಶ್ರುಲಃ ॥ ೮೪ ॥**

**ಪ್ರತ್ಯಕ್ಷ್ಯದರ್ಶನಾತ್ಪುಣ್ಯಂ ತ್ರಿದಿನಂ ಕಲ್ಮಷಾಪಹಂ ।**
**ದರ್ಶನೇ ವ್ರಾತ್ಯವಿಪ್ರಸ್ಯ ಸೂರ್ಯಂ ದೃಷ್ಟ್ವಾ ವಿಶುದ್ಧ್ಯತಿ ॥ ೮೫ ॥**

**ನ ವ್ರಾತ್ಯತ್ವಂ ಸೂರ್ಯವಿಪ್ರೇ ಪೂಜಯೇದ್ಯಜ್ಞಸಿದ್ಧಯೇ ।**
**ಜ್ಯೋತಿರ್ವೇದಸ್ಯಾಧಿಕಾರಃ ಸೂರ್ಯವಿಪ್ರಸ್ಯ ವೈ ದ್ವಿಜಾಃ ॥ ೮೬ ॥**

**ಜಾತಿಭೇದಾಶ್ಚ ಚತ್ವಾರೋ ಭೋಜಕಃ ಕಥಕಸ್ತಥಾ ।**
**ಶಿವವಿಪ್ರಃ ಸೂರ್ಯವಿಪ್ರಃ ಚತುರ್ಥಃ ಪರಿಪಠ್ಯತೆ ॥ ೮೭ ॥**

---

೮೪. ಅಂಥ ವಿಪ್ರನಿಗೆ ಧರ್ಮಾನುಸಾರ ಅನುಕೂಲ್ಯಮಾಡಿಕೊಟ್ಟು ಅಲ್ಲೇ ನೆಲೆಯಾಗಿ ನಿಲ್ಲುವಂತೆಮಾಡಿ ಧರ್ಮವೃದ್ಧಿಗೆ ನೆರವಾಗುವಂತೆ ಭಾವನೆಯಿಂದ ನಡೆಸಬೇಕು. ಗಡ್ಡಮೀಸೆಯಿಂದ ಕೂಡಿದ ವಿಪ್ರನು ಪೂಜಾಯೋಗ್ಯನು. ಸೂರ್ಯನೂ ಗಡ್ಡಮೀಸೆಯುಳ್ಳ ಬ್ರಾಹ್ಮಣರೂಪನಾಗಿರುವನು.

೮೫. ವೃದ್ಧಾರ್ಕಸೇವನೆಯಿಂದ ಎಂದರೆ ಪಶ್ಚಿಮದಲ್ಲಿ ಸೂರ್ಯದರ್ಶನಮಾಡುವುದರಿಂದ ಪುಣ್ಯವುಂಟು. ಆ ಪ್ರಕಾರವಾಗಿ ಮೂರುದಿವಸ ದರ್ಶನಮಾಡಿದರೆ, ಅವರ ಪಾಪವೆಲ್ಲ ನಾಶವಾಗುವುದು. ವ್ರಾತ್ಯನಾದ ವಿಪ್ರನನ್ನು ನೋಡಿದುದರಿಂದ ಪಾಪವು ಸಂಘಟಿಸುವುದು. ಸೂರ್ಯದರ್ಶನದಿಂದ ಆ ಪಾಪಪರಿಹಾರವಾಗಿ ಶುದ್ಧಿ ಹೊಂದಬಹುದು.

೮೬. ಸೂರ್ಯಭಕ್ತನಾದ ವಿಪ್ರನು ಎಂದಿಗೂ ವ್ರಾತ್ಯನೆನಿಸುವುದಿಲ್ಲ. ಯಜ್ಞಸಿದ್ಧಿಯಾಗಬೇಕಾದರೆ ಅವನನ್ನು ಪೂಜಿಸಲೇಬೇಕು. ಎಲೈ ಬ್ರಾಹ್ಮಣರೇ! ಕೇಳಿ; ಜ್ಯೋತಿಶ್ಶಾಸ್ತ್ರದ ಅಧಿಕಾರವು ಆ ಸೂರ್ಯಭಕ್ತನಾದ ಬ್ರಾಹ್ಮಣನಿಗೆ ವಿಶೇಷವಾಗಿರುವುದು.

೮೭. ಅವರಲ್ಲಿ ಭೋಜಕ, ಕಥಕ, ಶಿವವಿಪ್ರ, ಸೂರ್ಯವಿಪ್ರ ಎಂಬ ನಾಲ್ಕು ಭೇದಗಳುಂಟು.

ಕಥಕೋ ಮಧ್ಯಮಸ್ತೇಷಾಂ ಸೂರ್ಯವಿಪ್ರಸ್ತಥೋತ್ತಮಃ ।
ಶಿವಲಿಂಗಾರ್ಚನರತಃ ಶಿವವಿಪ್ರಸ್ತು ನಿಂದಿತಃ ॥ ೮೮ ॥

ಸೂರ್ಯವಿಪ್ರಸ್ಯ ವಿಪ್ರಸ್ಯ ವೈದ್ಯಸ್ಯ ಚ ನೃಪಸ್ಯ ಚ ।
ಪ್ರವಾಸಯೇದಕ್ಷತೇನ ಸಪುತ್ರಪಶುಬಾಂಧವಃ ॥ ೮೯ ॥

ಅವಧ್ಯಃ ಸರ್ವಲೋಕೇಷು ರಾಜಾ ರಾಜ್ಯೇನ ಪಾಲಯೇತ್ ।
ವಸುಭಿರ್ವಸ್ತ್ರಗಂಧಾದ್ಯೈರ್ಮಾಲ್ಯೈಶ್ಚ ಏವಿಧೈರಪಿ ॥
ದೇಶಚಕ್ರವಿದಃ ಪೂಜ್ಯಾ ಹೋರಾಚಕ್ರವಿದಃ ಪರಾಃ ॥ ೯೦ ॥

ಸೂರ್ಯಚಕ್ರವಿದಃ ಪೂಜ್ಯಾ ನಾವಮನ್ಯೇತ್ಕಥಂಚನ ।
ಸಿದ್ಧಿಂ ವೃದ್ಧಿಂ ಧನರ್ಧಿಂ ಚ ಯ ಇಚ್ಛೇದಾಯುಷಾ ಸಮಂ ॥ ೯೧ ॥

ಗಣವಿಪ್ರಸಮಃ ಪೂಜ್ಯೋ ದೈವಜ್ಞೋ ಸಮುದಾಹೃತಃ ।
ಜಾತೇ ಬಾಲೇ ನಿರೂಪ್ಯೇ ಚ ಲಗ್ನಗ್ರಹನಿರೂಪಣಂ ॥ ೯೨ ॥

---

೮೮. ಅವರಲ್ಲಿ ಕಥಕನು ಮಧ್ಯಮನು. ಸೂರ್ಯವಿಪ್ರನು ಉತ್ತಮನು. ಶಿವಲಿಂಗಾರ್ಚಕನಾದ ವಿಪ್ರನು ಸಾಮಾನ್ಯನು.

೮೯. ಸೂರ್ಯಭಕ್ತನಾದ ವಿಪ್ರ, ಸಾಮಾನ್ಯವಿಪ್ರ, ವೈದ್ಯ, ಪ್ರಭು, ಇವರು ತಮ್ಮ ಪಶು ಪುತ್ರ ಬಂಧುಸಮೇತರಾಗಿ ಮಾರ್ಗವಶದಿಂದ ಪರಸ್ಥಳದಲ್ಲಿ ತಳುಗಿದಾಗ ಆಊರಿನವರು ಅವರಿಗೆ ಯಾವ ಬಾಧೆಯೂ ಆಗದಂತೆ ನೋಡಿಕೊಂಡು ಮುಂದಕ್ಕೆ ಪ್ರಯಾಣಮಾಡಿಸಬೇಕು. ಸರ್ವಲೋಕಗಳಲ್ಲಿಯೂ ಪ್ರಭುವು ಅವಧ್ಯನು. ಅವನರಾಜ್ಯದಲ್ಲಿ ಬೇರೆ ಯಾರೂ ಅವನನ್ನು ರಕ್ಷಿಸಬೇಕಾಗಿಲ್ಲ.

೯೦. ದೇಶಚಕ್ರವೇತ್ತರನ್ನೂ ಶ್ರೇಷ್ಠರಾದ ಹೋರಾಚಕ್ರವೇದಿಗಳನ್ನೂ ದ್ರವ್ಯದಾನದಿಂದಲೂ, ವಸ್ತ್ರ ಗಂಧ ಮೊದಲಾದುವುಗಳಿಂದಲೂ, ಬಗೆಬಗೆಯಾದ ಪುಷ್ಪಮಾಲ್ಯಗಳಿಂದಲೂ ಪೂಜಿಸಬೇಕು

೯೧-೯೨. ಸೂರ್ಯಚಕ್ರವನ್ನು ಬಲ್ಲವರೂ ಕೂಡ ಪೂಜಾಯೋಗ್ಯರು ಅವರನ್ನು ಎಂದೂ ಅವಮಾನಪಡಿಸಬಾರದು, ತನಗೆ ಸರ್ವಸಿದ್ಧಿ, ವೃದ್ಧಿ, ಧನ, ಇವುಗಳನ್ನೂ, ದೀರ್ಘಾಯುಸ್ಸನ್ನೂ, ಅಪೇಕ್ಷಿಸುವ ಮನುಷ್ಯನು; ದೈವಜ್ಞನು ಗಣವಿಪ್ರಸಮನಾದವನೆಂದೂ, ಪೂಜ್ಯನೆಂದೂ ತಿಳಿಯಬೇಕು.

**ಸಂಸ್ಥಾನಂ ಸೂರ್ಯವಿಪ್ರೋ ಯಃ ಸೂರ್ಯವಿಪ್ರಸ್ಯ ಸತ್ತಮಾಃ ।**
**ದ್ವಿಮಾತ್ರಿಕಾಂ ಸಮಭ್ಯಸ್ಯ ಸರ್ವವೇದಫಲಂ ಲಭೇತ್　　　॥ ೯೩ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ಪಂಚಮೋಽಧ್ಯಾಯಃ.**



---

೯೩. ಮಗು ಹುಟ್ಟುತ್ತಲೇ ದೈವಜ್ಞರು ಅದು ಜನನವಾದ ಲಗ್ನ, ಗ್ರಹಸ್ಥಿತಿ ಇವನ್ನು ನೋಡುವರು. ಓ ಸತ್ಪುರುಷರೇ! ಕೇಳಿ; ಸೂರ್ಯವಿಪ್ರನು ಸೂರ್ಯದೇವನ ಸಂಸ್ಥಾನವನ್ನು ದಿನಕ್ಕೆ ಎರಡು ಮಾತ್ರೆಗಳಷ್ಟು ಕಾಲವಾದರೂ ಅಭ್ಯಾಸಮಾಡಿದರೆ ಸರ್ವ ವೇದಾಧ್ಯಯನ ಮಾಡಿದ ಫಲವನ್ನು ಹೊಂದುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ
ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ಪ್ರಥಮಭಾಗೇ

## ಷಷ್ಠೋऽಧ್ಯಾಯಃ

॥ ಸೂತ ಉವಾಚ ॥

ಚತುರ್ಣಾಮಪಿ ವರ್ಣಾನಾಂ ನಾನ್ಯೋ ಬಂಧುಃ ಪ್ರಚಕ್ಷತೇ ।
ಋತೇ ಪಿತುರ್ದ್ವಿಜಶ್ರೇಷ್ಠಾ ಇತೀಯಂ ನೈಗಮೀ ಸ್ಮೃತಿಃ ॥ ೧ ॥

ಯೇ ಸೋದರಾ ಜ್ಯೇಷ್ಠ ಶ್ರೇಷ್ಠಾ ಉತ್ತರೋತ್ತರತೋ ಗುರುಃ ।
ತ್ರಯೋऽಪಿ ಗುರುವಃ ಶ್ರೇಷ್ಠಾಸ್ತಾಭ್ಯಾಂ ಮಾತಾ ಪರೋ ಗುರುಃ ॥ ೨ ॥

ದ್ವಾದಶ್ಯಾಂ ತು ಅಮಾವಾಸ್ಯಾಮಥ ವಾ ರವಿಸಂಕ್ರಮೇ ।
ವಾಸಾಂಸಿ ದಕ್ಷಿಣಾ ದೇಯಾ ಮಣಿಮುಕ್ತಾ ಯಥಾಶುಚಿ ॥ ೩ ॥

---

## ಆರನೆಯ ಅಧ್ಯಾಯ

೧. ಸೂತರು ಶೌನಕಾದಿಋಷಿಗಳಿಗೆ ಹೇಳುತ್ತಾರೆ—ನಾಲ್ಕು ವರ್ಣದವರಲ್ಲೂ ತಂದೆಗಿಂತಲೂ ಹೆಚ್ಚಿನ ಬಂಧುವೂ, ಬ್ರಾಹ್ಮಣಶ್ರೇಷ್ಠನಿಗಿಂತಲೂ ಹೆಚ್ಚಿನ ಶ್ರೇಷ್ಠನೂ ಇಲ್ಲ ಎನ್ನುತ್ತಾರೆ. ಇದು ಶ್ರುತಿಸ್ಮೃತಿಗಳಲ್ಲಿ ಉಕ್ತವಾದ ವಿಷಯ.

೨. ತಂದೆ, ತಾಯಿ, ಗುರು ಈ ಮೂವರೂ ಶ್ರೇಷ್ಠರಾದ ಗುರುಗಳು, ತಾಯಿಯು ಉಳಿದ ಇಬ್ಬರಿಗಿಂತ ಶ್ರೇಷ್ಠಳಾದ ಗುರು. ಶ್ರೇಷ್ಠರಾದ ಅನೇಕ ಸಹೋದರರುಗಳಲ್ಲಿ ಅನುಕ್ರಮದಿಂದ ಒಬ್ಬರಿಗಿಂತ ಮತ್ತೊಬ್ಬ ಜ್ಯೇಷ್ಠರು ಹೆಚ್ಚು ಪೂಜ್ಯರು.

೩. ವಸ್ತ್ರಗಳು, ದಕ್ಷಿಣೆಗಳು, ರತ್ನ, ಮುತ್ತುಗಳು, ಇವುಗಳಲ್ಲಿ ತಮ್ಮ ಇಷ್ಟಾನುಸಾರ ಯಾವುದನ್ನಾದರೂ ದ್ವಾದಶಿ, ಅಮಾವಾದಶಿ, ಅಥವಾ ಸೂರ್ಯ ಸಂಕ್ರಮಣ ಇಂಥ ದಿನಗಳಲ್ಲಿ ಸತ್ಪಾತ್ರದಲ್ಲಿ ದಾನಕೊಡಬಹುದು.

**ಅಯನೇ ವಿಷುವೇ ಚೈವ ಚಂದ್ರಸೂರ್ಯಗ್ರಹೇ ತಥಾ ।**
**ಪ್ರಾಪ್ತೇ ಚಾಪರಪಕ್ಷೇ ತು ಭೋಜಯೇಚ್ಚಾಪಿ ಶಕ್ತಿತಃ　　॥ ೪ ॥**

**ಪಶ್ಚಾತ್ಪ್ರವಂದಯೇತ್ಪಾದೌ ಮಂತ್ರೇಣಾನೇನ ಸತ್ತಮಾಃ ।**
**ವಿಧಿವದ್ವಂದನಾದೇವ ಸರ್ವತೀರ್ಥಫಲಂ ಭವೇತ್　　॥ ೫ ॥**

**ಸ್ವರ್ಗಾಪವರ್ಗ ಪ್ರದಮೇಕಮಾದ್ಯಂ ।**
**ಬ್ರಹ್ಮಸ್ವರೂಪಂ ಪಿತರಂ ನಮಾಮಿ ॥**
**ಯತೋ ಜಗತ್ಪಶ್ಯತಿ ಚಾರುರೂಪಂ ।**
**ತಂ ತರ್ಪಯಾಮಃ ಸಲಿಲೈಸ್ತಿಲೈರ್ಯುತೈಃ　　॥ ೬ ॥**

**ಪಿತರೋ ಜನಯಂತೀಹ ಪಿತರಃ ಪಾಲಯಂತಿ ಚ ।**
**ಪಿತರೋ ಬ್ರಹ್ಮರೂಪಾ ಹಿ ತೇಭ್ಯೋ ನಿತ್ಯಂ ನಮೋನಮಃ　　॥ ೭ ॥**

---

೪. ದಕ್ಷಿಣಾಯನ ಉತ್ತರಾಯನ ಪುಣ್ಯಕಾಲಗಳಲ್ಲೂ, ವಿಷುವ ಮೊದಲಾದ ಪುಣ್ಯಕಾಲಗಳಲ್ಲೂ, ಚಂದ್ರಗ್ರಹಣ ಸೂರ್ಯಗ್ರಹಣಗಳಲ್ಲೂ, ಅಪರಪಕ್ಷ ಬಂದಾಗಲೂ, ಶಕ್ತ್ಯನುಸಾರ ಸದ್ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

೫. ಅನಂತರ ಈ ಮಂತ್ರಪೂರ್ವಕವಾಗಿ ವಿಧಿಪ್ರಕಾರ ಅವರ ಪಾದಗಳಿಗೆ ವಂದಿಸಬೇಕು. ವಿಧಿಪ್ರಕಾರ ವಂದಿಸುವುದರಿಂದ ಅವನು ಸರ್ವತೀರ್ಥಗಳಲ್ಲೂ ಸ್ನಾನ ಮಾಡಿದ ಫಲವನ್ನು ಹೊಂದುವನು.

೬. ಸ್ವರ್ಗಾಪವರ್ಗಗಳನ್ನು ಕೊಡುವವನೂ, ಪ್ರಧಾನನಾದವನೂ, ಆದಿಯಲ್ಲಿ ಸಂಭೂತನೂ, ಬ್ರಹ್ಮಸ್ವರೂಪನೂ ಆದ, ತಂದೆಗೆ ನಮಸ್ಕರಿಸುತ್ತೇನೆ. ಜಗತ್ತನ್ನು ಮನೋಹರರೂಪದಿಂದ ಕಾಣುವಂತೆ ಮಾಡುವ ಈ ತಂದೆಯನ್ನು ತಿಲೋದಕದಿಂದ ತರ್ಪಣಮಾಡುತ್ತೇನೆ.

೭. ತಾಯಿತಂದೆಗಳು ನಮ್ಮ ಜನ್ಮದಾತರೆನಿಸುತ್ತಾರೆ. ಮತ್ತು ನಮ್ಮನ್ನು ಕಾಪಾಡುತ್ತಾರೆ. ಅವರೇ ಬ್ರಹ್ಮಸ್ವರೂಪರು. ಆದುದರಿಂದ ಅವರಿಗೆ ನಿತ್ಯವೂ ನಮ್ಮ ನಮಸ್ಕಾರಗಳು.

ಯಸ್ಮಾದ್ವಿಜಯತೇ ಲೋಕಃ ಯಸ್ಮಾದ್ಧರ್ಮಃ ಪ್ರವರ್ತತೇ ।
ನಮಸ್ತುಭ್ಯಂ ಪಿತಃ ಸಾಕ್ಷಾತ್ ಬ್ರಹ್ಮರೂಪ ನಮೋಽಸ್ತು ತೇ ॥ ೮ ॥

ಯಾ ಕುಕ್ಷಿವಿವರೇ ಕೃತ್ವಾ ಸ್ವಯಂ ರಕ್ಷತಿ ಸರ್ವತಃ ।
ನಮಾಮಿ ಜನನೀಂ ದೇವೀಂ ಪರಾಂ ಪ್ರಕೃತಿರೂಪಿಣೀಂ ॥ ೯ ॥

ಕೃಚ್ಛ್ರೇಣ ಮಹತಾ ದೇವ್ಯಾ ಧಾರಿತೋಽಹಂ ಯಥೋದರೇ ।
ತ್ವತ್ಪ್ರಸಾದಾಜ್ಜಗದ್ದೃಷ್ಟಂ ಮಾತರ್ನಿತ್ಯಂ ನಮೋಽಸ್ತು ತೇ ॥ ೧೦ ॥

ಪೃಥಿವ್ಯಾಂ ಯಾನಿ ತೀರ್ಥಾನಿ ಸಾಗರಾದೀನಿ ಸರ್ವಶಃ ।
ವಸಂತಿ ತತ್ರ ತಾಂ ನೌಮಿ ಮಾತರಂ ಭೂತಿಹೇತವೇ ॥ ೧೧ ॥

ಗುರುದೇವಪ್ರಸಾದೇನ ಲಬ್ಧಾ ವಿದ್ಯಾ ಯಶಸ್ಕರೀ ।
ಶಿವರೂಪ ನಮಸ್ತಸ್ಮೈ ಸಂಸಾರಾರ್ಣವಸೇತವೇ ॥ ೧೨ ॥

---

೮. ಲೋಕಕ್ಕೆ ಜಯವನ್ನು ಕರುಣಿಸುತ್ತಾ, ಧರ್ಮವು ಸ್ಥಿರವಾಗಿ ಪ್ರವರ್ತಿಸುವಂತೆ ಮಾಡುತ್ತಾ, ಇರುವ ಪ್ರತ್ಯಕ್ಷ ಬ್ರಹ್ಮರೂಪನಾದ ತಂದೆಯೇ! ನಿನಗೆ ನಮಸ್ಕಾರಗಳು ಎಂದು ಪಿತೃವನ್ನು ವಂದಿಸಬೇಕು.

೯. ಯಾವಳು ತನ್ನ ಉದರವೆಂಬ ಕೋಶದಲ್ಲಿ ಇಟ್ಟುಕೊಂಡು ಇತರ ಎಲ್ಲಾ ಸಾಮಗ್ರಿಗಳಿಂದ ನಮ್ಮನ್ನು ರಕ್ಷಿಸುವಳೋ ಅಂತಹ ಪರಮಶ್ರೇಷ್ಠಳೂ, ದೇಹಧಾರಣೆಗೆ ಸಾಧನಳಾದ ಪ್ರಕೃತಿರೂಪಳೂ ಆದ ತಾಯಿಯೇ! ನಿನಗೆ ನಮಸ್ಕಾರ.

೧೦. ನೀನು ಎಷ್ಟೋ ಕಷ್ಟವನ್ನು ಅನುಭವಿಸಿ ನನ್ನ ಶರೀರವನ್ನು ನಿನ್ನ ಉದರದಲ್ಲಿ ಧಾರಣೆಮಾಡಿದೆ. ಹೀಗೆ ನನ್ನನ್ನು ಉದರದಲ್ಲಿಟ್ಟು ಕಾಪಾಡಿದುದರಿಂದ ಆ ನಿನ್ನ ಅನುಗ್ರಹದಿಂದ ನಾನು ಈ ಜಗತ್ತನ್ನು ನೋಡುವಂತೆ ಆಯಿತು; ತಾಯಿ.

೧೧. ಎಲ್ಲಾ ಕಡೆಗಳಲ್ಲಿಯೂ ಇರುವ ಸಾಗರ ಮೊದಲಾದ ತೀರ್ಥಗಳೂ, ಭೂಮಿಯಲ್ಲಿ ಕಾಣುವ ಸರ್ವತೀರ್ಥಗಳೂ, ನಿನ್ನಲ್ಲಿ ನೆಲಸಿವೆ. ಅಂತಹ ತಾಯಿಯೇ! ಸಂಪತ್ಪ್ರಾಪ್ತಿಗಾಗಿ ನಿನ್ನನ್ನು ನಮಸ್ಕರಿಸುತ್ತೇನೆ. (ಎಂದು ಮಾತೃವನ್ನು ವಂದಿಸಬೇಕು.

೧೨. ಯಶಸ್ಕರೀ ವಿದ್ಯೆಯು ಲಭ್ಯವಾಗುವಂತೆ ಅನುಗ್ರಹಮಾಡಶಕ್ಯವನೂ, ಸಂಸಾರಸಮುದ್ರವನ್ನು ದಾಟಿಸುವುದಕ್ಕೆ ಸಾಧನವಾದ ಸೇತುವೆಯಂತಿರುವವನೂ, ಮಂಗಳರೂಪನೂ ಆದ ಶ್ರೀಗುರುವಿಗೆ ನಮಸ್ಕಾರ.

**ವೇದವೇದಾಂಗಶಾಸ್ತ್ರಾಣಾಂ ತತ್ತ್ವಂ ಯತ್ರ ಪ್ರತಿಷ್ಠಿತಂ ।**
**ಆಧಾರಃ ಸರ್ವಭೂತಾನಾಂ ಅಗ್ರಜನ್ಮನ್ನಮೋಽಸ್ತು ತೇ ॥ ೧೩ ॥**

**ಬ್ರಾಹ್ಮಣೋ ಜಗತಾಂ ತೀರ್ಥಂ ಪಾವನಂ ಪರಮಂ ಯತಃ ।**
**ಭೂದೇವ ಹರ ಮೇ ಪಾಪಂ ವಿಷ್ಣುರೂಪಿನ್ನಮೋಽಸ್ತು ತೇ ॥ ೧೪ ॥**

**ಪಿತಾಮಹಂ ಚ ಪ್ರಣಮೇತ್ಸರ್ವಾದೌ ಮಾತರಂ ಗುರುಂ ।**
**ಮಾತಾಮಹಂ ಚ ತದನು ಆಚಾರ್ಯ್ಯಮಥ ಋತ್ವಿಜಂ ॥ ೧೫ ॥**

**ಮಾತೃಮಂತ್ರೈಶ್ಚ ಪ್ರಥಮಂ ಪ್ರಣಮೇದ್ಭಕ್ತಿಭಾವತಃ ।**
**ಯಥಾಗ್ರಜಸ್ತಥಾ ಜ್ಯೇಷ್ಠಃ ಪಿತೃವ್ಯೋಽಪಿ ದ್ವಿಜೋತ್ತಮಾಃ ॥ ೧೬ ॥**

---

೧೩. "ವೇದ, ವೇದಾಂಗ, ಶಾಸ್ತ್ರ ಇವುಗಳ ತತ್ವರೂಪವು ತನ್ನಲ್ಲಿ ನೆಲೆಸಿರತಕ್ಕವನೂ, ಸರ್ವಭೂತಗಳಿಗೂ ಆಶ್ರಯನೂ (ಎಂದರೆ ಅವುಗಳ ಪೋಷಣ ಸಾಮಗ್ರಿಯನ್ನು ಒದಗಿಸುವವನೂ) ಆಗಿರುವ ಅಗ್ರಜನ್ಮನೆನಿಸಿದ ವಿಪ್ರನೇ! ನಿನಗೆ ನಮಸ್ಕಾರ.

೧೪. ಸಮಸ್ತ ಜಗತ್ತುಗಳಿಗೆ ಪರಿಶುದ್ಧಕರ, ಮತ್ತು ಶ್ರೇಷ್ಠ, ಎನಿಸಿದ ತೀರ್ಥಸ್ವರೂಪಿಯಾಗಿಯೂ; ವಿಷ್ಣುರೂಪಿಯೆನಿಸಿಯೂ ಇರುತ್ತಾ, ನನ್ನ ಪಾಪವನ್ನು ನಾಶಮಾಡತಕ್ಕ ಬ್ರಾಹ್ಮಣನೇ! ನಿನಗೆ ನಮಸ್ಕಾರ" ಎಂದು ಗುರುವನ್ನು ವಂದಿಸಬೇಕು.

೧೫. ವಂದನಕ್ರಮದಲ್ಲಿ ಎಲ್ಲರಿಗಿಂತ ಮೊದಲು, ಪಿತಾಮಹನನ್ನು ನಮಿಸಬೇಕು. ಅನಂತರ ತಾಯಿಯನ್ನೂ, ಆ ಮೇಲೆ ಗುರುವನ್ನೂ ನಮಿಸಬೇಕು. ಅವರಾದ ಮೇಲೆ, ತಾಯಿಯ ತಂದೆಯನ್ನೂ, ಅನಂತರ ಮಂತ್ರಾರ್ಥವನ್ನು ವಿಚಾರಮಾಡುವ ಆಚಾರ್ಯನನ್ನೂ, ಆ ಮೇಲೆ ಋತ್ವಿಕ್ಕುಗಳನ್ನೂ ವಂದಿಸಬೇಕು.

೧೬. ಮೊದಲು ತಾಯಿಯನ್ನು ಗೋತ್ರಾಭಿವಾದನ ಮಂತ್ರಪೂರ್ವಕವಾಗಿ ಭಕ್ತಿಯಿಂದ ನಮಿಸಬೇಕು. ಎಲೈ ಬ್ರಾಹ್ಮಣಶ್ರೇಷ್ಠರೇ! ಹಿರಿಯ ಅಣ್ಣನು ಹೇಗೆ ಮಾನ್ಯತೆಗೆ ಅರ್ಹನೋ, ಹಾಗೆಯೇ ತಂದೆಯ ಸಹೋದರರಾದ ಚಿಕ್ಕಪ್ಪ, ದೊಡ್ಡಪ್ಪ, ಇವರೂ ಸಹ ನಮಸ್ಕಾರಕ್ಕೆ ಅರ್ಹರಾಗಿರುವರು.

ದೃಷ್ಟಾದೃಷ್ಟೇ ಚ ಸ ಗುರುರ್ಗುರುರ್ಮಾತಾ ತಥಾ ಗುರುಃ ।
ದೃಷ್ಟಾದೃಷ್ಟಸ್ತೃತೀಯಃ ಸ್ಯಾತ್ಸೂರ್ಯೋಽಗ್ನಿಶ್ಚಂದ್ರ ಏವ ಚ ॥ ೧೭ ॥

ಮಂತ್ರದಾತಾ ಗುರುಃ ಖ್ಯಾತಃ ಸಪ್ತಮಃ ಪರಿಕೀರ್ತಿತಃ ।
ಕಭೋಜನಗುರುಃ ಶ್ರೇಷ್ಠಃ ಸ್ವರ್ಗಾಪವರ್ಗಹೇತುಕಃ ॥ ೧೮ ॥

ದೃಷ್ಟದೇವಂ ಚ ಯೋ ಹಿತ್ವಾ ಅದೃಷ್ಟಂ ಚ ನಿಷೇವತೆ ।
ಪಾಪಾತ್ಮಾ ಪರಮಃ ಸ್ವೈಕೆಸ್ತಿರ್ಯಗ್ಯೋನಿಂ ಚ ಗಚ್ಛತಿ ॥ ೧೯ ॥

ಯಥಾ ಪಿತಾ ಜ್ಯೇಷ್ಠಪಿತಾ ಕನೀಯಾಂಶ್ಚ ತಥಾ ದ್ವಿಜಾಃ ।
ಜ್ಯೇಷ್ಠೋ ಭ್ರಾತಾ ಪಿತೃತುಲ್ಯೋ ಮಾನ್ಯಃ ಸತ್ಕಾರಭಾಗ್ಯತಃ ॥ ೨೦ ॥

---

೧೭. ಗುರುವು ನಮ್ಮ ದೃಷ್ಟಿಗೆ ಗೋಚರವಾದ, ಮತ್ತು ನಮ್ಮ ದೃಷ್ಟಿಗೆ ಅಗೋಚರವಾದ, ಪದಾರ್ಥಗಳ ಸ್ವರೂಪವನ್ನೆಲ್ಲಾ ತಿಳಿಸುವನು. ಗುರುವಿನ ತಾಯಿಯನ್ನೂ ಗುರುವಿನ ಹಾಗೆಯೇ ಪೂಜ್ಯರು ಎಂದು ಭಾವಿಸಬೇಕು. ಸೂರ್ಯ, ಅಗ್ನಿ, ಚಂದ್ರ ಈ ಮೂವರೂ, ಲೋಕದ ವಸ್ತುಗಳು ದೃಷ್ಟ, ಅದೃಷ್ಟ, ದೃಷ್ಟಾದೃಷ್ಟ ಈರೀತಿ ಆಗಲು ಕಾರಣರಾಗಿರುವರು.

೧೮. ಮಂತ್ರವನ್ನು ಉಪದೇಶಮಾಡಿದಾತನು ಏಳನೆಯ ಗುರುವೆಂದು ಹೇಳಬೇಕು. ಜಲಪಾನಮಾಡಿಕೊಂಡು ಜೀವಿಸಿರಬಲ್ಲ ಮಹಾತ್ಮನಾದ ಗುರು ಅತಿ ಶ್ರೇಷ್ಠನು. ತನ್ನ ಶಿಷ್ಯರಿಗೆ ಮೋಕ್ಷ ಲಭಿಸುವುದಕ್ಕೆ ಅವನೇ ಕಾರಣನಾಗುವನು.

೧೯. ಪ್ರತ್ಯಕ್ಷ ದೇವರಾದ ತಂದೆತಾಯಿಗಳನ್ನು ಬಿಟ್ಟು, ದೃಷ್ಟಿಗೆ ಗೋಚರವಲ್ಲದ ಬೇರೆಯವರನ್ನು ದೇವರೆಂದು ಸೇವಿಸುವವನು ಮಹಾಪಾಪಿಯು. ಅವನಿಗೆ ಮುಂದಕ್ಕೆ ಚತುಷ್ಪಾದಿ ಜಂತುವಿನ ಜನ್ಮಬರುತ್ತದೆ.

೨೦. ಓ ಪೂಜ್ಯರೇ! ತಂದೆಯು ಹೇಗೆ ಪೂಜ್ಯನೋ, ಹಾಗೆಯೇ ದೊಡ್ಡಪ್ಪ ಚಿಕ್ಕಪ್ಪ ಇವರೂ ಪೂಜ್ಯರು. ಹಿರಿಯ ಅಣ್ಣನು ತಂದೆಗೆ ಸಮಾನನಾದ ಪೂಜ್ಯನೂ, ಮತ್ತು ಸತ್ಕಾರಕ್ಕೆ ಯೋಗ್ಯನೂ ಆಗಿರುತ್ತಾನೆ.

**ಆಚಾರ್ಯೋ ಬ್ರಹ್ಮಣೋ ಮೂರ್ತಿಃ ಪಿತಾ ಮೂರ್ತಿಃ ಪ್ರಜಾಪತೇಃ ।**
**ಮಾತಾ ಸ್ಯಾತ್ಪೃಥಿವೀಮೂರ್ತಿಃ ಭ್ರಾತರೋ ಮೂರ್ತಿರಾತ್ಮನಃ ॥ ೨೧ ॥**

**ಪಿತಾ ಮೇರುರ್ವಶಿಷ್ಠಃ ಸ್ಯಾದ್ಧರ್ಮಮೂರ್ತಿಃ ಸನಾತನಃ ।**
**ಸ ಚಾಪಿ ದೃಷ್ಟದೇವಃ ಸ್ಯಾತ್ ತದಾಜ್ಞಾಂ ಪರಿಪಾಲಯೇತ್ ॥ ೨೨ ॥**

**ಪಿತಾಮಹಂ ಚ ಪಿತ್ರಗ್ರೇ ಹವ್ಯದ್ರವ್ಯೈಶ್ಚ ತರ್ಪಯೇತ್ ।**
**ಸ ಯಾತಿ ಬ್ರಹ್ಮಣಃ ಸ್ಥಾನಂ ಯಸ್ಮಾನ್ನಾವರ್ತತೇ ಪುನಃ ॥ ೨೩ ॥**

**ಕಸ್ಯ ಪಾದೋದಕಸ್ನಾನಾದ್ಗಂಗಾ ನಾರ್ಹತಿ ಕೇವಲಂ ।**
**ತಥಾವಲೋಕನಾತ್ತಸ್ಯ ಜ್ಯೋತಿರ್ಲಿಂಗಶತೈಶ್ಚ ಕಿಂ ॥ ೨೪ ॥**

---

೨೧. ಮಂತ್ರಕ್ಕೆ ವ್ಯಾಖ್ಯಾನಕರ್ತನಾದ ಆಚಾರ್ಯನು ಪರಬ್ರಹ್ಮಸ್ವರೂಪನು, ತಂದೆಯು ಚತುರ್ಮುಖಬ್ರಹ್ಮ ಸ್ವರೂಪನು, ತಾಯಿಯು ಭೂಮಿಸ್ವರೂಪಳು, ಸಹೋದರರು ತನ್ನ ಸ್ವರೂಪರು ಈ ಪ್ರಕಾರ ಆಗಿರುವರು.

೨೨. ಧರ್ಮಮೂರ್ತಿಯೂ, ಪುರಾತನನೂ ಆಗಿರತಕ್ಕ ತಂದೆಯು (.ವಶೀ ಜಿತೇಂದ್ರಿಯಃ ಅದು ಉಳ್ಳವನು ವಶಿಷ್ಠ) ಅತ್ಯಂತ ಜಿತೇಂದ್ರಿಯವಾಗಿ ನಿಶ್ಚಲವಾದ ಮೇರುವಿನಂತೆ ಇದ್ದಾನೆ. ಅವನೊಬ್ಬ ಪ್ರತ್ಯಕ್ಷದೇವರೆಂದು ತಿಳಿಯಬೇಕು. ಅವನಾಜ್ಞೆಯಂತೆ ನಡೆಯಬೇಕು.

೨೩. ಪಿತೃತುಲ್ಯರಾದವರ ಎದುರಿಗೆ ಪಿತಾಮಹನನ್ನು ಹವ್ಯದ್ರವ್ಯಗಳಿಂದ ತೃಪ್ತಿಪಡಿಸಬೇಕು. ಹೀಗೆ ಮಾಡಿದವನಿಗೆ ಬ್ರಹ್ಮಲೋಕ ಪ್ರಾಪ್ತಿಯಾಗುವುದು. ಅಲ್ಲಿಂದ ಪುನಃ ಹಿಂದಿರುಗದೆ ಅಲ್ಲಿಯೇ ಸ್ಥಿರವಾಗಿರುವನು.

೨೪. ಯಾವನ ಪಾದೋದಕದಲ್ಲಿ ಸ್ನಾನಮಾಡುವುದಕ್ಕೆ ಗಂಗೆಗೂ ಅರ್ಹತೆ ಇಲ್ಲವೋ, ಅಂಥವನ ದರ್ಶನಮಾಡಿದ ಮೇಲೆ ನೂರಾರು ಜ್ಯೋತಿರ್ಲಿಂಗಗಳ ದರ್ಶನದಿಂದ ತಾನೆ ಆಗುವುದೇನು ?

**ದ್ವಾತ್ರಿಂಶತ್ಕುಂಡಕಶಿಲಾಸ್ಪರ್ಶನೇ ಯಾದೃಶಂ ಫಲಂ ।
ತಾದೃಶಂ ಕೋಟಿಗುಣಿತಂ ಪಿತಾಮಹಪ್ರದಕ್ಷಿಣೇ ॥ ೨೫ ॥**

**ಶತಮಾತೃವರಿಷ್ಠಾಶ್ಚ ಪಿತಾಮಹ್ಯಾಶ್ಚ ಪ್ರೋಕ್ಷಣೇ ।
ಗುಣಾಸ್ತದ್ದರ್ಶನೇ ವಿಪ್ರಾಃ ಸಂಸಾರೇ ನ ಪುನರ್ವಿಶೇತ್ ॥ ೨೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ
ಗುರುಗುಣವರ್ಣನಂ ನಾಮ ಷಷ್ಠೋಽಧ್ಯಾಯಃ.**



---

೨೫. ಮೂವತ್ತೆರಡು ದಿವ್ಯಕುಂಡಗಳ ಶಿಲೆಗಳನ್ನು ಸ್ಪರ್ಶಮಾಡುವುದರಿಂದ ಅಮೋಘ ಫಲಪ್ರಾಪ್ತಿಯಾಗುವುದಷ್ಟೆ. ಪಿತಾಮಹನಿಗೆ ಪ್ರದಕ್ಷಿಣೆಮಾಡುವುದರಿಂದ ಅದರ ಕೋಟಿಯಷ್ಟು ಫಲವು ಲಭಿಸುವುದು.

೨೬. ಎಲೈ ಬ್ರಾಹ್ಮಣರೇ ! ಕೇಳಿ ; ಪಿತಾಮಹಿ (ತಂದೆಯತಾಯಿ) ಯನ್ನು ಪ್ರೋಕ್ಷಣೆಮಾಡುವುದರಿಂದ ತಾಯಿಯನ್ನು ಪ್ರೋಕ್ಷಣೆಮಾಡಿದುದರ ನೂರರಷ್ಟು ಶ್ರೇಷ್ಠಫಲ ಬರುವುದು. ಆಕೆಯ ದರ್ಶನದಿಂದಲೇ ಅನೇಕ ಫಲಗಳು ಉಂಟು ಎಂದಮೇಲೆ, ಹಾಗೆ ಪ್ರೋಕ್ಷಣೆಮಾಡಿದವರಿಗೆ ಪುನರ್ಜನ್ಮರೂಪವಾದ ಭವಬಂಧನವೇ ಇಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಮಧ್ಯಮಪರ್ವದ ಪ್ರಥಮಭಾಗದಲ್ಲಿ
ಗುರುಗುಣ ವರ್ಣನೆಯೆಂಬ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ಪ್ರಥಮಭಾಗೇ
## ಸಪ್ತಮೋಽಧ್ಯಾಯಃ

॥ ಸೂತ ಉವಾಚ ॥

ಸಮಾಖ್ಯಾಮಿಹ ವಿಪ್ರೇಂದ್ರ ಇತಿಹಾಸಂ ಪುರಾತನಂ ।
ಶ್ರವಣಾರ್ಹಂ ಚ ಧರ್ಮಾತ್ಮನ್ ಶ್ರೂಯತಾಂ ಯನ್ಮಯಾ ಪುರಾ ॥ ೧ ॥

ಪೃಷ್ಟೋಽವೋಚನ್ಮಹಾತೇಜಾ ವಿರಿಂಚೋ ಭಗವಾನ್ ಪ್ರಭುಃ ।
ಹಂತ ತೇ ಕಥಯಾಮ್ಯೇಷ ಪುರಾಣಶ್ರವಣೇ ವಿಧಿಂ ॥ ೨ ॥

ಇತಿಹಾಸಪುರಾಣಾನಿ ಶ್ರುತ್ವಾ ಭಕ್ತ್ಯಾ ದ್ವಿಜೋತ್ತಮಾಃ ।
ಮುಚ್ಯತೇ ಸರ್ವಪಾಪೇಭ್ಯೋ ಬ್ರಹ್ಮಹತ್ಯಾಶತಂ ಚ ಯತ್ ॥ ೩ ॥

---

## ಏಳನೆಯ ಅಧ್ಯಾಯ

೧. ಪುನಃ ಸೂತರು ಮುಂದುವರಿಸಿ ಹೇಳುತ್ತಾರೆ—ಅಯ್ಯಾ ಧರ್ಮಾತ್ಮರಾದ ಬ್ರಾಹ್ಮಣಶ್ರೇಷ್ಠರೇ! ಪೂರ್ವದಲ್ಲಿ ಪುರಾತನ ಇತಿಹಾಸ ಶ್ರವಣಾರ್ಹವೆಂದು ಯಾವ ಪ್ರಕಾರ ನಾನು ಕೇಳಿದ್ದೆನೋ ಅದನ್ನು ಹೇಳುವೆನು ಕೇಳಿರಿ.

೨. ಓಹೋ ಸರಿ. ಮಹಾತೇಜಸ್ವಿಯೂ, ಭಗವಂತನೂ ಆದ ಬ್ರಹ್ಮನು ತನ್ನನ್ನು ಪ್ರಶ್ನೆಮಾಡಿದವರಿಗೆ ಪುರಾಣಶ್ರವಣ ವಿಧಿಯನ್ನು ಹಿಂದೆ ಯಾವ ಪ್ರಕಾರ ನಿರೂಪಿಸಿದನೋ ಅದನ್ನೇ ನಾನೂ ಈಗ ನಿಮಗೆ ಹೇಳುತ್ತೇನೆ.

೩. ಬ್ರಾಹ್ಮಣಶ್ರೇಷ್ಠರೇ! ಕೇಳಿರಿ; ಮನುಷ್ಯನು ಇತಿಹಾಸ ಪುರಾಣಗಳನ್ನು ಭಕ್ತಿಯಿಂದ ಕೇಳಿದರೆ ಸಮಸ್ತಪಾಪಗಳಿಂದಲೂ, ನೂರಾರು ಬ್ರಹ್ಮಹತ್ಯಾ ದೋಷಗಳಿಂದಲೂ ಮುಕ್ತನಾಗುತ್ತಾನೆ.

ಸಾಯಂ ಪ್ರಾತಸ್ತಥಾ ರಾತ್ರೌ ಶುಚಿರ್ಭೂತ್ವಾ ಶೃಣೋತಿ ಯಃ ।
ತಸ್ಯ ವಿಷ್ಣುಸ್ತಥಾ ಬ್ರಹ್ಮಾ ತುಷ್ಯತೇ ಶಂಕರಸ್ತಥಾ ॥ ೪ ॥

ಪ್ರತ್ಯೂಷೇ ಭಗವಾನ್ ಬ್ರಹ್ಮಾ ದಿನಾಂತೇ ತುಷ್ಯತೇ ಹರಿಃ ।
ಮಹಾದೇವಸ್ತಥಾ ರಾತ್ರೌ ಶೃಣ್ವತಾಂ ಪಠತಾಂ ನೃಣಾಂ ॥ ೫ ॥

ಶುಕ್ಲವಸ್ತ್ರಧರಶ್ಚೈವ ಚೈಲಾಜಿನಕುಶೋತ್ತರಃ ।
ಪ್ರದಕ್ಷಿಣತ್ರಯಂ ಕುರ್ಯಾದ್ವ್ಯಾಸೇಽಸ್ಮಿನ್ ದೇವತಾ ಗುರೌ ॥ ೬ ॥

ನಾತ್ಯುಚ್ಛ್ರಿತಂ ನಾತಿನೀಚಂ ಸ್ವಾಸನಂ ಭಜತೇ ತತಃ ।
ದಿಕ್ಪತಿಭ್ಯೋ ನಮಸ್ಕೃತ್ಯ ಓಂಕಾರಾಧಿಷ್ಠಿತಾನಪಿ ॥ ೭ ॥

---

೪. ಪ್ರಾತಃಕಾಲ, ಸಾಯಂಕಾಲ ಮತ್ತು ರಾತ್ರಿ ಈ ಕಾಲಗಳಲ್ಲಿ ಶುಚಿಯಾಗಿ ಪುರಾಣ ಕೇಳಿದವನಿಗೆ ವಿಷ್ಣು, ಬ್ರಹ್ಮ, ಶಂಕರ ಇವರುಗಳ ಅನುಗ್ರಹ ಲಭಿಸುವುದು.

೫. ಉಷಃಕಾಲದಲ್ಲಿ ಪುರಾಣಶ್ರವಣ ಮಾಡಿದರೆ ಬ್ರಹ್ಮನೂ, ಸಾಯಂಕಾಲದ ವೇಳೆಯಲ್ಲಿ ಕೇಳುವುದರಿಂದ ವಿಷ್ಣುವೂ, ರಾತ್ರಿಯ ವೇಳೆಯಲ್ಲಿ ಪುರಾಣಶ್ರವಣ ಮಾಡುವುದರಿಂದ ರುದ್ರನೂ, ವಾಚಕರ ವಿಷಯದಲ್ಲಿಯೂ ಶ್ರೋತೃಗಳ ವಿಷಯದ ಲ್ಲಿಯೂ ಪ್ರಸನ್ನರಾಗುತ್ತಾರೆ.

೬. ಭೂಮಿಯ ಮೇಲೆ ದರ್ಭೆ, ಅದರ ಮೇಲೆ ಕೃಷ್ಣಾಜಿನ, ಅದರ ಮೇಲೆ ಮಡಿವಸ್ತ್ರ ಈ ಪ್ರಕಾರ ಆಸನವನ್ನು ಸಿದ್ಧಪಡಿಸಿಕೊಂಡು ಶುಭ್ರವಸ್ತ್ರವನ್ನು ಧರಿಸಿ ಕುಳಿತಿರುವ ವಾಚಕನ ಸಮೀಪಕ್ಕೆ ಹೋಗುವ ಕಾಲದಲ್ಲಿ ಮೂರು ಪ್ರದಕ್ಷಿಣೆ ಮಾಡಿ ಹೋಗಬೇಕು. ದೇವರು ಮತ್ತು ಗುರು ಇವರ ವಿಷಯದಲ್ಲಿಯೂ ಹೀಗೆಯೇ ಆಚರಿಸಬೇಕು.

೭. ಅತಿ ಎತ್ತರವೂ ಇಲ್ಲದೆ ಅತಿ ತಗ್ಗೂ ಇಲ್ಲದ, ಸುಖವಾದ ಆಸನವನ್ನು ತಾನು ಏರ್ಪಡಿಸಿಕೊಳ್ಳಬೇಕು. ಅನಂತರ ಓಂಕಾರಪೂರ್ವಕವಾಗಿ ದಿಕ್ಪಾಲಕರಿಗೆ ನಮಿಸಬೇಕು.

**ಪುಸ್ತಕಂ ಧರ್ಮಶಾಸ್ತ್ರಸ್ಯ ಧರ್ಮಾಧಿಷ್ಠಾನಶಾಶ್ವತಂ ।**
**ಆಗಮಾನಾಂ ಶಿವೋ ದೇವಸ್ತಂತ್ರಾದೀನಾಂ ಚ ಶಾರದಾ ॥ ೮ ॥**

**ಜಾಮಾಲಾನಾಂ ಗಣಪತಿರ್ಡಾಮರಾಣಾಂ ಶತಕ್ರತುಃ ।**
**ನಾರಾಯಣೋ ಭಾರತಸ್ಯ ತಥಾ ರಾಮಾಯಣಸ್ಯ ಚ ॥ ೯ ॥**

**ವಾಸುದೇವೋ ಭವೇದ್ದೇವಃ ಸಪ್ತಮೋ ಶೃಣು ಸತ್ತಮ ।**
**ಆದಿತ್ಯೋ ವಾಸುದೇವಶ್ಚ ಮಾಧವೋ ರಾಮಕೇಶವೌ ॥ ೧೦ ॥**

**ವನಮಾಲೀ ಮಹಾದೇವಃ ಸಪ್ತಾನಾಂ ಸಪ್ತಪರ್ವಸು ।**
**ವಿಷ್ಣುಧರ್ಮಾದಿಕಾನಾಂ ಚ ಶಿವೋ ಜ್ಞೇಯಃ ಸನಾತನಃ ॥**
**ಪತಿಶ್ಚಾದಿಪುರಾಣಸ್ಯ ವಿರಿಂಚಿಃ ಪರಿಕೀರ್ತಿತಃ ॥ ೧೧ ॥**

**ಶುದ್ಧೌದನಂ ಯವಕ್ಷೀರಂ ಪಾಯಸಂ ಕೃಶರಂ ತಥಾ ।**
**ಕೃಶರಾನ್ನಂ ಚ ವಾ ದದ್ಯಾತ್ಕ್ರಮಾದ್ಬಲಿಗಣಂ ವಿದುಃ ॥ ೧೨ ॥**

---

೮. ಆ ಬಳಿಕ ಧರ್ಮಕ್ಕೆ ಶಾಶ್ವತವಾಗಿ ಅಧಿಷ್ಠಾನವಾಗಿರುವ ಧರ್ಮಶಾಸ್ತ್ರ ಪುಸ್ತಕಗಳಿಗೂ ನಮಸ್ಕಾರಮಾಡಬೇಕು. ಶಿವನು ಆಗಮಗಳಿಗೆಲ್ಲಾ ಅಭಿಮಾನ ದೇವನಾಗಿರುವನು.

೯. ಶಾರದೆಯು ತಂತ್ರಾಭಿಮಾನದೇವತೆಯು, ಜಾಮಲಗಳಿಗೆ ಗಣಪತಿಯು, ಅಭಿಮಾನದೇವತೆ ಡಾಮರಗಳಿಗೆ ಇಂದ್ರನು ಅಭಿಮಾನಿದೇವತೆಯು, ರಾಮಾಯಣ ಭಾರತಗಳಿಗೆ ನಾರಾಯಣನು ದೇವತೆ.

೧೦-೧೧. ಏಳನೆಯದಾದ ಭಾಗವತಕ್ಕೆ ವಾಸುದೇವನು ಅಭಿಮಾನಿದೇವತೆ, ಆದಿತ್ಯ, ವಾಸುದೇವ, ಮಾಧವ, ರಾಮ, ಕೇಶವ, ವನಮಾಲೀ, ಮಹಾದೇವ ಇವರು ಏಳುಮಂದಿಯೂ ವಿಷ್ಣುಧರ್ಮವೇ ಮೊದಲಾದ ಏಳುಪರ್ವ (ಪುರಾಣ) ಗಳಲ್ಲಿ ಸ್ತುತ್ಯ ರಾಗಿದಾರೆ. ಇವರಲ್ಲಿ ಶಿವನು ಸನಾತನನೆಂದು (ಪುರಾತನನೆಂದು) ತಿಳಿಯಬೇಕು. ಆದಿಯದಾದ ಬ್ರಹ್ಮಪುರಾಣಕ್ಕೆ ಬ್ರಹ್ಮನೇ ಅಧಿಪತಿಯೆಂದು ಹೇಳಿದೆ.

೧೨. ಶುದ್ಧವಾದ ಅನ್ನ, ಯವಕ್ಷೀರ, ಪಾಯಸ, ಚಿಗುಳಿ, ಎಳ್ಳುಹುಡಿಯನ್ನ, ಇವು ಕ್ರಮವಾಗಿ ಬಲಿಸಮರ್ಪಣೆಗೆ ಉಪಯೋಗಿಸುವ ವಸ್ತುಗಳು.

ಶಾಲಿಭಕ್ತಂ ಸಗೋಧೂಮಂ ತಿಲಾಕ್ಷತವಿಮಿಶ್ರಿತಂ ।
ಗವ್ಯಂ ಚ ಸಫಲಂ ಚೈವ ದೇಯಶ್ಚೈಭ್ಯಸ್ತ್ವಯಂ ಬಲಿಃ ॥ ೧೩ ॥

ಪೃಥಕ್ಪೃಥಕ್ಚೈವ ಕಾಂಸ್ಯೇ ವಿನ್ಯಸೇದ್ದಿಕ್ಷು ಮಧ್ಯತಃ ।
ಪಠೇಚ್ಚಾಪಿ ವಿಧಾನೇನ ಸ ಯಾಗಃ ಷಣ್ಮಯಃ ಪರಃ ॥ ೧೪ ॥

ಶೀತೋದಕಂ ಮಧುಕ್ಷೀರಂ ಸಿತೇಕ್ಷ್ವೋಶ್ಚ ರಸೋ ಗುಡಃ ।
ಸಗರ್ಭಶ್ಚ ಪರೋ ಜ್ಞೇಯಃ ಷಣ್ಮಯಶ್ಚಾಪರೋ ಬಲಿಃ ॥ ೧೫ ॥

ಶಾಲಿತಂಡುಲಪ್ರಸ್ಥಂ ತು ತದರ್ಧಂ ವಾ ತದರ್ಧಕಂ ।
ಕ್ಷೀರೇಣಾಪಿ ಚ ಸಂಭಕ್ತಂ ಯವಕ್ಷೀರಮಿದಂ ಸ್ಮೃತಂ ॥ ೧೬ ॥

ಕ್ಷೀರಂ ಭಾಗಾಷ್ಟಕಂ ಗ್ರಾಹ್ಯಂ ಸಪ್ತಭಾಗೇನ ಸಂಸ್ಥಿತಂ ।
ಹೈಮಂತಿಕಂ ಸಿತಾಖ್ಯಂ ಚ ತಾಂಡುಲಂ ಪ್ರಪಚೇಚ್ಚರುಂ ॥ ೧೭ ॥

---

೧೩. ಅಥವಾ ಶಾಲ್ಯೋದನ, ಗೋಧುವೆ, ತಿಲಾಕ್ಷತ, ಹಸುವಿನಹಾಲು, ಫಲಗಳು ಇವನ್ನು ಬೆರಸಿ ದೇವರಿಗೆ ಬಲಿಸಮರ್ಪಣೆ ಮಾಡಬಹುದು. ಹೀಗೆ ಸಮರ್ಪಿಸುವಾಗ ಎಲ್ಲ ದಿಕ್ಕುಗಳಲ್ಲೂ ಮತ್ತು ಮಧ್ಯಭಾಗದಲ್ಲಿಯೂ ಬೇರೆಬೇರೆಯಾದ ಕಂಚಿನಪಾತ್ರೆಗಳಲ್ಲಿ ಬೆರಸಿದ ಬಲಿದ್ರವ್ಯಗಳನ್ನು ಇಡಬೇಕು.

೧೪. ಬಲಿಪ್ರದಾನಕಾಲದಲ್ಲಿ ವಿಧಿಪ್ರಕಾರ ಬಲಿಪ್ರದಾನ ಮಂತ್ರವನ್ನುಚ್ಚರಿಸಿ ಬಲಿಸಮರ್ಪಣಮಾಡಬೇಕು. ಹೀಗೆ ಮಾಡಿದರೆ ಅದು ಶ್ರೇಷ್ಠವಾದ ಷಣ್ಮಯಬಲಿಯೆನಿಸುವುದು.

೧೫. ತಣ್ಣಗಿರುವ ಉದಕ, ಜೇನು, ಹಾಲು, ಸಕ್ಕರೆಯ ಪಾನಕ, ಕಬ್ಬಿನರಸ, ಬೆಲ್ಲ ಇವುಗಳಿಂದ ಯುಕ್ತವಾಗಿದ್ದರೆ ಶ್ರೇಷ್ಠವಾದ ಮತ್ತೊಂದು ಬಗೆಯ ಷಣ್ಮಯಬಲಿಯೆನಿಸುವುದು.

೧೬. ಒಂದುಸೇರು, ಅಥವಾ ಅರ್ಧಸೇರು, ಇಲ್ಲವೇ ಕಾಲುಸೇರು ಭತ್ತದಅಕ್ಕಿ ಅನ್ನಕ್ಕೆ ಹಾಲು ಮಿಶ್ರಮಾಡಿದರೆ ಯವಕ್ಷೀರಬಲಿ ಎನ್ನಿಸುವುದು ಇದು ಒಂದು ವಿಧ.

೧೭. ತಂಡುಲದಿಂದ ಚರುವನ್ನು ಮಾಡುವಾಗ ಎಂಟುಭಾಗ ಹಾಲು, ಹಿಮಗಡ್ಡೆಯಂಥ ಕಲ್ಲುಸಕ್ಕರೆ ಏಳುಪಾಲು, ಇವನ್ನು ಸೇರಿಸಬೇಕು. ಹೀಗೆ ಮಾಡಿದ ಚರುವು ಎಂಭತ್ತುಪಲದ ಅಳತೆಯಾಗುವಷ್ಟಕ್ಕೆ ತಕ್ಕಂತೆ ಪರಿಕರವನ್ನು ಹಾಕಬೇಕು.

**ಅಶೀತಿಪಲಮಾನೇನ ಸಿದ್ಧಮಾಸಾದಯೇತ್ತತಃ ।**
**ಭಾಗಾರ್ಧೇನ ದದೇತ್ಪಶ್ಚಾನ್ಮಾಕ್ಷಿಕಂ ವಾ ಸಿತಾಮಪಿ ॥ ೧೮ ॥**

**ಗುಡಮಿಶ್ರೇಣ ಯೋ ದದ್ಯಾತ್ಸಂಪರ್ಕೋ ಜಾಯತೇ ಕ್ವಚಿತ್ ।**
**ಸಂಪೃಕ್ತಂ ಮಾಕ್ಷಿಕೇಣಾಪಿ ದದ್ಯಾದಿಕ್ಷುರಸಂ ಬುಧಃ ॥**
**ಗೃಹೀತ್ವಾ ವಾಚಕಃ ಶುದ್ಧಃ ಶೃಣುತ ದ್ವಿಜಸತ್ತಮಾಃ ॥ ೧೯ ॥**

**ಶೃಣುತೇ ವಾಪ್ಯಧೀಯಾನೋ ದದ್ಯಾದ್ಧಸ್ತೇನ ಪುಸ್ತಕಂ ।**
**ಸಮುತ್ಥಾಯ ಚ ಗೃಹ್ಣೀಯಾತ್ ಪ್ರಣಮ್ಯ ವಿನಿವೇದಯೇತ್ ॥ ೨೦ ॥**

**ಪೂರ್ವಸ್ಥಃ ಶ್ರಾವಕೋ ವಿಪ್ರಃ ವಿಖ್ಯಾತಸ್ತಸ್ಯ ದಕ್ಷಿಣೇ ।**
**ಪಶ್ಚಿಮಾಶಾಮುಖೇನೈವ ತರ್ಜನ್ಯಾಂಗುಷ್ಠಯಾ ಸಹ ॥ ೨೧ ॥**

---

೧೮. ಅದರ ಅರ್ಧಭಾಗಕ್ಕೆ ಜೇನುತುಪ್ಪವನ್ನಾಗಲಿ, ಸಕ್ಕರೆಯನ್ನಾಗಲಿ, ಮಿಶ್ರಮಾಡಬೇಕು. ಬೆಲ್ಲವನ್ನು ಬೆರಸಿದ ಬಲಿಯನ್ನು ಸಮರ್ಪಿಸಿದರೆ ಅವನಿಗೆ ಸ್ವಲ್ಪ ಸಂಪರ್ಕ ದೋಷವುಂಟಾಗುವುದು.

೧೯. ಅಯ್ಯಾ ಬ್ರಾಹ್ಮಣಶ್ರೇಷ್ಠರೇ! ಕೇಳಿರಿ; ಹೀಗೆ ಸಂಪರ್ಕದೋಷವಾದಾಗ ವಾಚಕನಿಗೆ ಜೇನುತುಪ್ಪ ಮಿಶ್ರವಾದ ಕಬ್ಬಿನಹಾಲನ್ನು ಕೊಡಬೇಕು. ಇದನ್ನು ಪರಿಗ್ರಹಿಸಿದರೆ ವಾಚಕನು ಶುದ್ಧನಾಗುವನು.

೨೦. ಶ್ರೋತೃವು ಪುರಾಣವನ್ನು ತಾನೇ ಓದಿಕೊಳ್ಳಲು ಸಮರ್ಥನಾಗಿದ್ದರೂ ವಾಚಕನ ಮುಖಾಂತರವೇ ಶ್ರವಣಮಾಡಬೇಕು. ವಾಚಕನು ಶ್ರೋತೃಗಳ ಕೈಗೆ ಪುಸ್ತಕವನ್ನು ಕೊಡುವಾಗ ಅವರು ಎದ್ದು ನಿಂತುಕೊಂಡು ತೆಗೆದುಕೊಳ್ಳಬೇಕು. ಬಳಿಕ ಪುಸ್ತಕವನ್ನು ಶಿರಸಾವಹಿಸಿ ಮತ್ತೆ ವಾಚಕನಿಗೆ ಕೊಡಬೇಕು.

೨೧. ಶ್ರೋತೃಗಳಲ್ಲಿ ದ್ವಿಜರು ವಾಚಕನ ಬಲಭಾಗದಲ್ಲಿ ಪೂರ್ವಾಭಿಮುಖವಾಗಿ ಇರಬೇಕು. ವಾಚಕನು ಪಶ್ಚಿಮಾಭಿಮುಖವಾಗಿ ಕುಳಿತು, ಬಲಗೈಯ ಅಂಗುಷ್ಠವನ್ನೂ ತರ್ಜನಿಯನ್ನೂ ಸೇರಿಸಿ ಹಿಡಿದು ಚಿನ್ಮುದ್ರೆಯಿಂದ ಪುರಾಣವನ್ನು ವಾಚನಮಾಡಬೇಕು.

ಪ್ರಸ್ತರೇಣಾಪಿ ಹಸ್ತೇನ ವಿನ್ಯಾಸಃ ಪಂಡಿತೈಃ ಸದಾ ।
ಇತೋಽನ್ಯಥಾ ನ ಕರ್ತವ್ಯಃ ಕೃತ್ವಾ ನ್ಯಾಸಮವಾಪ್ನುಯಾತ್ ॥ ೨೨ ॥

ಅಸಕೃದ್ವಿನ್ಯಸೇದ್ವಿಪ್ರಾಃ ಪಾವಮಾನೀಂ ಜಲೇ ಜಪೇತ್ ।
ವೇದಾಂತಾಗಮಬೋಧಾಂತವಿಧಿರೇಷ ಸ್ಮೃತೋ ಬುಧೈಃ ॥ ೨೩ ॥

ಯಮದಿಕ್ಸಂಮುಖೇ ಶ್ರೋತಾ ವಾಚಕಶ್ಚೋತ್ತರಾಮುಖಃ ।
ಪುರಾಣಭಾರತಾಖ್ಯಾನ ಏಷ ವೈ ಕಥಿತೋ ವಿಧಿಃ ॥ ೨೪ ॥

ವೈಪರೀತ್ಯೇನ ವಿಧಿನಾ ವಿಜ್ಞೇಯೋ ದ್ವಿಜಸತ್ತಮಾಃ ।
ರಾಮಾಯಣೇ ಧರ್ಮಶಾಸ್ತ್ರೇ ಹರಿವಂಶೇ ಚ ಸತ್ತಮಾಃ ॥ ೨೫ ॥

---

೨೨. ವಿದ್ವಾಂಸರಾದ ಶ್ರೋತೃಗಳು ಪ್ರಸ್ತರ ಎಂಬ ಹಸ್ತವಿನ್ಯಾಸ (ಮುದ್ರೆ) ದಿಂದ ಕೂಡಿರಬೇಕು. ಇದನ್ನು ಬಿಟ್ಟು ಬೇರೆ ವಿಧವಾಗಿ ಕುಳಿತಿರಬಾರದು. ಒಂದು ಪಕ್ಷ ಹಾಗೆ ಸಂಭವಿಸಿದರೆ ಪುನಃ ಪ್ರಸ್ತರಹಸ್ತ ವಿನ್ಯಾಸಮಾಡಬೇಕು.

೨೩. ವಾಚನಕಾಲದಲ್ಲಿ ಈ ರೀತಿ ಪ್ರಸ್ತರಹಸ್ತ ವಿನ್ಯಾಸವನ್ನು ದ್ವಿಜರು ಪದೇಪದೇ ಮಾಡಬೇಕು. ವೇದಾಂತ ಶಾಸ್ತ್ರಾಭ್ಯಾಸದ ಸಮಾಪ್ತಿಕಾಲದಲ್ಲಿ ಜಲಮಧ್ಯದಲ್ಲಿ ನಿಂತುಕೊಂಡು ಪಾವಮಾನೀ ಋಕ್ಕುಗಳನ್ನು ಜಪಿಸಬೇಕು ಇದು ಆ ಶಾಸ್ತ್ರಕ್ಕೆ ಅರ್ಹವಾದ ವಿಧಿಯೆಂದು ವಿದ್ವಾಂಸರು ಹೇಳುತ್ತಾರೆ.

೨೪. ಭಾರತ ಪುರಾಣವಾಚನ, ಶ್ರವಣಾದಿಗಳು ನಡೆಯುವಾಗ ವಾಚಕನು ಉತ್ತರಾಭಿಮುಖವಾಗಿಯೂ; ಶ್ರೋತೃವು ದಕ್ಷಿಣ ಮುಖವಾಗಿಯೂ; ಕುಳಿತುಕೊಳ್ಳಬೇಕೆಂದು ವಿಧಿಯಲ್ಲಿ ಹೇಳಿದೆ.

೨೫. ರಾಮಾಯಣ, ಧರ್ಮಶಾಸ್ತ್ರ, ಹರಿವಂಶ ಈ ಪುರಾಣಗಳ ವಾಚನಕಾಲದಲ್ಲಿ ಹಿಂದೆ ಹೇಳಿದ್ದಕ್ಕೆ ವ್ಯತಿರಿಕ್ತವಾಗಿ ವಾಚಕನು ದಕ್ಷಿಣಮುಖನಾಗಿಯೂ, ಶ್ರೋತೃವು ಉತ್ತರಮುಖವಾಗಿಯೂ ಕುಳಿತುಕೊಳ್ಳಬೇಕು.

**ಇತೋऽನ್ಯಥಾ ಯಾತುಧಾನಾಃ ಪ್ರಲುಂಪಂತಿ ಫಲಂ ಯತಃ ।**
**ತಸ್ಮಾದ್ವಿಧಿವಿಧಾನೇನ ಶೃಣುಯಾದಥ ವಾ ಪಠೇತ್　　　　॥ ೨೬ ॥**

**ಶ್ರುತ್ವಾ ವ್ರತೀ ಪುಣ್ಯವಿದ್ಯಾಂ ಯೋऽಶ್ನೀಯಾನ್ಮಾಂಸಮೇವ ತು ।**
**ತೇ ಯಾಂತಿ ಗಾರ್ಧಭೀಂ ಯೋನಿಂ ಯದಿ ಮೈಥುನಿನಃ ಕ್ವಚಿತ್ ॥ ೨೭ ॥**

**ಯದಿ ದೇವಾಲಯೇ ತೀರ್ಥೇ ವಾಚಯೇಚ್ಛೃಣುಯಾದಥ ।**
**ಯಸ್ಯ ದೇವಗೃಹೇ ತಸ್ಯ ತಸ್ಯ ತೀರ್ಥಸ್ಯ ವರ್ಣನಂ　　　　॥ ೨೮ ॥**

**ಮಾಹಾತ್ಮ್ಯಶ್ರವಣಾದೇವ ಗೋದಾನಸ್ಯ ಫಲಂ ಲಭೇತ್ ।**
**ಮಹಾಗುರೋಶ್ಚ ಮಾಹಾತ್ಮ್ಯಂ ಪಿತ್ರೋರಗ್ರೇ ನ ಚ ಸ್ಮರೇತ್ ॥**
**ಪಿತುರ್ಮಾಹಾತ್ಮ್ಯಂ ಯತ್ಪುತ್ರೈರ್ವಾಚ್ಯಂ ಸಂಸದಿ ಪರ್ವಣಿ　　॥ ೨೯ ॥**

---

೨೬. ಹೀಗೆ ಮಾಡದೆ ದಿಕ್ಕು ವ್ಯತ್ಯಾಸಮಾಡಿ ಕುಳಿತರೆ, ರಾಕ್ಷಸರು ಆ ವಾಚನ ಫಲ, ಶ್ರವಣಫಲ ಇವುಗಳನ್ನು ಅಪಹರಿಸುತ್ತಾರೆ ಆದುದರಿಂದ ವಿಧಾನೋಕ್ತವಾದ ವಿಧಿಪ್ರಕಾರವೇ ಕುಳಿತು ಶ್ರವಣಮಾಡಬೇಕು ಮತ್ತು ವಾಚನಮಾಡಬೇಕು.

೨೭. ವ್ರತನಿಯಮವುಳ್ಳವನಾಗಿ ಪುಣ್ಯಕರವಾದ ಪುರಾಣಶ್ರವಣಮಾಡಿದ ಮೇಲೆ ಮಾಂಸಭಕ್ಷಣೆ, ಸ್ತ್ರೀಸಂಗ ಇಂಥ ಕೆಲಸಗಳನ್ನು ಮಾಡಿದರೆ ಮುಂದೆ ಕತ್ತೆಯಾಗಿ ಹುಟ್ಟುತ್ತಾನೆ.

೨೮. ದೇವಾಲಯದಲ್ಲಿ ಸರ್ವತೀರ್ಥಗಳೂ ಸನ್ನಿಹಿತಗಳಾಗಿರುವುದರಿಂದ ಅಲ್ಲಿ ತೀರ್ಥಕ್ಷೇತ್ರಗಳ ವಾಚನ ಶ್ರವಣಾದಿಗಳನ್ನು ಮಾಡಬಹುದು. ತೀರ್ಥಮಾಹಾತ್ಮ್ಯೆಯ ವಾಚನಶ್ರವಣಾದಿಗಳನ್ನು ಮಾಡಬೇಕಾದರೆ ಆಯಾ ತೀರ್ಥಗಳ ಸನ್ನಿಧಿಯಲ್ಲೇ ಮಾಡುವುದು ವಿಹಿತವಾದ ಕ್ರಮ.

೨೯. ಈ ರೀತಿಯಾಗಿ ಶ್ರವಣ ಮಾಡುವುದರಿಂದ ಗೋದಾನಮಾಡಿದಷ್ಟು ಫಲಹೊಂದುತ್ತಾನೆ. ತಂದೆತಾಯಿಗಳ ಎದುರಿಗೆ ಮಹಾಗುರುವಿನ ಮಹಾತ್ಮ್ಯವನ್ನು ಸ್ಮರಣಮಾಡಬಾರದು. ಪುತ್ರರು ಪರ್ವಕಾಲದಲ್ಲಿ ಸಭೆಯಲ್ಲಿ ತಂದೆಯ ಮಾಹಾತ್ಮ್ಯವನ್ನು ಕೀರ್ತನ ಮಾಡಬೇಕು.

ವಾಸುದೇವಾಗ್ರತಶ್ಚಾಪಿ ರುದ್ರಮಾಹಾತ್ಮ್ಯವರ್ಣನಂ ।
ರುದ್ರಾಗ್ರೇ ವಾಸುದೇವಸ್ಯ ಕೀರ್ತನಂ ಪುಣ್ಯವರ್ಧನಂ ॥ ೩೦ ॥

ದುರ್ಗಾಗ್ರೇ ಶಿವಸೂರ್ಯಸ್ಯ ವೈಷ್ಣವಾಖ್ಯಾನಮೇವ ಚ ।
ಯಃ ಕರೋತಿ ವಿಮೂಢಾತ್ಮಾ ಗಾರ್ಧಭೀಂ ಯೋನಿಮಾವಿಶೇತ್ ॥ ೩೧ ॥

ಗುರೋರನುಜ್ಞಯಾ ಪಿತ್ರೋಃ ಪ್ರಕುರ್ಯಾದಭಿವಾದನಂ ।
ಅನುಜ್ಞಯಾ ತಥಾ ಪಿತ್ರೋರ್ಗುರೋಃ ಕುರ್ಯಾತ್ಪ್ರದಕ್ಷಿಣಂ ॥ ೩೨ ॥

ನ ವಿಷ್ಣುರ್ನ ಚ ಬ್ರಹ್ಮಾ ಚ ನ ಚ ರುದ್ರಃ ಶಚೀಪತಿಃ ।
ಸರ್ವವೇದೇನ ತತ್ತುಲ್ಯಂ ಸರ್ವಧರ್ಮಪರಾಯಣಂ ॥ ೩೩ ॥

ಸರ್ವಜ್ಞಾನಮಯಂ ಚೈವ ಸರ್ವಜ್ಞೇನ ಚ ತತ್ಸಮಂ ।
ತಸ್ಮಾದ್ದ್ವಿಜನ್ಮನ್ಪಿತ್ರೋರ್ಹಿ ಸೇವನಾದ್ಬ್ರಹ್ಮಶಾಶ್ವತಂ ॥ ೩೪ ॥

---

೩೦. ವಿಷ್ಣುವಿನಸಮ್ಮುಖದಲ್ಲಿ ಶಿವನಮಾಹಾತ್ಮ್ಯವನ್ನು ವರ್ಣಿಸುವುದೂ, ಶಿವನಸಮ್ಮುಖದಲ್ಲಿ ವಿಷ್ಣುಮಾಹಾತ್ಮ್ಯವನ್ನು ಸ್ತುತಿಸುವುದೂ ಸಹ, ಹೆಚ್ಚು ಪುಣ್ಯಪ್ರದವಾದುದು.

೩೧. ದುರ್ಗಾದೇವಿಯ ಸಮ್ಮುಖದಲ್ಲಿ ಶಿವ, ಸೂರ್ಯ, ವಿಷ್ಣು, ಇವರ ಚರಿತ್ರೆಯನ್ನು ವರ್ಣಿಸುವುದು ಅಕಾರ್ಯವೆನಿಸುವುದು. ಈ ಪ್ರಕಾರ ಮಾಡುವ ಮೂಢನು ಕತ್ತೆಯಾಗಿ ಹುಟ್ಟುತ್ತಾನೆ.

೩೨. ಗುರು, ಮಾತಾಪಿತೃಗಳು, ಇವರು ಏಕತ್ರ ಇದ್ದಾಗ ಗುರುವಿನ ಅಪ್ಪಣೆಯನ್ನು ಪಡೆದು, ತಂದೆತಾಯಿಗಳಿಗೆ ಅಭಿವಾದನಮಾಡಬೇಕು. ತಂದೆತಾಯಿಗಳ ಅಪ್ಪಣೆಪಡೆದು ಗುರುವಿಗೆ ಪ್ರದಕ್ಷಿಣನಮಸ್ಕಾರಮಾಡಬೇಕು.

೩೩. ವಿಷ್ಣು, ಬ್ರಹ್ಮ, ರುದ್ರ, ಇವರು ಯಾರೂ ತಂದೆತಾಯಿಗಳಿಗಿಂತ ಹೆಚ್ಚಲ್ಲ, ಸರ್ವಧರ್ಮಗಳಲ್ಲಿಯೂ ಆಸಕ್ತರಾದ ಅವರು ಸರ್ವದೇವತೆಗಳಿಗೂ ಸಮಾನರು. ಅವರು ಸರ್ವಜ್ಞಾನಪರಿಪೂರ್ಣರಾಗಿರುವುದರಿಂದ ಸರ್ವಜ್ಞನಾದ ಪರಮೇಶ್ವರನ ಸಮಾನರು.

೩೪. ಅಯ್ಯಾ ಬ್ರಾಹ್ಮಣರೇ! ಕೇಳಿ; ಈಕಾರಣದಿಂದ ತಂದೆತಾಯಿಗಳ ಸೇವೆಮಾಡಿದವನಿಗೆ ಶಾಶ್ವತಬ್ರಹ್ಮಲೋಕಪ್ರಾಪ್ತಿಯಾಗುತ್ತದೆ.

**ಗುರುಭ್ಯೋ ವಂದನಂ ವ್ಯರ್ಥಂ ಪಿತರಂ ಯೋ ನ ತರ್ಪಯೇತ್ ।**
**ಜೀವನ್ನತರ್ಪಯೇನ್ಮುಖ್ಯಂ ಗಂಗಾಯಾಂ ಮೃತೇಽಪಿ ಚ ॥**
**ಉಭಯೋಸ್ತರ್ಪಣಂ ನಾಸ್ತಿ ಜೀವನ್ನಪಿ ನ ಜೀವತಿ ॥ ೩೫ ॥**

**ಪುರಾಣಶ್ರವಣಂ ಪುಣ್ಯಂ ಶೂನ್ಯಂ ಭಾಗವತಂ ಯದಿ ।**
**ವ್ಯರ್ಥಂ ಭಾಗವತಂ ವಿಪ್ರಾ ನಾರಸಿಂಹವಿಹೀನಕಂ ॥ ೩೬ ॥**

**ಆದಿಪರ್ವಣಿ ಹೀನೇ ತು ಭಾರತಾಖ್ಯಂ ನ ಧಾರಯೇತ್ ।**
**ವಿನಾಶ್ವಮೇಧಿಕಂ ವಿಪ್ರಾ ವಿನಾ ಯಜ್ಞಾನನಂ ವಿನಾ ॥ ೩೭ ॥**

**ದಾನಕರ್ಮವಿಹೀನಂ ಚ ಮೋಕ್ಷಧರ್ಮಂ ನ ಧಾರಯೇತ್ ।**
**ಭಾರತಂ ಚ ದಿವಾರೋಹಧಾರಣಾದೌ ವರಂ ವ್ರಜೇತ್ ॥ ೩೮ ॥**

---

೩೫. ತಂದೆತಾಯಿಗಳನ್ನು ಸಂತೋಷಪಡಿಸದವನು ದೇವತಾವಂದನ, ಗುರುವಂದನ, ಇವುಗಳೇನೇನನ್ನು ಮಾಡಿದರೂ ವ್ಯರ್ಥ. ತಂದೆತಾಯಿಗಳು ಜೀವಂತರಾಗಿರುವಾಗ ಅವರನ್ನು ತೃಪ್ತಿಪಡಿಸದೆಇರುವವನು ಅವರ ಮರಣಾನಂತರ ಗಂಗಾಜಲದಿಂದಲೇ ಅವರಿಗೆ ತರ್ಪಣಮಾಡಿದರೂ ಫಲವಿಲ್ಲ.

೩೬. ಪುರಾಣಶ್ರವಣವೇ ಸಾಮಾನ್ಯತಃ ಪುಣ್ಯಕರವು. ಆದರೆ ಭಾಗವತವಾಚನವನ್ನು ಶ್ರವಣಮಾಡದೇ ಬಿಟ್ಟರೆ ವ್ಯರ್ಥ. ಭಾಗವತದಲ್ಲೂ ನಾರಸಿಂಹಾವತಾರ ಪ್ರಕರಣದ ವಾಚನದ ಶ್ರವಣವು ಶೂನ್ಯವಾಗಿದ್ದರೆ ವ್ಯರ್ಥವು.

೩೭. ಎಲೈ ಬ್ರಾಹ್ಮಣರೇ! ಕೇಳಿ; ಆದಿಪರ್ವವನ್ನು ವಾಚನಮಾಡದೆ ಹೋದರೆ, ಭಾರತಕಥೆಯನ್ನು ಧಾರಣೆಮಾಡಲು ಆಗುವುದಿಲ್ಲ. ಅಶ್ವಮೇಧಿಕಪರ್ವವಾಚನವಿಲ್ಲದಿದ್ದರೂ ರಾಜಸೂಯಯಜ್ಞದ ಆದಿಭಾಗವಾಚನವಿಲ್ಲದಿದ್ದರೂ ಭಾರತವು ಧಾರ್ಯವಾಗುವುದಿಲ್ಲ.

೩೮. ದಾನಕರ್ಮಪ್ರಸಂಗವಿಲ್ಲದೆ ಮೋಕ್ಷಧರ್ಮವನ್ನು ಧರಿಸಲು ಸಾಧ್ಯವಾಗುವುದಿಲ್ಲ. ಭಾರತವನ್ನು ಅದರಲ್ಲೂ ಸ್ವರ್ಗಾರೋಹಣಪರ್ವವನ್ನು ಧಾರಣಮಾಡಿಕೊಳ್ಳಲು, ಶ್ರೇಷ್ಠವಾದ ಪರಬ್ರಹ್ಮತತ್ವವನ್ನು ಓದಿರಲೇಬೇಕು.

ವಾಯುಪುರಾಣಮಶ್ರುತ್ವಾ ಶಾಸ್ತ್ರಂ ಚ ಯೌಗಿಕಂ ವಿನಾ ।
ವಾಯುಹೀನಂ ದೇಹಿಕುಲಂ ವೃಥಾ ತಸ್ಯ ನ ಧಾರಕಂ ॥ ೩೯ ॥

ತಥಾ ವಾಯುಪುರಾಣಂ ಯದ್ವಿಹೀನಂ ಶ್ರವ್ಯಮನ್ಯಕಂ ।
ಯಥಾ ಸುಂದರಕಾಂಡೇನ ಅರಣ್ಯಂ ಚ ನ ಧಾರಯೇತ್ ॥ ೪೦ ॥

ಲಂಕಾಂ ವಿನಾ ಚಾದಿಕಾಂಡಂ ತಲ್ಲಿಖಿತ್ವಾ ನ ಧಾರಯೇತ್ ।
ಪಾರಾಶರಂ ವಿನಾ ವ್ಯಾಸಂ ಯಾಜ್ಞವಲ್ಕ್ಯಂ ವಿನಾ ಮಖಂ ॥ ೪೧ ॥

ದಕ್ಷಂ ವಿನಾ ನ ಶಂಖಂ ಚ ಶಂಖಹೀನಂ ಬೃಹಸ್ಪತಿಂ ।
ವಹ್ನೀಯಂ ಶ್ರವಣಾದ್ಯೇನ ನ ಚ ಮುಕ್ತಿಮುಥಾಪಯೇತ್ ॥ ೪೨ ॥

---

೩೯. ಯೋಗಶಾಸ್ತ್ರವನ್ನು ತಿಳಿದಲ್ಲದೆ ವಾಯುಪುರಾಣವನ್ನು ಕೇಳಿದರೆ ಪ್ರಾಣ ವಾಯುವಿಲ್ಲದ ಪ್ರಾಣಿಗಳಂತೆ ವ್ಯರ್ಥವೆನಿಸುವುದು. ಅಂಥವರಿಗೆ ಧಾರಕಸಾಮರ್ಥ್ಯ ವಿಲ್ಲ.

೪೦. ವಾಯುಪುರಾಣವನ್ನು ಕೇಳದೆ ಇತರ ಪುರಾಣಗಳನ್ನು ಕೇಳಿದರೂ ವ್ಯರ್ಥ. ರಾಮಾಯಣದಲ್ಲಿ ಸುಂದರಕಾಂಡವನ್ನು ಶ್ರವಣಮಾಡದೆ ಅರಣ್ಯಕಾಂಡ ವನ್ನು ಪಠನಮಾಡಲಾಗದು.

೪೧. ಯುದ್ಧಕಾಂಡವನ್ನು ಓದದೆ ಆದಿಕಾಂಡವನ್ನು ಬರೆಯಲೂಬಾರದು. ಪಠಿಸಲೂಬಾರದು. ಪರಾಶರಸ್ಮೃತಿಯನ್ನೂ ವ್ಯಾಸಸ್ಮೃತಿಯನ್ನೂ ಯಾಜ್ಞವಲ್ಕ್ಯ ಸ್ಮೃತಿಯನ್ನೂ ಓದದೆ ಯಜ್ಞವೈಭವಖಂಡವನ್ನು ಓದಬಾರದು.

೪೨. ದಕ್ಷಸ್ಮೃತಿಯನ್ನು ಓದದೆ ಶಂಖಸ್ಮೃತಿಯನ್ನು ಧರಿಸಬಾರದು. ಶಂಖಸ್ಮೃತಿಯ ಪರಿಚಯವಿಲ್ಲದೆ ಬೃಹಸ್ಪತಿಸ್ಮೃತಿಯನ್ನು ಓದಬಾರದು. ಅಗ್ನಿ ಪುರಾಣವನ್ನು ಓದದೆ ಮುಕ್ತಿಸಾಧನಕ್ಕೆ ಪ್ರಯತ್ನಿಸಬಾರದು.

**ಸಂಸ್ಥಾಪನಾದೇವ ವಿನಾ ನ ಚ ಕಿಮಪಿ ರಾಕ್ಷಸೈಃ ।**
**ನ ದದೇತ್ಪ್ರಾರ್ಥಕಾದಿಭ್ಯಃ ನ ವಿಕ್ರೀಯೇತ್ಕಥಂಚನ ॥ ೪೩ ॥**

**ನ ಹರೇತ್ಪುಸ್ತಕಂ ಚಾಪಿ ನಹರೇದಕ್ಷರಾಣಿ ಷಟ್ ।**
**ಬ್ರಹ್ಮಾಕ್ಷರಸ್ಯ ಹರಣಾದ್ರೌರವಾನ್ನ ನಿವರ್ತತೇ ॥ ೪೪ ॥**

**ಆದ್ಯಾಕ್ಷರಸ್ಯ ಹರಣಾತ್ತಾಮ್ರಕುಷ್ಠೀ ಭವೇದಿಹ ।**
**ಮುಖವೃತ್ತಸ್ಯ ಹರಣಾದ್ಯಾವದಾಚಂದ್ರತಾರಕಂ ॥ ೪೫ ॥**

**ಕುವಲೇ ಅಸಿಪತ್ರೇ ಚ ಪತಿತೀಹ ನ ಸಂಶಯಃ ।**
**ಸ್ವಾಕ್ಷರಸ್ಯ ಹರಣೇ ಸ್ವಮಾತೃಹರಣೇಽಪಿ ಯತ್ ॥ ೪೬ ॥**

---

೪೩. ಅನುಕೂಲವಾದ ಕ್ರಮಾನುಸರಣೆಮಾಡದೆ, ಕೇವಲ ರಾಕ್ಷಸೀ ಕ್ರಮಗಳಿಂದ ಏನೊಂದೂ ಪ್ರಯೋಜನವಾಗಲಾರದು. ಯಾವನೋ ಒಬ್ಬನು "ಉಪದೇಶ ಕೊಡಿ" ಎಂದು ಪ್ರಾರ್ಥನೆ ಮಾಡಿಕೊಂಡರೂ ಆ ವ್ಯಕ್ತಿಯು ಸತ್ಪಾತ್ರನಲ್ಲವೆಂದು ತೋರಿದರೆ ಪ್ರಾರ್ಥನೆಯನ್ನು ನಿರಾಕರಿಸಬಾರದೆಂಬ ಕಾರಣಕ್ಕಾಗಿ ಉಪದೇಶಕೊಡಬಾರದು. ಏನೇ ಆದರೂ ಆ ಉಪದೇಶವನ್ನು ವಿಕ್ರಯವಾಗಿ ಮಾಡಬಾರದು.

೪೪. ಪುರಾಣಪುಸ್ತಕವನ್ನು ಹರಣ (ಕಳವು) ಮಾಡಬಾರದು. ಪುರಾಣ ಪಠನಮಾಡಿದೇನೆಂಬ ಕಾರಣದಿಂದ ಶಿವಷಡಕ್ಷರ ಮಂತ್ರಜಪವನ್ನು ತಪ್ಪಿಸಬಾರದು. ಬ್ರಹ್ಮಾಕ್ಷರವನ್ನು (ಪ್ರಣವವನ್ನು) ಪರಿತ್ಯಾಗಮಾಡುವವನು ರೌರವನರಕದಿಂದ ಎಂದೂ ಹಿಂದಿರುಗುವುದೇ ಇಲ್ಲ.

೪೫. ಆ ಮಂತ್ರದ ಆದ್ಯಕ್ಷರವನ್ನು ಲೋಪಮಾಡಿದರೆ ಕೆಂಪುಕುಷ್ಠರೋಗ ಪೀಡಿತನಾಗುವನು. ಮುಖವೃತ್ತವನ್ನು ಲೋಪಮಾಡುವುದರಿಂದಲೂ,

೪೬. ಸ್ವಾಕ್ಷರವಾದ ಪ್ರಣವವನ್ನು ಬಿಟ್ಟು ಜಪಮಾಡುವುದರಿಂದಲೂ, ತನ್ನ ಮಾತೃವನ್ನು ರಕ್ಷಣೆಮಾಡದೆ ಪರಿತ್ಯಾಗ ಮಾಡುವುದರಿಂದಲೂ, ಚಂದ್ರ ನಕ್ಷತ್ರಗಳಿರುವವರೆಗೆ (ಆಚಂದ್ರಾರ್ಕವಾಗಿ) ಕುವಲ, ಅಸಿಪತ್ರ ಎಂಬ ನರಕಗಳ ವಾಸವನ್ನು ಅನುಭವಿಸುತ್ತಾನೆ.

ತಸ್ಮಾತ್ಪುಸ್ತಕಮಾತ್ರಂ ಯೋ ಹರೇನ್ನರಕಮಾಪ್ನುಯಾತ್ ।
ಯದ್ಭಾರತಂ ಯತ್ಪುರಾಣಂ ಸ್ತೋತ್ರರೂಪಾಣಿ ತಾನಿ ಚ ॥ ೪೭ ॥

ತಾನಿ ವೇದಾಗಮಾದೀನಿ ಪುಸ್ತಕೇಷ್ವಪಿ ವಾಚಯೇತ್ ।
ವೇದಾನಾಂ ಪುಸ್ತಕಂ ಯಚ್ಚ ಲಿಖಿತ್ವಾ ತನ್ನ ವಾಚಯೇತ್ ॥ ೪೮ ॥

ತಥಾ ತಂತ್ರೋದಿತಾನ್ಮಂತ್ರಾನ್ ಲಿಖಿತ್ವಾ ತನ್ನ ವಾಚಯೇತ್ ।
ಪುಸ್ತಕಂ ನಿಗಮಾನಾಂ ಚ ಮಂತ್ರವ್ಯಾಖ್ಯಾನಸಂಗ್ರಹಂ ॥ ೪೯ ॥

ಸ್ಫುಟಂ ಕೃತ್ವಾ ಪುರಃ ಸ್ಥಾಪ್ಯ ಯಾವತ್ಕಾಲಂ ಪ್ರವರ್ತತೇ ।
ತಾವತ್ಸ ನರಕೇ ಘೋರೇ ಪ್ರೇತತ್ವಂ ಜನ್ಮಜನ್ಮನಿ ॥ ೫೦ ॥

ನ ವಾಚಯೇಚ್ಚ ವ್ಯಾಖ್ಯಾತಾ ವಾಚಕೋಽಪಿ ಪ್ರವಾಚಯೇತ್ ।
ಪೌಷ್ಕರೇ ಚ ಶ್ಲೋಕಪಾದಮಾಶ್ವಮೇಧಂ ಪದೇಪದೇ ॥ ೫೧ ॥

---

೪೭. ಭಾರತಗ್ರಂಥ, ಇತರ ಪುರಾಣಗಳು, ಇವೆಲ್ಲವೂ ಸ್ತೋತ್ರಗ್ರಂಥಗಳಾಗಿವೆ ಇಂಥ ಪುರಾಣಪುಸ್ತಕವನ್ನು ಹರಣಮಾಡಿದ ಮಾತ್ರದಿಂದಲೇ ಅವನು ನರಕವನ್ನು ಹೊಂದುತ್ತಾನೆ.

೪೮, ವೇದ, ಶಾಸ್ತ್ರ ಮುಂತಾದುವುಗಳನ್ನು ಪುಸ್ತಕಗಳಿಂದಲಾದರೂ ಓದ ಬೇಕು. ವೇದಮಂತ್ರಗಳನ್ನು ಬರೆದಿಟ್ಟುಕೊಂಡರೂ ಕೆಲವರು ಓದದೇ ಇರಬಹುದು

೪೯. ವೇದಪುಸ್ತಕಗಳನ್ನೂ ಮಂತ್ರಗಳ ಸಂಕ್ಷೇಪಾರ್ಥವಿವರಣವನ್ನೂ ಸ್ಫುಟ ವಾಗಿ ಬರೆದು ಮುಂದುಗಡೆ ಇಟ್ಟುಕೊಂಡಿದ್ದರೂ ಕೆಲವರು ಅವುಗಳನ್ನು ಅನುಷ್ಠಾನ ಮಾಡದೆ ಇರಬಹುದು.

೫೦. ಹೀಗೆ ಅವರು ಎಷ್ಟುಕಾಲವನ್ನು ವ್ಯರ್ಥವಾಗಿ ಕಳೆಯುವರೋ, ಅಷ್ಟು ಕಾಲದವರೆಗೆ, ಭಯಂಕರವಾದ ನರಕದಲ್ಲಿ ವಾಸಮಾಡಬೇಕಾಗುತ್ತದೆ. ಅಲ್ಲದೆ ಅವರು ಪ್ರತಿಜನ್ಮದಲ್ಲಿಯೂ ಪ್ರೇತತ್ವವನ್ನು ಹೊಂದುತ್ತಾರೆ.

೫೧. ಶ್ಲೋಕಾರ್ಥವನ್ನು ತಾನೇ ವಿವರಿಸುತ್ತಾ ಶ್ಲೋಕವಾಚನ ಮಾಡಬಾರದು. ಎಂದರೆ ಶ್ಲೋಕಪಠನ ಮಾಡುವವನೊಬ್ಬ, ಅರ್ಥ ಹೇಳುವವನು ಬೇರೊಬ್ಬ, ಹೀಗೆ ಇರಬೇಕು. ವಾಚಕನಾದವನು ಶ್ಲೋಕಗಳನ್ನು ಗಟ್ಟಿಯಾಗಿಯೂ, ಸ್ಪಷ್ಟ

ವೇದಾರ್ಥಂ ವಾಚಯೇದ್ಯಸ್ತು ದ್ವಿಪರೀತೋsಪವಾಚಕಃ ।
ತಾವುಭೌ ಪತಿತೌ ಜ್ಞೇಯೌ ಪಾವಮಾನೀಶತಂ ಜಪೇತ್ ॥ ೫೨ ॥

ಆದಿಮಧ್ಯಾವಸಾನೇ ಚ ಮಂತ್ರೇ ಚ ಪ್ರಣವಂ ದಿಶೇತ್ ।
ಬಲಿಭಿರ್ಗಂಧಪುಷ್ಪೈಶ್ಚ ಪುಸ್ತಕಂ ದೇವನಿರ್ಮಿತಂ ॥ ೫೩ ॥

ತ್ರಿದೇವಂ ಪುಸ್ತಕಂ ವಿದ್ಯಾತ್ಸೂತ್ರಂ ವಾಸುಕಿರುಚ್ಯತೇ ।
ಅಮಾನಕರಣೇ ದೋಷಃ ತಸ್ಮಾತ್ತಚ್ಚ ನ ಹಾಪಯೇತ್ ॥ ೫೪ ॥

---

ವಾಗಿಯೂ, ಇಂಪಾಗಿಯೂ ಇರುವಂತೆ ವಾಚನಮಾಡಬೇಕು ಭಾರತದ ಪೌಷ್ಕರ ಪರ್ವದಲ್ಲಿ ಶ್ಲೋಕದ ಒಂದು ಪಾದವನ್ನು ಓದಿದರೂ, ಅನೇಕ ಅಶ್ವಮೇಧಯಾಗ ಮಾಡಿದ ಫಲವು ಲಭಿಸುವುದು.

೫೨. ವಿಪರೀತ ವೃತ್ತಿಯಲ್ಲಿರುವ ಅಪವಾಚಕನು ಎಂದರೆ ಸರಿಯಾದ ನಡವಳಿಕೆ ಇಲ್ಲದವನು, ಮತ್ತು ವಾಚಕನ ಸಂಪ್ರದಾಯವಿರುದ್ಧವಾಗಿ ವೇದಾರ್ಥವನ್ನು ವಾಚನಮಾಡುವವನು, ಇವರಿಬ್ಬರೂ ಪತಿತರೆಂದು ತಿಳಿಯಬೇಕು. ಹೀಗೆ ಪತಿತರಾದವರು ಪವಮಾನಸೂಕ್ತವನ್ನು ನೂರು ಆವರ್ತಿ ಜಪಮಾಡಬೇಕು.

೫೩. ಮಂತ್ರದ ಆದಿಯಲ್ಲಿಯೂ, ಮಧ್ಯದಲ್ಲಿಯೂ, ಅಂತ್ಯದಲ್ಲಿಯೂ ಪ್ರಣವವನ್ನು ಸೇರಿಸಬೇಕು ಸಕಲ ದೇವತಾಮಹಿಮಾವಿಚಾರಯುಕ್ತವಾಗಿ ನಿರ್ಮಿತವಾದ ಪುರಾಣಪುಸ್ತಕವನ್ನು ಗಂಧಪುಷ್ಪಾದಿಗಳು, (ಬಲಿ) ನಿವೇದನಾದಿಗಳು, ಇವುಗಳಿಂದ ಪೂಜಿಸಬೇಕು.

೫೪. ಪುರಾಣಪುಸ್ತಕವನ್ನು ತ್ರಿಮೂರ್ತಿಗಳ ಸ್ವರೂಪವೆಂದೂ, ಅದಕ್ಕೆ ಸುತ್ತುವ ದಾರವನ್ನು ವಾಸುಕಿಸ್ವರೂಪವೆಂದೂ ಹೇಳುತ್ತಾರೆ. ಆ ದಾರವು ಇಷ್ಟು ಉದ್ದ ಇರಬೇಕೆಂಬುದನ್ನು ಅಳತೆಮಾಡಿ ಇಟ್ಟುಕೊಳ್ಳಬೇಕು. ಹಾಗೆ ಮಾಡದೆ ಇದ್ದರೆ ಅದು ದೋಷಕರವೆನಿಸುವುದು. ಆದುದರಿಂದ ಅಳತೆ ಮಾಡಿಟ್ಟುಕೊಳ್ಳುವ ಸಂಪ್ರದಾಯವನ್ನು ಬಿಡಬಾರದು.

ಪತ್ರಾಣಿ ಭಗವಾನ್ ಬ್ರಹ್ಮಾ ಊರ್ಧ್ವದೀರ್ಘಾಣಿ ಯಾನಿ ಚ ।
ಜನಾರ್ದನಶ್ಚಾಕ್ಷರಾಣಿ ಮಾತ್ರಾ ಪ್ರಕೃತಿರವ್ಯಯಾ ॥ ೫೫ ॥

ಲಿಪೀಭಂಗೀ ಮಹೇಶಃ ಸ್ಯಾತ್ತಸ್ಯಾ ಮಾರೌ ಸರಸ್ವತೀ ।
ಏಕರೇಖಾಚ್ಚ ಏಕಾತ್ಮಾ ಪಾದಾಚ್ಚ ಪಾದವಿಚ್ಯುತಿಃ ॥ ೫೬ ॥

ಚತುಷ್ಪಾದಾಂತರೇ ಯುಗ್ಮಂ ಮಧ್ಯಮೋಽಂತೇ ಯುಗಯುಗಂ ।
ವಿಪತ್ಕರಂ ಯುಗ್ಮಪಂಕ್ತೌ ಅಯುಗ್ಮೇ ಸ್ವರ್ಗಸಾಧನಂ ॥ ೫೭ ॥

ಭಾರತೇ ಚೇತಿಹಾಸೇ ಚ ಪುರಾಣೇ ದ್ವಿಜಸತ್ತಮಾಃ ।
ಅಯುಗ್ಮಪಂಕ್ತೌ ಸ್ವರ್ಗಃ ಸ್ಯಾದ್ಯುಗ್ಮೇ ನರಕಮಾವಿಶೇತ್ ॥ ೫೮ ॥

---

೫೫. ಪುಸ್ತಕದ ತಾಳಪತ್ರಗಳ ಊರ್ಧ್ವಪ್ರಮಾಣ (ಎಂದರೆ ಅಗಲ) ದೀರ್ಘ ಪ್ರಮಾಣ (ಉದ್ದ) ಇವುಗಳನ್ನು ಭಗವಂತನಾದ ಬ್ರಹ್ಮನೆಂದೂ, ಅಕ್ಷರಗಳನ್ನು ಮಹಾವಿಷ್ಣುವೆಂದೂ,ಹ್ರಸ್ವದೀರ್ಘಾದಿ ಮಾತ್ರೆಗಳನ್ನು ನಾಶರಹಿತವಾದ ಮೂಲಪ್ರಕೃತಿಯೆಂದೂ ತಿಳಿಯಬೇಕು.

೫೬. ಅಕ್ಷರಗಳ ನಿಲುವಿನ ರೀತಿಯನ್ನು ಮಹೇಶ್ವರನೆಂದೂ, ಆ ಅಕ್ಷರಗಳ ಮಾತ್ರೆಯನ್ನು ಸರಸ್ವತಿಯೆಂದೂ ತಿಳಿಯಬೇಕು. ಶ್ಲೋಕದಲ್ಲಿ ಒಂದು ರೇಖೆ ಬಿಟ್ಟುಹೋದರೆ ಏಕಾತ್ಮಚ್ಯುತಿಯೆಂದೂ, ಒಂದುಪಾದ ಹೋಗಿದ್ದಪಕ್ಷದಲ್ಲಿ ಪಾದ ವಿಚ್ಯುತಿಯೆಂದೂ ತಿಳಿಯಬೇಕು.

೫೭. ನಾಲ್ಕುಪಾದಗಳಿರುವ ಶ್ಲೋಕದಲ್ಲಿ ಮಧ್ಯದವರೆಗೆ ಎರಡು ಪಾದಗಳು ಯುಗ್ಮವೆಂದೂ, ಕೊನೆಯ ಎರಡು ಪಾದವು ಯುಗ್ಮವೆಂದೂ ಹೇಳಲ್ಪಡುವುದು. ವಕ್ತೃನಾಮಾಕ್ಷರವು ಸಮಪಂಕ್ತಿಯಲ್ಲಿ ಬಂದರೆ ವಿಪತ್ಕರವು. ವಿಷಮಪಂಕ್ತಿಯಲ್ಲಿ ಬಂದರೆ ಸ್ವರ್ಗಸಾಧನ.

೫೮. ಅಯ್ಯಾ ಬ್ರಾಹ್ಮಣಶ್ರೇಷ್ಠರೇ! ಕೇಳಿ; ಭಾರತ, ಇತಿಹಾಸ, ಪುರಾಣ ಇವುಗಳಲ್ಲಿ ಈ ನಿಯಮವುಂಟು. ಎಂದರೆ ವಿಷಮಸಂಖ್ಯಾಪಂಕ್ತಿಯಲ್ಲಿ ಬಂದರೆ ಸ್ವರ್ಗಪ್ರಾಪ್ತಿಯೂ, ಸಮಸಂಖ್ಯಾಪಂಕ್ತಿಯಲ್ಲಿ ಬಂದರೆ ನರಕವೆಂದೂ ಹೇಳಬೇಕು.

ವಕ್ತೃನಾಮಾಕ್ಷರೈರ್ಯುಕ್ತಂ ಪಂಕ್ತಿಭೇದೇನ ಸತ್ತಮಾಃ ।
ಉಪನ್ಯಸ್ತಸ್ಯ ಯನ್ನಾಮ ತತ್ಕಲೌ ಮಾತ್ರಯಾ ಸಹ ॥ ೫೯ ॥

ಆತ್ಮಸಂಶುದ್ಧಿಸಂಶುದ್ಧ್ಯಾ ಧಾರಯೇದ್ಧರ್ಮಸಂಹಿತಾಂ ।
ಇತೋಽನ್ಯಥಾ ಭವೇದ್ದೋಷಃ ತಸ್ಮಾತ್ತತ್ಪರಿವರ್ಜಯೇತ್ ॥ ೬೦ ॥

ವಿಷ್ಣುಃ ಸೂರ್ಯಸ್ತಥಾ ರಾಮಃ ಯಕ್ಷೋಽನಂತಃ ಸರಸ್ವತೀ ।
ಬ್ರಾಹ್ಮೀ ಚ ಯಕ್ಷಿಣೀ ಚೈವ ಗಾಯತ್ರೀ ನವಧಾ ಸ್ಮೃತಾ ॥ ೬೧ ॥

ವಿಷ್ಣ್ವಂತೇ ಚ ಭವೇನ್ಮುಕ್ತಿಃ ಸೂರ್ಯಾಂತೇ ಪಾಪವಿಚ್ಯುತಿಃ ।
ರಿಪುಂತರಂ ಭವೇದ್ರಾಮೇ ಯಕ್ಷೇ ದುರ್ಗತಿಮಾದಿಶೇತ್ ॥ ೬೨ ॥

ಅನಂತೇ ವಿಪುಲಾ ಕೀರ್ತಿಃ ಸರಸ್ವತ್ಯಾಂ ಧನಾಗಮಃ ।
ಬ್ರಾಹ್ಮ್ಯಾಂ ಬ್ರಹ್ಮತ್ವಮಾಪ್ನೋತಿ ಯಕ್ಷಿಣ್ಯಾ ಯಕ್ಷಮಂದಿರಂ ॥ ೬೩ ॥

---

೫೯. ಅಯ್ಯಾ ಸಜ್ಜನಶ್ರೇಷ್ಠರೇ! ಕೇಳಿರಿ; ಕಲಿಯುಗದಲ್ಲಿ ಉಪನ್ಯಾಸಕನ ಹೆಸರು ಬೇರೆ ಪಂಕ್ತಿಯಲ್ಲಿರಬೇಕು. ನಾಮಾಕ್ಷರದಿಂದ ಕೂಡಿದ ಪಂಕ್ತಿಯಲ್ಲಿರದೆ

೬೦. ಧರ್ಮಶಾಸ್ತ್ರವನ್ನು ಮನಶ್ಶುದ್ಧಿಯಿಂದ ಸಂಶೋಧನೆಮಾಡಿ ಗ್ರಹಿಸಬೇಕು. ಹಾಗೆ ಮಾಡದೇಇದ್ದರೆ ಅದು ಪಾಪಕರವಾಗುವುದರಿಂದ ಅಂತಹ ಸಂದರ್ಭಗಳಲ್ಲಿ ಆ ಶಾಸ್ತ್ರಗ್ರಹಣವನ್ನೇ ಮಾಡಬಾರದು.

೬೧. ವಿಷ್ಣು, ಸೂರ್ಯ, ರಾಮ, ಯಕ್ಷ, ಅನಂತ, ಸರಸ್ವತೀ, ಬ್ರಾಹ್ಮೀ, ಯಕ್ಷಿಣಿ, ಗಾಯತ್ರೀ, ಇವು ಒಂಭತ್ತೂ ಪಂಕ್ತಿವಿಚಾರವೆಂದು ತಿಳಿಯಬೇಕು.

೬೨. ಪಂಕ್ತಿಯಕೊನೆಯಲ್ಲಿ ವಿಷ್ಣುವರ್ಣನೆ ಬಂದರೆ ಮುಕ್ತಿಯುಂಟು. ಸೂರ್ಯನು ವರ್ಣಿತನಾದರೆ ಪಾಪನಾಶವಾಗುವುದು. ರಾಮನನ್ನು ವರ್ಣಿಸಿದ್ದರೆ ಶತ್ರುವನ್ನು ಜಯಿಸುವನು. ಯಕ್ಷನು ವರ್ಣಿತನಾದರೆ ದುರ್ಗತಿಯುಂಟು.

೬೩. ಅನಂತನು ವರ್ಣಿತನಾದರೆ ಹೆಚ್ಚಾದ ಕೀರ್ತಿಯುಂಟಾಗುವುದು. ಸರಸ್ವತಿಯು ವರ್ಣಿತಳಾದರೆ ಧನಪ್ರಾಪ್ತಿಯಾಗುವುದು, ಬ್ರಾಹ್ಮೀದೇವಿಯು ವರ್ಣಿತಳಾದರೆ ಬ್ರಹ್ಮತ್ವವನ್ನೂ ಯಕ್ಷಿಣಿಯನ್ನು ವರ್ಣಿಸಿದ್ದರೆ ಯಕ್ಷಲೋಕವನ್ನೂ ಪಡೆಯುವನು.

ಮುಕ್ತಿಮಾಪ್ನೋತಿ ಗಾಯತ್ರ್ಯಾ ಇತಿ ಪಂಕ್ತಿಫಲೋದಯಃ ।
ಚತುರ್ಧಾ ಪ್ರತಿಭಕ್ತಿಃ ಸ್ಯಾತ್ ಪುಸ್ತಕಂ ಧರ್ಮನಿರ್ಮಿತಂ ॥ ೬೪ ॥

ಬ್ರಹ್ಮೇಂದ್ರ ವೈಷ್ಣವಂ ಶೈವಂ ಶಾಕ್ತಿಕಂ ಚ ಮಹೇಶ್ವರೀ ।
ಬ್ರಹ್ಮರೂಪಂ ಚೇತಿಹಾಸಮೈಂದ್ರಂ ರಾಮಾಯಣಾತ್ಮಕಂ ॥ ೬೫ ॥

ವೈಷ್ಣವಂ ಪರಮಂ ದೈವಂ ಯಚ್ಛೈವಂ ತಲ್ಲಲಾಟಕಂ ।
ಪಾವಕೋಽಸ್ಯ ತಥಾ ಮೂಲೇ ಮಧ್ಯಭಾಗೇ ಶತಕ್ರತುಃ ॥ ೬೬ ॥

ಅಗ್ರೇ ಸ್ಥಿತಾಃ ಗ್ರಹಾಃ ಸರ್ವೇ ದಿಶಾಮಾಶಾಸ್ತಥಾ ದ್ವಿಜಾಃ ।
ಮೇರುಃ ಸುಮೇರುರುದ್ದಿಷ್ಟಃ ಸಂಗವಾನ್ಕಾಮ ಉಚ್ಯತೇ ॥ ೬೭ ॥

ದ್ಯಾವಾಪೃಥಿವ್ಯೋ ಪಾತಾಲಂ ತಸ್ಯಾಂತಃ ಸಮುದಾಹೃತಂ ।
ಪೌರಾಣಿಕ ಕಥಾಯುಕ್ತಪುಸ್ತಕೋ ದೇವಪೂಜಿತಃ ॥ ೬೮ ॥

---

೬೪. ಗಾಯತ್ರಿಯನ್ನು ವರ್ಣಿಸಿದ್ದರೆ ಮುಕ್ತಿಯನ್ನು ಪಡೆಯುತ್ತಾನೆ. ಪಂಕ್ತಿಗಳ ಫಲವನ್ನು ಈ ರೀತಿ ತಿಳಿಯಬೇಕು. ಧರ್ಮಶಾಸ್ತ್ರನಿರೂಪಣಕ್ಕಾಗಿ ನಿರ್ಮಿತವಾದ ಪುರಾಣಗಳಲ್ಲಿ ಬ್ರಾಹ್ಮ, ವೈಷ್ಣವ, ಶೈವ, ಮಾಹೇಶ್ವರೀಶಕ್ತಿ, ಎಂಬ ನಾಲ್ಕು ಬಗೆಯೆಂದು ಹೇಳಿದೆ.

೬೫-೬೬. ಇತಿಹಾಸ ಎಂದರೆ ಭಾರತವು ಬ್ರಹ್ಮಸಂಬಂಧವಾದುದು. ಶ್ರೇಷ್ಠನಾದ ಉಪೇಂದ್ರ ದೇವತಾಸಂಬಂಧವಾದ ರಾಮಾಯಣವು ವೈಷ್ಣವಪುರಾಣವು.

೬೭. ಲಲಾಟ ನೇತ್ರಮಹಿಮಾನಿರೂಗಣವುಳ್ಳದು ಶೈವಪುರಾಣವು. ಇದರ ಪ್ರಾರಂಭದಲ್ಲಿ ಅಗ್ನಿಯೂ, ಮಧ್ಯಭಾಗದಲ್ಲಿ ಇಂದ್ರನೂ, ಅಗ್ರಭಾಗದಲ್ಲಿ ಆದಿತ್ಯಾದಿ ಸಮಸ್ತಗ್ರಹಗಳೂ. ದಿಕ್ಪಾಲಕರೂ ಇರುವರು. ಅದರ ಊರ್ಧ್ವಭಾಗವು ಮಹಾಮೇರುವೆಂದು ಉದ್ದಿಷ್ಟವಾಗಿದೆ. ಕಾಮನು ಈ ಮೇರುಭಾಗದ ಸಂಗವುಳ್ಳವನು ಎಂದು ಹೇಳಿಸಿಕೊಳ್ಳುತ್ತಾನೆ.

೬೮. ಪುರಾಣದ ಒಳಗೆ ಸ್ವರ್ಗ, ಮರ್ತ್ಯ, ಪಾತಾಳ ಎಂಬ ಅಂತರ್ಭಾಗಗಳಿವೆ. ಆದುದರಿಂದ ಪೌರಾಣಿಕ ಕಥಾಪುಸ್ತಕವು ದೇವತೆಗಳಿಗೂ ಪೂಜಿಸಲರ್ಹವಾದುದು.

ನ ಶಸ್ಯಃ ಪೂಜನೀಯಶ್ಚ ಗೃಹೇ ಸ್ಥಾಪ್ಯೇತ ಮಾನವಃ ।
ಯೋ ಯಸ್ಮೈ ಶೂದ್ರೋ ವಿಪ್ರಾಯ ವೃತ್ತಿಂ ದದ್ಯಾಚ್ಚ ಮಾನವಃ ॥೬೯॥

ಸ ಯಾತಿ ಬ್ರಹ್ಮಸದನಂ ಮಣಿವತ್ಮಾರ್ದಿಕುಟ್ಟಿಮಂ ।
ಸ ಶಸ್ಯಃ ಪೂಜನೀಯಶ್ಚ ಗೃಹೇ ಸ್ಥಾಪ್ಯೇತ ಮಾನವಃ ॥ ೭೦ ॥

ಪತ್ರಾಣಾಮಗ್ರಭಾಗೇ ತು ವೇಧಂ ಕುರ್ಯಾತ್ಸುವರ್ತುಲಂ ।
ಶ್ರವಣಾತ್ತತ್ರ ಸೂತ್ರೇಣ ತತ್ರ ಪದ್ಮಂ ಚ ವರ್ತುಲಂ ॥ ೭೧ ॥

ಸಂಹಿತಾಗಮತಂತ್ರೇಷು ಪ್ರತಿವೇಧೇ ಚ ಸಂಕುಲಂ ।
ಪ್ರಕುರ್ಯಾಚ್ಚಿತ್ತತಾಪೇನ ತತಃ ಶಕ್ರಪುರಂ ವ್ರಜೇತ್ ॥ ೭೨ ॥

---

೬೯. ಪೂಜನೀಯವಾದ ಇಂಥ ಪುಸ್ತಕವನ್ನು ಮನುಷ್ಯನು ಮನೆಯಲ್ಲಿ ಸುಮ್ಮನೆ ಇಟ್ಟುಕೊಂಡು ಇರುವುದು ಒಳ್ಳೆಯದಲ್ಲ.

೭೦. ಪೌರಾಣಿಕ ಬ್ರಾಹ್ಮಣನ ಜೀವನನಿರ್ವಾಹಕ್ಕಾಗಿ ಶೂದ್ರನು ಧಾನ್ಯಾದಿಗಳನ್ನು ಕೊಟ್ಟರೆ, ಅವನು ದೇಹಾವಸಾನದಲ್ಲಿ ರತ್ನಗಳನ್ನು ಮೆಟ್ಟಿದ ಮಾರ್ಗದಲ್ಲಿ ಸಾಗಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಪೂಜಾಯೋಗ್ಯವಾದ ಪುರಾಣಪುಸ್ತಕವನ್ನು ಮನುಷ್ಯನು ಮನೆಯಲ್ಲಿ ಸುಮ್ಮನೆ ಇಟ್ಟುಕೊಳ್ಳುವುದು ಒಳ್ಳೆಯದಲ್ಲ.

೭೧. ತಾಳಪತ್ರಗಳ ಎರಡು ತುದಿಗಳಲ್ಲೂ ಗುಂಡಾಗಿರುವಂತೆ ರಂಧ್ರವನ್ನು ಕೊರೆಯಬೇಕು. ಪಠನೀಯವಾದ ಭಾಗವು ಪೂರ್ತಿಯಾಯಿತು ಎಂಬುದನ್ನು ಸೂಚಿಸುವಂತೆ, ವರ್ತುಲ ಅಥವಾ ಪದ್ಮಾಕೃತಿಯನ್ನು ಸೂತ್ರದಿಂದ ರಚಿಸಿ ಅಲ್ಲಿಗೆ ಸೇರಿಸಬೇಕು.

೭೨. ಸಂಹಿತಾತಂತ್ರ, ಆಗಮತಂತ್ರ, ಇವನ್ನು ಬರೆದ ಓಲೆಯ ಪುಸ್ತಕದಲ್ಲಿ ಪ್ರತಿಯೊಂದು ಪತ್ರದಲ್ಲಿ ರಂಧ್ರಮಾಡುವಾಗಲೂ, ಒಟ್ಟಿಗೆ ರಂಧ್ರಮಾಡುವಾಗಲೂ ಮನಸ್ಸಿನಲ್ಲಿ ತಾಪಯುಕ್ತನಾಗಿ ವೇಧಮಾಡಬೇಕು. ಹೀಗೆ ಮಾಡಿದವನಿಗೆ ಇಂದ್ರಲೋಕ ಪ್ರಾಪ್ತಿಯಾಗುವುದು.

ಮಧ್ಯಂ ತಸ್ಯ ಹರೇದಾಯುಃ ಪಾರ್ಶ್ವವೇಧಃ ಶಿವಂ ಹರೇತ್ ।
ಯುಗ್ಮವೇಧೇ ಜಯಂ ದದ್ಯಾದೇಕವೇಧೇ ಬಲಿರ್ಭವೇತ್ ॥ ೭೩ ॥

ಪರಮಾ ಪ್ರಕೃತೇರ್ಗುಹ್ಯಂ ಸ್ಥಾನಂ ದೇವೈರ್ವಿನಿರ್ಮಿತಂ ।
ಪೂರಯೇತ್ತಾಮ್ರಲಿಂಗೇನ ಅಥ ರೈತ್ಯಮಯೇನ ವಾ ॥ ೭೪ ॥

ಅಶಕ್ತೋ ಬಿಲ್ವಕಾಷ್ಠಸ್ಯ ತಥಾ ಶ್ರೀಪರ್ಣಿಕಸ್ಯ ಚ ।
ನ ಕಾಷ್ಠಸ್ಯ ನ ವಂಶಸ್ಯ ನ ಲೌಹಂ ಯೋಜಯೇತ್ಕ್ವಚಿತ್ ॥ ೭೫ ॥

ಪ್ರಾಗಾರಂಭಶ್ಲೋಕಶತಂ ಧರ್ಮಶಾಸ್ತ್ರಸ್ಯ ವೈ ಲಿಖೇತ್ ।
ಸಂಹಿತಾಯಾಂ ಪುರಾಣಾಯಾಂ ಯುಗ್ಮಕಲ್ಪಂ ತದರ್ಧಕಂ ॥ ೭೬ ॥

ಬ್ರಹ್ಮಚರ್ಯೇಣ ವಿಲಿಖೇನ್ನ ಮೋಹಾದ್ಬ್ರಹ್ಮಣಃ ಕ್ವಚಿತ್ ।
ತಥಾಪಿ ಚಾಖಿಲವ್ಯಾಸ ಲೇಖನಾತ್ಸಂತತಿಕ್ಷಯಃ ॥ ೭೭ ॥

---

೭೩. ಮಧ್ಯದಲ್ಲಿ ಸರಿಯಾಗಿ ರಂಧ್ರಮಾಡಿದರೆ ಆಯುಸ್ಸನ್ನು ಕುಗ್ಗಿಸುವುದು. ಅತಿಪಕ್ಕದಲ್ಲಿ ಮಾಡಿದರೆ ಸೌಖ್ಯ ನಾಶವಾಗುವುದು, ಎರಡು ರಂಧ್ರಮಾಡಿದರೆ ಜಯ ಪ್ರಾಪ್ತಿಯಾಗುವುದು, ಒಂದೇ ರಂಧ್ರವನ್ನು ಕೊರೆದವನು ಬಲಿಯಾಗುವನು.

೭೪. ರಹಸ್ಯವೂ, ದೇವನಿರ್ಮಿತವೂ, ಶ್ರೇಷ್ಠವೂ ಆದ, ಪ್ರಕೃತಿಯ ಸ್ಥಾನವನ್ನು ತಾಮ್ರದಿಂದಾಗಲಿ, ಹಿತ್ತಾಳೆಯಿಂದಾಗಲಿ ಮಾಡಿದ ಲಿಂಗದಿಂದ ತುಂಬಬೇಕು

೭೫. ತಾಮ್ರ, ಹಿತ್ತಾಳೆ, ಮುಂತಾದ ಲೋಹಗಳಿಂದ ಮಾಡುವಷ್ಟು ಅನುಕೂಲ ಸಾಲದವನು, ಬಿಲ್ವಪತ್ರೆಯ ಮರದಿಂದಲೋ ಶ್ರೀಪರ್ಣಿ (ತೇಗದ) ಮರದಿಂದಲೋ ಮಾಡಬಹುದು. ಇವು ಹೊರತು ಇತರ ಮರಗಳಿಂದಲಾಗಲಿ, ಬಿದಿರಿನಿಂದಾಗಲಿ, ಇತರ ಲೋಹಗಳಿಂದಲಾಗಲಿ ಯಾವಾಗಲೂ ಮಾಡಿ ಸೇರಿಸಬಾರದು.

೭೬. ಪುರಾಣದ ಪ್ರಾರಂಭದಲ್ಲಿರುವ ನೂರುಶ್ಲೋಕಗಳನ್ನು ಧರ್ಮಶಾಸ್ತ್ರದಲ್ಲಿ ಹೇಳಿರುವ ಪ್ರಕಾರವಾಗಿಯೇ ಬರೆಯಬೇಕು. ಲಿಖಿತವಾದ ಪುರಾಣಸಂಹಿತೆಯಲ್ಲಿರುವ ಪ್ರಥಮಾರ್ಧವು ಯುಗ್ಮಕಲ್ಪವೆನಿಸುವುದು.

೭೭. ಬ್ರಾಹ್ಮಣನಾದವನು ಇದನ್ನು ಬ್ರಹ್ಮಚರ್ಯನಿಯಮದಿಂದಲೇ ಬರೆಯಬೇಕು ಈ ತಿಳಿವಳಿಕೆಯಿಲ್ಲದೆ ಎಂದೂ ಬರೆಯಬಾರದು. ಹೀಗೆ ನಿಯಮದ ತಿಳಿವಳಿಕೆಯಿಲ್ಲದೆ ಸಮಸ್ತಭಾಗವನ್ನೂ ಬರೆಯುವುದರಿಂದ ವಂಶವು ಕ್ಷೀಣವಾಗುವುದು.

**ಅನಾಮಾತ್ವೇ ಹೇಮಯುತಾಂ ಬಲಾಕಂ ಶಕ್ತಮೇವ ಚ ।**
**ನ ಲಿಖೇತ್ಖಿಲಭಾಗಂ ಚ ಹರಿವಂಶಸ್ಯ ಸತ್ತಮಾಃ　　　　॥ ೭೮ ॥**

**ಗಾರುಡಸ್ಯ ಚ ಸ್ಕಾಂದಸ್ಯ ನ ಲಿಖೇನ್ಮಧ್ಯತಂತ್ರಕಂ ।**
**ಲೇಖನಂ ಹರಿವಂಶಸ್ಯ ವ್ರತಸ್ಥೋ ನಿಯಮೈರ್ಯುತಃ　　　　॥ ೭೯ ॥**

**ಗೃಹಸ್ಥೋ ನ ಲಿಖೇದ್ಗ್ರಂಥಂ ಲಿಖೇಚ್ಚ ಮಥುರಾಂ ವಿನಾ ।**
**ಲೇಖನೇ ಪಾರಿಜಾತಸ್ಯ ಮತ್ಸ್ಯಮಾಂಸಾಶಿನಂ ಲಿಖೇತ್　　　　॥ ೮೦ ॥**

**ವಾಲ್ಮೀಕಿಸಂಹಿತಾಯಾಶ್ಚ ಲೇಖನೇ ಚ ತಥಾ ಕ್ವಚಿತ್ ।**
**ಸ್ತೋತ್ರಮಾತ್ರಂ ಲಿಖೇದ್ವಿಪ್ರಾ ಅವ್ರತೀ ನ ಲಿಖೇತ್ಕ್ವಚಿತ್　　　　॥ ೮೧ ॥**

---

೭೮. ಬರೆಯುವ ಗ್ರಂಥವು ಅಪ್ರಸಿದ್ಧ ನಾಮವುಳ್ಳದಾಗಿದ್ದರೆ ಅದನ್ನು ಬರೆಯಲು ಸುವರ್ಣದ ಬಣ್ಣವನ್ನು ಉಪಯೋಗಿಸಬೇಕು. ದಟ್ಟವಾದ (ಶಕ್ತವಾದ) ಬಲಾಕವರ್ಣದಿಂದ ಲೇಪಿಸಬಹುದು. ಹರಿವಂಶದಲ್ಲಿ ರೂಢಿ ಇಲ್ಲದ (ಎಂದರೆ ಖಿಲವಾದ) ಭಾಗವನ್ನು ಬರೆಯಬಾರದು.

೭೮. ಎಲೈ ಬ್ರಾಹ್ಮಣೋತ್ತಮರೇ! ಕೇಳಿರಿ. ಗರುಡಪುರಾಣ, ಮತ್ತು ಸ್ಕಾಂದಪುರಾಣ, ಇವುಗಳಲ್ಲಿ ಮಧ್ಯಭಾಗವನ್ನು ಬರೆಯಬೇಕು. ಹರಿವಂಶ ಪುರಾಣವನ್ನು ಬರೆಯುವಾಗ ಬಹು ನೇಮದಿಂದ ಬರೆಯಬೇಕು.

೮೦. ಗೃಹಸ್ಥನಾದವನು ಮಥುರಾನಾಥನಾದ ಶ್ರೀಕೃಷ್ಣನ ಚರಿತ್ರೆ ಹೊರತು ಇನ್ನೇನನ್ನೂ ಬರೆಯಬಾರದು. ಭಾಗವತದಲ್ಲಿ ಪಾರಿಜಾತಹರಣ ಪ್ರಕರಣವನ್ನು ಬರೆಯುವುದರಲ್ಲಿ, ಮತ್ಸ್ಯ, ಮಾಂಸ ಇವುಗಳ ಭಕ್ಷಕನಾದ ಗರುಡನ ಮಹಿಮಾ ವಿಚಾರವನ್ನು ಬರೆಯಬೇಕು.

೮೧. ರಾಮಾಯಣ ಲೇಖನ ಕಾರ್ಯದಲ್ಲಿಯೂ ಕೆಲವು ಸಂದರ್ಭದಲ್ಲಿ ಹಾಗೆಯೇ ಮಾಡಬೇಕಾಗುವುದು. ಪುರಾಣಾಂತರ್ಗತವಾದ ದೇವತಾಸ್ತೋತ್ರ ಭಾಗವನ್ನು ಬ್ರಾಹ್ಮಣನೇ ಬರೆಯಬೇಕು. ಆತನೂ ವ್ರತನಿಯಮವಿಲ್ಲದವನಾಗಿಲ್ಲದಿದ್ದಲ್ಲಿ ಬರೆಯಬಾರದು.

ಅಬ್ರಾಹ್ಮಣೇನ ಲಿಖಿತಂ ನಿಷ್ಫಲಂ ಪರಿಕೀರ್ತಿತಂ ।
ಪತಿತೈರಪಿ ಪಾಖಂಡೈಃ ನ ಸ್ತ್ರೀ ವಿಲಿಖತಿ ಕ್ವಚಿತ್ ॥ ೮೨ ॥

ದುರ್ವಿಚಾರೋ ದುಷ್ಟಭಾರ್ಯೋ ದುರ್ಮತಿಶ್ಚಾಪಿ ಲೇಖಕಃ ।
ನ ಲಿಖೇದ್ಧರ್ಮಶಾಸ್ತ್ರಂ ಚ ಪುರಾಣಂ ಸ್ತೋತ್ರಸಂಹಿತಂ ॥ ೮೩ ॥

ತಚ್ಚ ಸ್ಪ್ರಷ್ಟ್ವಾರ್ಥ ಕರ್ತವ್ಯಂ ಸುವರ್ಣರಜತಸ್ಯ ಚ ।
ಕಜ್ಜಲೈರ್ಮಲಿನಂ ಕುರ್ಯಾನ್ಮಂತ್ರೀ ನಿರ್ಯಾಸಮಂತ್ರಿತೈಃ ॥ ೮೪ ॥

ಜೀವಂತ್ಯಾಶ್ಚ ರಸೈರ್ಯುಕ್ತೈರ್ಮಣಿಕರ್ದಮಲೋಲುಪೈಃ ।
ವಂಗುನ್ಯಾಖ್ಯಾಯುತೈರ್ವಾಪಿ ಪೀತಯೋಗೈರಥಾಪಿ ವಾ ॥ ೮೫ ॥

---

೮೨. ಬ್ರಾಹ್ಮಣನಲ್ಲದವನು ಬರೆದುದೂ, ಪತಿತನಾದವನು ಬರೆದುದೂ, ಪಾಷಂಡನು ಬರೆದುದೂ ನಿಷ್ಫಲ. ಸ್ತ್ರೀಗೆ ಪುರಾಣ ಲೇಖನದ ಅಧಿಕಾರವು ಎಲ್ಲಿಯೂ ಇಲ್ಲ.

೮೩. ಕೆಟ್ಟವಿಚಾರದಲ್ಲಿ ಆಸಕ್ತ, ಕೆಟ್ಟಹೆಂಡತಿಯನ್ನು ಕಟ್ಟಿಕೊಂಡವನು, ದುರ್ಬುದ್ಧಿಯುಳ್ಳವನು, ಇಂಥ ಲೇಖಕನು ಧರ್ಮಪ್ರಧಾನವಾದ ಶಾಸ್ತ್ರವನ್ನು ಬರೆಯಬಾರದು. ಮತ್ತು ದೇವತಾಸ್ತೋತ್ರಯುಕ್ತವಾದ ಪುರಾಣವನ್ನೂ ಬರೆಯಬಾರದು.

೮೪. ಓಲೆಯಪತ್ರ (ಗರಿ) ಗಳಲ್ಲಿ ಬರೆದ ಮೇಲೆ ಸ್ಪಷ್ಟವಾಗಿ ಕಾಣಿಸುವುದಕ್ಕಾಗಿ, ಗೋಂದುಮಿಶ್ರವಾದ ಕಾಡಿಗೆಯನ್ನು ಬೆಳ್ಳಿಯ ಕಡ್ಡಿಯಿಂದಲೋ ಅಥವಾ ಚಿನ್ನದ ಕಡ್ಡಿಯಿಂದಲೋ ಸವರಿ ಅಕ್ಷರಗಳನ್ನು ಕಪ್ಪಾಗಿ ಮಾಡಬೇಕು.

೮೫. ಮಣಿಯ ಆಕೃತಿಯುಳ್ಳ ಕರ್ದಮದೊಡನೆ ಬೆರಕೆಯಾದ ಜೀವಂತಿ ಮೂಲಿಕೆಯ ರಸದಿಂದಲೋ, ವಂಗುನೀ ಮೊದಲಾದುದರಿಂದಲೋ ಹಳದಿಯಬಣ್ಣದ ಮಿಶ್ರಣವನ್ನು ಮಾಡಿ ಸವರಬೇಕು.

**ಕೃಷ್ಣೇ ವಾಯುಪ್ರದಂ ವಿದ್ಯಾತ್ಪೀತೇ ವಾಯುಕ್ಷಯೋ ಭವೇತ್ ।**
**ರಕ್ತೇ ಪುಷ್ಟಿಮವಾಪ್ನೋತಿ ಕೃಷ್ಣೇ ಚ ಸಂಪದಾಗಮಃ ॥ ೮೬ ॥**

**ಇತಿಹಾಸ ಪುರಾಣಾನಾಂ ವಿಲಿಖೇದ್ಯನ್ಮುಖಾಚ್ಛೃಣು ।**
**ವಾಯವ್ಯಾದಿಮುಖೇನೈವ ಕಾಷ್ಣವೇದಂ ಚ ಸಂಲಿಖೇತ್ ॥ ೮೭ ॥**

**ಪೂರ್ವಾಮುಖೇ ಚಾರ್ಥಹಾನಿರುತ್ತರೇ ಚ ಮುಖೇ ಶ್ರಿಯಃ ।**
**ಮರಣಂ ದಕ್ಷಿಣಾಸ್ಯೇ ತು ಪಶ್ಚಿಮಾಸ್ಯೇ ಧನಕ್ಷಯಃ ॥ ೮೮ ॥**

**ಪಿತೃಮೇಧೇ ಭುವಃ ಕಂಪೇ ನ ಲಿಖೇಜ್ಜನ್ಮವಾಸರೇ ।**
**ಆಶೌಚೇ ಮೃತಕೇ ಸೂತಾವಮಾಯಾಂ ರವಿಸಂಕ್ರಮೇ ॥ ೮೯ ॥**

---

೮೬. ಲಿಪಿಗಳಿಗೆ ಕೃಷ್ಣವರ್ಣವನ್ನು ಹಾಕುವುದರಿಂದ ಕರ್ತೃವಿಗೆ ವಾಯು ರೋಗವು ಉಂಟಾಗುವುದು ಎಂದೂ, ಹಳದಿಬಣ್ಣವನ್ನು ಹಾಕುವುದರಿಂದ ವಾಯು ರೋಗವು ಪರಿಹಾರವಾಗುವುದೆಂದೂ ತಿಳಿಯಬೇಕು. ಕೆಂಪುಬಣ್ಣವನ್ನು ಸವರಿದರೆ ಪುಷ್ಟಿಯನ್ನುಂಟುಮಾಡುವುದು. ಕೃಷ್ಣವರ್ಣವನ್ನು ಹಾಕಿದರೆ ಸಂಪತ್ತು ಉಂಟಾಗುವುದು ಎಂದು ಕೆಲವರ ಮತವಾಗಿದೆ.

೮೭. ಇನ್ನು ಯಾವದಿಕ್ಕಿಗೆ ಅಭಿಮುಖವಾಗಿ ಕುಳಿತು ಇತಿಹಾಸ ಪುರಾಣವನ್ನು ಬರೆಯಬೇಕು ಎಂಬುದನ್ನು ಹೇಳುತ್ತೇನೆ ಕೇಳಿರಿ. ಕಾಷ್ಣವೇದವನ್ನು ಬರೆಯುವಾತನು ವಾಯವ್ಯ ಮೊದಲಾದ ವಿದಿಕ್ಕಿಗೆ ಅಭಿಮುಖವಾಗಿ ಕುಳಿತುಕೊಂಡು ಬರೆಯಬೇಕು.

೮೮. ಪೂರ್ವಾಭಿಮುಖವಾಗಿ ಕುಳಿತುಕೊಂಡು ಬರೆದರೆ ಅರ್ಥಹಾನಿಯಾಗುವುದು, ಉತ್ತರಾಭಿಮುಖವಾಗಿ ಕುಳಿತುಕೊಂಡು ಬರೆದರೆ, ಸಂಪತ್ತುಂಟಾಗುವುದು, ದಕ್ಷಿಣಾಭಿಮುಖವಾಗಿ ಕುಳಿತುಕೊಂಡು ಬರೆದರೆ, ಬೇಗ ಮರಣಸಂಭವಿಸುವುದು, ಪಶ್ಚಿಮಮುಖವಾಗಿ ಕುಳಿತುಕೊಂಡು ಬರೆದರೆ ಧನಕ್ಷಯವಾಗುವುದು.

೮೯. ಶ್ರಾದ್ಧಕರ್ಮ ನಡೆಯಿಸಿದ ದಿನದಲ್ಲೂ, ಭೂಕಂಪ, ಮುಂತಾದ ಉತ್ಪಾತಗಳುಂಟಾದಾಗಲೂ, ಜನ್ಮತಿಥಿ, ಜನ್ಮನಕ್ಷತ್ರ, ಜನ್ಮವಾರಗಳಲ್ಲಿಯೂ, ಮೃತಾಶೌಚ ಕಾಲದಲ್ಲಿಯೂ, ಜಾತಾಶೌಚದಲ್ಲೂ, ಅಮಾವಾಸ್ಯೆಯಲ್ಲಿಯೂ, ಸಂಕ್ರಮಣದಿನಗಳಲ್ಲಿಯೂ ಇದನ್ನು ಬರೆಯಬಾರದು.

ಅತ್ರ ಲೇಖಾದ್ದರಿದ್ರಃ ಸ್ಯಾತ್ತಥಾ ಪುತ್ರವಿನಾಶನಂ ।
ಬಲಧರ್ಮಕ್ಷಯಂ ಚೈವ ತಸ್ಮಾದ್ಯತ್ನೇನ ವರ್ಜಯೇತ್ ॥ ೯೦ ॥

ಪಿತೃಶ್ರಾದ್ಧದಿನೇ ಲೇಖಃ ಕುಲಕ್ಷಯಕರೋ ಭವೇತ್ ।
ಏಕರಾತ್ರಂ ಭುವಃ ಕಂಪೇ ತಸ್ಮಿನ್ಲೇಖೇ ಧನಕ್ಷಯಃ ॥ ೯೧ ॥

ಆಶೌಚೇಽಪಿ ದರಿದ್ರಃ ಸ್ಯಾಜ್ಜನ್ಮಾಹೇ ಚಾಯುಷಃ ಕ್ಷಯಃ ।
ಲಿಪಿಚ್ಛಂದಃಪದಜ್ಞಶ್ಚ ಯುವಾ ಧೀಮಾನ್ ಜಿತಾಸನಃ ॥ ೯೨ ॥

ದ್ರುತಲೇಖೀ ಚ ತೇಜಸ್ವೀ ಯೋ ಲೇಖಯತಿ ಲೇಖಕಃ ।
ಅಸಂವಲಿತಭಾವೇನ ಊರ್ಧ್ವೋರ್ಧ್ವೇ ಸ್ಯಾತ್ಸಮಾಕ್ಷರಂ ॥ ೯೩ ॥

---

೯೦. ಇಂಥ ದಿನಗಳಲ್ಲಿ ಪುರಾಣಪುಸ್ತಕವನ್ನು ಬರೆದರೆವನು ದರಿದ್ರನಾಗುವುದಲ್ಲದೆ, ಅವನ ಪುತ್ರನಿಗೆ ಹಾನಿಪ್ರಾಪ್ತಿಯಾಗುವುದು, ಶಕ್ತಿಹಾನಿ ಧರ್ಮಹಾನಿಗಳಿಗೆ ಕಾರಣವಾದ ಇಂಥ ದಿನಗಳಲ್ಲಿ ಬರೆಯುವುದನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು.

೯೧. ಪಿತೃಶ್ರಾದ್ಧ ನಡೆಯಿಸಿದ ದಿನ ಪುರಾಣವನ್ನು ಬರೆದರೆ ಕುಲಕ್ಷಯವನ್ನುಂಟುಮಾಡುವುದು, ಭೂಕಂಪವಾದಾಗ ಹಾಗೆ ಆದ ಒಂದು ರಾತ್ರಿ ಮುಗಿಯುವವರೆಗೆ ಬರೆಯಬಾರದು. ಹಾಗೆ ಬರೆದವನಿಗೆ ಧನಕ್ಷಯವುಂಟಾಗುವುದು.

೯೨. ಆಶೌಚ ಪ್ರಾಪ್ತವಾದ ಕಾಲದಲ್ಲಿ ಈ ಪವಿತ್ರ ಗ್ರಂಥಗಳನ್ನು ಬರೆದರೆ ದರಿದ್ರನಾಗುವನು. ಜನ್ಮದಿನ ತಿಥ್ಯಾದಿಗಳಲ್ಲಿ ಬರೆದರೆ ಆಯುಸ್ಸು ಕ್ಷೀಣವಾಗುವುದು. ಲೇಖಕನು ಲಿಪಿ, ಛಂದಸ್ಸು, ವ್ಯಾಕರಣ ಇವುಗಳನ್ನು ತಿಳಿದವನೂ, ಪ್ರಾಯದ ವಯಸ್ಸಿನವನೂ, ಬುದ್ಧಿಶಾಲಿಯೂ, ಧೃಢವಾಗಿ ಕುಳಿತು ಕೆಲಸಮಾಡುವ ಸ್ವಭಾವವುಳ್ಳವನೂ ಆಗಿರಬೇಕು.

೯೩. ಅಲ್ಲದೆ ಶೀಘ್ರವಾಗಿ ಬರವಣಿಗೆಯನ್ನು ಬರೆಯತಕ್ಕವನೂ, ತೇಜಶ್ಶಾಲಿಯೂ ಆಗಿರಬೇಕು. ಈ ಗುಣಗಳ ಜೊತೆಗೆ ಬರೆಯುವ ಅಕ್ಷರಗಳು ಕಲಸಿಕೊಳ್ಳದೇ ಇರುವಂತೆಯೂ, ಮೇಲುಮೇಲಕ್ಕೆ ಎದ್ದುಕೊಂಡ ಸಮವಾದ ಬರವಣಿಗೆಯನ್ನು ಬರೆಯುವ ಅಭ್ಯಾಸವುಳ್ಳವನೂ ಆಗಿರಬೇಕು.

**ಲಿಪಿಯುಕ್ತಾಃ ಸಮಾಯುಕ್ತೈಃ ಸ ಏವಾಗಮಲೇಖಕಃ ।**
**ನಾಂದೀನಾಗರಕೈರ್ವರ್ಣೈಃ ಶುದ್ಧನಾಗರಕೈರಪಿ ॥ ೯೪ ॥**

**ಕಾಮರೂಪಾಕ್ಷರೈರ್ವಾಪಿ ಯಾವಚ್ಚ ಸಂಹಿತಾಗಣಃ ।**
**ಅಚೇತನೇನ ಲಿಖಿತಂ ಯಾವತ್ಕಾಲಂ ಪ್ರವರ್ತತೆ ॥ ೯೫ ॥**

**ಯಾವದಕ್ಷರಸಂಸ್ಥಾನಂ ತಾವತ್ಸ್ವರ್ಗೇ ಮಹೀಯತೇ ।**
**ಅನುಕ್ತೋ ವಾಚಯೇದ್ಯಸ್ತು ಧರ್ಮಶಾಸ್ತ್ರಸ್ಯ ವೇತನಂ ॥ ೯೬ ॥**

**ಲಿಖಿತ್ವಾ ಯಸ್ತು ಪಾಪಾತ್ಮಾ ಯಾವದಕ್ಷರಸಂಖ್ಯಯಾ ।**
**ತಾವತ್ಕಾಲಂ ತು ನರಕೇ ಪಚ್ಯತೇ ನಾತ್ರ ಸಂಶಯಃ ॥ ೯೭ ॥**

**ಕುಟುಂಬಭರಣಾರ್ಥಂ ತು ಗೃಹ್ಣೀಯಾದ್ವಾಪಿ ವೇತನಂ ।**
**ನ ಜೀವತಿ ಸ ದುಷ್ಟಾತ್ಮಾ ಧನವಸ್ತ್ರಫಲಾನ್ವಿತಃ ॥ ೯೮ ॥**

---

೯೪. ಮನಸ್ಥೈರ್ಯವುಳ್ಳವನು, ಶಾಸ್ತ್ರವನ್ನು ಬರೆಯಲು ಅರ್ಹನೆನಿಸುವನು ಶಾಸ್ತ್ರವನ್ನು ಬರೆಯಬೇಕಾದರೆ ನಾಂದೀನಾಗರಾಕ್ಷರಗಳಿಂದಲೋ, ದೇವನಾಗರಾಕ್ಷರಗಳಿಂದಲೋ ಕಾಮರೂಪಾಕ್ಷರಗಳಿಂದಲೋ ಬರೆಯಬೇಕು.

೯೫. ಪುರಾಣಸಂಹಿತಾಸಮೂಹವು ಎಷ್ಟು ದೀರ್ಘವಾಗಿದೆಯೋ ಅಲ್ಲಿಯವರೆಗೂ ಪ್ರಜ್ಞೆಯಿಲ್ಲದೆ ಎಂದರೆ ಎಷ್ಟು ಉಳಿದಿದೆ ಎಂಬ ಪರಿಮಾಣವಿಚಾರದ ಗಮನವಿಲ್ಲದೆ ಬರೆಯಬೇಕು. ಹೀಗೆ ಬರೆದುದು ಎಷ್ಟುಕಾಲ ಉಪಯೋಗಿಸಲ್ಪಡುವುದೋ ;

೯೬. ಮತ್ತು ಇವನು ಬರೆದ ಅಕ್ಷರಗಳು ಎಷ್ಟು ಕಾಲವಿರುವುದೋ ಅಷ್ಟು ಕಾಲದ ಪರ್ಯಂತ ಸ್ವರ್ಗದಲ್ಲಿ ಪೂಜಿತನಾಗುವನು. ವೇತನವನ್ನು ನಿಗದಿಮಾಡಿ ಹೇಳಿ ತೆಗೆದುಕೊಳ್ಳದೆ ಯಾವನು ಯದೃಚ್ಛಾಲಾಭಕ್ಕಾಗಿ ಧರ್ಮಶಾಸ್ತ್ರವನ್ನು ವಾಚನ ಮಾಡುತ್ತಾನೋ ಅವನು ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ.

೯೭. ಉಕ್ತವಾದ ಈ ವಿಧಿಗೆ ವಿರುದ್ಧವಾಗಿ ಪುರಾಣವನ್ನು ಬರೆದವರೆ, ಅವನು ಪಾಪಾತ್ಮನೆನಿಸುವನು. ಅವನು ಬರೆದ ಅಕ್ಷರಗಳ ಸಂಖ್ಯೆಯಷ್ಟು ದಿವಸ ರೌರವ ನರಕದಲ್ಲಿ ಬೇಯುತ್ತಾನೆ. ಇದರಲ್ಲಿ ಸಂಶಯವಿಲ್ಲ.

೯೮. ಕುಟುಂಬ ಪೋಷಣೆಗಾಗಿ ಬರೆಯುವವನು ವೇತನವನ್ನು ತೆಗೆದುಕೊಂಡು ಬರೆಯುವವನು, ಇಂಥ ದುಷ್ಟಾತ್ಮರಿಗೆ ಅವರ ಜೀವಮಾನದಲ್ಲಿ ಧನ, ವಸ್ತ್ರ ಮುಂತಾದ ಅನುಕೂಲವು ಯಾವುದೂ ಉಂಟಾಗುವುದಿಲ್ಲ.

**ಪತಿತೈರಂತ್ಯಜೈರ್ಮ್ಲೇಚ್ಛೈ ರೋಗೀ ಕುಷ್ಠೀ ಕ್ಷಯೀ ತಥಾ ।**
**ರೋಗೀ ಶಿಲೀಪದಶ್ಚೈವ ಮೂಕೋಽಪಿ ಧರ್ಮಸಂಹತಃ ॥ ೯೯ ॥**

**ಏತೈರ್ವಿಲಿಖಿತಂ ಯಚ್ಚ ಧಾರಯೇನ್ನ ಗೃಹಾಶ್ರಮೀ ।**
**ಅನಾಯುಷ್ಯಕರಂ ಯಸ್ಮಾತ್ತಸ್ಮಾತ್ತತ್ಪರಿವರ್ಜಯೇತ್ ॥ ೧೦೦ ॥**

**ಹೀನಾಂಗಾ ಪ್ರತಿಮಾ ಚೈವ ಪುಸ್ತಕಂ ಮಾನಹೀನಕಂ ।**
**ನ ಕಲೌ ಧಾರಯೇದ್ಗೇಹ ಅನಾಯುಷ್ಯಕರಂ ಭವೇತ್ ॥ ೧೦೧ ॥**

**ದ್ವಾತ್ರಿಂಶದಂಗುಲೈರ್ಯುಕ್ತಂ ಕರ್ತವ್ಯಂ ಪುಸ್ತಕೋತ್ತಮಂ ।**
**ಸ ವೈ ನಾರಾಯಣಃ ಖ್ಯಾತೋ ಧಾರಣಾಚ್ಚ ಕುತೋಽಪ್ಯಲಂ ॥ ೧೦೨ ॥**

**ಚತುರ್ವಿಂಶಾಂಗುಲಂ ಯಚ್ಚ ತದ್ವೈ ಸ್ವಧನಮುಚ್ಯತೆ ।**
**ಶಂಕರಃ ಸ ತು ವಿಜ್ಞೇಯೋ ಧರ್ಮಕಾಮಫಲಪ್ರದಃ ॥ ೧೦೩ ॥**

---

೯೯. ಪತಿತರು, ಅಂತ್ಯಜರು, ಮ್ಲೇಚ್ಛರು, ಕುಷ್ಠರೋಗಿಗಳು, ಕ್ಷಯರೋಗಿಗಳು, ಶಿಲೀಪದವೆಂಬ ರೋಗಪೀಡಿತರು, ಮೂಕರು ಹೀಗೆಲ್ಲಾ ಆಗುವುದಕ್ಕೆ ಅವರು ಹಿಂದೆ ಆಚರಿಸಿದ ಇಂತಹ ಧರ್ಮಭ್ರಷ್ಟತೆಯೇ ಕಾರಣವಾಗಿದೆ.

೧೦೦. ಪತಿತರು ಮುಂತಾದವರು ಬರೆದುದನ್ನು ಗೃಹಸ್ಥಾಶ್ರಮಿಯಾದವನು ಇಟ್ಟುಕೊಳ್ಳಬಾರದು. ಅದು ಆಯುಷ್ಕರವಲ್ಲವಾದುದರಿಂದ ಅದನ್ನು ವ್ಯರ್ಜಮಾಡಬೇಕು.

೧೦೧. ಅಂಗಹೀನವಾದ ಪ್ರತಿಮೆ, ಯಥೋಕ್ತವಾದ ಅಳತೆ ಇಲ್ಲದ ಪುಸ್ತಕ ಇವುಗಳನ್ನು ಕಲಿಯುಗದಲ್ಲಿ ಮನೆಯಲ್ಲಿಟ್ಟುಕೊಳ್ಳಲೇಬಾರದು ಆದರಿಂದ ಆಯುಸ್ಸು ಹಾನಿ.

೧೦೨. ಮೂವತ್ತೆರಡು ಅಂಗುಲಗಳುಳ್ಳದು ಉತ್ತಮ ಪುಸ್ತಕವೆನಿಸಿಕೊಳ್ಳಬೇಕು. ಅದು ಮಹಾವಿಷ್ಣುಸ್ವರೂಪವೆಂದು ಪ್ರಸಿದ್ಧವಾಗಿದೆ.

೧೦೩. ಇಪ್ಪತ್ತುನಾಲ್ಕು ಅಂಗುಲವುಳ್ಳದ್ದು ಸ್ವಧನವೆನಿಸುವುದು ಧರ್ಮಕಾಮಫಲಪ್ರದವಾದ ಆದನ್ನು ಶಂಕರಸ್ವರೂಪವೆಂದು ತಿಳಿಯಬೇಕು.

**ಅಷ್ಟಾಂಗುಲಂ ಭವೇದ್ಯಚ್ಚ ತತ್ಕನಿಷ್ಠಮಿಹೋಚ್ಯತೇ ।**
**ತಸ್ಮಾದ್ಬ್ರಹ್ಮಮಯಂ ಜ್ಞೇಯಂ ತ್ರಿವರ್ಗಫಲದಾಯಕಂ ॥ ೧೦೪ ॥**

**ತಾಡಿತಾ ಜಲಪತ್ರೇ ಚ ಅಥವಾ ಚಾಗುರುತ್ವಚಾ ।**
**ಏತ್ಯಾಃ ಪತ್ರಕೃತೇ ಮಾನಂ ಭೂರ್ಜೇ ಮಾನಂ ನ ವಿದ್ಯತೇ ॥ ೧೦೫ ॥**

**ದ್ವಾದಶಾಂಗುಲಕಂ ಯಚ್ಚ ಭೂರ್ಜಕೈಡಾದಿನಿರ್ಮಿತಂ ।**
**ಅಂಗುಲಾನಾಂ ಪ್ರಮಾಣಂ ತತ್ತೇನಾಪಿ ಜ್ಞಾನಪುಸ್ತಕಂ ॥ ೧೦೬ ॥**

**ಹಸ್ತಸಂಸ್ಥಾಪಿತೇ ತಸ್ಯ ತೇನಾಯುಷ್ಯಕರಂ ಭವೇತ್ ।**
**ಧರ್ಮಶಾಸ್ತ್ರಸ್ಯ ಸಾಹಸ್ರೇ ಧರ್ಮಶಾಸ್ತ್ರಸ್ಯ ವೇತನಂ ॥ ೧೦೭ ॥**

**ಸ್ವರ್ಗಮಾರ್ಗಸ್ಯ ಗಮನೇ ಭಾರತೇ ಚ ತದರ್ಧಕಂ ।**
**ಹರಿವಂಶೇ ಸ್ವರ್ಣಮಾನೇ ಕೃತೇ ಮೂಲ್ಯಸಹಸ್ರಕೇ ॥ ೧೦೮ ॥**

---

೧೦೪. ಪುಸ್ತಕಗಳಲ್ಲಿ ಎಂಟು ಅಂಗುಲವುಳ್ಳದು ಕನಿಷ್ಠವೆನಿಸಿಕೊಳ್ಳುತ್ತದೆ. ಅದನ್ನು ತ್ರಿವರ್ಗಫಲವನ್ನು ಕೊಡುವ ಬ್ರಹ್ಮಸ್ವರೂಪವೆಂದು ತಿಳಿಯಬೇಕು.

೧೦೫. ಇವು ಜಲಪತ್ರದಿಂದಲೋ ಅಗುರುವೃಕ್ಷದ ತೊಗಟೆಯಿಂದಲೋ ರಚಿತಗಳಾಗಬೇಕು. ಆ ಪತ್ರವನ್ನು ತಯಾರಿಸುವುದಕ್ಕೂ ಇದೇ ಪ್ರಮಾಣವೆಂದು ತಿಳಿಯಬೇಕು. ಭೂರ್ಜಪತ್ರದಲ್ಲಿಯಾದರೆ ಪ್ರಮಾಣನಿಷ್ಕರ್ಷೆ ಇಲ್ಲ.

೫೦೬. ಭೂರ್ಜಕ, ಏಡ ಮೊದಲಾದ್ದರ ಪತ್ರವನ್ನು ದ್ವಾದಶಾಂಗುಲ ಪ್ರಮಾಣವಾಗಿ ಮಾಡಿಕೊಂಡು ಪುಸ್ತಕವಾಗಿ ಏರ್ಪಡಿಸಿದರೆ ಅದು ಜ್ಞಾನಪ್ರದವೆನಿಸುವುದು.

೧೦೭. ಅಂಥ ಪುಸ್ತಕವನ್ನು ಕೈಯಲ್ಲಿಟ್ಟುಕೊಂಡರೆ ಅದರಿಂದ ಆಯುಸ್ಸು ವೃದ್ಧಿಯಾಗುವುದು. ಸಹಸ್ರಪರಿಮಿತವಾದ ಧರ್ಮಶಾಸ್ತ್ರಗ್ರಂಥ ಬರೆದುದಕ್ಕೆ, ಸಹಸ್ರ ನಾಣ್ಯವನ್ನು ವೇತನವಾಗಿ ಕೊಡಬೇಕು.

೧೦೮. ಭಾರತದಲ್ಲಿ ಸ್ವರ್ಗಾರೋಹಣಪರ್ವವನ್ನು ಬರೆಸಿದಾಗ ಅದರ ಅರ್ಧದಷ್ಟು ಸಂಖ್ಯಾಸ್ವರ್ಣನಾಣ್ಯವನ್ನೂ ಹರಿವಂಶವನ್ನು ಬರೆಸಿದಾಗ ಸಹಸ್ರ ಸ್ವರ್ಣನಾಣ್ಯವನ್ನೂ ಕೊಡಬೇಕು.

ಯುಗೇಯುಗೇ ಪಾದಹೀನಂ ಧರ್ಮಂ ಕುರ್ಯಾದ್ಯಥಾರುಚಿ ।
ಪ್ರಣಮ್ಯ ಶಿರಸಾ ಸರ್ವಾನ್ ವ್ಯಾಸಾದೀನ್ ಸಂಹಿತಾಕೃತಃ ॥ ೧೦೯ ॥

ಜೈಮಿನಿಂ ಚ ತತೋ ವ್ಯಾಸಂ ಶಂಕರಂ ಚ ತಥಾ ಹರಿಂ ।
ನಮಸ್ಕಾರಮಥೈತೇಷಾಂ ಆದಿಮಧ್ಯಾವಸಾನಕೇ ॥ ೧೧೦ ॥

ತತಃ ಪ್ರವಾಚಯೇದ್ವಿಪ್ರಃ ಧರ್ಮಶಾಸ್ತ್ರಾರ್ಥಕೋವಿದಃ ।
ಅಲಕ್ಷಿತಮನಾಸ್ತದ್ವದ್ಯದ್ರೂಪಂ ಸ್ಪಷ್ಟಮುಚ್ಚರನ್ ॥ ೧೧೧ ॥

ಅಸಂಯುಕ್ತಾಕ್ಷರಪದಂ ಸ್ಪಷ್ಟಭಾಗಸಮನ್ವಿತಂ ।
ಸಪ್ತಸ್ವರಸಮಾಯುಕ್ತಂ ಸಪ್ತನಾದವಿಭೂಷಿತಂ ॥ ೧೧೨ ॥

ಸಾಮಗಾಥಾಃ ಸಮಾಶ್ರಿತ್ಯ ರಾಗಯುಕ್ತಾಂತರಂ ಪಠೇತ್ ।
ಮಣಿವಾರೋ ಧನಂ ಯತ್ಸ್ಯಾದ್ಗ್ರಾಂ ವಾಸಂತಿಕಸ್ತಥಾ ॥ ೧೧೩ ॥

---

೧೦೯. ಧರ್ಮವು ತನ್ನ ಇಚ್ಛಾಪೂರ್ವಕವಾಗಿ ಯುಗಯುಗಕ್ಕೂ ಕಾಲು ಭಾಗ ಕಡಿಮೆಯಾಗುತ್ತ ಬರುವುದು ಪುರಾಣವಾಚನದ ಆದಿಯಲ್ಲಿಯೂ, ಮಧ್ಯದಲ್ಲಿಯೂ, ಅಂತ್ಯದಲ್ಲಿಯೂ, ಶಂಕರ ಹರಿ ಇವರನ್ನು, ನಮಸ್ಕರಿಸಬೇಕು.

೧೧೦. ಬಳಿಕ ಜೈಮಿನಿ ವ್ಯಾಸ ಮೊದಲಾದ ಪುರಾಣಕರ್ತೃಗಳೆಲ್ಲರನ್ನೂ ಭಕ್ತಿಯಿಂದ ನಮಸ್ಕರಿಸಬೇಕು.

೧೧೧. ಧರ್ಮಶಾಸ್ತ್ರನಿಪುಣನಾದ ಬ್ರಾಹ್ಮಣನು ಆದಿಯಲ್ಲಿ ವ್ಯಾಸಾದಿಗಳಿಗೆ ನಮಸ್ಕಾರಮಾಡಿ, ಪೂಜ್ಯರಾದ ಅವರ ಸ್ವರೂಪವನ್ನು ಮನಸ್ಸಿನಲ್ಲಿ ಧ್ಯಾನಿಸಿಕೊಂಡು, ಅನ್ಯತ್ರ ಮನಸ್ಸು ಚಂಚಲವಾಗಿರದಂತೆ ಗಮನವಿಟ್ಟು, ಪುರಾಣವಾಚನ ಪ್ರಾರಂಭ ಮಾಡಬೇಕು.

೧೧೨. ಅಕ್ಷರಗಳೂ ಪದಗಳೂ ಒಂದರೊಡನೆ ಒಂದು ತೊಡರಿರದಂತೆ ಸ್ಪಷ್ಟವಾದ ಭಾಗಗಳಿಂದ ಸಹಿತವಾಗಿಯೂ ಸಪ್ತಸ್ವರಗಳಿಂದ ಕೂಡಿರುವಂತೆಯೂ, ಸಪ್ತನಾದಗಳಿಂದ ಅಲಂಕೃತವಾಗಿರುವಂತೆಯೂ,

೧೧೩. ಸಾಮಗಾಥೆಗಳನ್ನು ಆಶ್ರಯಿಸಿರುವಂತೆಯೂ ಮಧ್ಯದಲ್ಲಿ ರಾಗಗಳು ಸೇರಿರುವ ಹಾಗೆಯೂ ವಾಚನಮಾಡಬೇಕು.

**ಶ್ರೀರಾಗಶ್ಚೈವ ಹಿಲ್ಲೋಲರಾಗೋ ವಾಜಾವಿಕಸ್ತಥಾ ।**
**ಏವಂ ಪ್ರಕ್ರಮಮಾಣೇನ ಶ್ರೃಣುಯಾದ್ಧರ್ಮಸಂಹಿತಾಃ ॥ ೧೧೪ ॥**

**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚಾಪಿ ವಿಶೇಷತಃ ।**
**ಅಶ್ವಮೇಧಮವಾಪ್ನೋತಿ ಸರ್ವಾನ್ಕಾಮಾನವಾಪ್ನುಯಾತ್ ।**
**ಪಾಪೈಃ ಪ್ರಮುಚ್ಯತೇ ಸರ್ವೈರ್ಮಹಾಪುಣ್ಯಂ ಚ ವಿಂದತಿ ॥ ೧೧೫ ॥**

**ಶೂದ್ರಾಣಾಂ ಪುರತೋ ವೈಶ್ಯಃ ವೈಶ್ಯಾನಾಂ ಕ್ಷತ್ರಿಯಃ ಪುರಃ ।**
**ಕ್ಷತ್ರಿಯಾಸ್ತೇ ತಥಾ ವಿಪ್ರಾಚ್ಛೃಣುಯುಶ್ಚಾಗ್ರತಃ ಸದಾ ॥ ೧೧೬ ॥**

**ನ ಶೂದ್ರಃ ಕಥಯೇದ್ಧರ್ಮಾಂಸ್ತಪಅಧ್ಯಾಪನೇ ತಥಾ ।**
**ನೈಹಿಕತ್ವಂ ಪರತ್ವಂ ಚ ನ ಶುಭಂ ನ ಪರಾಂ ಗತಿಂ ॥ ೧೧೭ ॥**

**ಶೂದ್ರೇಣಾಧಿಗತಂ ನಾಸ್ತಿ ವಿಶೇಷಾಚ್ಛಬ್ದಲಕ್ಷಣಂ ।**
**ಯದ್ದ್ವಿಜಸ್ಯ ಕೃತೋ ದಾಸೋ ಬ್ರಹ್ಮಣಾವ್ಯಕ್ತಯೋನಿನಾ ॥ ೧೧೮ ॥**

---

೧೧೪. ವಾಚಕನು ಮಣಿವಾರ, ಧನ, ಗೌರ, ವಾಸಂತಿಕ, ಶ್ರೀರಾಗ, ಹಿಲ್ಲೋಲ, ಅಜಾವಿಕ (ಗಾಂಧಾರ) ಈ ರಾಗಗಳಲ್ಲಿ ಉಪಕ್ರಮಿಸಿ ವಾಚನಮಾಡು ತ್ತಿರುವಾಗ ಶ್ರೋತೃವು ಧರ್ಮಸಂಹಿತೆಗಳಲ್ಲಿ ಗಮನವಿಟ್ಟು ಶ್ರವಣಮಾಡಬೇಕು.

೧೧೫. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಇವರುಗಳೂ ವಿಶೇಷತಃ ಶೂದ್ರನೂ ಪುರಾಣಶ್ರವಣಮಾಡಿದರೆ ಅಶ್ವಮೇಧಫಲವನ್ನು ಹೊಂದುವುದಲ್ಲದೆ ಸರ್ವೇಷ್ಟಾರ್ಥ ಗಳನ್ನೂ ಹೊಂದುವರು. ಅಷ್ಟೇ ಅಲ್ಲದೆ ಸರ್ವಪಾಪಗಳಿಂದಲೂ ಮುಕ್ತರಾಗಿ ಮಹಾ ಪುಣ್ಯವನ್ನೂ ಹೊಂದುತ್ತಾರೆ.

೧೧೬ ಪುರಾಣಶ್ರವಣ ಮಾಡುವಾಗ ಯಾವಾಗಲೂ ಶೂದ್ರರಿಗಿಂತ ಮುಂಭಾಗದಲ್ಲಿ ವೈಶ್ಯರೂ ವೈಶ್ಯರಿಗಿಂತ ಮುಂದಿನ ಸಾಲಿನಲ್ಲಿ ಕ್ಷತ್ರಿಯರೂ, ಕ್ಷತ್ರಿಯರಿ ಗಿಂತ ಮುಂದಿನ ಪಂಕ್ತಿಯಲ್ಲಿ ಬ್ರಾಹ್ಮಣರೂ ಕುಳಿತುಕೊಂಡು ಕೇಳಬೇಕು.

೧೧೭. ಶೂದ್ರನು ಧರ್ಮಶಾಸ್ತ್ರವಿಚಾರಗಳನ್ನು ಹೇಳಬಾರದು, ತಪಸ್ಸು ಮಾಡಬಾರದು, ಅಧ್ಯಯನಮಾಡಿಸಬಾರದು.

೧೧೮. ಹಾಗೆ ಮಾಡಿದರೆ ಐಹಿಕಫಲವಾಗಲಿ, ಆಮುಷ್ಮಿಕಫಲವಾಗಲಿ, ಶುಭವಾಗಲಿ, ಉತ್ಕೃಷ್ಟಗತಿಯಾಗಲಿ ಯಾವುದೂ ಸಿಕ್ಕುವುದಿಲ್ಲ. ವಿಶೇಷತಃ

**ಶ್ವಸೃಗಾಲ ಖರೀಕ್ಷೀರಮಪೇಯಂ ಹಿ ಯಥಾ ಭವೇತ್ ।**
**ಏವಂ ಶೂದ್ರಮುಖಾದ್ಧರ್ಮಾ ನ ಗ್ರಾಹ್ಯಾ ಶಬ್ದಸಂಸ್ಕೃತಾಃ ॥ ೧೧೯ ॥**

**ಅಮೇಧ್ಯಂ ಶುದ್ಧ್ಯತೇ ತೋಯೈಃ ಶೂದ್ರಃ ಶ್ರೋತಾ ಹಿ ಶುದ್ಧ್ಯತಿ ।**
**ಏವಂ ಶೂದ್ರೋಽಪ್ಯಶುಚಿಃ ಸ್ಯಾಪ್ಯದಿ ವ್ಯಾಕರಣಾರ್ಥವಿತ್ ॥ ೧೨೦ ॥**

**ಯಃ ಶೂದ್ರ ಉದ್ದಿಶೇದ್ಧರ್ಮಂ ತಥಾ ಚಾಗಮವೈದಿಕಂ ।**
**ಸ ವೈ ವಧ್ಯೋ ನರೇಂದ್ರೇಣ ಜಿಹ್ವಾಂ ಚಕ್ರೇಣ ಛೇದಯೇತ್ ॥ ೧೨೧ ॥**

**ಬುಧ್ಯಮಾನಃ ಸದಾಹ್ಯರ್ಥಂ ಗ್ರಂಥಾರ್ಥಂ ಕೃತ್ಸ್ನಮೇವ ಚ ।**
**ಯ ಏವಂ ಕಥಯೇತ್ಸಮ್ಯಕ್ಸ ವಿಪ್ರೋ ವ್ಯಾಸ ಉಚ್ಯತೇ ॥ ೧೨೨ ॥**

---

ಶೂದ್ರನು ಶಬ್ದಲಕ್ಷಣ (ವ್ಯಾಕರಣ) ವನ್ನು ಕಲಿಯತಕ್ಕುದಲ್ಲ. ಏಕೆಂದರೆ ಅವ್ಯಕ್ತ ಯೋನಿಜನಾದ ಬ್ರಹ್ಮನು ಶೂದ್ರನನ್ನು ದ್ವಿಜರದಾಸನೆಂದು ನಿಷ್ಕರ್ಷೆಮಾಡಿದ್ದಾನೆ.

೧೧೯. ನಾಯಿ, ನರಿ, ಕತ್ತೆ, ಇವುಗಳ ಕೆಚ್ಚಲಲ್ಲಿ ಹಾಲು ಇದ್ದರೂ ಹೇಗೆ ಯಾರೂ ಕುಡಿಯಬಾರದೋ, ಹಾಗೆಯೇ ಶೂದ್ರನು ಹೇಳಿದ ಸಂಸ್ಕೃತ ಶಬ್ದಗಳನ್ನೂ ಧರ್ಮಗಳನ್ನೂ ಕೇಳಬಾರದು.

೧೨೦. ಅಶುದ್ಧವಾದ ವಸ್ತುಸಂಪರ್ಕವು ಜಲದಿಂದ ತೊಳೆದರೆ ಹೇಗೆ ಶುದ್ಧವಾಗುವುದೋ, ಹಾಗೆ ಅಶುದ್ಧನಾದ ಶೂದ್ರಶ್ರೋತೃವು ಬ್ರಾಹ್ಮಣಮುಖೋದ್ಗತವಾದ ಶಬ್ದಗಳನ್ನು ಕೇಳಿ ಶುದ್ಧನಾಗುವನು. ಕದಾಚಿತ್ ಶೂದ್ರನು ವ್ಯಾಕರಣಾರ್ಥಗಳನ್ನೂ ಸುಶಬ್ದಗಳನ್ನೂ ತಿಳಿದಿದ್ದರೂ ಅವನು ಅಶುಚಿಯು.

೧೨೧. ಯಾವ ಶೂದ್ರನು ವೈದಿಕ ಆಗಮಗಳನ್ನು ಹೇಳುವನೋ, ಮತ್ತು ಧರ್ಮಕಥನಮಾಡಲು ಉದ್ದೇಶಪಟ್ಟು ಪ್ರವರ್ತಿಸುವನೋ, ಅಂಥ ಸಂದರ್ಭದಲ್ಲಿ ಸಮರ್ಥನಾದ ರಾಜನು ಅವನ ನಾಲಗೆಯನ್ನು ಶಸ್ತ್ರದಿಂದ ಛೇದಿಸಬೇಕು, ಅಂಥವನು ಮರಣದಂಡನೆಗೆ ಕೂಡ ಅರ್ಹನೆನಿಸುವನು.

೧೨೨. ತಾನು ಸದಾ ಗ್ರಂಥಾರ್ಥವನ್ನು ಚೆನ್ನಾಗಿ ತಿಳಿದುಕೊಂಡು, ಸಮಗ್ರವಾಗಿ ಅರ್ಥವಿವರಣ ಮಾಡುವ ಬ್ರಾಹ್ಮಣನು, ವ್ಯಾಸಸದೃಶನು ಎನಿಸುವನು. ಅವನು ಪಟ್ಟಣ, ಗ್ರಾಮ, ಪುಣ್ಯಸ್ಥಳ ಇವುಗಳಲ್ಲಿ ವಾಸಮಾಡಬೇಕು ಎಂದು ಹೇಳಿದೆ. ಶಿಕ್ಷಿತಾಂತಃಕರಣರಾದ ಅಂಥವರೇ ಧನ್ಯರು. ಅವರೇ ಕೃತಾರ್ಥರು. ಇದರಲ್ಲಿ ಸಂಶಯವಿಲ್ಲ.

**ವಸೇತ್ಸ ಪತ್ತನೇ ಗ್ರಾಮೇ ಪುಣ್ಯೇ ದೇಶೇ ಸ ಕೀರ್ತಿತಃ ।**
**ತೇ ಧನ್ಯಾಸ್ತೇ ಕೃತಾತ್ಮಾನಸ್ತೇ ಕೃತಾರ್ಥಾ ನ ಸಂಶಯಃ ॥**
**ವಸಂತಿ ಪತ್ತನೇ ತಸ್ಮಿನ್ ವ್ಯಾಖ್ಯಾತಾ ಯತ್ರ ಸಂವಸೇತ್ ॥ ೧೨೩ ॥**

**ಯಥಾರ್ಕಹೀನಂ ದಿವಸಶ್ಚಂದ್ರಹೀನಾ ಯಥಾ ನಿಶಾ ।**
**ನ ರಾಜಂತೇ ಸಭಾ ತದ್ವದ್ವ್ಯಾಸೇನ ರಹಿತಾ ದ್ವಿಜಾಃ ॥ ೧೨೪ ॥**

**ಯದ್ಗೃಹೇ ನೈವ ಶಿಶವಃ ನ ರಾಜೇತ ಗೃಹಂ ಕ್ವಚಿತ್ ।**
**ಯಥೈಕತೋ ಗ್ರಹಾಃ ಸರ್ವೇ ಏಕತಸ್ತು ದಿವಾಕರಃ ॥ ೧೨೫ ॥**

**ತಥೈವ ಸೋದರಾಗೇಹೇ ದೃಷ್ಟ್ವಾ ಪುಷ್ಕರವರ್ಣನಂ**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ಸಪ್ತಮೋಽಧ್ಯಾಯಃ.**

---

೧೨೩. ವ್ಯಾಸರಿಂದ ರಚಿತವಾದ ಪುರಾಣವನ್ನು ವಾಚನಮಾಡುವಂಥ ವಾಚಕನು ಯಾವ ಪಟ್ಟಣದಲ್ಲಿ ಇರುವುದಿಲ್ಲವೋ, ಆ ಪಟ್ಟಣವು ಸೂರ್ಯನಿಲ್ಲದ ಹಗಲಿನಂತೆಯೂ, ಚಂದ್ರನಿಲ್ಲದ ರಾತ್ರಿಯಂತೆಯೂ ಪ್ರಕಾಶಿಸುವುದಿಲ್ಲ.

೧೨೪. ಯಾವ ಬ್ರಾಹ್ಮಣರ ಮಧ್ಯದಲ್ಲಿ ವ್ಯಾಸನು (ವ್ಯಾಸರಚಿತವಾದ ಪುರಾಣವಾಚಕನು) ಇರುವುದಿಲ್ಲವೋ, ಅಂಥ ಬ್ರಾಹ್ಮಣರೂ ಶೋಭಿಸುವುದಿಲ್ಲ. ಮಕ್ಕಳೇ ಇಲ್ಲದ ಮನೆಯು ಹೇಗೆ ಶೋಭಿಸುವುದಿಲ್ಲವೋ, ಹಾಗೆ ಗ್ರಹಗಳೆಲ್ಲಾ ಇದ್ದರೂ ಸೂರ್ಯನಿಲ್ಲದ ಆಕಾಶವು ನೋಡುವುದಕ್ಕೆ ಶೋಭಿಸುವುದಿಲ್ಲ.

೧೨೫. ಮನೆಯಲ್ಲಿ ಅನೇಕ ಸಹೋದರರು ಇದ್ದರೂ ಗೃಹಸ್ವಾಮಿಯಿಲ್ಲದಿದ್ದರೆ ಹೇಗೆ ಪ್ರಕಾಶಿಸುವುದಿಲ್ಲವೋ, ಹಾಗೆ ಆಕಾಶದಲ್ಲಿ ಅನೇಕ ಗ್ರಹಗಳಿದ್ದರೂ ಸೂರ್ಯನಿಲ್ಲದಿದ್ದರೆ ಪ್ರಕಾಶಿಸುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ಪ್ರಥಮಭಾಗೇ
## ಅಷ್ಟಮೋಽಧ್ಯಾಯಃ

---

॥ ಸೂತ ಉವಾಚ ॥

ಶೃಣುಧ್ವಂ ವಿಪ್ರಸಂಘಾತಾಃ ಪುರಾಣಂ ದೇವಸಮ್ಮತಂ ।
ಯಚ್ಛೃತ್ವಾ ಮುಚ್ಯತೇ ಪಾಪಾತ್ಪುರುಷೋ ಬ್ರಹ್ಮಹತ್ಯಯಾ ॥ ೧ ॥

ತೃತೀಯಂ ಶೈವಮಾಖ್ಯಾತಂ ತತೋ ಭಾಗವತಂ ಪರಂ ।
ಪಂಚಮಂ ಚ ತಥಾ ಮಾತ್ಸ್ಯಂ ಭವಿಷ್ಯಂ ಷಷ್ಠಮುಚ್ಯತೆ ॥ ೨ ॥

ಅಸಾಮರ್ಥ್ಯೇ ಚ ಮಾತ್ಸ್ಯೋಕ್ತಂ ವೈಷ್ಣವಂ ಚ ಭವಿಷ್ಯಕಂ ।
ಭಾರತೇ ಚಾಪಿ ಪರ್ವಂ ಚ ಶಾಂತಿರ್ಭೈಷ್ಮೀಯಕಂ ತಥಾ ॥ ೩ ॥

---

## ಎಂಟನೆಯ ಅಧ್ಯಾಯ

೧. ಸೂತರು ಶೌನಕಾದಿಋಷಿಗಳಿಗೆ ಹೇಳುತ್ತಾರೆ—ಓ ಬ್ರಾಹ್ಮಣೋತ್ತಮರೇ! ದೇವತೆಗಳಿಗೆ ಇಷ್ಟವಾದ ಪುರಾಣಗಳು ಯಾವುವೆಂಬುದನ್ನು ಹೇಳುವೆನು ಕೇಳಿರಿ. ಅದನ್ನು ಶ್ರವಣಮಾಡುವುದರಿಂದ ಬ್ರಹ್ಮಹತ್ಯಾದೋಷದಿಂದ ಮುಕ್ತರಾಗುತ್ತಾರೆ.

೨. ರಾಮಾಯಣ ಮಹಾಭಾರತಗಳೆಂಬಿವು ಸರ್ವರಿಗೂ ವಿದಿತವಾದ ಪುರಾಣಗಳು. ಮೂರನೆಯದು ಶೈವಪುರಾಣ, ನಾಲ್ಕನೆಯದು ಶ್ರೇಷ್ಠವಾದ ಭಾಗವತ ಐದನೆಯದು ಮಾತ್ಸ್ಯಪುರಾಣ, ಆರನೆಯದು ಭವಿಷ್ಯಪುರಾಣವು.

೩. ಮಾತ್ಸ್ಯೋಕ್ತ ವಿಷಯಗಳನ್ನು ಗ್ರಹಣಮಾಡಲು ಸಾಮರ್ಥ್ಯವಿಲ್ಲದೆ ಹೋದರೆ, ವಿಷ್ಣುಪುರಾಣ ಭವಿಷ್ಯಪುರಾಣಗಳನ್ನಾದರೂ ಅವಲೋಕಿಸಿ ಗ್ರಹಿಸಬೇಕು.

**ಪರಾಶರಮತಂ ಗೃಹ್ಯಂ ಗೋಭಿಲೋಕ್ತಾನಿ ಯಾನಿ ಚ ।**
**ಕಾತ್ಯಾಯನೋಕ್ತಮಪರಂ ಅಭ್ಯಸೇನ್ನಿಗಮಾದಿತಃ　　॥ ೪ ॥**

**ಅಂತರೇಣಾಗತೇ ಮರ್ತ್ಯೇ ಶಾಸ್ತ್ರಂ ನಾಧ್ಯಾಪಯೇತ್ಕ್ವಚಿತ್ ।**
**ಏಕರಾತ್ರಂ ಗತೇ ಮರ್ತ್ಯೇ ತ್ರಿರಾತ್ರಮಜಮೇಷಯೋಃ　　॥ ೫ ॥**

**ಮಂಡೂಕೇ ಪಂಚರಾತ್ರಂ ತು ಸರ್ಪೇ ರಾತ್ರಿಚತುಷ್ಟಯಂ ।**
**ಸಂವತ್ಸರಂ ತು ತುರಗೇ ಗಜೇ ದ್ವಾದಶವತ್ಸರಾನ್　　॥ ೬ ॥**

**ಮಾಸಮೇಕಂ ಖರೇ ಕಾಕೇ ಸ್ಥಾನತ್ಯಾಗಾನ್ನ ಕುತ್ರಚಿತ್ ।**
**ಕೌಶಿಕೇ ಗೃಧ್ರಕೇ ಚೈವ ಅಹೋರಾತ್ರಂ ಪ್ರಚಕ್ಷತೇ　　॥ ೭ ॥**

---

ಭಾರತವನ್ನು ಸಮಗ್ರವಾಗಿ ಓದಲು ಆಗದೇಹೋದರೆ ಶಾಂತಿಪರ್ವ ಭೀಷ್ಮಪರ್ವಗಳನ್ನಾದರೂ ಓದಬೇಕು.

೪. ಪರಾಶರಸ್ಮೃತಿ, ಗೃಹ್ಯಸೂತ್ರಗಳು, ಗೋಭಿಲಸ್ಮೃತಿ, ಕಾತ್ಯಾಯನಸ್ಮೃತಿ ಇವನ್ನು ಪ್ರಣವಪೂರ್ವಕವಾಗಿ ಅಭ್ಯಾಸಮಾಡಬೇಕು.

೫. ಪಾಠವಾಗುತ್ತಿರುವಾಗ ಹೊರಗಿನ ಮನುಷ್ಯನು ಯಾವನಾದರೂ ಅಲ್ಲಿಗೆ ಪ್ರವೇಶಿಸಿದರೆ, ಯಾವ ಕಾರಣದಿಂದಲೂ ಪಾಠವನ್ನು ಮುಂದುವರಿಸಬಾರದು. ಹಾಗೆ ಅವರು ನುಗ್ಗಿಬಂದುದರಿಂದುಂಟಾದ ಅಶುದ್ಧಿಪರಿಹಾರಕ್ಕಾಗಿ ಒಂದುರಾತ್ರಿ ಆ ಸ್ಥಳವನ್ನು ಬಿಡಬೇಕು. ಟಗರು, ಆಡು ಇವುಗಳು ಆ ಪ್ರದೇಶಕ್ಕೆ ಬಂದರೆ ಮೂರುರಾತ್ರಿ ಬಿಡಬೇಕು.

೬. ಕಪ್ಪೆಯು ಅಲ್ಲಿಗೆ ಪ್ರವೇಶಿಸಿದರೆ ಐದುರಾತ್ರಿ ಆ ಸ್ಥಳವನ್ನು ಬಿಡಬೇಕು. ಸರ್ಪವು ಪ್ರವೇಶಮಾಡಿದರೆ ನಾಲ್ಕುದಿನಗಳು ಆ ಮನೆಯಲ್ಲಿ ವಾಚನವನ್ನು ಬಿಡಬೇಕು. ಕುದುರೆ ಕಟ್ಟುತ್ತಿದ್ದ ಸ್ಥಳವು ವಾಚನಕಾರ್ಯಕ್ಕೆ ಅರ್ಹವಾಗಬೇಕಾದರೆ ಒಂದು ವರ್ಷಕಾಲ ಬಿಡಬೇಕು. ಆನೆಯನ್ನು ಕಟ್ಟಿದ ಸ್ಥಳವಾದಪಕ್ಷದಲ್ಲಿ ಹನ್ನೆರಡು ವರ್ಷಗಳ ಕಾಲ ಬಿಡಬೇಕು.

೭. ಕತ್ತೆ, ಕಾಗೆ ಇವು ನುಗ್ಗಿದ ಸ್ಥಳವನ್ನು ಒಂದುತಿಂಗಳ ಕಾಲ ಬಿಡಬೇಕು. ಗೂಬೆ, ಹದ್ದು ಇವು ಪ್ರವೇಶಮಾಡಿದರೆ ಒಂದು ಹಗಲೂರಾತ್ರಿ ಪಠ ಬಿಟ್ಟುಬಿಡಬೇಕು. ಅಷ್ಟುದಿವಸ ಆ ಸ್ಥಳವನ್ನು ಬಿಟ್ಟಹೊರತು ಅವು ಶುದ್ಧವಾಗುವುದಿಲ್ಲ.

ತ್ರಿರಾತ್ರಮಪಿ ಮಾರ್ಜಾರೇ ನಕುಲೇ ಮೂಷಕೇ ಖರೇ ।
ಹಂಸೇ ದಿನಮನಧ್ಯಾಯಂ ಕ್ಷುದ್ರಜಂತೌ ನ ದೂಷಣಂ ॥ ೮ ॥

ಅಧ್ಯಾಪಯೇದ್ಗುರೋಃ ಪುತ್ರಂ ಜ್ಞಾನಿನಂ ಧಾರ್ಮಿಕಂ ಶುಚಿಂ ।
ಭಕ್ತಂ ಶಾಂತಂ ವೈಷ್ಣವಂ ಚ ಜಿತಕ್ರೋಧಂ ಜಿತೇಂದ್ರಿಯಂ ॥ ೯ ॥

ಅಧ್ಯಾತ್ಮಾಧ್ಯಾಪಯೇದೇಭ್ಯಃ ಶಠಂ ಪಾಪಹರಂ ದ್ವಿಷಂ ।
ಅನ್ಯಾಯೇನೈವ ಯಚ್ಛಂತಮಭಯಂ ದಾಂಭಿಕಂ ದ್ವಿಷಂ ॥ ೧೦ ॥

ನಿರರ್ಥಕಂ ಮಂಥರಂ ಚ ವಿಶುಶ್ರೂಷುಮಯಾಜಕಂ ।
ಷಂಡಂ ಚೈವಾನೃಜುಂ ಕ್ರುದ್ಧಂ ಕೃಪಣಂ ವ್ಯಸನಾರ್ಥಿನಂ ॥ ೧೧ ॥

---

೮. ಬೆಕ್ಕು ಪ್ರವೇಶಮಾಡಿದ ಸ್ಥಳದಲ್ಲಿ ಮೂರುರಾತ್ರಿ ಕಳೆಯುವವರೆಗೆ ಅಧ್ಯಯನಮಾಡಬಾರದು. ಮುಂಗುಸಿ, ಇಲಿ, ಕತ್ತೆ, ಹಂಸ ಇವು ಪ್ರವೇಶಿಸಿದರೆ ಅಲ್ಲಿ ಒಂದುದಿನ ಅಧ್ಯಯನಮಾಡಬಾರದು. ಇರುವೆ, ಜಿರಲೆ, ನೊಣ ಮುಂತಾದ ಕ್ಷುದ್ರ ಜಂತುಗಳ ಪ್ರವೇಶದಿಂದ ಅಧ್ಯಯನಕ್ಕೆ ಬಾಧಕವಿಲ್ಲ.

೯. ಚೆನ್ನಾಗಿ ಗ್ರಹಣಶಕ್ತಿಯುಳ್ಳವನೂ, ಧಾರ್ಮಿಕನೂ, ಶುಚಿಯೂ, ಭಕ್ತನೂ, ಶಾಂತನೂ, ವಿಷ್ಣುಸರ್ವೋತ್ತಮನೆಂಬ ಮತದವನೂ, ಕೋಪವನ್ನು ಜಯಿಸಿದವನೂ, ಇಂದ್ರಿಯನಿಗ್ರಹಪರನೂ, ಆದವನಿಗೇ ಆತ್ಮವಿಚಾರವನ್ನು ತಿಳಿಸಬೇಕು.

೧೦. ನೀಚ, ಪಾಪದಾಯಕವಾದ (ಕಬ್ಬಿಣ ಚಿನ್ನ ದೇವಸ್ವತ್ತು) ಇಂಥ ವಸ್ತುಗಳನ್ನು ಅಪಹರಿಸುವವನು, ಎಲ್ಲರಲ್ಲೂ ದ್ವೇಷಮಾಡುವ ಸ್ವಭಾವದವನು, ಅನ್ಯಾಯವಾಗಿ ದಂಡಕೊಡುವವನು, ಯಾವ ಅಕಾರ್ಯಕ್ಕೂ ಭಯಪಡದವನು, ಡಂಭವುಳ್ಳವನು.

೧೧. ಅಪ್ರಯೋಜಕನು, ಆಲಸ್ಯಸ್ವಭಾವದವನು, ವೃದ್ಧರಸೇವೆ ಮಾಡದೆ ಇರುವವನು, ಶ್ರವಣಮಾಡಲು ಆಸಕ್ತಿ ಇಲ್ಲದವನು, ಯಾಜಕನಲ್ಲದವನು, ನಪುಂಸಕ, ಸರಳತೆಯಿಲ್ಲದ ವಕ್ರಸ್ವಭಾವದವನು, ಕೋಪಿಷ್ಠ, ಜಿಪುಣ, ಇತರರಿಗೆ ಕೇಡನ್ನೇ ಕೋರತಕ್ಕವನು.

ನಿಂದಕಂ ಚಾವಿಧಿಜ್ಞಂ ಚ ದೂರತಃ ಪರಿವರ್ಜಯೇತ್ ।
ಅಪ್ರಚ್ಛನ್ನನತಂ ಬ್ರೂಯಾತ್ಪುತ್ರಪೌತ್ರಾದಿಕಾದೃತೇ ॥ ೧೨ ॥

ವಿದ್ಯಯಾ ಸಹ ಮರ್ತವ್ಯಂ ನ ದದ್ಯಾಚ್ಚ ಪೃಥಗ್ಜನೇ ।
ಅತೋ ವಿದ್ಯಾ ವದತ್ಯೇವಂ ಪಾಠಯಂತಂ ದ್ವಿಜೋತ್ತಮಂ ॥ ೧೩ ॥

ಮಾ ದದ್ಯಾದ್ಭಕ್ತಿಹೀನಾಯ ದುರ್ಜನಾಯ ದುರಾತ್ಮನೇ ।
ಅಪ್ರಮಾದಾಯ ವಿಪ್ರಾಯ ಶುಚಯೇ ಬ್ರಹ್ಮಚಾರಿಣೇ ॥ ೧೪ ॥

ಸಾರ್ಥಕಾಯ ವಿಧಿಜ್ಞಾಯ ಸಾಧವೇ ದೇಹಿಸತ್ತಮ ।
ದದ್ಯಾದ್ಯದಿ ನಿಷಿದ್ಧಾಯ ವಿದ್ಯಾಧನಮನುತ್ತಮಂ ॥ ೧೫ ॥

---

೧೨. ಎಲ್ಲರನ್ನೂ ನಿಂದಿಸುವವನು, ಕಾರ್ಯಗಳ ವಿಧಾನ (ವಿಧಿಯನ್ನು) ವನ್ನು ತಿಳಿಯದವನು, ಇಂಥವರನ್ನು ದೂರದಲ್ಲಿಟ್ಟಿರಬೇಕು. (ಹತ್ತಿರ ಸೇರಿಸಬಾರದು.) ಮಕ್ಕಳು, ಮೊಮ್ಮಕ್ಕಳು ಮೊದಲಾದವರು ಹೊರತು ಇತರರ ಎದುರಿಗೆ ಪ್ರಕಾಶವಾಗಿ ನಮ್ರನಾಗಿ ಇರತಕ್ಕವನಿಗೇ ವಿದ್ಯೆಯನ್ನು ಹೇಳಬೇಕು.

೧೩. ಶಿಷ್ಯರಾಗುವುದಕ್ಕೆ ಅರ್ಹರು ಸಿಕ್ಕದೇ ಇದ್ದರೆ, ತಾನು ಅಭ್ಯಾಸಮಾಡಿದ ವಿದ್ಯೆಯನ್ನು ತನ್ನಲ್ಲಿಟ್ಟುಕೊಂಡು ಸಾಯಬೇಕೇ ವಿನಾ, ಅನರ್ಹರಿಗೆ ವಿದ್ಯಾದಾನ ಮಾಡಬಾರದು. ಈ ವಿಚಾರದಲ್ಲಿ ವಿದ್ಯಾಭಿಮಾನಿದೇವತೆಯು ಅಧ್ಯಾಪಕನಾದ ದ್ವಿಜನನ್ನು ಕುರಿತು,

೧೪. ಅಯ್ಯಾ ದೇಹಧಾರಿಗಳಲ್ಲಿ ಶ್ರೇಷ್ಠನೆನಿಸಿದ ದ್ವಿಜನೇ! ಕೇಳು; "ಭಕ್ತಿಹೀನನಿಗೂ, ದುರ್ಜನನಿಗೂ, ದುಷ್ಟಸ್ವಭಾವದವನಿಗೂ, ನನ್ನನ್ನು ದಾನಮಾಡಬೇಡ. ಪ್ರಮಾದಸ್ವಭಾವದವನಲ್ಲದ ಬ್ರಾಹ್ಮಣ, ಶುಚಿಯಾದ ಬ್ರಹ್ಮಚಾರಿ, ಪ್ರಯೋಜನ ವುಂಟುಮಾಡಿಕೊಳ್ಳತಕ್ಕ ಸ್ವಭಾವದವನು. ವಿಧಿಯನ್ನು ಬಲ್ಲವನು, ಸತ್ಪುರುಷ ಇಂಥವನಿಗೆ ನನ್ನನ್ನು ಕೊಡು" ಎಂದು ಹೇಳುತ್ತದೆ.

೧೫. ಸರ್ವೋತ್ತಮವಾದ ಈ ವಿದ್ಯಾದಾನವನ್ನು ಕೊಡಬಾರದವನಿಗೆ ಕೊಟ್ಟರೂ, ಅಥವಾ ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳುವ ಯೋಗ್ಯತೆ ಇಲ್ಲದೆ ಇರುವವನು ವಿದ್ಯಾಗ್ರಹಣ ಮಾಡಿದರೂ, ಅನುಕೂಲಕ್ಕಿಂತಲೂ ಹಾನಿಯೇ ಹೆಚ್ಚು.

ತಯೋರೇಕತರೋ ಗಚ್ಛೇದಚಿರೇಣ ಯಮಕ್ಷಯಂ ।
ಅನ್ಯಾಯೇನ ಗ್ರಹಂ ವಿದ್ಯಾಮನ್ಯಂ ಪಾಠಯತೇ ಸುಖಾತ್ ॥ ೧೬ ॥

ಸ ಯಾತಿ ನರಕಂ ಘೋರಂ ವಿದ್ಯಾವರ್ಜ್ಯಃ ಸ ಉಚ್ಯತೇ ।
ಆಧ್ಯಾತ್ಮಿಕಂ ವೈದಿಕಂ ಚಾಲೌಕಿಕಂ ವಾಥ ಯೋ ವದೇತ್ ॥ ೧೭ ॥

ವ್ಯಾಸಮಾದೌ ಪ್ರಣಮ್ಯಾಥ ತತೋಽಧೀಯೀತ ಸುವ್ರತಃ ।
ಕರ್ಮಕಾಂಡಂ ಜ್ಯೋತಿಷಶ್ಚ ತದ್ವಿನಾ ನ ಸಮಭ್ಯಸೇತ್ ॥ ೧೮ ॥

ಆದಿಭಾಗಸಮಭ್ಯಾಸಾದ್ದರಿದ್ರಶ್ಚಾಭಿಜಾಯತೇ ।
ವಾದಭಾಗಸಮಭ್ಯಾಸಾದ್ಧನನಾಶಾಯ ಜಾಯತೇ ॥ ೧೯ ॥

ನಿಧಿಭಾಗಸಮಭ್ಯಾಸಾಜ್ಜಾಯತೇ ನಾರಕೇ ಕುಲೇ ।
ಯಾನ್ಯಸುಕ್ತಾನಿ ಶಾಸ್ತ್ರಾಣಿ ಮಾನವೀಯಾನಿ ಯಾನಿ ಚ ॥ ೨೦ ॥

---

೧೬. ಆ ರೀತಿ ಅಯೋಗ್ಯರಾದ ಆ ವಿದ್ಯಾದಾತೃ ಪ್ರತಿಗೃಹೀತೃಗಳಿಬ್ಬರಲ್ಲಿ ಯಾವನಾದರೊಬ್ಬನು ಜಾಗ್ರತೆ ಯಮಲೋಕಕ್ಕೆ ಹೋಗುತ್ತಾನೆ. ಅನ್ಯಾಯದಿಂದ ಗ್ರಹಣಮಾಡಿದ ವಿದ್ಯೆಯನ್ನು ಬೇರೊಬ್ಬನಿಗೆ ತಾನು ಸುಖವಾಗಿ ಹೇಳಿಕೊಟ್ಟಾಗ್ಯೂ ತನ್ನ ಸಂಪಾದನಕ್ರಮದಲ್ಲಿಯೇ ದೋಷವಿರುವುದು.

೧೭. ಈ ಕಾರಣದಿಂದ ಅವನು ಘೋರನರಕವನ್ನು ಹೊಂದುವನಲ್ಲದೆ ವಿದ್ಯಾವಿಹೀನನೆನಿಸಿಕೊಳ್ಳುತ್ತಾನೆ. ಆಧ್ಯಾತ್ಮಿಕ ವಿಷಯವನ್ನೂ ವೈದಿಕ ವಿಷಯವನ್ನೂ ಬೋಧಿಸುವ ಗುರುವಿಗೂ ವ್ಯಾಸರಿಗೂ ಆದಿಯಲ್ಲಿ ನಮಸ್ಕರಿಸಬೇಕು.

೧೮. ಆ ಮೇಲೆ ಸುವ್ರತನಾಗಿ ಅಧ್ಯಯನಮಾಡಬೇಕು. ನಿತ್ಯಕರ್ಮಾನುಷ್ಠಾನವಿಲ್ಲದೆಯೂ, ಜ್ಯೋತಿಶಾಸ್ತ್ರೋಕ್ತ ಪ್ರಕಾರವಾಗಿ ದಿನಶುದ್ಧ್ಯಾದಿಗಳನ್ನು ನೋಡದೆಯೂ ವಿದ್ಯಾಭ್ಯಾಸಕ್ಕೆ ಆರಂಭಮಾಡಬಾರದು.

೧೯. ಆದಿಭಾಗವನ್ನು ಮಾತ್ರ ಅಭ್ಯಾಸಮಾಡಿ ಅಷ್ಟಕ್ಕೇ ಬಿಟ್ಟುಬಿಟ್ಟರೆ ದರಿದ್ರನಾಗುತ್ತಾನೆ. ವಾದಭಾಗವನ್ನು ಮಾತ್ರ ಅಭ್ಯಾಸಮಾಡಿದರೆ ಧನನಾಶವಾಗುತ್ತದೆ.

೨೦. ನಿಧಿಭಾಗವನ್ನು ಮಾತ್ರ ಅಭ್ಯಾಸಮಾಡುವುದರಿಂದ ನರಕಯೋಗ್ಯರಾದ ನೀಚರಕುಲದಲ್ಲಿ ಹುಟ್ಟುತ್ತಾನೆ. ಗೌರವಾರ್ಹವಾದ ಮಹಾಶಾಸ್ತ್ರಗಳನ್ನು ಗುರುಮುಖೇನ ಕ್ರಮವಾಗಿ ತಿಳಿಯಬೇಕೇ ಹೊರತು ತಾನೇ ಓದಿಕೊಳ್ಳಬಾರದು.

**ಮ್ಲೇಚ್ಛೋಕ್ತಾನಿ ಮಹಿಮ್ನಾನಿ ನಾಭ್ಯಸೇದ್ದೂರತಸ್ತ್ಯಜೇತ್ ।**
**ಲೋಕಾನಾಂ ಜ್ಞಾನವೃದ್ಧ್ಯರ್ಥಂ ಯಃ ಕುರ್ಯಾದ್ಧರ್ಮಸಂಗ್ರಹಂ ॥ ೨೧ ॥**

**ಪ್ರವರ್ತಯಿತ್ವಾ ಸ ಗುರುಃ ಭವೇಜ್ಜ್ಞಾನಪ್ರದಃ ಪಿತಾ ।**
**ಜ್ಞಾನದಾತಾ ಚ ಲೋಕಾನಾಂ ತೇಷು ಧರ್ಮಃ ಪ್ರವರ್ತತೇ ॥ ೨೨ ॥**

**ನಿಗಮಾನಾಂ ಜ್ಯೋತಿಷಾಣಾಂ ವೇದಾನಾಂ ನಾಟಕಸ್ಯ ಚ ।**
**ವ್ಯಾಖ್ಯಾನಸಂಗ್ರಹಂ ಕೃತ್ವಾ ಕಲೌ ನಾಶಮವಾಪ್ನುಯಾತ್ ॥ ೨೩ ॥**

**ವೇದಾನಾಂ ಧರ್ಮಶಾಸ್ತ್ರಾಣಾಂ ಪುರಾಣಾನಾಂ ತಥೈವ ಚ ।**
**ಮೀಮಾಂಸಾಜ್ಯೋತಿಷಾಂ ಚೈವ ನಾಟಕಾನಾಂ ವಿರಂಚನೀ ॥ ೨೪ ॥**

**ಭಾಗಾವಸಾನೇ ಕಥಿತಃ ಪುರಾಣೇಽಧ್ಯಾಯ ಏವ ಚ ।**
**ಪುಷ್ಪಕಶ್ಚ ಪರಿಚ್ಛೇದಃ ಖಂಡಶ್ಚ ಪ್ರತಿಖಂಡಕಃ ॥ ೨೫ ॥**

---

೨೧. ಮಹಿಮಾಯುಕ್ತವಾದ ಶಾಸ್ತ್ರಗಳು ಮ್ಲೇಚ್ಛಜಾತಿಯವರಿಂದ ಉಕ್ತವಾದರೆ ಅವನ್ನು ಅಭ್ಯಾಸಮಾಡಬಾರದು. ಅಂಥ ಸಂದರ್ಭದಲ್ಲಿ ಆ ವ್ಯಾಸಂಗವನ್ನೇ ದೂರಮಾಡಬೇಕು. ಜನರಿಗೆ ಜ್ಞಾನವೃದ್ಧಿಯಾಗುವುದಕ್ಕಾಗಿ ಧರ್ಮನಿರ್ಣಯ ಮಾಡಿರುವರಷ್ಟೆ.

೨೨. ಜನರು ಆ ರೀತಿ ಪ್ರವರ್ತಿಸುವಂತೆ ಯಾವ ಮಾನವನು ಏರ್ಪಾಡು ಮಾಡುವನೋ ಅಂತಹ ಪೂಜ್ಯನು ಜ್ಞಾನಪ್ರದನಾದ ತಂದೆಯೆನಿಸುವನು. ಮತ್ತು ಆತನು ಲೋಕಕ್ಕೆಲ್ಲಾ ಜ್ಞಾನವನ್ನು ದಾನಮಾಡತಕ್ಕವನೆನಿಸುವನು. ಅಂಥವರಿಂದಲೇ ಧರ್ಮವು ನೆಲಸುವುದು.

೨೩. ಸಂಹಿತಾರೂಪವಾದ ವೇದಗಳಿಗೂ, ಜ್ಯೋತಿಷ ಗ್ರಂಥಗಳಿಗೂ, ಬ್ರಾಹ್ಮಣರೂಪವಾದ ಉಪನಿಷತ್ತುಗಳಿಗೂ, ನಾಟಕಕ್ಕೂ ವಿವರಿಸಬೇಕಾದ ಗೂಢವಾದ ತತ್ವಾರ್ಥವನ್ನು ವಿವರಿಸದೆ ಅದಕ್ಕೆ ವಿರುದ್ಧವಾಗಿ ಬಹು ಸಂಗ್ರಹವಾಗಿ ವಾಖ್ಯಾನಮಾಡಿದವನು ಈ ಕಲಿಯುಗದಲ್ಲಿ ನಾಶವನ್ನು ಹೊಂದುವನು.

೨೪-೨೫. ವ್ಯವಹಾರಾರ್ಥವಾಗಿ ವೇದಗಳ ಪ್ರತಿಭಾಗಗಳಿಗೂ ಅಧ್ಯಾಯ ಎಂಬ ಹೆಸರನ್ನು ಕೊಡಬೇಕು. ಧರ್ಮಶಾಸ್ತ್ರಗಳು, ಪುರಾಣಗಳು, ಮೀಮಾಂಸಾ

ವ್ಯವಹಾರಶ್ಚಾರ್ಥಶಾಸ್ತ್ರಮಶ್ವಶಾಸ್ತ್ರಸ್ಯ ಚೈವ ಹಿ ।
ಯಸ್ಯ ಭಾಗಾವಸಾನೇ ತು ಪ್ರಯೋಕ್ತವ್ಯಃ ಸ ಏವ ಹಿ ॥ ೨೬ ॥

ತತ್ಸಂಗ್ರಹೇಽಪಿ ಕವಿನಾ ನಿಯೋಕ್ತವ್ಯಃ ಸ ಏವ ಹಿ ।
ಯಸ್ಯ ನಾಮ್ನೋಪದೇಶೇ ತು ಪ್ರವರ್ತಯತಿ ಸಂಗ್ರಹಃ ॥ ೨೭ ॥

ತತ್ತದಕ್ಷರಸಂಖ್ಯಾನಾಂ ಬ್ರಹ್ಮಲೋಕಾನ್ನ ತಚ್ಚ್ಯುತಿಃ ।
ನ ಸಂಗ್ರಹಸ್ತಂತ್ರಮಂತ್ರೇ ವೇದಮಂತ್ರೇ ಚ ವರ್ಜಯೇತ್ ॥ ೨೮ ॥

ಮೋಹಾತ್ಕೃತ್ವಾ ಹೋಮಧೇನುಂ ದತ್ವಾ ಶುದ್ಧಿರ್ಭವಿಷ್ಯತಿ ।
ಕೃತ್ವಾ ಚಾಖ್ಯಾಯಿಕಾಗ್ರಂಥಸ್ವರೂಪಾನ್ಸ ದಿವಂ ವ್ರಜೇತ್ ॥ ೨೯ ॥

---

ಶಾಸ್ತ್ರ, ಜ್ಯೋತಿಶ್ಶಾಸ್ತ್ರ, ನಾಟಕಗಳು ಇವುಗಳ ಭಾಗಗಳಿಗೆ ಪುಷ್ಪಕ, ಪರಿಚ್ಛೇದ, ಖಂಡ, ಪ್ರತಿಖಂಡ ಮುಂತಾದ ಹೆಸರುಗಳನ್ನು ಕೊಡಬೇಕು.

೨೬. ಅಶ್ವಶಾಸ್ತ್ರ, ಅರ್ಥಶಾಸ್ತ್ರಾದಿಗಳಲ್ಲಿ ಒಂದೊಂದು ವಿಚಾರವು ಮುಗಿದ ಜಾಗಕ್ಕೆ ಆಯಾ ವಿಚಾರದ ಹೆಸರಿನ ಪದಗಳನ್ನೇ ಉಪಯೋಗಿಸಬೇಕು.

೨೭. ಆ ಗ್ರಂಥಾರ್ಥವನ್ನು ಸಂಗ್ರಹಮಾಡುವಾಗ ಗ್ರಂಥದಲ್ಲಿ ವಿಚಾರಾನುಸಾರವಾದ ವಿಭಾಗಕ್ಕೆ ಉಪಯೋಗಿಸಿದ್ದ ಶಬ್ದಗಳನ್ನೇ ಪ್ರಯೋಗಿಸಬೇಕು. ಮೂಲ ಕವಿಯು ಆಯಾ ಗ್ರಂಥದ ಒಂದೊಂದು ಘಟ್ಟವು ಮುಗಿದಾಗ ಯಾವ ಪ್ರಕಾರ ಸರ್ಗ, ಪರಿಚ್ಛೇದ, ಮೊದಲಾದ ನಾಮಗಳಿಂದ ವ್ಯವಹರಿಸಿದ್ದನೋ ಹಾಗೆಯೇ ಮುಂದಕ್ಕೆ ಪ್ರತಿಘಟ್ಟದಲ್ಲೂ ಉಪಯೋಗಿಸಬೇಕು.

೨೮. ಆಯಾ ವಿದ್ವಾಂಸರ ಮತಾನುಸಾರವಾಗಿ ಹೀಗೆ ಮಾಡಿದವರು ಬ್ರಹ್ಮಲೋಕವನ್ನು ಸೇರಿ ಅಲ್ಲಿ ಶಾಶ್ವತವಾಗಿರುವರು. ಕಾತ್ಯಾಯನಾದಿ ಮಂತ್ರ ತಂತ್ರಗಳಲ್ಲಿಯೂ, ವೇದಮಂತ್ರಗಳಲ್ಲಿಯೂ, ಅಲ್ಲಿ ಹೇಳಿರುವಷ್ಟು ಭಾಗವನ್ನೂ ವಿವರಿಸಬೇಕೇ ಹೊರತು ಅದರಲ್ಲಿ ಸಂಗ್ರಹಮಾಡುವುದಕ್ಕೆ ಹೋಗಬಾರದು.

೨೯. ಒಂದುವೇಳೆ ಅಜ್ಞಾನದಿಂದ ಅದನ್ನು ಸಂಗ್ರಹಮಾಡಿ ಪಾಪಸಂಘಟನೆಯಾದರೆ, ಆತನು ಗೋದಾನ ಕೊಡುವ ಮೂಲಕ ಪ್ರಾಯಶ್ಚಿತ್ತಮಾಡಿಕೊಳ್ಳಬೇಕು. ಆಖ್ಯಾಯಿಕಾ ಎಂಬ ಗ್ರಂಥಗಳನ್ನು ರೂಪುಗೊಳಿಸಿದವನು ಸ್ವರ್ಗವನ್ನು ಹೊಂದುತ್ತಾನೆ.

ಧರ್ಮಶಾಸ್ತ್ರಸ್ಯ ಗವ್ಯಸ್ಯ ವ್ಯವಹಾರಸ್ಯ ಚೈವ ಹಿ ।
ಕಲೌ ಯಃ ಸಂಗ್ರಹಂ ಕುರ್ಯಾತ್ ಪ್ರಸುಪ್ತೇ ಚೈವ ಕೇಶವೇ ॥ ೩೦ ॥

ಯಾವತ್ಪ್ರವರ್ತತೇ ಲೋಕೇ ತಾವತ್ಸ್ವರ್ಗೇ ಮಹೀಯತೇ ।
ಸಿಂಹೇ ಪೌಷೇ ಚ ಚೈತ್ರೇ ಚ ನ ಕುರ್ಯಾತ್ಸಂಗ್ರಹಂ ಕ್ವಚಿತ್ ॥ ೩೧ ॥

ಪ್ರಾತಃಕಾಲೇ ನ ಕುರ್ವೀತ ತಥಾ ಮಾಧ್ಯಂದಿನೇ ದ್ವಿಜಾಃ ।
ಪಕ್ಷಾಂತೇ ಭೂಮಿದಾಹೇ ಚ ಭುವಃ ಕಂಪೇ ದಿನಕ್ಷಯೇ ॥ ೩೨ ॥

ಮಲಮಾಸೇ ವಿಶೇಷೇಣ ಸಂಧ್ಯಯೋಶ್ಚ ವಿವರ್ಜನೆ ।
ಅಮೇಧ್ಯಾಕ್ತಂ ಚ ಪತ್ರಂ ಚ ಲಿಪ್ಯಕ್ಷರವಿಭೂಷಿತಂ ॥ ೩೩ ॥

ಪೂತಂ ಸ್ಯಾತ್ತತ್ಕ್ಷಣಾದ್ವಿಪ್ರಾಶ್ಚತುಃ ಪಂಚಾಕ್ಷರೇಣ ವಾ ।
ಸಾರಸಿಂಹಸ್ಯ ವಿನ್ಯಾಸೇ ಪೂತೋ ಭವತಿ ತತ್ಕ್ಷಣಾತ್ ॥ ೩೪ ॥

---

೩೦. ಕಲಿಯುಗದಲ್ಲಿ ಜನರು ತಿಳಿದುಕೊಳ್ಳಲು ಸುಲಭವಾಗುವಂತೆ ಧರ್ಮ ಶಾಸ್ತ್ರಸಂಗ್ರಹವನ್ನೂ, ವ್ಯವಹಾರಶಾಸ್ತ್ರಸಂಗ್ರಹವನ್ನೂ ಬರೆಯುವಾತನು, ಹರಿಯು ಸುಪ್ತನಾಗುವಾಗ ಎಂದರೆ ಶಯನೈಕಾದಶೀ ದಿವಸ ಸಂಪೂರ್ಣಮಾಡಿದರೆ ಅವನು ಭೂಲೋಕವಿರುವ ಪರ್ಯಂತ ಸ್ವರ್ಗದಲ್ಲಿ ಪೂಜಿತನಾಗುತ್ತಾನೆ.

೩೧. ಸಿಂಹಮಾಸ, ಪುಷ್ಯಮಾಸ, ಚೈತ್ರಮಾಸ ಈ ಮೂರರಲ್ಲಿ ಯಾವ ತಿಂಗಳುಗಳೂ ಸಂಗ್ರಹ ಪೂರ್ಣಮಾಡಬಾರದು.

೩೨ ಈ ರೀತಿ ಸಂಗ್ರಹಕಾರ್ಯವನ್ನು ಮಾಡುವಾತನು ಪ್ರಾತಃಕಾಲ, ಮಧ್ಯಾಹ್ನಕಾಲ, ಪೂರ್ಣಿಮಾ, ಅಮಾವಾಸ್ಯೆ, ಈ ಕಾಲಗಳಲ್ಲಿಯೂ, ಕಾಳ್ಗಿಚ್ಚು ಹತ್ತಿ ನೆಲವು ಸುಡುತ್ತಿರುವಾಗಲೂ, ಭೂಕಂಪವಾದಾಗಲೂ, ಎರಡು ಸಂಧ್ಯಾಕಾಲಗಳಲ್ಲೂ.

೩೩. ಅಧಿಕಮಾಸಗಳಲ್ಲಿಯೂ ಸಹ ಅದನ್ನು ಮಾಡಬಾರದು. ಪ್ರಾತಸ್ಸಂಧ್ಯಾ ಮಧ್ಯಾಹ್ನಿಕಸಂಧ್ಯಾ ಈ ಕಾಲಗಳಲ್ಲಿ ಮಾಡಲೇಬಾರದು ಎಂಬುದು ವಿಶೇಷ ವಿಷಯ.

೩೪. ಲಿಪಿಯಿಂದ ಲಿಖಿತವಾಗಿರುವ ಪತ್ರವು ಅಪರಿಶುದ್ಧ ಸ್ಥಳದ ಸಂಪರ್ಕ ದಿಂದ ಅಶುದ್ಧವಾದರೆ, ಚತುರಕ್ಷರ ಅಥವಾ ಪಂಚಾಕ್ಷರ ಮಂತ್ರದಿಂದ ಜಲವನ್ನು ಪ್ರೋಕ್ಷಿಸಿದರೆ ಶುದ್ಧವಾಗುತ್ತದೆ. ನರಸಿಂಹಮಂತ್ರವನ್ನು ವಿನ್ಯಾಸಮಾಡಿದ್ದಾದರೆ ಅಶುದ್ಧಿ ಸ್ಥಾನದ ಸಂಪರ್ಕ ಮುಂತಾದುದರಿಂದ ಅಶುಚಿಯಾಗುವುದೇ ಇಲ್ಲ

ಮಾಯಾವಿಭವವಿನ್ಯಸ್ತೇ ಮಹಾಪಾಪಕಲೇವರೇ ।
ಮುಹೂರ್ತಾರ್ಧೇನ ಪೂತತ್ವಂ ಪ್ರಭೋ ಯಾಂತಿ ಪರಾಂ ಗತಿಂ ॥ ೩೫ ॥

ಸ್ತ್ರಿಯೋ ವಾ ನಿಂದಿತೋ ವಾಪಿ ಮ್ಲೇಚ್ಛೋ ಯಾತಿ ಪರಾಂ ಗತಿಂ ।
ಯೋ ಮೂಢೋ ಮನ್ಯತೇ ದೋಷಂ ತಸ್ಯ ಶೌಚಂ ಸಮಾಚರೇತ್ ।
ಸ ಗರ್ದಭೀಂ ಖರೀಯೋನಿಂ ಪ್ರವಿಶೇನ್ನಾತ್ರ ಸಂಶಯಃ ॥ ೩೬ ॥

ಏಕಮೇವಾತ್ಮಕಂ ಬ್ರಹ್ಮ ತತ್ಪ್ರಕೃತ್ಯಾತ್ಮಕಂ ದ್ವಯಂ ।
ನವಾತ್ಮಕೋ ಭೈರವಶ್ಚ ದಶಮಶ್ಚ ಜನಾರ್ದನಃ ॥ ೩೭ ॥

ರುದ್ರ ಏಕಾದಶಶ್ಚೈವ ಅರ್ಕಾರ್ಕಶ್ಚಾಪಿ ದ್ವಾದಶಃ ।
ತ್ರಯೋದಶೇ ಚ ಭೂತಾತ್ಮಾ ಸಪ್ತದ್ವೇ ಮನುರೀರಿತಃ ॥ ೩೮ ॥

---

೩೫. ಓ ಪೂಜ್ಯರೇ! ಮಾಯಾಮಹಿಮೆಯಿಂದ ಕೂಡಿದುದೂ, ಮಹಾಪಾಪಯುಕ್ತವೂ ಆದ ಶರೀರವುಳ್ಳವರು, ನರಸಿಂಹ ಮಂತ್ರೋಚ್ಚಾರಣ ಮಹಿಮೆಯಿಂದ ಅರ್ಧಮುಹೂರ್ತದೊಳಗಾಗಿ ಪರಿಶುದ್ಧರಾಗಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.

೩೬. ಸ್ತ್ರೀಯಾಗಲಿ, ನಿಂದಾರ್ಹನಾಗಲಿ, ಮ್ಲೇಚ್ಛನಾಗಲಿ ನರಸಿಂಹ ಮಂತ್ರೋಚ್ಚಾರಣಮಹಿಮೆಯಿಂದ ಶ್ರೇಷ್ಠವಾದ ಗತಿಯನ್ನು ಹೊಂದಬಹುದು. ದೋಷವಲ್ಲದುದನ್ನು ದೋಷವೆಂದು ಯಾವ ಮೂಢನು ತಿಳಿದುಕೊಳ್ಳುತ್ತಾನೋ ಅವನಿಗೆ ಪ್ರಾಯಶ್ಚಿತ್ತಮಾಡಿ ಶುಚಿತ್ವವುಂಟುಮಾಡಬೇಕು. ಹಾಗೆ ತಪ್ಪಾಗಿ ತಿಳಿದುಕೊಳ್ಳುವವರಿಗೆ ಕ್ರೂರವಾದ ಗಾರ್ಧಭಜನ್ಮ ಪ್ರಾಪ್ತವಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

೩೭. ಮಂತ್ರವೆಂಬುದು ಬ್ರಹ್ಮರೂಪವಾದಾಗ ಒಂದೇ ಆಗಿಯೂ, ಅದು ಪ್ರಕೃತಿಯೊಡನೆ ಸೇರಿ ಎರಡಾಗಿಯೂ, ಪರಿಣಮಿಸುವುದು. ಹೀಗೆಯೇ ಭೈರವರೂಪದಲ್ಲಿ ಒಂಭತ್ತಾಗಿ ತೋರುವುದು.

೩೮. ವಿಷ್ಣುವಿನಲ್ಲಿ ಹತ್ತು ಅವತಾರಗಳಾಗಿ ತೋರುವುದು. ರುದ್ರರೂಪದಲ್ಲಿ ಹನ್ನೊಂದಾಗಿಯೂ, ಆದಿತ್ಯರೂಪದಲ್ಲಿ ಹನ್ನೆರಡಾಗಿಯೂ, ಭೂತಗಳ ಆತ್ಮವೆನಿಸಿ ಹದಿಮೂರಾಗಿಯೂ, ಮನುಗಳ ರೂಪದಿಂದ ಹದಿನಾಲ್ಕು ಆಗಿಯೂ ಇರುವುದು.

**ತಿಥ್ಯಾತ್ಮಕಂ ಪಂಚದಶೇ ಷೋಡಶಾಖ್ಯಾ ಕಲಾ ಪರಾ ।**
**ವಾತಾತ್ಮಕಃ ಸಪ್ತದಶೋ ಮಂತ್ರಃ ಸಮನುವರ್ತತೇ ॥ ೩೯ ॥**

**ಅಷ್ಟಾದಶಾಕ್ಷರೋ ಮಂತ್ರಃ ಪುರಾಣಾತ್ಮಕ ಏವ ಚ ।**
**ಊನವಿಂಶಶ್ಚಂದ್ರಮಾ ಸ್ಯಾದ್ವಿಂಶೋ ನಾರಾಯಣೋ ವಪುಃ ॥ ೪೦ ॥**

**ಜ್ಯೋತಿರ್ಮಯಶ್ಚೈಕವಿಂಶೋ ತ್ರಯೋವಿಂಶೇ ಚ ತಾನಕಂ ।**
**ಚತುರ್ವಿಂಶೇ ಕೇಶವಶ್ಚ ಪಂಚವಿಂಶೇ ಚ ತೀರ್ಥಕಂ ॥ ೪೧ ॥**

**ತ್ರ್ಯಂಬಕಸ್ತು ಷಡ್ವಿಂಶೇ ಋಕ್ಷಾಣಿ ಸಪ್ತವಿಂಶತಿಃ ।**
**ಅಷ್ಟಾವಿಂಶೇ ಧನೇಶಶ್ಚ ಊನತ್ರಿಂಶೇ ಸರಸ್ವತೀ ॥ ೪೨ ॥**

**ತ್ರಿಂಶದ್ಯೋಗೇ ಶಿವಃ ಪ್ರೋಕ್ತಃ ಪಾತಾಳಮೇಕತ್ರಿಂಶಕೇ ।**
**ಅಹೋರಾತ್ರಶ್ಚ ದ್ವಾತ್ರಿಂಶೇ ಚತುಸ್ತ್ರಿಂಶೇ ಚ ಜಾಹ್ನವೀ ॥ ೪೩ ॥**

---

೩೯. ತಿಥಿಗಳೆನಿಸಿ ಹದಿನೈದು ರೂಪವಾಗಿಯೂ, ಚಂದ್ರಕಲೆಗಳಾಗಿ ಹದಿನಾರಾಗಿಯೂ, ವಾಯುರೂಪದಿಂದ ಹದಿನೇಳು ಬಗೆಯಾಗಿಯೂ ಅನುವರ್ತಿಸುವುದು.

೪೦. ಮಂತ್ರದ ಹದಿನೆಂಟು ಅಕ್ಷರಗಳು ಹದಿನೆಂಟು ಪುರಾಣಗಳಾದುವು. ಮಂತ್ರವು ಹತ್ತೊಂಭತ್ತು ಅಂಶಗಳಿಂದ ಚಂದ್ರರೂಪವಾಗಿಯೂ, ಇಪ್ಪತ್ತು ಅಂಶಗಳಿಂದ ನಾರಾಯಣನ ದೇಹವಾಗಿಯೂ ಪರಿಣಮಿಸಿತು.

೪೧. ಆ ಮಂತ್ರವೇ ಇಪ್ಪತ್ತೊಂದು ಅಂಶಗಳಿಂದ ಜ್ಯೋತಿರ್ಮಯವಾಯಿತು. ಇಪ್ಪತ್ತಮೂರು ಭಾಗಗಳಿಂದ ತಾನಗಳಾಯಿತು. ಇಪ್ಪತ್ತುನಾಲ್ಕು ಭಾಗಗಳಿಂದ ಚತುರ್ವಿಂಶತಿ ನಾಮಗಳಾದುವು. ಮತ್ತು ಇಪ್ಪತ್ತೈದು ಭಾಗಗಳಾಗಿ ಪುಣ್ಯತೀರ್ಥಗಳೆನಿಸಿದವು.

೪೨. ಅದೇ ಇಪ್ಪತ್ತಾರುಭಾಗಗಳಾಗಿ ತ್ರ್ಯಂಬಕನೆನಿಸಿದವು. ಇಪ್ಪತ್ತೇಳು ಭಾಗಗಳಾಗಿ ನಕ್ಷತ್ರಗಳೆನಿಸಿದುವು. ಇಪ್ಪತ್ತೆಂಟುಭಾಗಗಳಾಗಿ ಕುಬೇರನೆನಿಸಿತು. ಇಪ್ಪತ್ತೊಂಭತ್ತು ಭಾಗಗಳಾಗಿ ಸರಸ್ವತಿಯೆಂದೂ, ಮೂವತ್ತು ಭಾಗಗಳಾಗಿ ಶಿವನೆಂದೂ ಹೇಳಲ್ಪಡುತ್ತವೆ.

೪೩. ಮೂವತ್ತೊಂದುಭಾಗವಾಗಿ ಪಾತಾಳ, ಮೂವತ್ತೆರಡುಭಾಗವಾಗಿ ಅಹೋರಾತ್ರಿಯೆನಿಸಿತು. ಮೂವತ್ತುನಾಲ್ಕುಭಾಗವಾಗಿ ಜಾಹ್ನವಿಯೆನಿಸಿತು.

ಪಂಚತ್ರಿಂಶೇ ತದಂತಃಸ್ಯಾಚ್ಛತೇ ಪೂರ್ಣೇ ದಿವಾಕರಃ ।
ಸಹಸ್ರೇ ಚ ಶಿವೋ ಜ್ಞೇಯಶ್ಚಾಯುತೇ ಮೇರುರುಚ್ಯತೆ ॥ ೪೪ ॥

ಲಕ್ಷೇ ಬ್ರಹ್ಮಾ ತಥಾ ಕೋಟ್ಯಾಂ ದೇವೋ ನಾರಾಯಣಃ ಪರಃ ।
ಪುಂಪ್ರಕೃತ್ಯಾತ್ಮಕಂ ಚಾನ್ಯಚ್ಛಾರದಾ ಲಿಪಿಮಾತೃಕಾ ॥ ೪೫ ॥

ಶುದ್ಧಬ್ರಹ್ಮಮಯಂ ನಿತ್ಯಂ ಜ್ಞಾನರೂಪಂ ಪರಂ ಮಹತ್ ।
ಯಸ್ಮಿನ್ನ್ಯಸನಾದೇವ ಶುಚೌ ಚಾಪ್ಯಶುಚಿಸ್ಥಲೇ ॥
ಕ್ಷಣೇ ಬ್ರಹ್ಮಮಯಂ ಯಾತಿ ಇತ್ಯಾಹ ಭಗವಾನ್ಮನುಃ ॥ ೪೬ ॥

ಇತೀ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ಅಂಕಮಾಹಾತ್ಮ್ಯ
ಕಥನಂ ನಾಮ ಅಷ್ಟಮೋಽಧ್ಯಾಯಃ.

---

೪೪. ಮೂವತ್ತೈದುಭಾಗವೇ ಕೊನೆಯದು. ನೂರುಭಾಗ ಪೂರ್ಣವಾದರೆ ಸೂರ್ಯನೆನಿಸುವನು. ಸಹಸ್ರಭಾಗ ಪೂರ್ಣವಾದರೆ ಶಿವನೆಂದು ತಿಳಿಯಬೇಕು.

೪೫. ಹತ್ತುಸಹಸ್ರ ಪೂರ್ಣವಾದರೆ ಮೇರುವೆನಿಸುವುದು, ಲಕ್ಷಪೂರ್ಣವಾದರೆ ಬ್ರಹ್ಮವೆನಿಸುವುದು, ಕೋಟಿಪೂರ್ತಿಯಾದರೆ ಶ್ರೇಷ್ಠನಾದ ನಾರಾಯಣ ಎನಿಸುವುದು. ಉಳಿದವುಗಳೆಲ್ಲಾ ಪುರುಷಪ್ರಕೃತಿರೂಪವಾಗಿರತಕ್ಕವು. ಲಿಪಿಸಂಜ್ಞೆಯು ಶಾರದೆ ಎನಿಸುವುದು.

೪೬. ನಿತ್ಯವೂ, ಬ್ರಹ್ಮಮಯವೂ, ಜ್ಞಾನಸ್ವರೂಪವೂ, ಮಹಾಪರಿಮಾಣವುಳ್ಳದ್ದೂ ಆದ ಈ ವಸ್ತುವು ಯಾರಲ್ಲಿ ನಿರಾತಂಕವಾಗಿರುವುದೋ ಅವನು ಶುಚಿಯಾದ ಸ್ಥಳದಲ್ಲಿರಲಿ, ಅಶುಚಿಯಾದ ಸ್ಥಳದಲ್ಲಿರಲಿ, ಒಂದು ಕ್ಷಣದೊಳಗಾಗಿ ಬ್ರಹ್ಮಮಯನಾಗುತ್ತಾನೆ ಎಂಬಹಾಗಿ ಪೂಜ್ಯನಾದ ಮನುವು ಹೇಳಿದ್ದಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ
ಅಂಕಮಾಹಾತ್ಮ್ಯ ವಿವರಣೆಯೆಂಬ ಎಂಟನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ಪ್ರಥಮಭಾಗೇ
## ನವಮೋऽಧ್ಯಾಯಃ

---

॥ ಸೂತ ಉವಾಚ ॥

ಅಂತರ್ವೇದಿಂ ಪ್ರವಕ್ಷ್ಯಾಮಿ ಬ್ರಹ್ಮಣೋಕ್ತಂ ಯುಗಾಂತರೇ ।
ಬಹಿರ್ವೇದಿಂ ತಥೈವೋಕ್ತಂ ಶಸ್ತಂ ಸ್ಯಾದ್ದ್ವಾಪರೇ ಕಲೌ ॥ ೧ ॥

ಜ್ಞಾನಸಾಧ್ಯಂ ತು ಯತ್ಕರ್ಮ ಅಂತರ್ವೇದೀ ತು ಕಥ್ಯತೇ ।
ದೇವತಾಸ್ಥಾಪನಂ ಪೂಜಾ ಬಹಿರ್ವೇದಿರುದಾಹೃತಾ ॥ ೨ ॥

ಪ್ರಪಾಪೂರ್ತಾದಿಕಂ ಚೈವ ಬ್ರಾಹ್ಮಣಾನಾಂ ಚ ತೋಷಣಂ ।
ಗುರುಭ್ಯಃ ಪರಿಚರ್ಯಾ ಚ ಬಹಿರ್ವೇದೀ ದ್ವಿಧಾ ಮತಾ ॥ ೩ ॥

---

## ಒಂಭತ್ತನೆಯ ಅಧ್ಯಾಯ

೧. ಸೂತರು ಸೌನಕಾದಿ ಋಷಿಗಳನ್ನು ಕುರಿತು ಹೇಳುತ್ತಾರೆ—ಈಗ ಅಂತರ್ವೇದಿ ಮತ್ತು ಬಹಿರ್ವೇದಿಯೆಂಬಿವುಗಳ ವಿಚಾರವನ್ನು ಹೇಳುತ್ತೇನೆ. ಈ ವಿಚಾರವನ್ನು ಯುಗಾಂತರದಲ್ಲಿ ಬ್ರಹ್ಮನೇ ನಿರೂಪಣಮಾಡಿದ್ದನು. ದ್ವಾಪರಯುಗದಲ್ಲಿಯೂ ಕಲಿಯುಗದಲ್ಲಿಯೂ ಇವು ಆಚರಿಸಲು ಪ್ರಶಸ್ತಕರ್ಮವೆನಿಸಿವೆ.

೨. ಜ್ಞಾನಸಾಧ್ಯವಾದ ಕರ್ಮವು ಅಂತರ್ವೇದಿಯೆನಿಸುವುದು. ದೇವತಾಸ್ಥಾಪನೆ, ಮತ್ತು ಪೂಜೆ, ಮುಂತಾದುವು ಒಂದು ಪ್ರಕಾರದ ಬಹಿರ್ವೇದಿ ಎನಿಸಿದೆ.

೩. ಅರವಟ್ಟಿಗೆ ಇಡಿಸುವುದು, ಭಾವಿ ಮೊದಲಾದುವನ್ನು ತೋಡಿಸುವುದು, ಬ್ರಾಹ್ಮಣರನ್ನೂ ಗುರುಗಳನ್ನೂ ಸೇವೆಮಾಡುವುದು, ಇವು ಬಹಿರ್ವೇದಿಯ ಎರಡನೇ ಬಗೆಯೆಂದು ತಿಳಿಯಬೇಕು.

ಅಕಾಮೇನ ಕೃತಂ ಕರ್ಮ ಕರ್ಮ ಚ ವ್ಯಸನಾದಿಕಂ ।
ಅಂತರ್ವೇದೀ ತದೇವೋಕ್ತಂ ಬಹಿರ್ವೇದೀ ವಿಪರ್ಯಯಃ ॥ ೪ ॥

ಧರ್ಮಸ್ಯ ಕಾರಣಂ ರಾಜಾ ಧರ್ಮಮೇತತ್ಪ್ರವೇನ್ನೃಪಃ ।
ತಸ್ಮಾನ್ನೃಪಂ ಸಮಾಶ್ರಿತ್ಯ ಬಹಿರ್ವೇದೀ ತತೋ ಭವೇತ್ ॥ ೫ ॥

ಸಪ್ತಾಶೀತಿರ್ಬಹಿರ್ವೇದೀ ಸಾರಮೇಷಾಂ ತೃತೀಯಕಂ ।
ದೇವತಾಸ್ಥಾಪನಂ ಚೈವ ಪ್ರಾಸಾದಕರಣಂ ತಥಾ ॥ ೬ ॥

ತಡಾಗಕರಣಂ ವಾಪೀ ತೃತೀಯಂ ಚ ಚತುರ್ಥಕಂ ।
ಪಂಚಮಂ ಪಿತೃಪೂಜಾ ಚ ಗುರುಪೂಜಾ ಪುರಃಸರಾ ॥ ೭ ॥

ಅಧಿವಾಸಃ ಪ್ರತಿಷ್ಠಾ ಚ ದೇವತಾನಾಮವಿಕ್ರಿಯಾ ।
ಪ್ರತಿಮಾಕರಣಂ ಚೈವ ವೃಕ್ಷಾಣಾಮಥ ರೋಪಣಂ ॥ ೮ ॥

---

೪. ನಿಷ್ಕಾಮವಾಗಿ ಆಚರಿಸಿದ ಕರ್ಮಗಳು ಅಂತರ್ವೇದಿಯೆನಿಸುವುವು. ಮನಸ್ಸಿನ ಉದ್ದೇಶ ಸಾಧನೆಗಾಗಿ ಮಾಡುವ ಕಾಮ್ಯಕರ್ಮಗಳು ಇದಕ್ಕೆ ವಿಪರ್ಯಯವಾಗಿದ್ದು ಬಹಿರ್ವೇದಿಯೆನಿಸುವುದು.

೫. ಎಲೈ ಪೂಜ್ಯರೇ ಕೇಳಿ ; ರಾಜನು ಧರ್ಮಕ್ಕೆ ಕಾರಣನು, ರಾಜಶಾಸನವು ಧರ್ಮಮೂಲವಾಗಿರುವುದು. ಆದುದರಿಂದ ದೇವಾಲಯ, ಅರವಟ್ಟಿಗೆ, ತಟಾಕ ನಿರ್ಮಾಣ ಮುಂತಾದುವು ರಾಜರ ಧರ್ಮಬುದ್ಧಿಯನ್ನವಲಂಬಿಸಿರುವುವು.

೬-೭. ಬಹಿರ್ವೇದಿಗಳಲ್ಲಿ ಎಂಭತ್ತೇಳು ಬಗೆಗಳಿವೆ. ಈ ಪೈಕಿ ದೇವತಾ ಸ್ಥಾಪನ, ದೇವಾಲಯನಿರ್ಮಾಣ, ಕೆರೆಗಳನ್ನು ಕಟ್ಟಿಸುವುದು, ಭಾವಿಯನ್ನು ತೋಡಿಸುವುದು. ಪಿತೃಪೂಜೆ, ಗುರುಪೂಜೆ ಮುಂತಾದುವು ಮುಖ್ಯವಾದುವು. ಇವುಗಳಲ್ಲಿ ಮೂರನೆಯದಾದ ತಟಾಕನಿರ್ಮಾಣವು ಬಹು ಶ್ರೇಷ್ಠವಾದುದು.

೮-೯. ದೇವರ ಪ್ರತಿಮೆಯನ್ನು ಅಧಿವಾಸಮಾಡಿಸುವುದು, ಮತ್ತು ಅವುಗಳನ್ನು ವಿಧಿಯಂತೆ ಪ್ರತಿಷ್ಠೆಮಾಡುವುದು, ನಿರ್ವಿಕಾರವಾದ (ಸಲಕ್ಷಣವಾದ) ಪ್ರತಿಮೆಯನ್ನು ಮಾಡಿಸುವುದು, ವೃಕ್ಷಗಳನ್ನು ನೆಡಿಸುವುದು, ಇವುಗಳಲ್ಲಿ ಉತ್ತಮ, ಮಧ್ಯಮ, ಕನಿಷ್ಠ ಎಂಬದಾಗಿ ಮೂರುಬಗೆಗಳಿವೆ. ಶೇಷಕಲ್ಪವೆಂಬುದು ಸರ್ವಕಾರ್ಯಗಳಲ್ಲೂ ಉಕ್ತವಾದ ವಿಧಿಯಾಗಿದೆ.

ತ್ರಿವಿಧಾ ಸಾ ವಿನಿರ್ದಿಷ್ಟಾ ಉತ್ತಮಾ ಚಾಥ ಮಧ್ಯಮಾ ।
ಕನಿಷ್ಠಾ ಶೇಷಕಲ್ಪಶ್ಚ ಸರ್ವಕಾರ್ಯೇಷ್ವಯಂ ವಿಧಿಃ ॥ ೯ ॥

ತ್ರಿಧಾ ಭವತಿ ಸರ್ವತ್ರ ಪ್ರತಿಷ್ಠಾದಿವಿಧಿರ್ಮತಃ ।
ಪೂಜಾಹೋಮಾದಿಭಿರ್ದಾನೈರ್ಮಾನತಶ್ಚ ತ್ರಿಭಾಗತಃ ॥ ೧೦ ॥

ತ್ರ್ಯಹಸಾಧ್ಯವಿಧಾನೇನ ಅಷ್ಟಾವಿಂಶತಿದೇವತಾಃ ।
ತ್ರಿಧಾ ಭವತಿ ಸರ್ವತ್ರ ಪ್ರತಿಷ್ಠಾದಿವಿಧಿರ್ಮತಃ ॥ ೧೧ ॥

ಪ್ರತ್ಯಹಂ ಪೂಜಯೇತ್ತತ್ರ ಜಾಪಕಾಸ್ತತ್ರ ಷೋಡಶ ।
ಉತ್ತಮೋಽಸೌ ವಿಧಿಃ ಕೃತ್ಸ್ನೋ ಹ್ಯಶ್ವಮೇಧಫಲಪ್ರದಃ ॥ ೧೨ ॥

ಚತ್ವಾರೋ ಯಾಜಕಾಸ್ತತ್ರ ತ್ರಯೋವಿಂಶತಿದೇವತಾಃ ।
ಗ್ರಹದಿಕ್ಪಾಲ ವಾರುಣ್ಯಂ ಪೃಥಿವೀ ಚ ಶಿವಸ್ತಥಾ ॥ ೧೩ ॥

---

೧೦. ಪೂಜಾ ಹೋಮಪ್ರಕ್ರಿಯೆಗಳು, ದಾನಪ್ರಕ್ರಿಯೆಗಳು, ಬಹುಮಾನ ಪ್ರಕ್ರಿಯೆಗಳು, ಎಂದು ಎಲ್ಲಾ ಪ್ರತಿಷ್ಠಾವಿಧಿಯಲ್ಲೂ ಮೂರುವಿಭಾಗವಿರುತ್ತದೆ.

೧೧. ಮೂರುದಿನಗಳಕಾಲ, ಮಾಡತಕ್ಕ ಪ್ರತಿಷ್ಠಾವಿಧಿಯು ಇಪ್ಪತ್ತೆಂಟು ದೇವತೆಗಳ ಪೂಜಾಯುಕ್ತವಾಗಿ, ಮೇಲೆಹೇಳಿದ ಮೂರು ವಿಭಾಗಗಳಿಂದಕೂಡಿರ ಬೇಕು ಎಂದು ನಿರ್ಣಯವಿದೆ.

೧೨. ಆ ಮೂರುದಿನದಲ್ಲಿ ಪ್ರತಿದಿನವೂ ಪೂಜೆನಡೆಯಬೇಕು. ಹದಿನಾರು ಮಂದಿಜಾಪಕರು ಜಪಮಾಡಬೇಕು. ಹೀಗೆ ಸಮಗ್ರವಾದ ವಿಧಿಪೂರ್ವಕಮಾಡು ವುದು ಉತ್ತಮ ಕ್ರಮವೆನಿಸುವುದು. ಈರೀತಿಮಾಡುವುದರಿಂದ ಅಶ್ವಮೇಧಫಲ ವುಂಟಾಗುವುದು.

೧೩. ಒಂದೇದಿನದಲ್ಲಿ ಪ್ರತಿಷ್ಠಾವಿಧಿಯನ್ನು ನಡೆಸುವಾಗ ನಾಲ್ವರು ಯಾಜ ಕರು ಜಪಮಾಡಬೇಕು. ಅಲ್ಲದೆ ಆದಿತ್ಯಾದಿನವಗ್ರಹಗಳು ಇಂದ್ರಾದಿ ದಿಕ್ಪಾಲಕರು, ವರುಣ, ಪೃಥವೀ, ಶಿವ ಮುಂತಾದ ಇಪ್ಪತ್ತುಮೂರು ದೇವತೆಗಳನ್ನು ಪೂಜಿಸ ಬೇಕು.

ಏಕಾಹೇನೈವ ಪೂಜಾ ಚ ಮಧ್ಯಮಃ ಕಥಿತೋ ವಿಧಿಃ ।
ಗಣೇಶಗ್ರಹದಿಕ್ಪಾಲಾನ್ ವರುಣಂ ಚ ಶಿವಂ ತಥಾ ॥ ೧೪ ॥

ಸಂಪೂಜ್ಯ ಪೂಜ್ಯತೇ ಯತ್ರ ಕನಿಷ್ಠೋಽಸೌ ವಿಧಿಃ ಸ್ಮೃತಃ ।
ಏಕವೃಕ್ಷೈಶ್ಚೈಕರೂಪೈಃ ಪ್ರತಿಮಾಕ್ಷುದ್ರದೇವತಾಃ ॥ ೧೫ ॥

ನಲಿನೀದೀರ್ಘಿಕಾಗರ್ತವಾಪೀಕೂಪಪ್ರಸಾದಿಕಂ ।
ಏಷಾಂ ಸಂಸ್ಕಾರಕಾರ್ಯೇಷು ಪ್ರತಿಮಾನಾಂ ಪರಿಷ್ಕ್ರಿಯಾ ॥ ೧೬ ॥

ಅಗ್ನಿಕಾರ್ಯಂ ತತಃ ಕೃತ್ವಾ ಪ್ರಕುರ್ಯಾದ್ವಿಧಿವಿಸ್ತರಂ ।
ಗಣೇಶಗ್ರಹದಿಕ್ಪಾಲಾನ್ ಪೂಜಯೇದುಪಚಾರತಃ ॥ ೧೭ ॥

ವಾಪ್ಯಾದೇಃ ಪುಷ್ಕರಿಣ್ಯಾಶ್ಚ ಕ್ಷಿಪೇದ್ಗಂಗಾಜಲಂ ತತಃ ।
ಉಲೂಖಲದ್ವಯೇನಾಪಿ ಜೀರ್ಣಾನಾಂ ತು ಕದಾಚನ ॥ ೧೮ ॥

---

೧೪. ಒಂದೇದಿನದಲ್ಲಿ ಮಾಡುವ ಇದು ಮಧ್ಯಮವಿಧಿಯೆನಿಸುವುದು. ಗಣೇಶ, ನವಗ್ರಹಗಳು, ದಿಕ್ಪಾಲಕರು, ವರುಣ, ಶಿವ, ಇವರನ್ನು ಪೂಜಿಸಿ ಆ ಕೂಡಲೇ ಪ್ರತಿಮಾದಿಗಳನ್ನು ಪ್ರತಿಷ್ಠಿಸುವಕ್ರಮವು ಕನಿಷ್ಠವಿಧಿಯೆನಿಸುವುದು.

೧೫. ಕ್ಷುದ್ರದೇವತೆಗಳ ಪ್ರತಿಮೆಗಳು ಒಂದೇ ಮರದಿಂದ ರಚಿಸಲ್ಪಟ್ಟು ಏಕಪ್ರಕಾರವಾದ ರೂಪುಳ್ಳವಾಗಿರಬೇಕು.

೧೬. ಕಮಲಸರಸ್ಸು, ಮೆಟ್ಟಿಲುಗಳುಳ್ಳ ಕೊಳ, ಹಳ್ಳ, ಇಳಿಯುವ ಭಾವಿ, ಸೇದುವ ಭಾವಿ ಇವುಗಳ ಪ್ರತಿಷ್ಠಾದಿಸಂಸ್ಕಾರ ಮಾಡುವಾಗ, ಅವಕ್ಕೆ ತಕ್ಕ ಪ್ರತಿಮೆಗಳನ್ನು ಪುನರ್ಭಾವಿಯಾಗಿ ಪರಿಷ್ಕರಿಸಿಟ್ಟುಕೊಳ್ಳಬೇಕು.

೧೭. ಅನಂತರ ಅಗ್ನಿಕಾರ್ಯ (ಹೋಮಾದಿಕರ್ಮ) ವನ್ನಾಚರಿಸಿ ಬಳಿಕ ಕ್ರಮವಾಗಿ ಪ್ರತಿಷ್ಠಾದಿವಿಧಿಯನ್ನು ನೆರವೇರಿಸಬೇಕು. ಮೊದಲು ಗಣೇಶ, ನವಗ್ರಹಗಳು, ದಿಕ್ಪಾಲಕರು, ವರುಣ, ಶಿವಾದಿಗಳನ್ನು ಷೋಡಶೋಪಚಾರದಿಂದ ಪೂಜಿಸಬೇಕು.

೧೮. ಆ ಮೇಲೆ ಆಭಾವಿ, ಕಮಲಸರಸ್ಸು ಇವುಗಳಿಗೆ ಗಂಗಾನದಿಯ ನೀರನ್ನು ತಂದು ಹಾಕಬೇಕು. ಈ ಪುಷ್ಕರಿಣೀರಚನೆಯ ಸಂದರ್ಭದಲ್ಲಿ ಒಡೆದುಹೋದ ಒರಳಿನ ದಿಮ್ಮಿಯ ಹೋಳುಗಳಲ್ಲಿ ಯಾವುದನ್ನೂ ಸಹ ಉಪಯೋಗಿಸಬಾರದು.

**ಸೇತುಪ್ರಾಸಾದವಾಪೀನಾಂ ಪ್ರತಿಷ್ಠಾಂ ನೈವ ಕಾರಯೇತ್ ।**
**ಪ್ರಾಸಾದಃ ಸೇತವಶ್ಚೈವ ತಡಾಗಾದ್ಯಾಸ್ತಥೈವ ಚ ॥ ೧೯ ॥**

**ತ್ರಿಭಿರ್ವರ್ಣೈಃ ಪ್ರತಿಷ್ಠಾರ್ಹಾ ಜೀರ್ಣಾನಾಂ ತು ಸಮುದ್ಧೃತಾಃ ।**
**ಮುನಯೋ ಮಾನಮಿಚ್ಛಂತಿ ಅಮಾನಂ ನ ಹಿ ದೃಶ್ಯತೆ ॥ ೨೦ ॥**

**ತಸ್ಮಾನ್ಮಾನಂ ಪ್ರವಕ್ಷ್ಯಾಮಿ ಯನ್ಮಾನಂ ಯಾದೃಶಂ ಫಲಂ ।**
**ಷಷ್ಟಿಹಸ್ತಪ್ರಮಾಣೇನ ತದುಕ್ತಂ ವಾರಣೋದಿತಂ ॥ ೨೧ ॥**

**ಏಕಷಷ್ಟಿಹಸ್ತಮಿತಂ ಪ್ರಾಸಾದಂ ಚೋತ್ತಮಂ ವಿದುಃ ।**
**ಮಧ್ಯಂ ತದರ್ಧಂ ವಿಜ್ಞೇಯಂ ಕನಿಷ್ಠಂ ತತ್ಪರಂ ಸ್ಮೃತಂ ॥ ೨೨ ॥**

**ಅಥವಾ ದೇವಮಾನೇನ ಕರ್ತವ್ಯಂ ಭೂತಿಮಿಚ್ಛತಾ ।**
**ಯಸ್ತಡಾಗಂ ನವಂ ಕೃತ್ವಾ ಜೀರ್ಣಂ ವಾ ನವತಾಂ ನಯೇತ್ ॥ ೨೩ ॥**

---

೧೯. ಸೇತುವೆ, ಪ್ರಾಸಾದ, ವಾಪೀ ಇವುಗಳ ಪ್ರತಿಷ್ಠಾಕರ್ಮವನ್ನು ನಾಲ್ಕನೆ ವರ್ಣದವನಾದ ಶೂದ್ರನು ಮಾಡಿಸಲೇಬಾರದು. ಪ್ರಾಸಾದ, ಸೇತುವೆ, ತಡಾಗ (ಕೆರೆ) ಮೊದಲಾದುವುಗಳನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣದವರೂ ಪ್ರತಿಷ್ಠೆಮಾಡಬಹುದು.

೨೦. ಅಥವಾ ಜೀರ್ಣವಾದುವುಗಳನ್ನು ಸರಿಮಾಡಿಸಬಹುದು. ಋಷಿಗಳು ಇವುಗಳಲ್ಲಿ ಪ್ರತಿಯೊಂದಕ್ಕೂ ಇಷ್ಟಿಷ್ಟೆಂದು ಅಳತೆಯನ್ನು ನಿರ್ಣಯಮಾಡಿದ್ದಾರೆ. ಯಾವುದಕ್ಕೂ ಅಳತೆ ಹೇಳದೆ ಬಿಟ್ಟಿಲ್ಲ.

೨೧. ಯಾವ ಅಳತೆಯನ್ನಿಟ್ಟರೆ ಅದಕ್ಕೆ ಹೆಸರೇನು ? ಮತ್ತು ಅದಕ್ಕೆ ಏನು ಫಲವೆಂಬುದನ್ನು ಈಗ ಹೇಳುತ್ತೇನೆ. ಪ್ರಾಸಾದವು ಅರವತ್ತುಮೊಳ ಉದ್ದವುಳ್ಳದಾಗಿದ್ದರೆ ವಾರಣೋದಿತವೆಂದು ಹೇಳಿಸಿಕೊಳ್ಳುತ್ತದೆ.

೨೨. ಪ್ರಾಸಾದವು ಅರವತ್ತೊಂದುಮೊಳ ಪರಿಮಾಣ ಉದ್ದವಿದ್ದರೆ ಉತ್ತಮ ಪ್ರಾಸಾದವೆಂದು ತಿಳಿಯಬೇಕು. ಅದರಲ್ಲಿ ಅರ್ಧ ಅಳತೆ ಇದ್ದರೆ ಮಧ್ಯಮವರ್ಗದ್ದೆಂತಲೂ, ಅಷ್ಟೂ ಇಲ್ಲದಿದ್ದರೆ ಕನಿಷ್ಠವರ್ಗದ್ದೆಂತಲೂ ತಿಳಿಯಬೇಕು.

೨೩. ಸಂಪತ್ತನ್ನು ಅಪೇಕ್ಷಿಸತಕ್ಕವನು ದೇವಮಾನದ ಅಳತೆಯಿಂದ ಇವನ್ನು ರಚಿಸಬೇಕು. ಕೆಲವರು ಹೊಸದಾಗಿ ಕೆರೆಯನ್ನು ಕಟ್ಟಿಸಬಹುದು. ಅಥವಾ ಕೆಲವರು ಶಿಥಿಲವಾಗಿದ್ದ ತಟಾಕವನ್ನು ಜೀರ್ಣೋದ್ಧಾರಮಾಡಬಹುದು.

ಸರ್ವಂ ಕುಲಂ ಸಮುದ್ಧೃತ್ಯ ಸ್ವರ್ಗಲೋಕೇ ಮಹೀಯತೇ ।
ವಾಪೀಕೂಪತಡಾಗಾಶ್ಚ ಉದ್ಯಾನಪ್ರವಹಾಸ್ತಥಾ ॥ ೨೪ ॥

ಪುನಃಪುನಶ್ಚ ಸಂಸ್ಕಾರ್ಯೋ ಲಭತೇ ಮೌಕ್ತಿಕಂ ಫಲಂ ।
ಗುಣಾನಾಂ ಚ ಪ್ರಮಾಣೇನ ಪ್ರತಿಮಾನಂ ವಿಭಾಗತಃ ॥ ೨೫ ॥

ದ್ವಿಶತೇನ ಶತೇನಾಪಿ ಪ್ರಾಸಾದಸ್ಯೈಷ ನಿಶ್ಚಯಃ ।
ಸಹಸ್ರಹಸ್ತವಿಸ್ತಾರಂ ದೈರ್ಘ್ಯೇಣಾಷ್ಟಾಧಿಕಂ ಭವೇತ್ ॥ ೨೬ ॥

ತಡಾಗಂ ತಂ ವಿಜಾನೀಯಾತ್ ಪ್ರಥಮಂ ಮಾನನಿರ್ಮಿತಂ ।
ಮಧ್ಯಂ ಚತುಃಶತೇನಾಪಿ ವಿಸ್ತಾರೇ ದಶಹೀನಕಂ ॥ ೨೭ ॥

ಕನಿಷ್ಠಂ ತ್ರಿಶತಂ ಚೈವ ಪ್ರಸ್ಥೇ ಸ್ಯಾದ್ವಿಂಶಹೀನಕಂ ।
ತದರ್ಧೇನ ಕಲೌ ಜ್ಞೇಯಂ ತದರ್ಧೇನ ತದರ್ಧಕಂ ॥ ೨೮ ॥

---

೨೪-೨೫ ಹೀಗೆ ಮಾಡಿದವನು ತನ್ನ ವಂಶದವರನ್ನೆಲ್ಲಾ ಉದ್ಧರಿಸಿ ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ. ಇಳಿಯುವ ಭಾವಿ, ಸೇದುವಭಾವಿ, ಕೆರೆ, ಉದ್ಯಾನ ಮುಂತಾದುವುಗಳನ್ನು ಪದೇಪದೇ ಜೀರ್ಣೋದ್ಧಾರ ಮಾಡಿಸುವುದರಿಂದ ಶ್ರೇಷ್ಠವಾದ ಫಲವು ಲಭಿಸುವುದು. ಪ್ರತಿಯೊಂದರ ಅಳತೆಯಲ್ಲೂ ಇರುವ ಬಹುಪ್ರಕಾರಕ್ಕೆ ತಕ್ಕಂತೆ ಆದರ ಫಲ ಪ್ರಮಾಣದಲ್ಲೂ ವ್ಯತ್ಯಾಸವುಂಟಾಗುವುದೆಂದು ಹೇಳಬಹುದು.

೨೬. ಪ್ರಾಸಾದವನ್ನು ಕಟ್ಟುವುದಕ್ಕೆ ಇನ್ನೂರುಹಸ್ತ, ಅಥವಾ ನೂರುಹಸ್ತ, ಎಂಬದಾಗಿ ನಿಶ್ಚಯಮಾಡಿಕೊಳ್ಳಬೇಕು. ಕೆರೆಯ ವಿಷಯದಲ್ಲಿ ಸಾವಿರಹಸ್ತ ಅಗಲ ಅದಕ್ಕಿಂತ ಎಂಟುಹಸ್ತ ಹೆಚ್ಚು ಉದ್ದವಿರುವಂತೆ ಕಟ್ಟಬೇಕು.

೨೭. ಆ ಅಳತೆ ಇರುವುದನ್ನೇ ಪ್ರಥಮವರ್ಗದ ತಟಾಕವೆಂದು ತಿಳಿಯಬೇಕು. ಪ್ರಥಮವರ್ಗದ ತಟಾಕದ ಲಕ್ಷಣವನ್ನು ಹೇಳಿ ಆಯಿತು. ನಾಲ್ಕು ನೂರುಹಸ್ತ ಉದ್ದ, ವಿಸ್ತಾರದಲ್ಲಿ ಅದಕ್ಕಿಂತ ಹತ್ತುಹಸ್ತ ಕಮ್ಮಿ ಇರುವಂತೆಯೂ ತಟಾಕಗಳನ್ನು ರಚಿಸಬಹುದು.

೨೮. ಹೀಗೆ ರಚಿಸಿರುವುದನ್ನು ಮಧ್ಯಮವರ್ಗದ ತಟಾಕವೆಂದು ಹೇಳುವರು. ಮೂನ್ನೂರುಹಸ್ತ ಉದ್ದ; ಅದಕ್ಕಿಂತಲೂ ಇಪ್ಪತ್ತುಹಸ್ತ ಕಮ್ಮಿ ಅಗಲ; ಇರುವುದು ಕನಿಷ್ಠವರ್ಗದ ತಟಾಕವೆನಿಸುವುದು. ಇವೆಲ್ಲಾ ದೇವಮಾನದ ಅಳತೆಯ ವಿಚಾರ.

**ತಡಾಗಮಾನಂ ವಿಜ್ಞೇಯಂ ತ್ರಿವರ್ಗಫಲದಾಯಕಂ ।**
**ಅಥ ಪುಷ್ಕರಿಣೀಪಕ್ಷೇ ದ್ವೇಶತೇ ಮಾನಮುತ್ತಮಂ ॥ ೨೯ ॥**

**ತಡಾಗೇ ದ್ವಿಗುಣಾನೇಮಿಃ ಮಾನಾರ್ಧೇ ಗರ್ತಮೀರಿತಂ ।**
**ತತ್ಕ್ಷೇತ್ರಂ ವಾರುಣಂ ಸ್ಥಾನಂ ತ್ರ್ಯುದಿತಂ ತದ್ಬಹಿಃ ಸ್ಮೃತಂ ॥ ೩೦ ॥**

**ಚತುರ್ಥಂ ಚೈವ ಗಾಂಧರ್ವಂ ಪೈಶಾಚಂ ಪಂಚಮಂ ವಿದುಃ ।**
**ಯಕ್ಷಸ್ಥಾನಮಿತಾ ಭಾಗೇ ಏವಂ ಸರ್ವಕ್ರಮಾಣಿ ಹಿ ॥ ೩೧ ॥**

**ಅಶೀತಿಹಸ್ತಮಾನೇನ ನಲಿನ್ಯಾ ಮಣಿರುಚ್ಯತೇ ।**
**ಪಂಚಹೀನಂ ಚ ಪ್ರಸ್ತಾವೇ ಏವಂ ಮಾನವಿದೋ ವಿದುಃ ॥ ೩೨ ॥**

---

೨೯. ಕಲಿಯುಗದಲ್ಲಿ ದೇವಮಾನದ ಅಳತೆಯಲ್ಲಿ ಅರ್ಧದಷ್ಟಿರುವುದು ಉತ್ತಮತಟಾಕವು; ಆ ಉತ್ತಮತಟಾಕದ ಅರ್ಧಅಳತೆಯಷ್ಟು ಇರುವುದು ಮಧ್ಯಮ ತಟಾಕವು. ಮಧ್ಯಮವರ್ಗದ ತಟಾಕದಲ್ಲಿ ಅರ್ಧ ಅಳತೆಯಷ್ಟು ಇರುವುದು ಕನಿಷ್ಠ ತಟಾಕವು ಎಂದು ತಿಳಿಯಬೇಕು. ಈ ತಟಾಕನಿರ್ಮಾಣವು ಧರ್ಮಾರ್ಥಕಾಮಗಳೆಂಬ ತ್ರಿವರ್ಗಫಲವನ್ನೂ ಕೊಡುವುದು. ಉತ್ತಮವರ್ಗದ ಪುಷ್ಕರಿಣಿಯು ಇನ್ನೂರು ಹಸ್ತಪ್ರಮಾಣ ಉದ್ದವಿರಬೇಕು.

೩೦. ತಟಾಕದಲ್ಲಿ ನೇಮಿಯು ಅಗಲದ ಎರಡರಷ್ಟಿರಬೇಕು. ಅದರ ಅರ್ಧದಷ್ಟು ಮಾತ್ರ ಅಳತೆಯುಳ್ಳದ್ದಾಗಿದ್ದರೆ ಗರ್ತವೆನಿಸುವುದು. ಅದು ಜಲಾಧಿಪತಿ ವರುಣನ ಸ್ಥಾನವಾಗಿದೆ. ಅದರ ಸುತ್ತ ಮೂರರಷ್ಟು ಪ್ರಮಾಣದವರೆಗೆ ಬಹಿರ್ಭಾಗವೆನ್ನಿಸುತ್ತದೆ.

೩೧. ಅದರ ನಾಲ್ಕರಷ್ಟರವರೆಗೆ ಗಾಂಧರ್ವಸ್ಥಾನವೆಂತಲೂ ಐದರಷ್ಟರವರೆಗೆ ಪೈಶಾಚಸ್ಥಾನವೆಂತಲೂ, ಅದಕ್ಕಿಂತ ಇನ್ನೂ ಹೆಚ್ಚಿನ ಅಳತೆಯನ್ನು ಯಕ್ಷಸ್ಥಾನವೆಂದೂ ತಿಳಿಯಬೇಕು. ಇದೇಕ್ರಮವು ಎಲ್ಲಕ್ಕೂ ಉಂಟು.

೩೨. ಎಂಭತ್ತುಮೊಳ ಉದ್ದವೂ ಅದಕ್ಕಿಂತ ಐದುಮೊಳ ಕಡಿಮೆ ಅಗಲವೂ ಇರುವ ಜಲಾಶಯಕ್ಕೆ ನಲಿನೀರತ್ನವೆಂಬ ಹೆಸರು ಎಂದು ಅಳತೆಯ ವಿಚಾರ ತಿಳಿದವರು ಹೇಳುತ್ತಾರೆ.

ಷಷ್ಟಿಹಸ್ತೋನ ನಳಿನೀ ಪ್ರಸ್ತಾವೇ ತುರ್ಯಹೀನಕಂ ।
ಚತುಃಷಷ್ಟಿಹಸ್ತಮಿತಾ ದೀರ್ಘಿಕಾ ಚ ಪ್ರಕೀರ್ತಿತಾ ॥ ೩೩ ॥

ತುರ್ಯಹೀನಂ ಚ ಪ್ರಸ್ತಾವೇ ಗರ್ತೇ ಮಾನಂ ನ ವಿದ್ಯತೇ ॥ ೩೪ ॥

ಅಗ್ನೌ ರೋಗೋ ಬಂಧುನಾಶಶ್ಚ ಯಾಮ್ಯಾಂ ।
ಮೃತ್ಯುಶ್ಚೋಗ್ರಃ ಪ್ರಾಪ್ಯತೇ ರಾಕ್ಷಸೇ ಚ ॥
ಭೀತಿಶ್ಚೋತ್ರಾ ಪ್ರಾಪ್ಯತೇ ವಾಯುವೀಯೇ ।
ತಸ್ಮಾದೇತಾ ವರ್ಜನೀಯಾಃ ಪ್ರಯತ್ನಾತ್ ॥ ೩೫ ॥

ವಿಪ್ರಾದೀನಾಂ ದೇವತಾನಾಂ ಸಮಾಜೇ ।
ಮೇರುಸ್ಥಾನೇ ಯತ್ರ ತತ್ರೈವ ಕುರ್ಯಾತ್ ॥
ನದ್ಯಾಸ್ತೀರೇ ವರ್ಜಯೇದ್ವಾ ಸ್ಮಶಾನೇ ।
ತಡಾಗಾದ್ವೈ ಆಶ್ರಮಾದೀ ಜನಾನಾಂ ॥ ೩೬ ॥

---

೩೩. ಅರವತ್ತುಮೊಳ ಉದ್ದವೂ ಅದಕ್ಕಿಂತ ಕಾಲುಭಾಗ ಕಡಿಮೆಯಾಗಿ ಅಗಲವೂ ಉಳ್ಳ ಕೊಳವನ್ನು "ನಳಿನಿ" ಎನ್ನಬೇಕು.

೩೪. ಅರವತ್ತುನಾಲ್ಕುಮೊಳ ಉದ್ದವೂ ಅದರ ಕಾಲುಭಾಗದಷ್ಟು ಕಡಿಮೆ ಆಗಲವೂ ಇರುವ ಕೊಳವನ್ನು "ದೀರ್ಘಿಕಾ" ಎನ್ನುವರು. ಗರ್ತಕ್ಕೆ ನಿಷ್ಕರ್ಷೆಯಾದ ಅಳತೆ ಇಲ್ಲ.

೩೫. ದೀರ್ಘಿಕೆ ಮೊದಲಾದುವುಗಳನ್ನು ಊರಿನ ಆಗ್ನೇಯ ದಿಕ್ಕಿನಲ್ಲಿ ನಿರ್ಮಾಣಮಾಡಿದರೆ ರೋಗಪೀಡೆಯೂ, ದಕ್ಷಿಣದಿಕ್ಕಿನಲ್ಲಿ ಕಟ್ಟಿಸಿದರೆ ಬಂಧುನಾಶವೂ ಉಂಟಾಗುವುದು. ನೈಋತ್ಯದಲ್ಲಿ ಕಟ್ಟಿಸಿದರೆ ಭಯಂಕರವಾದ ಮೃತ್ಯುವು ಸಂಭವಿಸುವುದು. ವಾಯುವ್ಯದಲ್ಲಿ ಕಟ್ಟಿಸಿದರೆ ಉಗ್ರವಾದ ಭಯ; ಆದುದರಿಂದ ಈ ದಿಕ್ಕುಗಳಲ್ಲಿ ಅವುಗಳ ನಿರ್ಮಾಣ ಪ್ರಯತ್ನವನ್ನು ಮಾಡಬಾರದು.

೩೬. ಬ್ರಾಹ್ಮಣಸಮೂಹವು ವಾಸಿಸುವ ಕಡೆಯಲ್ಲಿಯೂ, ದೇವತಾಪ್ರತಿಷ್ಠೆ ಮಾಡಿಸಿದ ಕಡೆಗಳಲ್ಲಿಯೂ, ಮೇರುಸ್ಥಾನದಲ್ಲಿಯೂ ತಟಾಕ, ಪುಷ್ಕರಿಣಿ ಇವನ್ನು ಏರ್ಪಡಿಸುವುದು ಉತ್ತಮ. ನದಿಯ ದಡದಲ್ಲಿಯೂ, ಸ್ಮಶಾನಪ್ರದೇಶದಲ್ಲಿಯೂ, ಜನಗಳ ವಾಸಸ್ಥಾನದ ಮಧ್ಯಭಾಗದಲ್ಲಿಯೂ ತಟಾಕ ನಿರ್ಮಾಣ ಮಾಡಬಾರದು.

ಯದಾ ಪ್ರತಿಷ್ಠಾಂ ನ ಕರೋತಿ ಮೂಢಃ ।
ಪ್ರಾಸಾದವಾಪ್ಯಾದಿಷು ಪಾಪಚೇತಾಃ ॥
ಭಯಂ ಸಮಾಪ್ನೋತಿ ಚ ಪಾಪಮುಗ್ರಂ ।
ಪದೇಽಹಿನಾ ವೈ ವಧಭಾಗಿತಾಂ ವ್ರಜೇತ್ ॥ ೩೭ ॥

ಯದಾ ತು ದೀರ್ಘಾ ಸರಸೀತಡಾಗ ।
ಪ್ರಾಸಾದಕೂಪಾದಿಷು ನಿರ್ಮಿತಾನಿ ॥
ಕುರ್ವಂತಿ ಚಾನ್ಯಾನಿ ಯದಾ ಮಖಾನಿ ।
ಭವಂತಿ ನೈವಾಸ್ಯ ಫಲಪ್ರದಾನಿ ॥ ೩೮ ॥

ಯದಪ್ರತಿಷ್ಠೇಷು ನಿಪಾನಕೇಷು ।
ಪ್ರಾಸಾದಕೂಪೇಷು ವನಾದಿಕೇಷು ॥
ಪ್ರತಿಷ್ಠಿತೇ ಯತ್ಫಲಮಾಪ್ನುವಂತಿ ।
ಫಲಂ ತದಾಲ್ಪಾಲ್ಪಕಮಾಹುರಸ್ಯ ॥ ೩೯ ॥

ತಸ್ಮಾತ್ಪ್ರತಿಷ್ಠಾಂ ವಿಧಿನಾ ಜಲಾದೇಃ ।
ಕುರ್ಯಾದ್ಯಥೇಷ್ಟಂ ಪ್ರಯತೋ ಮನುಷ್ಯಃ ॥

---

೩೭. ಪ್ರಾಸಾದ, ಬಾವಿ ಇವುಗಳನ್ನು ನಿರ್ಮಿಸಿ ವಿಧಿಪ್ರಕಾರ ಪ್ರತಿಷ್ಠೆಮಾಡದೆ ಹೋಗುವವನು, ಪಾಪಕರವಾನ ಮನಸ್ಸುಳ್ಳ ಮೂಢನು. ಅಂಥವನು ಭಯಂಕರವಾದ ಪಾಪಿಯಾಗುವನಲ್ಲದೆ ತನ್ನ ಕಾಲನ್ನು ಹಾವು ಕಚ್ಚುವುದರಿಂದ ಸಾಯುತ್ತಾನೆ.

೩೮. ಕೊಳ, ಸರೋವರ, ಕೆರೆ, ಉಪ್ಪರಿಗೆಮನೆ, ಬಾವಿ ಇವುಗಳನ್ನು ನಿರ್ಮಿಸಿ ಪ್ರತಿಷ್ಠೆಮಾಡದೆ ತಾತ್ಸಾರಮಾಡಿದವನು ಬೇರೆ ಹಲವು ಯಜ್ಞಗಳನ್ನು ಮಾಡಿದಾಗ್ಯೂ ಅವಕ್ಕೂ ಫಲ ಲಭಿಸುವುದಿಲ್ಲ.

೩೯. ಪ್ರಾಸಾದ, (ಉಪ್ಪರಿಗೆಮನೆ) ಬಾವಿ, ಉದ್ಯಾನ ಮುಂತಾದುವನ್ನು ನಿರ್ಮಿಸಿ ಪ್ರತಿಷ್ಠಿಸುವಾಗ ಇತರ ಚತುಷ್ಪಾದಿ ದ್ವಿಪಾದಿ ಮೊದಲಾದ ಜಂತುಗಳ ಜಲಪಾನಕ್ಕೆ ಅನುಕೂಲವಾಗುವಂತೆ ಪಕ್ಕದಲ್ಲಿ ನೀರಿನ ತೊಟ್ಟಿಗಳನ್ನು ಪ್ರತಿಷ್ಠಸದೇ ಹೋದರೆ ಪ್ರಾಸಾದಗಳ ಪ್ರತಿಷ್ಠಾಪನದಿಂದ ಎಷ್ಟುಫಲ (ಪುಣ್ಯ) ಲಭಿಸಬೇಕಾಗಿದ್ದಿತೋ ಅಷ್ಟು ಲಭಿಸದೆ ಸ್ವಲ್ಪ ಮಾತ್ರ ಲಭಿಸುವುದೆಂದು ಹೇಳುತ್ತಾರೆ.

ಪುಣ್ಯಾರ್ಜಿತೇನೈವ ಧನೇನ ಕಾಲೇ ।
ಸ್ವವಿತ್ತಸಾಧ್ಯೇನ ಶುಭಾಶಯೇನ ॥ ೪೦ ॥

ಪ್ರಾಸಾದೇ ಮೃಣ್ಮಯೇ ಪುಣ್ಯಂ ಮಯಾ ತತ್ಕಥಿತಂ ದ್ವಿಜಾಃ ।
ತಸ್ಮಾಚ್ಚತುರ್ಗುಣಂ ಪ್ರೋಕ್ತಂ ತೃಣಕಾಷ್ಠಮಯೇ ತಥಾ ॥ ೪೧ ॥

ತೃಣಮಯೇ ಶತಮಯಂ ತದರ್ಧಂ ನವವಲ್ಕಲೇ ।
ತಸ್ಮಾದ್ದಶಗುಣಂ ಪ್ರೋಕ್ತಂ ಕೃತೇ ದಾರುಮಯೇ ಭವೇತ್ ॥ ೪೧ ॥

ತತೋ ದಶಗುಣಂ ಪ್ರೋಕ್ತಮಿಷ್ಟಕಾ ರಚಿತೇ ಶುಭೇ ।
ತಸ್ಮಾಚ್ಛತಗುಣಂ ಶೈಲೇ ಸಹಸ್ರಂ ತಾಮ್ರರೌಪ್ಯಕೇ ॥ ೪೩ ॥

---

೪೦. ಆದುದರಿಂದ ಪರಿಶುದ್ಧವಾದ ಮನುಷ್ಯನು ಧರ್ಮಮಾರ್ಗದಲ್ಲಿ ಸಂಪಾದಿಸಿದುದಾಗಿ ತನ್ನಲ್ಲಿರುವಷ್ಟು ದ್ರವ್ಯದಿಂದ ಸಾಧ್ಯವಾಗುವ ಜಲಾಶಯ, ದೇವಪ್ರಾಸಾದ ವೃಕ್ಷಾದಿಗಳ ಪ್ರತಿಷ್ಠಾಕಾರ್ಯಗಳನ್ನು ಸಕಾಲದಲ್ಲಿ ತನ್ನ ಮನಸ್ಸೊಪ್ಪುವಂತೆ ಶುದ್ಧಾಂತಃಕರಣದಿಂದ ವಿಧಿಪ್ರಕಾರವಾಗಿ ಮಾಡಬೇಕು.

೪೧. ವಿಪ್ರರೇ! ಕೇಳಿರಿ; ಮಣ್ಣಿನಗೋಡೆ, ಮಣ್ಣಿನಮಾಳಿಗೆಯುಳ್ಳ ದೇವಾಲಯವನ್ನು ಕಟ್ಟಿಸಿದರೆ ಎಷ್ಟು ಪುಣ್ಯಕರ ಎಂಬ ವಿಚಾರವನ್ನು ನಾನು ಹಿಂದೆಯೇ ಹೇಳಿ ಆಗಿದೆ. ಗಟ್ಟಿಯಾದ ಕಾಷ್ಠಗಳ ಛಾವಣಿಮಾಡಿ ಹುಲ್ಲನ್ನು ಹೊದ್ದಿಸಿದರೆ ಆದರ ನಾಲ್ಕರಷ್ಟು ಪುಣ್ಯವುಂಟು. ದಟ್ಟವಾಗಿ ಹುಲ್ಲನ್ನೇ ಹೊದ್ದಿಸಿದರೆ ನೂರರಷ್ಟು ಪುಣ್ಯಬರುವುದು.

೪೨. ಹೊಸ ನಾರುಬಟ್ಟೆ (ಗೋಣಿ) ಯನ್ನು ಹೊದ್ದಿಸಿ ಕಟ್ಟಿಸಿದರೆ ಆದರ ಅರ್ಧದಷ್ಟು ಪುಣ್ಯಕರ. ಮರದಲ್ಲಿ ಗೋಡೆ, ಛಾವಣಿ, ಎಲ್ಲವನ್ನೂ ಕಟ್ಟಿಸಿದರೆ ಅದರ ಹತ್ತರಷ್ಟು ಪುಣ್ಯವೆಂದು ತಿಳಿಯಬೇಕು.

೪೩. ಇಟ್ಟಿಗೆಯಿಂದ ಮಂಗಳಕರವಾಗಿ ರಚಿಸಿದರೆ ಅದರ ಹತ್ತರಷ್ಟು ಪುಣ್ಯಲಾಭವುಂಟು. ಕಲ್ಲಿನಿಂದಲೇ ರಚಿಸಿದರೆ ಅದರ ನೂರರಷ್ಟು ಪುಣ್ಯಲಭಿಸುವುದು, ತಾಮ್ರದ ಅಥವಾ ಬೆಳ್ಳಿಯ ತಗಡನ್ನು ಹೊದ್ದಿಸಿ ಕಟ್ಟಿಸಿದರೆ ಆದರ ಸಹಸ್ರದಷ್ಟು ಪುಣ್ಯಬರುವುದು.

**ತತಶ್ಚ ಶತಸಾಹಸ್ರಂ ಸೌವರ್ಣೇ ದ್ವಿಜಸತ್ತಮಾಃ ।**
**ಅನಂತಫಲಮಾಪ್ನೋತಿ ರತ್ನಾದಿರಚಿತೇ ತಥಾ ॥ ೪೪ ॥**

**ಯದತೀತಂ ಭವಿಷ್ಯಚ್ಚ ಕುಲಾನಾಮಯುತಂ ನರಃ ।**
**ವಿಷ್ಣುಲೋಕಂ ನಯತ್ಯಾಶು ಕಾರಯಿತ್ವಾ ಹರೇರ್ಗೃಹಂ ॥ ॥ ೪೫ ॥**

**ಕನಿಷ್ಠಂ ಮಧ್ಯಮಂ ಶ್ರೇಷ್ಠಂ ಕಾರಯಿತ್ವಾ ಹರೇರ್ಗೃಹಂ ।**
**ಅರ್ಥಂ ಚ ವೈಷ್ಣವಂ ಲೋಕಂ ಮೋಕ್ಷಂ ಚ ಲಭತೇ ಕ್ರಮಾತ್ ॥ ೪೬ ॥**

**ಹಸ್ತಾನಾಂ ಷೋಡಶೈರ್ಯಾವತ್ಪ್ರಸ್ಥೇ ಸ್ಯಾತ್ಕರಹೀನಕಂ ।**
**ತೃಣವಂಶಮಯೇ ಮಾನಂ ಮಧ್ಯಂ ಚಾರ್ಕಕರಂ ಭವೇತ್ ॥ ೪೭ ॥**

---

೪೪. ಎಲೈ ಬ್ರಾಹ್ಮಣಶ್ರೇಷ್ಠರೇ! ಕೇಳಿರಿ; ಚಿನ್ನದಿಂದ ದೇವಾಯತನವನ್ನು ಮಾಡಿಸಿದರೆ ಅದರ ಲಕ್ಷದಷ್ಟು ಪುಣ್ಯವುಂಟು. ರತ್ನಾದಿಗಳಿಂದ ರಚಿಸಿದರೆ, ಕೊನೆಮಿತಿಯಿಲ್ಲದಷ್ಟು ಪುಣ್ಯವನ್ನು ಹೊಂದುತ್ತಾನೆ.

೪೫. ವಿಷ್ಣುದೇವಾಲಯವನ್ನು ರಚಿಸುವುದರಿಂದ ಆ ಮನುಷ್ಯನು ತನ್ನ ಕುಲದವರಾಗಿ ಗತಿಸಿಹೋದ ನೂರುಸಾವಿರ ತಲೆಮಾರಿನವರಿಗೂ, ಮುಂದೆ ತನ್ನ ವಂಶದಲ್ಲಿ ಜನಿಸುವ ನೂರುಸಾವಿರ ತಲಾಂತರದವರಿಗೂ ಶೀಘ್ರವಾಗಿ ವಿಷ್ಣುಲೋಕ ಪ್ರಾಪ್ತಿಯಾಗುವಂತೆ ಮಾಡುವನು.

೪೬. ಕನಿಷ್ಠವರ್ಗದ ವಿಷ್ಣುದೇವಾಲಯವನ್ನು ನಿರ್ಮಿಸಿ ಪ್ರತಿಷ್ಠೆಮಾಡಿಸಿದರೆ, ದ್ರವ್ಯಪ್ರಾಪ್ತಿಯೂ, ಮಧ್ಯಮವರ್ಗದ ವಿಷ್ಣುದೇವಾಲಯವನ್ನು ಕಟ್ಟಿಸಿ ಪ್ರತಿಷ್ಠೆ ಮಾಡಿಸಿದರೆ ವಿಷ್ಣುಲೋಕಪ್ರಾಪ್ತಿಯೂ, ಶ್ರೇಷ್ಠವರ್ಗದ ವಿಷ್ಣುದೇವಾಲಯವನ್ನು ಕಟ್ಟಿಸಿ ಪ್ರತಿಷ್ಠೆಮಾಡಿಸಿದರೆ ಮೋಕ್ಷವೂ ಲಭಿಸುವುದು.

೪೭. ಹದಿನಾರು ಹಸ್ತ ಉದ್ದವೂ, ಅದಕ್ಕಿಂತಲೂ ಒಂದುಮೊಳ ಕಮ್ಮಿ ಎತ್ತರವೂ, ಮಧ್ಯದಲ್ಲಿ ಹನ್ನೆರಡುಹಸ್ತ ಪ್ರಮಾಣ ವಿಸ್ತಾರವೂ, ಉಳ್ಳದಾಗಿ ಬಿದಿರು ಮತ್ತು ಹುಲ್ಲು ಇವುಗಳಿಂದ ನಿರ್ಮಿಸಿದುದು ಮಧ್ಯಮದರ್ಜೆಯದೆನಿಸುವುದು.

**ಕನಿಷ್ಠಂ ತಾರಹಸ್ತಂ ಸ್ಯಾದುತ್ತಮಂ ಪಂಚವಿಂಶತಿಃ ।**
**ಸರ್ವೋತ್ತಮಂ ಚ ದ್ವಾತ್ರಿಂಶಚ್ಚತುಷ್ಕೋಣೇ ಮಹಾಫಲಂ ॥ ೪೮ ॥**

**ಪುರದ್ವಾರಂ ಚ ಕರ್ತವ್ಯಂ ಚತುರಸ್ರಂ ಸಮಂ ಭವೇತ್ ।**
**ಅಷ್ಟಕೋಣಂ ನ ಕರ್ತವ್ಯಂ ತ್ರಿಪುರಂ ಚ ಕಲೌ ಯುಗೇ ॥ ೪೯ ॥**

**ಸುರವೇಶ್ಮನಿ ಯಾವಂತೋ ದ್ವಿಜೇಂದ್ರಾಃ ಪರಮಾಣವಃ ।**
**ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೫೦ ॥**

**ಕರ್ತುರ್ದಶಗುಣಂ ಪ್ರೋಕ್ತವಜನ್ಮಪರಿಶುದ್ಧಯೇ ।**
**ಪತಿತಾನ್ಯುದ್ಧರೇದ್ಯಸ್ತು ಸ ಸರ್ವಫಲಮಶ್ನುತೇ ॥ ೫೧ ॥**

---

೪೮. ಇಂಥ ಕಟ್ಟಡದಲ್ಲಿ ಹನ್ನೆರಡುಹಸ್ತ ಪ್ರಮಾಣವಿರುವುದು ಕನಿಷ್ಠದರ್ಜೆಯದು. ಇಪ್ಪತ್ತೈದು ಹಸ್ತಗಳ ಅಳತೆಯದು ಉತ್ತಮ. ಮೂವತ್ತೆರಡು ಹಸ್ತ ಪ್ರಮಾಣವಿದ್ದರೆ ಸರ್ವೋತ್ತಮ, ಹೀಗೆ ಅಳತೆ ಇರುವುದಲ್ಲದೆ ಚತುಷ್ಕೋಣ(ನಾಲ್ಕು ಮೂಲೆಯುಳ್ಳ) ವಾಗಿದ್ದರೆ ಮಹಾಪುಣ್ಯಪ್ರದವು.

೪೯. ಊರಬಾಗಿಲನ್ನು ಸಮಚತುರ್ರಸವಾಗಿರುವಂತೆ ರಚಿಸಬೇಕು. ಕಲಿಯುಗದಲ್ಲಿ ಎಂಟುಮೂಲೆಯುಳ್ಳ ಬಾಗಿಲನ್ನು ಮಾಡಬಾರದು ಮತ್ತು ತ್ರಿಕೋಣಾಕಾರವಾದುದನ್ನೂ ಮಾಡಬಾರದು.

೫೦. ಅಯ್ಯಾ ಬ್ರಾಹ್ಮಣಶ್ರೇಷ್ಠರೇ! ಕೇಳಿ; ದೇವಾಲಯ ನಿರ್ಮಾಣಮಾಡಿಸಿದವನು ತಾನು ನಿರ್ಮಿಸಿದ ದೇವಾಲಯದಲ್ಲಿ ಎಷ್ಟು ಪರಮಾಣುಗಳಿವೆಯೋ ಅಷ್ಟು ಸಹಸ್ರ ವರ್ಷಗಳವರೆಗೆ ಸ್ವರ್ಗದಲ್ಲಿ ಪೂಜಿತನಾಗುತ್ತಾನೆ.

೫೧. ದೇವಾಲಯವನ್ನು ನಿರ್ಮಿಸಿದವನ ಜನ್ಮವೇ ಸಾರ್ಥಕವಾಗುವುದಲ್ಲದೆ ಸಾಮಾನ್ಯ ಧರ್ಮಕಾರ್ಯದ ಹತ್ತರಷ್ಟು ಪುಣ್ಯವುಂಟಾಗುವುದು. ಬಿದ್ದುಹೋಗಿರುವ ದೇವಾಲಯಗಳನ್ನು ಸರಿಪಡಿಸುವವನಿಗೂ ಈ ಎಲ್ಲ ಫಲಗಳೂ ಉಂಟಾಗುವುದು.

**ಪತಿತಂ ಪತಮಾನಂ ಚ ತಥಾರ್ಧಸ್ಫುಟಿತಂ ತಥಾ ।**
**ಸಮುದ್ಧೃತ್ಯ ಹರೇರ್ವೇಶ್ಮ ದ್ವಿಗುಣಂ ಫಲಮಾಪ್ನುಯಾತ್ ॥ ೫೨ ॥**

**ಪತಿತಸ್ಯ ಯ ಉದ್ಧರ್ತಾ ಪತಮಾನಸ್ಯ ರಕ್ಷಿತಾ ।**
**ವಿಷ್ಣೋರಧಿತಲಸ್ಯೈವ ಮಾನವಃ ಸ್ವರ್ಗಭಾಗ್ಭವೇತ್ ॥ ೫೩ ॥**

**ಯಃ ಕುರ್ಯಾದ್ವಿಷ್ಣುಪ್ರಾಸಾದಂ ಜ್ಯೋತಿರ್ಲಿಂಗಸ್ಯ ವಾ ಕ್ವಚಿತ್ ।**
**ಸೂರ್ಯಸ್ಯಾಪಿ ವಿರಿಂಚೇಶ್ಚ ದುರ್ಗಾಯಾಃ ಶ್ರೀಧರಸ್ಯ ಚ ॥ ೫೪ ॥**

**ಸ್ವಯಂ ಸ್ವಕುಲಮುದ್ಧೃತ್ಯ ಕಲ್ಪಕೋಟಿಂ ವಸೇದ್ದಿವಿ ।**
**ಸ್ವರ್ಗಾದ್ಭ್ರಷ್ಟೋ ಭವೇದ್ರಾಜಾ ಧನೀ ಪೂಜ್ಯತಮೋಽಪಿ ವಾ ॥ ೫೫ ॥**

**ದೇವೀಲಿಂಗೇಷು ಯೋನೌ ವಾ ಕೃತ್ವಾ ದೇವಕುಲಂ ನರಃ ।**
**ಸ್ಮರತ್ವಂ ಪ್ರಾಪ್ನುಯಾಲ್ಲೋಕೇ ಪೂಜಿತೋ ದಿವಿ ಸರ್ವದಾ ॥ ೫೬ ॥**

---

೫೨. ದೇವಾಲಯವು ಬಿದ್ದು ಹೋಗಿದ್ದರೂ, ಬೀಳುವಸ್ಥಿತಿಯಲ್ಲಿದ್ದರೂ, ಬಿರುಕು ಬಿಟ್ಟಿದ್ದರೂ, ಅದನ್ನು ಜೀರ್ಣೋದ್ಧಾರಮಾಡಿದವನಿಗೆ ದೇವಾಲಯ ನಿರ್ಮಾಣಫಲದ ಎರಡರಷ್ಟು ಫಲವುಂಟಾಗುವುದು.

೫೩. ಬಿದ್ದುಹೋಗಿರುವ ವಿಷ್ಣುದೇವಾಲಯವನ್ನು ಜೀರ್ಣೋದ್ಧಾರ ಮಾಡುವವನೂ ಅಥವಾ ಶಿಥಿಲವಾಗುತ್ತಿರುವ ದೇವಾಲಯವನ್ನು ಸರಿಪಡಿಸುವವನೂ, ಸಹ ಸ್ವರ್ಗವನ್ನು ಹೊಂದುವನು.

೫೪-೫೫. ವಿಷ್ಣುದೇವಾಲಯ, ಜ್ಯೋತಿರ್ಲಿಂಗ (ಶಿವ) ದೇವಾಲಯ, ಸೂರ್ಯ ದೇವಾಲಯ, ಬ್ರಹ್ಮದೇವಾಲಯ, ದುರ್ಗಾದೇವಾಲಯ, ಶ್ರೀಧರನ ದೇವಾಲಯ ಇವುಗಳಲ್ಲಿ ಯಾವುದಾದರೂ ದೇವಾಲಯವನ್ನು ಕಟ್ಟಿಸುವವನು ತನ್ನ ವಂಶದವರನ್ನು ಉದ್ಧರಿಸಿ ಕೋಟಿಕಲ್ಪದವರೆಗೆ ಸ್ವರ್ಗದಲ್ಲಿ ಸುಖವಾಗಿರುತ್ತಾನೆ.

೫೬. ಆ ಸ್ವರ್ಗವಾಸದ ಪುಣ್ಯತೀರಿ ಸ್ವರ್ಗದಿಂದ ಚ್ಯುತನಾಗಿ ಭೂಲೋಕದಲ್ಲಿ ರಾಜನೋ ಅಥವಾ ಪೂಜ್ಯನಾದ ಧನಿಕನೋ ಆಗುತ್ತಾನೆ. ಮನುಷ್ಯನು ದೇವತಾ ಸಂಬಂಧವಾದ ಚಿಹ್ನೆಗಳಿರುವ ಸ್ಥಳದಲ್ಲಾಗಲಿ ದೇವತಾಉದ್ಭವ ಚಿಹ್ನೆಗಳಿರುವ ಸ್ಥಳದಲ್ಲಿಯಾಗಲಿ ದೇವಾಲಯವನ್ನು ಮಾಡಿದರೆ ಲೋಕದಲ್ಲಿ ಮನ್ಮಥಸದೃಶನಾದ ಸುಂದರರೂಪವನ್ನು ಪಡೆದು ಸ್ವರ್ಗದಲ್ಲಿ ಸದಾ ಪೂಜಿತನಾಗುತ್ತಾನೆ.

ಪ್ರಾವೃಟ್ಕಾಲೇ ಸ್ಥಿತಂ ತೋಯಂ ಅಗ್ನಿಷ್ಟೋಮಫಲಂ ಭವೇತ್ ।
ಶರತ್ಕಾಲಸ್ಥಿತಂ ತೋಯಂ ಯಜ್ಞತೋಯಾದ್ವಿಶಿಷ್ಯತೇ ॥ ೫೭ ॥

ನಿಧಾಘಕಾಲೇ ಪಾನೀಯಂ ಯಸ್ಯ ತಿಷ್ಠತಿ ವಾಪಿನಃ ।
ಸ್ವರ್ಗಂ ಗಚ್ಛೇತ್ಸ ನರಕಂ ನ ಕದಾಚಿದವಾಪ್ನುಯಾತ್ ॥ ೫೮ ॥

ಏಕಾಹಂ ತು ಸ್ಥಿತಂ ತೋಯಂ ಪೃಥಿವ್ಯಾಂ ದ್ವಿಜಸತ್ತಮಾಃ ।
ಕುಲಾನಿ ತಾರಯೇತ್ತಸ್ಯ ಸಪ್ತಸಪ್ತಪರಾಣಿ ಚ ॥ ೫೯ ॥

ಪೂರ್ವಂ ಪಿತೃಕುಲೇ ಸಪ್ತ ತದ್ವನ್ಮಾತೃಕುಲೇ ದ್ವಿಜಾಃ ।
ಚತುರ್ದಶಮಿದಂ ಜ್ಞೇಯಂ ಶತಲೇಖಂ ತತಃ ಶೃಣು ॥ ೬೦ ॥

---

೫೭. ಇವನು ಕಟ್ಟಿಸಿದ ಬಾವಿಯಲ್ಲಿ ಮಳೆಗಾಲದಲ್ಲಿ ಮಾತ್ರ ನೀರು ಇದ್ದರೆ ಅಗ್ನಿಷ್ಟೋಮವೆಂಬ ಯಾಗಮಾಡಿದ ಫಲ ಬರುವುದು. ಶರತ್ಕಾಲದವರೆಗೆ ನೀರು ನಿಂತರೆ ಅದು ಯಜ್ಞದಲ್ಲಿ ಉಪಯೋಗಿಸುವ ಜಲಕ್ಕಿಂತ ಪವಿತ್ರವೆನಿಸುವುದು.

೫೮. ಯಾವನು ತೋಡಿಸಿದ ಬಾವಿಯಲ್ಲಿ ನೀರು ಬೇಸಿಗೆಕಾಲದಲ್ಲೂ ಒಣಗದೆ ಧ್ರುವಜಲ ನಿಲ್ಲುವುದೋ, ಅವನಿಗೆ ಸ್ವರ್ಗಪ್ರಾಪ್ತಿಯಾಗುವುದು. ಅವನಿಗೆ ಯಾವಾಗಲೂ ನರಕವೇ ಇಲ್ಲ.

೫೯. ಎಲೈ ಬ್ರಾಹ್ಮಣೋತ್ತಮರೇ! ಕೇಳಿ; ಯಾವನು ತೋಡಿಸಿದ ಬಾವಿಯಲ್ಲಿ ಅಥವಾ ಕೆರೆಯಲ್ಲಿ, ಒಂದುದಿನದ ಮಟ್ಟಿಗೆ ನೀರು ನಿಂತರೂ ಅವನು ತನ್ನ ಕುಲದಲ್ಲಿ ಹಿಂದಿನ ಏಳು ತಲೆಮಾರಿನವರನ್ನೂ, ಮುಂದಿನ ಏಳು ತಲೆಮಾರಿನವರನ್ನೂ, ನರಕದಿಂದ ಉದ್ಧರಿಸಿ ದಾಟಿಸುತ್ತಾನೆ.

೬೦. ಮೊದಲು ತಂದೆಯವಂಶದ ಏಳುತಲೆಮಾರಿನವರನ್ನೂ, ಅನಂತರ ತಾಯಿಯಕುಲದ ಏಳುತಲೆಮಾರಿನವರನ್ನೂ ಉದ್ಧರಿಸುತ್ತಾನೆ. ಈ ಹದಿನಾಲ್ಕು ತಲೆಮಾರಿನವರನ್ನು ಉದ್ಧರಿಸಿದರೆ ನೂರಾರು ಕುಲಗಳನ್ನು ಉದ್ಧರಿಸಿದಷ್ಟು ಫಲವು ಬರುವುದು. ಆದುದರಿಂದ ಆ ಹದಿನಾಲ್ಕು ಕುಲೋದ್ಧಾರವನ್ನೇ ಶತಕುಲೋದ್ಧಾರವೆಂದು ತಿಳಿಯಬೇಕು.

**ಪಿತುರೂರ್ಧ್ವಂ ಕುಲಂ ವಿಂಶಂ ಮಾತುರೂರ್ಧ್ವಂ ಕುಲಂ ತಥಾ ।**
**ತದ್ವತ್ಪರಂ ವಿಜಾನೀಯಾತ್ ಭಾರ್ಯಾಯಾಃ ಪಂಚ ಏವ ಚ　　॥ ೬೧ ॥**

**ಪಂಚ ವೈ ಮಾತೃತಶ್ಚಾಸ್ಯ ಪಿತುರ್ಮಾತಾಮಹೇ ಕುಲೇ ।**
**ಪಂಚಪಂಚ ವಿಜಾನೀಯಾನ್ಮಾತುರ್ಮಾತಾಮಹಸ್ಯ ಚ　　॥ ೬೨ ॥**

**ಗುರೋಃ ಪಿತೃಕುಲೇ ಪಂಚ ತಸ್ಯ ಮಾತೃಕುಲೇ ತಥಾ ।**
**ಆಚಾರ್ಯಸ್ಯ ಕುಲೇ ದ್ವಂದ್ವಂ ದಶ ರಾಜಕುಲಸ್ಯ ಚ　　॥ ೬೩ ॥**

**ರಾಜ್ಞೋ ಮಾತಾಮಹಾಕುಲೇ ಪಂಚ ಚೈವ ಪ್ರಕೀರ್ತಿತಾಃ ।**
**ಏಕೋತ್ತರಂ ಶತಕುಲಂ ಪರಿಸಂಖ್ಯಾತಮೇವ ಚ　　॥ ೬೪ ॥**

**ಆತ್ಮನಾ ಸಹ ವಿಪ್ರೇಂದ್ರಾಃ ಉದ್ಧಾರಃ ಸಮ್ಮತಃ ಸ್ಮೃತಃ ।**
**ಕುರ್ಯಾದ್ದೇವಾರ್ಚನಂ ತೀರ್ಥೇ ಸ್ವವಿಮುಕ್ತೇ ದಶಾರ್ಣಕೇ　　॥ ೬೫ ॥**

---

೬೧. ತಂದೆಯ ಹಿಂದಿನ ಇಪ್ಪತ್ತು ತಲೆಮಾರಿನವರು, ಮಾತೃವಿಗಿಂತ ಹಿಂದಿನ ಇಪ್ಪತ್ತು ತಲೆಮಾರಿನವರು, ತನ್ನ ಪತ್ನಿಯ ಕಡೆಯ ಐದುತಲೆಮಾರಿನವರು, ಇವರೆಲ್ಲ ರನ್ನೂ ಉದ್ಧರಿಸುವನು ಎಂದು ಕೆಲವರಮತ.

೬೨. ಮಾತೃಕುಲದಲ್ಲಿ ಐವರು, ಪಿತೃಕುಲದಲ್ಲಿ ಐವರು, ಪಿತೃವಿನ ಮಾತಾ ಮಹನಕುಲದಲ್ಲಿ ಐವರು, ಮಾತೃವಿನ ಮಾತಾಮಹನಕುಲದಲ್ಲಿ ಐವರು.

೬೩. ಗುರುವಿನ ಪಿತೃಕುಲದಲ್ಲಿ ಐವರು, ಗುರುವಿನ ಮಾತೃಕುಲದಲ್ಲಿ ಐವರು, ಆಚಾರ್ಯನ ಪಿತೃಕುಲ, ಆಚಾರ್ಯನ ಮಾತೃಕುಲ ಇವುಗಳಲ್ಲಿ ಇಬ್ಬರಿಬ್ಬರು.

೬೪. ರಾಜನ ಪಿತೃಕುಲದಲ್ಲಿ ಐದುತಲೆ, ರಾಜನ ಮಾತೃಕುಲದಲ್ಲಿ ಐದುತಲೆ, ರಾಜನ ಮಾತಾಮಹನಕುಲದಲ್ಲಿ ಐದುತಲೆಮಾರಿನವರು, ಈ ರೀತಿ ಇವರೆಲ್ಲರನ್ನೂ ಉದ್ಧರಿಸುವನು. ಮತ್ತು ತಾನೂ ಉದ್ಧಾರವಾಗುವನು. ಎಂದರೆ ಎಲ್ಲಾ ಒಟ್ಟು ನೂರೊಂದುಕುಲಗಳು ಎಂದು ಲೆಕ್ಕಿಸಲ್ಪಟ್ಟಿವೆ.

೬೫. ಹೇ ವಿಪ್ರೋತ್ತಮರೇ! ಅವಿಮುಕ್ತ ಮತ್ತು ದಶಾರ್ಣ ಎಂಬ ಕ್ಷೇತ್ರಗಳಲ್ಲಿ ತೀರ್ಥಸಮೀಪದಲ್ಲಿ ದೇವತಾರ್ಚನೆ ಮಾಡಿದ ವಿಪ್ರನು ನೂರುಕುಲಗಳನ್ನು ಉದ್ಧರಿಸಬಹುದು. ಅಂಥ ಬ್ರಾಹ್ಮಣನು ಮಾತಾಪಿತೃಗಳ ಕಡೆಯ ಐವೈದು ತಲೆ

ಸಮುದ್ಧರೇತ್ಕುಲಶತಂ ಶೃಣು ವಿಂಶಕುಲಂ ದ್ವಿಜ ।
ಪಂಚಪಂಚ ಚ ಪಿತ್ರೋಶ್ಚ ಪಿತುರ್ಮಾತಾಮಹಸ್ಯ ಚ ॥ ೬೬ ॥

ಮಾತುರ್ಮಾತಾಮಹಸ್ಯೈವ ಜಾತಿಂ ದ್ವಂದ್ವಮುದಾಹೃತಂ ।
ಗುರೋಃ ಸಂತಾನಕೇ ದ್ವಂದ್ವಂ ತದ್ವದ್ಯಾದವಸಾತ್ವತೌ ॥ ೬೭ ॥

ಪರಪಕ್ಷಸ್ಯ ಚೈಕಂ ಸ್ಯಾದೇಕವಿಂಶಂ ಕುಲಂ ಕ್ರಮಾತ್ ।
ಪಾನೀಯಮೇತತ್ಸಕಲಂ ತ್ರೈಲೋಕ್ಯಂ ಸಚರಾಚರಂ ॥ ೬೮ ॥

ಪಾನಿಯೇನ ವಿನಾ ವೃತ್ತಿರ್ಲೋಕೇ ನಾಸ್ತೀತಿ ಕರ್ಹಿಚಿತ್ ।
ವಾರಸ್ವಸ್ಥಂ ಪುಷ್ಪಖಂಡಂ ತೋಯೇ ಪತತಿ ಯಾವತಿ ॥ ೬೯ ॥

ತಾವತ್ಕಾಲಂ ವಸೇತ್ಸ್ವರ್ಗೇ ಚಾಂತೇ ಬ್ರಹ್ಮತ್ವಮಾಪ್ನುಯಾತ್ ।
ತಸ್ಮಾತ್ತೋಯೋಪರಿ ಗೃಹಂ ಪ್ರಾಸಾದೋಪರಿ ವರ್ಜಯೇತ್ ॥ ೭೦ ॥

---

ಮಾರಿನವರನ್ನೂ, ತಂದೆಯ ಮಾತಾಮಹನ ಕಡೆಯ ಐದುತಲೆಮಾರಿನವರನ್ನೂ, ತಾಯಿಯ ಮಾತಾಮಹನಕಡೆಯ ಐದುತಲೆಮಾರಿನವರನ್ನೂ ಈ ಪ್ರಕಾರ ಜೋಡಿ ಜೋಡಿಯ ಇಪ್ಪತ್ತು ತಲೆಮಾರಿನವರನ್ನು ಉದ್ಧರಿಸುವನೆಂದು ಹೇಳಿದೆ.

೬೭. ಗುರುವಿನ ವಂಶದಲ್ಲಿ ಎರಡು ತಲೆಮಾರಿನವರು, ಅದರಂತೆ ಯಾದವ ವಂಶ, ಸಾತ್ವತ ವಂಶದವರೆರಡ್ದು ಒಂದೊಂದು, ಪರಪಕ್ಷಕುಲದ್ದು ಒಂದು, ಈ ರೀತಿ ಕ್ರಮವಾಗಿ ಇಪ್ಪತ್ತೊಂದು ಕುಲವು ಉದ್ಧೃತವಾಗುವುದೆಂದು ಕೆಲವರಮತ.

೬೮-೬೯. ಈಎಲ್ಲ ವಿಧವಾದ ಜಲವೇ ಸಚರಾಚರವಾದ ತ್ರಿಲೋಕಸ್ವರೂಪ ವಾಗಿದೆ. ಲೋಕದಲ್ಲಿ ಜಲವಿಲ್ಲದೆ ಜೀವನವೃತ್ತಿಯೇ ಇಲ್ಲ. ಇವನು ಏರ್ಪಡಿಸಿದ ಜಲಾಶಯಸಮೂಹದಲ್ಲಿ ಶ್ರೇಷ್ಠವಾಗಿರುವ ಪುಷ್ಪಗುಚ್ಛವು ಎಷ್ಟು ಕಾಲಪರ್ಯಂತ ಬೀಳುವುದೋ ಅಷ್ಟುಕಾಲ ಇವನು ಸ್ವರ್ಗದಲ್ಲಿ ವಾಸಿಸುವನು.

೭೦. ಆತನು ಕೊನೆಯಲ್ಲಿ ಬ್ರಹ್ಮಸಾರೂಪ್ಯವನ್ನು ಹೊಂದುವನು. ಆದುದ ರಿಂದ ಒಂದು ಜಲಾಶಯದ ಬಳಿ ಮತ್ತೊಂದು ಜಲಾಶಯವನ್ನು ಒಂದು ದೇವಾಲಯವಿದ್ದ ಬಳಿ ಹುರುಪಿನಿಂದ ಇನ್ನೊಂದನ್ನೂ ರಚಿಸುವ ಆಶಯವನ್ನು ಬಿಡಬೇಕು.

ಸೂರ್ಯರಶ್ಮಿವಿಹೀನಂ ವೈ ತತ್ತೋಯಂ ತು ವಿನಿಂದಿತಂ ।
ಚಂದ್ರರಶ್ಮಿವಿಹೀನಂ ಯನ್ನಾಮೃತತ್ವಾಯ ಕಲ್ಪತೇ ॥ ೨೧ ॥

ತಸ್ಮಾದ್ದಶಗುಣಂ ಕುಂಡೇ ತಸ್ಮಾದ್ದಶಗುಣಂ ಹ್ರದೇ ।
ದೇವಾನಾಂ ಸ್ಥಾಪನಂ ಕುರ್ಯಾದವಿಮುಕ್ತಫಲಂ ಶುಭಂ ॥ ೨೨ ॥

ಸುಸ್ಥಿತಂ ದುಸ್ಥಿತಂ ವಾಪಿ ಶಿವಲಿಂಗಂ ನ ಚಾಲಯೇತ್ ।
ಚಾಲನಾದ್ರೌರವಂ ಯಾತಿ ನ ಸ್ವರ್ಗಂ ನ ಚ ಸ್ವರ್ಗಭಾಕ್ ॥ ೨೩ ॥

ಉತ್ಸನ್ನನಗರಗ್ರಾಮೇ ಸ್ಥಾನತ್ಯಾಗೇ ಚ ವಿಪ್ಲವೇ ।
ಪುನಃ ಸಂಸಾರಧರ್ಮೇಣ ಸ್ಥಾಪಯೇದವಿಚಾರಯನ್ ॥ ೨೪ ॥

---

೨೧. ಸೂರ್ಯನಕಿರಣವು ಬೀಳದೇ ಇರುವ ಜಲವು ದೂಷಿತವಾದುದು. ಚಂದ್ರ ಕಿರಣ ಬೀಳದ ಜಲವು ಅಮೃತಾಂಶಯುಕ್ತವಾಗುವುದಿಲ್ಲ. ಆದುದರಿಂದ ಎರಡು ರಶ್ಮಿಗಳೂ ಬೀಳುವಂಥ ಸ್ಥಳದಲ್ಲಿ ಜಲಾಶಯವನ್ನು ನಿರ್ಮಿಸಬೇಕು.

೨೨. ಕುಂಡದಲ್ಲಿರುವ ಉದಕವು ದಶಗುಣವುಳ್ಳದು. ಮಡುವಿನಲ್ಲಿರುವ ಉದಕವು ಕುಂಡೋದಕಕ್ಕಿಂತ ಹತ್ತರಷ್ಟು ಹೆಚ್ಚು ಗುಣವುಳ್ಳದು. ಇಂಥ ಜಲಾಶಯ ಸಮೀಪದಲ್ಲಿ ದೇವತಾಪ್ರತಿಷ್ಠೆ ಮಾಡೋಣವು, ಅವಿಮುಕ್ತಕ್ಷೇತ್ರದಲ್ಲಿ ಪ್ರತಿಷ್ಠೆ ಮಾಡಿದಷ್ಟು ಶುಭಫಲ ಕೊಡುವುದು.

೨೩. ಆ ಜಲದಲ್ಲಿ ವಿಧಿಪ್ರಕಾರ ಪ್ರತಿಷ್ಠಿತವಾದ ಶಿವಲಿಂಗವಿರಲಿ, ಅಥವಾ ವಿಧಿಪ್ರಕಾರ ಪ್ರತಿಷ್ಠಿತವಲ್ಲದ ಶಿವಲಿಂಗವಿರಲಿ ಅದನ್ನು ಅಲ್ಲಾಡಿಸಬಾರದು. ಹಾಗೆ ಅಲ್ಲಾಡಿಸಿದವನಿಗೆ ರೌರವನರಕ ಪ್ರಾಪ್ತಿಯಾಗುವುದು.

೨೪. ಅಂಥ ಕೆಲಸಮಾಡಿದವನಿಗೆ ಸ್ವರ್ಗಪ್ರಾಪ್ತಿಯ ಅರ್ಹತೆ ಇಲ್ಲವಾದುದ ರಿಂದ ಅವನು ಸ್ವರ್ಗಕ್ಕೆ ಹೋಗುವುದಿಲ್ಲ. ರೋಗಾದಿನಿಮಿತ್ತದಿಂದಲೋ, ರಾಜಕದ ಕಾರಣದಿಂದಲೋ, ದೇಶೋಪದ್ರವದಿಂದಲೋ ಜೀರ್ಣವಾದ ನಗರ ಗ್ರಾಮ ಮುಂತಾ ದುವುಗಳನ್ನು ಬಿಟ್ಟುಹೋಗಿದ್ದರೆ, ಕೆಲವು ದಿನಗಳಮೇಲೆ ಪುನಃ ಸಂಸಾರಧರ್ಮಪ್ರಕಾರ ಊರಿಗೆ ಬಂದು ಕುಟುಂಬ ಸ್ಥಾಪನೆಮಾಡಬೇಕು. ಇದಕ್ಕೆ ವಿಚಾರಪಡಬೇಕಾಗಿಲ್ಲ.

ಬಾಹುದಂಡಾದಿಪ್ರತಿಮಾ ವಿಷ್ಣೋಶ್ಚಾನ್ಯಸ್ಯ ಸತ್ತಮಾಃ ।
ನ ಚಾಲಯೇತ್ ಸ್ಥಾಪಿತೇ ಚ ವಿಪ್ರವೃಕ್ಷಂ ನ ಚಾಲಯೇತ್ ॥ ೭೫ ॥

ಕೇಶರಂ ಹರಿವೃಕ್ಷಂ ಚ ಮಧೂಕಂ ಕಿಂಶುಕಂ ತಥಾ ।
ನಾಕಾಲೇ ಸ್ಥಾಪಯೇಜ್ಞಾತು ಚಾಲನಾದ್ಬ್ರಹ್ಮಹಾ ಭವೇತ್ ॥ ೭೬ ॥

ದೇವಾಲಯಸ್ಯ ಪುರತಃ ಕುರ್ಯಾತ್ಪುಷ್ಕರಿಣೀಂ ದ್ವಿಜಾಃ ।
ಬ್ರಾಹ್ಮಣಾನಾಂ ಸಮಾಜೇ ಚ ರಾಜದ್ವಾರೇ ಚತುಷ್ಪಥೇ ॥ ೭೭ ॥

ದೇವಾರ್ಥೇ ಬ್ರಾಹ್ಮಣಾರ್ಥೇ ಚ ಮುಖಂ ಕುರ್ಯಾಚ್ಚ ಸರ್ವತಃ ।
ಪಶ್ಚಿಮೇ ಪುಷ್ಟಿಕಾಮಂ ತು ಉತ್ತರೇ ಸರ್ವಕಾಮದಂ ॥ ೭೮ ॥

---

೭೫. ಎಲೈ ದ್ವಿಜಶ್ರೇಷ್ಠರೇ! ವಿಷ್ಣುವಿನ ಬಾಹುಪ್ರತಿಮಾ, ದಂಡದ (ಗದಾ ದಂಡ) ಪ್ರತಿಮಾ, ಮತ್ತು ಇತರ ದೇವತಾ ಅವಯವಗಳ ಪ್ರತಿಮಾ, ಇವುಗಳನ್ನು ಸ್ಥಾಪನೆಮಾಡಿದ ಮೇಲೆ ಅಲ್ಲಾಡಿಸಬಾರದು. ಅಶ್ವತ್ಥ, ಬನ್ನಿ ಮೊದಲಾದ ಬ್ರಾಹ್ಮಣ ಜಾತಿಯ ವೃಕ್ಷಗಳನ್ನು ಕಡಿಯುವ ಅಥವಾ ಕೀಳುವ ಕೆಲಸಕ್ಕೆ ಕೈಹಾಕಬಾರದು.

೭೬. ಕೇಸರವೃಕ್ಷ, ತುಳಸಿ, ಹಿಪ್ಪೆ, ಮುತ್ತುಗ ಇವನ್ನು ಎಂದೇ ಆಗಲಿ ಅಕಾಲ ದಲ್ಲಿ ಸ್ಥಾಪಿಸಬಾರದು. ಅದನ್ನು ಇದ್ದ ಜಾಗದಿಂದ ಬದಲಾಯಿಸಿದರೆ ಬ್ರಹ್ಮಹತ್ಯಾ ದೋಷ ಬರುವುದು.

೭೭. ಅಯ್ಯಾ ದ್ವಿಜರೇ! ಕೇಳಿರಿ; ದೇವಾಲಯದ ಮುಂದೆಯೋ, ದೇವ ಬ್ರಾಹ್ಮಣರಿಗೆ ಅನುಕೂಲವಾದ ಸ್ಥಳದಲ್ಲಿಯೋ, ಬ್ರಾಹ್ಮಣರು ವಾಸವಾಗಿರುವ ಕಡೆ ಯಲ್ಲಿಯೋ, ಅಥವಾ ನಾಲ್ಕುರಾಜಮಾರ್ಗಗಳು (ರಸ್ತೆಗಳು) ಕೂಡುವ ಸ್ಥಳದ ಪಕ್ಕ ದಲ್ಲಿಯೋ, ಎಲ್ಲರಿಗೂ ಅನುಕೂಲವಾಗುವಂತೆ ಪುಷ್ಕರಿಣಿಯನ್ನು ಏರ್ಪಡಿಸಬೇಕು.

೭೮. ದೇವರ ಉತ್ಸವ, ಬ್ರಾಹ್ಮಣವೃಂದ ಇವರು ತೀರ್ಥಸ್ಥಾನಕ್ಕೆ ಇಳಿಯಲು ಅನುಕೂಲಿಸುವಂತೆ ಸುತ್ತಲೂ ಪುಷ್ಕರಿಣೀ ಮುಖವನ್ನು ರಚಿಸಬೇಕು. ಈ ಪುಷ್ಕರ ಮುಖವನ್ನು ಪಶ್ಚಿಮದಕಡೆ ರಚಿಸಿದರೆ, ಪುಷ್ಟಿಯುಂ (ಟಾಗುವುದು) ಟುಮಾಡು ವುದು. ಉತ್ತರದಕಡೆ ರಚಿಸಿದರೆ ಸಮಸ್ತ ಇಷ್ಟಾರ್ಥಸಿದ್ಧಿಯುಂಟಾಗುವುದು.

**ಯಾಮ್ಯೇ ಸ್ವಾರ್ಥಂ ನ ಕುರ್ವೀತ ಕೋಣೇ ತು ನರಕಂ ಭವೇತ್ ।**
**ಮುಖಂ ಪ್ರಕಲ್ಪಯೇನ್ಮಧ್ಯೇ ಕೇಚಿದುತ್ತರಲಂಘನಂ　　　　॥ ೭೯ ॥**

**ಕುರ್ಯಾದ್ದಕ್ಷಿಣಪೂರ್ವೇ ತು ಅರ್ಕಹಸ್ತಪ್ರಮಾಣತಃ ।**
**ತಡಾಗೇ ತು ಕಲಾಹಸ್ತಂ ಹಸ್ತಿಕಂ ಹ್ರಾಸಯೇತ್ಕ್ರಮಾತ್　　　　॥ ೮೦ ॥**

**ತೃಪ್ತೈಹಸ್ತಂ ನಳಿನ್ಯಾದಾವತೋ ಹೀನಂ ನ ಕಾರಯೇತ್ ।**
**ಗರ್ತತೃಣಂ ಕಲಾಹಸ್ತಂ ತಡಾಗೇತ್ರ ಪ್ರಚಕ್ಷ್ಯತೇ ॥**
**ಹೀನೇ ಹೀನತರಂ ಕುರ್ಯಾದ್ಧಸ್ತಮಾನೇನ ಹ್ರಾಸಯೇತ್　　　　॥ ೮೧ ॥**

**ಯೂಪಸ್ತಥಾ ಖಾದಿರ ಏವ ಕಾರ್ಯಃ ।**
**ಶ್ರೀಪರ್ಣಿಕೋ ಧಾತ್ರಿಸಮುದ್ಭವಶ್ಚ ॥**

---

೭೯. ಸ್ವಂತ ಉಪಯೋಗಕ್ಕಾಗಿ ಕಟ್ಟಿಸುವಾಗ ದಕ್ಷಿಣದಕಡೆ ನಿರ್ಮಿಸಬಾರದು. ಹಾಗೆ ಮಾಡಿದರೆ ನರಕಪ್ರಾಪ್ತಿಯಾಗುವುದು. ಪುಷ್ಕರದ ನಾಲ್ಕುಪಾರ್ಶ್ವದಲ್ಲೂ ಮಧ್ಯಕ್ಕೆ ಸರಿಯಾಗಿ ಪುಷ್ಕರಣೀ ಮುಖವನ್ನು ರಚಿಸಬೇಕು ಕೆಲವರು ಪುಷ್ಕರದ ಉತ್ತರದಕಡೆಯಲ್ಲಿ ಪುಷ್ಕರಿಣೀಮುಖ ಮಾಡದೆ ಬಿಡಬಹುದು ಎನ್ನುವರು.

೮೦. ಅಂತು ದಕ್ಷಿಣ ಮತ್ತು ಪೂರ್ವದಿಕ್ಕುಗಳಲ್ಲಿ ಹನ್ನೆರಡುಹಸ್ತ ಪ್ರಮಾಣವುಳ್ಳ ಪುಷ್ಕರಿಣೀಮುಖವನ್ನು ರಚಿಸಬೇಕು. ಕೆರೆಯನ್ನು ನಿರ್ಮಿಸುವಾಗ ಅಲ್ಲಲ್ಲಿಗೆ ಎಂದರೆ ಹದಿನಾರುಮೊಳಕ್ಕೆ ಒಂದರಂತೆ ಹಸ್ತಿಕವನ್ನು ಕ್ರಮದಿಂದ ಹ್ರಾಸಮಾಡಬೇಕು.

೮೧. ತೃಪ್ತಿಕರವಾದ ಪದ್ಮಸರೋವರದಲ್ಲಿ ಈ ಆಳತೆಯು ಮೇಲೆ ಹೇಳಿದಷ್ಟು ಹಸ್ತಕ್ಕಿಂತ ಕಮ್ಮಿ ಇರಬಾರದು. ಕಟಾಕದ ಪಾರ್ಶ್ವಗಳಲ್ಲಿ ತೀರದಲ್ಲಿ ಉದ್ದಕ್ಕೂ ಹದಿನಾರುಮೊಳದಷ್ಟು ದೂರ ಹುಲ್ಲುಬೆಳೆದ ಭೂಮಿ ಇರಬೇಕು. ತಟಾಕವು ಕ್ಲಪ್ತಪ್ರಮಾಣಕ್ಕಿಂತ ಆಳತೆಯಲ್ಲಿ ಚಿಕ್ಕದಾಗಿದ್ದರೆ ತೃಣಾವೃತಭೂಮಿಯ ಆಗಲವು ಒಂದೊಂದು ಮೊಳ ಕಮ್ಮಿ ಇರಬಹುದು.

೮೨. ತಡಾಗಪ್ರತಿಷ್ಠಾಂಗವಾಗಿ ಯೂಪಸ್ತಂಭವನ್ನು ಕಗ್ಗಲಿಯಮರದಿಂದಲೇ ಮಾಡಬೇಕು. ತೇಗದ ಮರದಿಂದಲೂ, ನೆಲ್ಲಿಯ ಮರದಿಂದಲೂ, ಮಾಡಬಹುದು. ಆ ಯೂಪವು ಹದಿನಾರುಮೊಳದ ಪ್ರಮಾಣವಿರಬೇಕು. ಗಂಧರ್ವರಂತೆ ಸುಖ

ಮಾನಸ್ತ್ರಥಾ ಷೋಡಶಹಸ್ತಸಮ್ಮಿತೋ ।
ಯತ್ನಾತ್ಸುಗಂಧರ್ವಸುಖಾಭಿಲಾಷುಕೈಃ ॥ ೮೨ ॥

ಅನಾಹಭಗ್ನೇ ಚ ಭವೇಚ್ಚ ತಸ್ಯ ।
ವಿಶಾಂಗುಲೋಽಧಿಕೋ ಮಧ್ಯಗಶ್ಚ ॥
ಮಧ್ಯೇಽಂಗುಲ್ಯೈಶ್ಚ ಹೀನಃ ಕಾರ್ಯಃ ।
ಶುಭದಃ ಸರ್ವದಾ ಸ್ಯಾತ್ ॥ ೮೩ ॥

ಏವಂ ವಿಧಶ್ಚೈವ ತಡಾಗಯೂಪೋ ।
ಮಧ್ಯೇ ತಥಾ ಷೋಡಶಹಸ್ತಸಮ್ಮಿತಃ ॥
ಕೂಪೇ ಚ ಯೂಪೋಽಪ್ಯಥ ಹಸ್ತಮಾತ್ರಃ ।
ತತಶ್ಚತುರ್ಹಸ್ತಮಿತಃ ಪ್ರಕೀರ್ತಿತಃ ॥ ೮೪ ॥

---

ಪಡಬೇಕೆಂಬ ಅಭಿಲಾಷೆಯುಳ್ಳವನು ಇಂಥ ಯೂಪವನ್ನು ಪ್ರಯತ್ನಪೂರ್ವಕವಾಗಿ ನಿರ್ಮಿಸಬೇಕು.

೮೩. ಕೆರೆಯ ಏರಿಯು ಒಡೆದುಹೋಗಿದ್ದರೆ ಆ ಸ್ತಂಭದ ಪ್ರಮಾಣವು ಹಿಂದೆ ಹೇಳಿದ ಹದಿನಾರುಮೊಳಕ್ಕಿಂತಲೂ ಇಪ್ಪತ್ತು ಅಂಗುಲ ಹೆಚ್ಚಿರಬೇಕು. ಮತ್ತು ಆ ಯೂಪವು ಮಧ್ಯಭಾಗದಲ್ಲಿ ಒಂದಂಗುಲ ಸುತ್ತಳತೆ ಕಡಿಮೆ ಇರಬೇಕು. ಇಂತಹ ಯೂಪವನ್ನು ನೆಟ್ಟರೆ ಶುಭವು.

೮೪. ಈ ರೀತಿ ಹದಿನಾರುಮೊಳ ಪ್ರಮಾಣವುಳ್ಳ ತಟಾಕ ಯೂಪಸ್ತಂಭವು ಕೆರೆಯಮಧ್ಯ ನೆಡಲ್ಪಟ್ಟಿರಬೇಕು. ಭಾವಿಯಲ್ಲಿ ನೆಡಬೇಕಾದ ಯೂಪಸ್ತಂಭವು ಸಾಮಾನ್ಯವಾಗಿ ನೀರು ತುಂಬಿ ನಿಲ್ಲುವ ಮಟ್ಟದಮೇಲೆ ಒಂದುಮೊಳದಷ್ಟು ಎತ್ತರ ಇರಬೇಕು ಹೆಚ್ಚುನೀರು ಬಂದಾಗ ಗೊತ್ತಾಗುವುದಕ್ಕಾಗಿ ಇನ್ನೂ ನಾಲ್ಕುಮೊಳದಷ್ಟು ಹೆಚ್ಚು ಎತ್ತರ ಇರುವುದು ಉತ್ತಮ.

ಆರಾಮಯೋರ್ಗ್ರೇಷ್ಯಥ ಮಂಡಪೇ ಚ ।
ಕಾರ್ಯಶ್ಚತುರ್ಹಸ್ತಮಿತೋಥ ಯೂಪಃ ॥
ಸಂಪೂರ್ಣಮಾನೇ ಕಥಿತಂ ಪ್ರಮಾಣಂ ।
ಹೀನೇ ತು ಹೀನಂ ಪ್ರವದಂತಿ ತಜ್ಞಾಃ ॥
ಹಸ್ತದ್ವಯಂ ಪ್ರಾಪಿತವ್ಯಂ ತಡಾಗೇ ।
ಹಸ್ತಃ ಸಾರ್ಧಃ ಪುಷ್ಕರಿಣ್ಯಾಃ ಪ್ರರೋಪಃ ॥ ೮೫ ॥

ಪ್ರಾದೇಶಂ ವೈ ಹಸ್ತಮಾನಂ ಕೂಪಯೂಪಸ್ಯ ರೋಪತಃ ।
ನ ಕುರ್ಯಾಜ್ಜಲಮಗ್ನಂ ಚ ಯೂಪಂ ಸರ್ವತ್ರ ಸತ್ತಮಾಃ ॥ ೮೬ ॥

ತಡಾಗೇ ಚಾಪಿ ಆರಾಮೇ ಸ್ಥಾಪಯೇಚ್ಚ ಜಲೋಪರಿ ।
ಹಸ್ತಮರ್ಧಂ ತದರ್ಧಂ ಸ್ಯಾನ್ಮಾನೇನಾನೇನ ದಾಪಯೇತ್ ॥
ವಾಪ್ಯಾಂ ಗರ್ತೇ ಪುಷ್ಕರಿಣ್ಯಾಂ ಪ್ರಕುರ್ಯಾಜ್ಜಲಸಂಮಿತಂ ॥ ೮೭ ॥

---

೮೫. ತೋಟದಲ್ಲಿ ಯೂಪಸ್ತಂಭ ನೆಡಬೇಕಾದಾಗಲೂ, ಮಂಟಪದಲ್ಲಿ ಯೂಪಸ್ತಂಭ ನೆಡಬೇಕಾದಾಗಲೂ, ನಾಲ್ಕುಮೊಳ ಆಳತೆಯ ಯೂಪಸ್ತಂಭವನ್ನು ಮಾಡಬೇಕು. ಉಕ್ತವಾದಷ್ಟು ಸಂಪೂರ್ಣ ಅಳತೆಯುಳ್ಳಂಥ ಆರಾಮಮಂಟಪಗಳ ಪ್ರತಿಷ್ಠೆಯ ಸಂದರ್ಭದಲ್ಲಿ ಈ ಅಳತೆಯಿರಬೇಕೆಂದು ಹೇಳಿದೆ. ಆ ತೋಟ ಮಂಟಪ ಇವು ಕಡಿಮೆ ಅಳತೆಯುಳ್ಳುದಾಗಿದ್ದರೆ ಅದರ ಪ್ರಮಾಣಕ್ಕೆ ತಕ್ಕಂತೆ ಇದೂ ಕಡಿಮೆ ಯಿರಬೇಕೆಂದು ತಿಳಿದವರು ಹೇಳುತ್ತಾರೆ. ಕೆರೆ ತುಂಬಿದಾಗ ನೀರಿನ ಮೇಲೆ ಎರಡು ಮೊಳದಷ್ಟು ಉದ್ದ ಕಾಣುವಂತೆ ಯೂಪವನ್ನು ನೆಡಬೇಕು. ಕೊಳ (ಪುಷ್ಕರಣಿ) ದ ತುಂಬುನೀರಿನ ಮಟ್ಟದ ಮೇಲೆ ಒಂದೂವರೆಮೊಳ ಕಾಣುವಂತಿರಬೇಕು.

೮೬. ಅಯ್ಯಾ ದ್ವಿಜಶ್ರೇಷ್ಠರೇ! ಭಾವಿಯಲ್ಲಿ ನೆಡಬೇಕಾದ ಯೂಪಸ್ತಂಭದ ಪರಿಮಾಣವು ನೆಟ್ಟಜಾಗದಿಂದ ಜಲಮಟ್ಟವಾಗಿ ಅದರ ಮೇಲೆ ಒಂದುಮೊಳ ಒಂದು ಗೇಣು ಎತ್ತರ ಕಾಣುವಂತಿರಬೇಕು. ಯೂಪವು ನೀರಿನಮೇಲೆ ಕಾಣುವಂತಿರಬೇಕೇ ವಿನಾ ನೀರಿನೊಳಗೆ ಮುಳುಗಿರುವಂತೆ ಮಾಡಬಾರದು.

೮೭. ಕೆರೆಯಲ್ಲೂ, ತೋಟದ ಭಾವಿಯಲ್ಲೂ ನೀರಿನ ಮೇಲೆ ಒಂದೂವರೆ ಮೊಳ ಅಥವಾ ಮುಕ್ಕಾಲುಮೊಳ ಕಾಣುವಷ್ಟು ಅಳತೆಯಿಟ್ಟು ಯೂಪಸ್ತಂಭವನ್ನು ನೆಡಬೇಕು. ಭಾವಿಯಲ್ಲೂ, ಸಾಮಾನ್ಯ ಹಳ್ಳದಲ್ಲೂ, ಕೊಳದಲ್ಲೂ, ನೀರಿನ ತುಂಬು ಮಟ್ಟವಾದರೂ ಇರುವಂತೆ ಮಾಡಬೇಕು.

ಯಾವತ್ಪ್ರತೋಲೀಗತರೇಣುಸಂಗ।
ಸಂಖ್ಯಾಗಣೋ ನೋ ಜರತಾಮುಪೈತಿ॥
ತಾವತ್ಸುರೇಶಃ ಸುರಲೋಕವಾಸೀ।
ಪ್ರಸಾದಕೃಜ್ಞಾತು ನ ಜಾಯತೇ ಹಿ ॥ ೮೮ ॥

ಕಿಂ ವಾ ವಾಚ್ಯಃ ಪುಷ್ಕರಿಣ್ಯಾಃ ಪ್ರಭಾವಃ।
ಕರ್ತಾ ಯಃ ಸ್ಯಾದ್ವಾರುಣೋ ಬ್ರಹ್ಮಲೋಕಾತ್॥
ಯಾವತ್ಕಾಲೋ ಬಾಹುಮಾತ್ರೋದ್ಧೃತಾ ಸ್ಯಾತ್।
ದೃಷ್ಟಿಃ ಪ್ರೋಕ್ತಾ ನ ನಿವರ್ತೇತ್ಕದಾಚಿತ್ ॥ ೮೯ ॥

ಲಕ್ಷೈಕಮಾರಾಮಮಥೋತ್ತಮಃ ಸ್ಯಾತ್।
ಮಧ್ಯಂ ತದರ್ಧಂ ಚ ಕನಿಷ್ಠಮಾನಃ॥
ತದರ್ಧಂ ವಾ ಪ್ರಶಸ್ತಂ ನ ತದನ್ಯಂ ಮುನಯೋ ವದಂತಿ।

---

೮೮. ಪ್ರಾಸಾದನಿರ್ಮಾಪಕನು ಆ ಪ್ರಾಸಾದದ ಅಂಗಳದಲ್ಲಿರುವ ಧೂಳಿನಲ್ಲಿ ಎಷ್ಟು ಸಂಖ್ಯೆಯ ಪರಮಾಣ ಅವನ ಶರೀರಕ್ಕೆ ಹತ್ತಿಕೊಂಡಿರುವುದೋ, ಅಷ್ಟು ಕಾಲದವರೆಗೆ ಸುರಲೋಕದಲ್ಲಿ ಸುರರಿಗೆ ಅಧಿಪತಿಯಾಗಿದ್ದುಕೊಂಡು ಯಾವಾಗಲೂ ಪುನರ್ಜನ್ಮವೇ ಇಲ್ಲದೆ ಇರುತ್ತಾನೆ.

೮೯. ಪುಷ್ಕರಿಣೀ ರಚನೆಯ ಪುಣ್ಯವನ್ನು ಏನೆಂದು ಹೇಳೋಣ. ಅದನ್ನು ಕಟ್ಟಿಸಿದ ಪುಣ್ಯಾತ್ಮನು ನೆಟ್ಟ ಯೂಪಸ್ತಂಭವು ನೋಡತಕ್ಕವರ ದೃಷ್ಟಿಗೆ ಎಷ್ಟುಕಾಲ ಜಲದಿಂದ ಮೇಲೆ ಒಂದು ಬಾಹುಮಾತ್ರ ಕಾಣುತ್ತದೋ ಅಷ್ಟುಕಾಲದವರೆಗೆ ವರುಣನಿಗೆ ಪ್ರಿಯನೆನಿಸಿದ್ದು, ಅಲ್ಲಿಂದ ಬ್ರಹ್ಮಲೋಕವನ್ನು ಸೇರುವನು. ಆ ಲೋಕದಿಂದ ಪುನಃ ಹಿಂದಿರುಗುವುದಿಲ್ಲ.

೯೦. ಒಂದುಲಕ್ಷ ಹಸ್ತಪರಿಮಾಣವುಳ್ಳ ಆರಾಮವು ಉತ್ತಮ ಆರಾಮವೆನಿಸಿಕೊಳ್ಳುತ್ತದೆ. ಅದರಲ್ಲಿ ಅರ್ಧ ಎಂದರೆ ಐವತ್ತುಸಾವಿರ ಹಸ್ತ ಅಳತೆಯಿಂದ ನಿರ್ಮಿಸುವುದು ಮಧ್ಯಮ. ಅದರಲ್ಲೂ ಅರ್ಧ ಎಂದರೆ ಇಪ್ಪತ್ತೈದುಸಾವಿರಹಸ್ತ ಅಳತೆಯಿಂದ

**ವಿನಾರ್ಜುನೈರ್ಬದರೈಃ ಶೈಲುಕೈಶ್ಚ ॥**
**ಹೀನಂ ಕುರ್ಯಾರ್ಥ್ಯಾನಲ್ಪೈಃ ಪಾತಿಲೈಶ್ಚ ॥ ೯೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೆ ಮಧ್ಯಮಪರ್ವಣಿ ಪೂರ್ತನಿರ್ಣಯೋ ನಾಮ ನವಮೋಽಧ್ಯಾಯಃ.**



---

ಏರ್ಪಡಿಸುವುದು ಕನಿಷ್ಠ. ಅದಕ್ಕಿಂತ ಕಡಿಮೆ ಇರುವುದು ಪ್ರಶಸ್ತವಲ್ಲ ಎಂದು ಮುನಿಗಳ ಮತ. ಮತ್ತಿ, ಯಗಚಿ, ಶೈಲುಕ ಇವುಗಳನ್ನು ಬಿಟ್ಟು ಉಕ್ತವಾದ ಬೇರೆ ಮರದಲ್ಲಿ ಯೂಪವನ್ನು ಮಾಡಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ ಪೂರ್ತನಿರ್ಣಯವೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ಪ್ರಥಮಭಾಗೇ
# ದಶಮೋಽಧ್ಯಾಯಃ

---

॥ ಸೂತ ಉವಾಚ ॥

ಶೋಧಯೇತ್ಪ್ರಥಮಂ ಭೂಮಿಂ ಮಿತಾಂ ಕೃತ್ವಾ ತತೋ ದ್ವಿಜಾಃ ।
ದಶಹಸ್ತೇನ ದಂಡೇನ ಪಂಚಹಸ್ತೇನ ವಾ ಪುನಃ ॥ ೧ ॥

ವಾಹಯೇತ್ಸದಾ ವೃಷಭೈಸ್ತಡಾಗಾರ್ಥೇಽಪಿ ಭೂಮಿಕಾಂ ।
ದೇವಾಗಾರಸ್ಯ ಯಾ ಭೂಮಿಃ ಶ್ವೇತೈಶ್ಚ ವೃಷಭೈರಪಿ ॥ ೨ ॥

---

## ಹತ್ತನೆಯ ಅಧ್ಯಾಯ

೧. ಸೂತಮಹರ್ಷಿಗಳು ಮುಂದುವರಿಸಿ ಹೇಳುತ್ತಾರೆ—ಎಲೈ ಬ್ರಾಹ್ಮಣರೇ! ಕೇಳಿರಿ; ಕೆರೆಯನ್ನು ಕಟ್ಟಬೇಕಾದ ಪ್ರದೇಶದಲ್ಲಿ ಹತ್ತುಹಸ್ತ ಅಥವಾ ಐದುಹಸ್ತ ಉದ್ದವಾದ ಕೋಲಿನಿಂದ ಭೂಮಿಯನ್ನು ಮೊದಲು ಅಳತೆಮಾಡಿ, ಅನಂತರ ಅದನ್ನು ಅಗೆದು ಶೋಧಿಸಬೇಕು.

೨. ಹೀಗೆ ಭೂಶೋಧನೆಗಾಗಿ ಉಳುವುದಕ್ಕೆ ಎತ್ತುಗಳನ್ನು ಉಪಯೋಗಿಸಬೇಕು. ದೇವಾಲಯವನ್ನು ನಿರ್ಮಿಸಬೇಕಾದ ಪ್ರದೇಶವನ್ನು ಉತ್ತು ಶೋಧಿಸಲು ಬಿಳಿಯ ಎತ್ತುಗಳನ್ನೇ ಉಪಯೋಗಿಸಬೇಕು. ಯಜ್ಞಶಾಲಾ ನಿರ್ಮಾಣಮಾಡಬೇಕಾದ (ಸ್ಥಳದಲ್ಲಿ) ಪ್ರದೇಶದಲ್ಲಿ ಉತ್ತು ಮಣ್ಣನ್ನು ಶೋಧಿಸಲು ಕುದುರೆಗಳನ್ನು ಉಪಯೋಗಿಸಬಾರದು.

**ಯಾ ಭೂಮಿರ್ಗ್ರಹಯಾಗಾರ್ಥೇ ತನ್ನ ವಾಹ್ಯೈರಪಿ ಸ್ಪೃಶೇತ್ ।**
**ಆರಾಮಾರ್ಥೇ ಕೃಷ್ಣವೃಷೈಃ ಕೂಪಾರ್ಥಖನನೈರಪಿ ॥ ೩ ॥**

**ವಾಹಯೇತ್ತ್ರಿದಿನಂ ವಿಪ್ರಾಃ ಪಂಚವ್ರೀಹೀಂಶ್ಚ ವಾಪಯೇತ್ ।**
**ದೇವಪಕ್ಷೇ ಸಪ್ತಗುಣ ಆರಾಮಕರಣೇ ಗುಣಃ ॥ ೪ ॥**

**ಮುದ್ಗಮಾಷೌ ಧಾನ್ಯತಿಲಾಃ ಶ್ಯಾಮಾಕಶ್ಚೇತಿ ಪಂಚಮಃ ।**
**ಮಸೂರಶ್ಚ ಕಲಾಯಶ್ಚ ಸಪ್ತ ವ್ರೀಹಿಗಣಃ ಸ್ಮೃತಃ ॥ ೫ ॥**

**ಸರ್ಷಪಶ್ಚ ಕಲಾಯಶ್ಚ ಮುದ್ಗೋ ಮಾಷಶ್ಚತುರ್ಥಕಃ ।**
**ವ್ರೀಹಿತ್ರಯಂ ಮಾಷಮುದ್ಗಾ ಶ್ಯಾಮಾಕೋ ಮಹಿಷೋಥಗಣಃ ॥ ೬ ॥**

**ಸುವರ್ಣಮೃತ್ತಿಕಾ ಗ್ರಾಹ್ಯಾ ವರ್ಣಾನಾಮನುಪೂರ್ವಶಃ ।**
**ಬಿಲ್ವವೃಕ್ಷೈರಿಯಂ ಕುರ್ಯಾದ್ಯೂಪಶೂನ್ಯಧ್ವಜೇ ದಿನೇ ॥ ೭ ॥**

---

೩. ತೋಟಮಾಡುವ ನೆಲವನ್ನು ಉಳುವುದಕ್ಕೂ ಆ ಮಣ್ಣನ್ನೂ ಭಾವಿತೋಡಿ ಅಗೆದ ಮಣ್ಣನ್ನೂ ಸಾಗಿಸುವುದಕ್ಕೂ ಕಪ್ಪುಬಣ್ಣದ ಎತ್ತುಗಳನ್ನು ಉಪಯೋಗಿಸಬೇಕು.

೪. ಓ ಬ್ರಾಹ್ಮಣೋತ್ತಮರೇ ! ಕೇಳಿರಿ ; ಮೂರುದಿನಗಳವರೆಗೆ ಮಣ್ಣನ್ನು ಉಳುಮೆಮಾಡಿಸಿ ಅನಂತರ ಐದುಬಗೆಯ ವ್ರೀಹಿಧಾನ್ಯಗಳನ್ನು ಬಿತ್ತಬೇಕು. ದೇವರ ಪೂಜೆಗಾಗಿ ಹೂವಿನ ತೋಟವನ್ನು ಮಾಡುವಾಗ ಈ ಧಾನ್ಯ ಬಿತ್ತುವುದರಿಂದ ಏಳ ರಷ್ಟು ಫಲವತ್ತಾಗುವುದು.

೫. ಹೆಸರು, ಉದ್ದು, ಭತ್ತ, ಎಳ್ಳು, ಸಾಸುವೆ ಇವು ಪಂಚವ್ರೀಹಿಗಳೆನಿಸುವುವು. ಇವುಗಳ ಜೊತೆಗೆ ಮಾಸೂರ (ಕಿರುಗಡಲೆ) ಕಲಾಯ (ನೆಲಗಡಲೆ) ಇವೆರಡೂ ಸೇರಿ ಸಪ್ತವ್ರೀಹಿ ಎನಿಸಿಕೊಳ್ಳುವುದು.

೬. ಕಲಾಯ (ನೆಲಗಡಲೆ,) ಸಾವೆ, ಹೆಸರು, ಉದ್ದು ಇವು ನಾಲ್ಕೂ ಚತು ರ್ವೀಹಿಗಳೆನಿಸುವುವು. ಉದ್ದು, ಹೆಸರು, ಸಾವೆ ಇವು ವ್ರೀಹಿತ್ರಯಗಳು. ಇವೆಲ್ಲಾ ಮಹಿಷಗಣಕ್ಕೆ ಸೇರಿದುವು.

೭. ಪ್ರತಿ ವರ್ಣದವರೂ ಭೂಮಿಯ ಮಣ್ಣಿನ ಬಣ್ಣವನ್ನು ನೋಡಿ ತಮ್ಮ ಜಾತಿಗೆ ಅನುಗುಣವೆನಿಸಿದ ಒಳ್ಳೆಯಮಣ್ಣಿನ ಪ್ರದೇಶವನ್ನು ಆರಿಸಬೇಕು. ಯೂಪ ಸ್ತಂಭ, ಧ್ವಜ ಇವನ್ನು ಸ್ಥಾಪಿಸುವ ದಿನ, ಬಿಲ್ವವೃಕ್ಷದ ದೊಣ್ಣೆಯಿಂದ ನೆಲವನ್ನು ಅಗೆದು ಆ ಕಾರ್ಯನಿರ್ವಾಹ ಮಾಡಬೇಕು.

ಅರತ್ನಿಮಾತ್ರಂ ವಿಜ್ಞೇಯಂ ಪ್ರಶಸ್ತಂ ಯಷ್ಟಿಹಸ್ತಕಂ ।
ಊರ್ಣಾಸೂತ್ರಮಯೀಂ ಮೂರ್ತಿಂ ಕೃತ್ವಾ ಕುರ್ಯಾದ್ವಿಚಕ್ಷಣಃ ॥ ೮ ॥

ಕ್ಷೀರದಾರುಗರ್ತಯುತಂ ದ್ವಾದಶಾಂಗುಲಮೇವ ಚ ।
ಜ್ವಾಲಯೇತ್ತಿಲತೈಲೇನ ತಥಾ ಕೇಶರಜೇನ ವಾ ॥ ೯ ॥

ಪೂರ್ವದಿಕ್ಪ್ರಣವೇ ಸಿದ್ಧಿಃ ಪಶ್ಚಿಮಾಶಾಗತಿಃ ಶುಭಾ ।
ಮರಣೇ ದಕ್ಷಿಣಾಯಾಂ ಚ ಹಾನಿಃಸ್ಯಾದುತ್ತರೇ ಸ್ಥಿತೇ ॥ ೧೦ ॥

ಕಲ್ಪೇ ವಿಪತ್ಕರಂ ವಿದ್ಯಾತ್ತಥಾ ಚೈವ ಚ ದಿಗ್ಗತೇ ।
ನಾರಸಿಂಹೇನ ಮನುನಾ ಚಾಗ್ನಿಂ ಪ್ರಜ್ವಾಲ್ಯ ದಾಹಯೇತ್ ॥ ೧೧ ॥

---

೮. ಒಂದು ಗುದ್ದುಮೊಳ ಉದ್ದವೋ ಅಥವಾ ಒಂದುಮೊಳ ಪೂರ್ತಾ ಉದ್ದವೋ ಉಳ್ಳ ದೊಣ್ಣೆಯು ಇದಕ್ಕೆ ಪ್ರಶಸ್ತವಾದುದೆಂದು ತಿಳಿಯಬೇಕು. ಚತುರನಾದವನು ಉಣ್ಣೆಯ (ಕಂಬಳಿಯ) ದಾರವನ್ನು ಸುತ್ತಿದ ಒಂದು ಮೂರ್ತಿಯನ್ನು ಮಾಡಿ ಮುಂದೆ ಹೇಳುವಂತೆ ಕೆಲಸಮಾಡಬೇಕು.

೯. ಹನ್ನೆರಡುಅಂಗುಲ ಆಳದ ಹಳ್ಳವನ್ನು ಮಾಡಿ ಕ್ಷೀರವೃಕ್ಷದ ಕೊಂಬೆಯನ್ನು ನೆಟ್ಟು, ಎಳ್ಳೆಣ್ಣೆಯಿಂದಲೋ ಅಥವಾ ಕೇಶರಬೀಜದ ಎಣ್ಣೆಯಿಂದಲೋ ಅದನ್ನು ನೆನಸಿ ಹತ್ತಿಸಿ ಉರಿಸಬೇಕು.

೧೦. ಉರಿಯ ಕೊನೆಯು ಪೂರ್ವದಿಕ್ಕಿಗೆ ವಾಲಿದರೆ ಇಷ್ಟಾರ್ಥಸಿದ್ಧಿಯಾಗುವುದು. ಪಶ್ಚಿಮದಿಕ್ಕಿಗೆ ಹೋದರೆ ಶುಭಗತಿಯುಂಟಾಗುವುದು. ದಕ್ಷಿಣಕ್ಕೆ ವಾಲಿದರೆ ಮರಣವನ್ನು ಸೂಚಿಸುವುದು. ಉತ್ತರಕ್ಕೆ ವಾಲಿದರೆ ಹಾನಿಯುಂಟು.

೧೧. ಕಲ್ಪದಲ್ಲಿ ಎಂದರೆ ಉರಿದ ಶಾಸ್ತ್ರವಾಗಿ ಆರಿಹೋದಾಗಲೂ, ದಿಗ್ಗತವಾದಾಗಲೂ ವಿಪತ್ತುಂಟಾಗುವುದೆಂದು ತಿಳಿಯಬೇಕು. ಅಂಥ ಸಂದರ್ಭದಲ್ಲಿ ನಾರಸಿಂಹ ಮಂತ್ರವನ್ನು ಉಚ್ಚರಿಸುತ್ತಾ ಪುನಃ ಅಗ್ನಿಯನ್ನು ಹತ್ತಿಸಿ ಉರಿಸಬೇಕು.

ಮಾಸೇ ಘಟೇ ತಥಾ ಮಾಘೇ ಕುರ್ಯಾದ್ಭೂಮಿಪರಿಗ್ರಹಂ ।
ಸೂತ್ರಯೇತ್ಕೀಲಯೇತ್ಪಶ್ಚಾನ್ಮಹಾಮಾನೇ ದ್ವಿಜೋತ್ತಮಾಃ ॥ ೧೨ ॥

ತತೋ ವಾಸ್ತುಬಲಿಂ ದದ್ಯಾತ್ ಖನಿತ್ರಂ ಪರಿಪೂಜಯೇತ್ ।
ಆಬ್ರಹ್ಮನ್ನಿತಿ ಮಂತ್ರೇಣ ಸ್ಥಾಪಯೇನ್ಮಧ್ಯದೇಶತಃ ॥ ೧೩ ॥

ಆಜ್ಯೇನ ಮಧುಯುಕ್ತೇನ ಗಾತ್ರಮೇಕಂ ಪ್ರಲೇಪಯೇತ್ ।
ಸ್ವರ್ಣತೋಯೈಸ್ತಥಾ ರತ್ನತೋಯೈಃ ಸ್ನಾತ್ವಾ ಪ್ರಲೇಪಯೇತ್ ॥೧೪॥

ಈಶಾನಾಭಿಮುಖೇನೈವ ಕೂಪಪಕ್ಷೇ ವಿದುರ್ಬುಧಾಃ ।
ಅಕೃತ್ವಾ ವಾಸ್ತುಯಾಗಂ ಚ ಯಸ್ತಡಾಗಂ ಸಮುತ್ಸೃಜೇತ್ ॥ ೧೫ ॥

---

೧೨. ಆಲಯನಿರ್ಮಾಣವನ್ನು ಮಾಡುವ ಸ್ಥಳದ ಭೂಮಿಯನ್ನು ಕುಂಭ ಮಾಸದಲ್ಲೋ, ಅಥವಾ ಮಾಘಮಾಸದಲ್ಲೋ, ಅಗೆಯಿಸಿ ಶೋಧಿಸಿ ಗೊತ್ತು ಮಾಡುವುದು ಒಳ್ಳೆಯದು. ಅಳತೆ ಅಳೆಯಲು ಸಾಧನವಾದ ರಜ್ಜು, ಶಂಕು ಇವುಗಳಿಂದ ಅಳತೆಮಾಡಬೇಕು.

೧೩. ಅನಂತರ ವಾಸ್ತುಪುರುಷನನ್ನು ಉದ್ದೇಶಿಸಿ ಬಲಿಪ್ರದಾನ ಮಾಡಿ, ಗುದ್ದಲಿಗೆ ಪೂಜೆಯನ್ನು ಮಾಡಬೇಕು. "ಆಬ್ರಹ್ಮ" ಎಂಬ ಮಂತ್ರಪೂರ್ವಕವಾಗಿ ಗುದ್ದಲಿಯನ್ನು ಆ ಕ್ಷೇತ್ರದ ಮಧ್ಯದಲ್ಲಿರಿಸಬೇಕು. ಅಲ್ಲೇ ಜಲಪೂರ್ಣ ಕಲಶವನ್ನಿಟ್ಟು ಚಿನ್ನ, ರತ್ನ ಇವನ್ನು ಆ ಕಲಶದೊಳಗೆ ಹಾಕಿ ಆ ಕಲಶದ ಜಲದಿಂದ ಗುದ್ದಲಿಗೆ ಸ್ನಾನಮಾಡಿಸಿ; ಜೇನುತುಪ್ಪ, ತುಪ್ಪ ಇವುಗಳ ಮಿಶ್ರಣದಿಂದ ಗುದ್ದಲಿಯ ಒಂದು ಮೈಗೆ ತೊಡೆಯಬೇಕು.

೧೪. ಭಾವಿ ತೋಡುವುದಕ್ಕಾಗಿ ಗುದ್ದಲಿಪೂಜೆ ಮಾಡುವ ಸಂದರ್ಭದಲ್ಲಿ ಈಶಾನ್ಯ ಮುಖವಾಗಿ ನಿಂತು ಮೇಲೆ ಹೇಳಿದ ಸ್ನಾನಾನುಲೇಪನಗಳನ್ನು ಮಾಡಬೇಕೆಂದು ವಿದ್ವಾಂಸರು ಹೇಳುತ್ತಾರೆ.

೧೫. ಯಾವನು ವಾಸ್ತುಪೂಜೆ ಮಾಡದೆ ಕೆರೆಯನ್ನು ಕಟ್ಟಿಸುತ್ತಾನೋ ಅವನಿಗೆ ಲಭಿಸುವ ಪುಣ್ಯದಲ್ಲಿ ಅರ್ಧಭಾಗವನ್ನು ಯಮನು ಕಸಿದುಕೊಳ್ಳುವನು.

ತಸ್ಯ ವೈವಸ್ವತೋ ರಾಜಾ ಧರ್ಮಸ್ಯಾರ್ಧಂ ನಿಕೃಂತತಿ ।
ಪ್ರಾಸಾದೇ ಚ ತಥಾರಾಮಃ ಮಹಾಕೂಪೇ ತಥೈವ ಚ ॥ ೧೬ ॥

ಗೃಹಾರಂಭೇ ಚ ವಿಪ್ರೇಂದ್ರಾಃ ದದ್ಯಾದ್ವಾಸ್ತುಬಲಂ ತತಃ ।
ಶಾಲೈಶ್ಚ ಖಾದಿರೈಶ್ಚೈವ ಪಲಾಶೈಃ ಕೇಶರಸ್ಯ ಚ ॥ ೧೭ ॥

ಬಿಲ್ವಸ್ಯ ಬಕುಲಸ್ಯೈವ ಕಲೌ ಯೂಪಃ ಪ್ರಶಸ್ಯತೇ ।
ಶುನಾ ಚಕ್ರೋದರಕೃತಂ ತತ್ಪಾರ್ಶ್ವೇ ತು ಧ್ವಜದ್ವಯಂ ॥ ೧೮ ॥

ಸರ್ಪಾಕಾರಸ್ತಡಾಗೇ ಚ ಕೂಪೇ ಕುಂಭಾಕೃತಿರ್ಭವೇತ್ ।
ಆರಾಮೇ ಪದ್ಮಪುಷ್ಪಾಭಶ್ಛತ್ರಾಕಾರಸ್ತು ಮಂಡಪೇ ॥ ೧೯ ॥

ಕುರ್ಯಾಚ್ಛ್ವನಾಕೃತಿಂ ಸೇತೌ ವಿಷ್ಣುಗೇಹೇ ಗದಾಕೃತಿಂ ।
ಅಶ್ವಾಕಾರಂ ಚಾಶ್ವಮೇಧೇ ನರಮೇಧೇ ನರಾಕೃತಿಂ ॥ ೨೦ ॥

---

೧೬-೧೭. ಪ್ರಾಸಾದ, ಉದ್ಯಾನ ಇವನ್ನು ನಿರ್ಮಿಸುವಾಗಲೂ, ದೊಡ್ಡ ಭಾವಿಯನ್ನು ತೋಡಿಸುವಾಗಲೂ, ಮತ್ತು ಮನೆಕಟ್ಟಲು ಆರಂಭಮಾಡುವಾಗಲೂ, ಯೂಪವನ್ನು ನೆಟ್ಟು ವಾಸ್ತುಬಲಿಯನ್ನು ಕೊಟ್ಟೀಕೊಡಬೇಕು. ಓ ಬ್ರಾಹ್ಮಣರೇ! ಕೇಳಿರಿ; ಈ ಯೂಪಕ್ಕೆ ಹಾಲುಮಡ್ಡಿಯಮರ, ಕಗ್ಗಲಿ, ಮುತ್ತುಗ, ಕೇಸರವೃಕ್ಷ ಇವು ಶ್ರೇಷ್ಠವಾದುವು.

೧೮ ಕಲಿಯುಗದಲ್ಲಿ ಬಿಲ್ವವೃಕ್ಷ, ಪಗಡೆಮರ ಈ ವೃಕ್ಷಗಳ ಯೂಪಗಳು ಪ್ರಶಸ್ತವಾದುವು. ಆ ಯೂಪವು ಮಧ್ಯದಲ್ಲಿ ದಪ್ಪವಾಗಿರಬೇಕು. ಎರಡು ಪಕ್ಕದಲ್ಲೂ ಧ್ವಜವನ್ನು ಕಟ್ಟಬೇಕು.

೧೯. ಕೆರೆಯನ್ನು ಕಟ್ಟಿಸುವ ಸಂದರ್ಭದಲ್ಲಿ, ಆ ಸ್ಥಳದಲ್ಲಿ ಸರ್ಪಾಕಾರವಾಗಿಯೂ, ಭಾವಿಯನ್ನು ತೋಡಿಸುವ ಸಂದರ್ಭದಲ್ಲಿ ಆ ಸ್ಥಳದಲ್ಲಿ ಕುಂಭದ ಆಕಾರವಾಗಿಯೂ, ಉದ್ಯಾನ ನಿರ್ಮಾಣಮಾಡುವ ಸ್ಥಳದಲ್ಲಿ ಕಮಲಪುಷ್ಪಾಕೃತಿಯಾಗಿಯೂ, ಮಂಟಪದ ನಿರ್ಮಾಣ ಮಾಡುವ ಸ್ಥಳದಲ್ಲಿ ಛತ್ರಾಕಾರವಾಗಿಯೂ ಬರೆಯಬೇಕು.

೨೦. ಸೇತುನಿರ್ಮಾಣ ಸ್ಥಳದಲ್ಲಿ ಶ್ವಾನಾಕೃತಿಯನ್ನೂ, ವಿಷ್ಣುದೇವಾಲಯ ನಿರ್ಮಾಣಸ್ಥಳದಲ್ಲಿ ಗದಾಕೃತಿಯನ್ನೂ, ಅಶ್ವಮೇಧಯಜ್ಞಮಾಡುವ ಸ್ಥಳ (ಸಂದರ್ಭ) ದಲ್ಲಿ ಅಶ್ವಾಕೃತಿಯನ್ನೂ (ರಚಿಸಬೇಕು.)

**ಗೋಯಾಗೇ ತು ವೃಷಾಕಾರಂ ಗೃಹಯಾಗೇ ಧ್ವಜಾಕೃತಿಂ ।**
**ಸ್ಮಶಾನಗೋಪ್ರಚಾರಾರ್ಥಂ ಚೈತ್ಯವೃಕ್ಷಾಲಯೋತ್ತಮಃ ॥ ೨೧ ॥**

**ಚಕ್ರಾಕಾರೋ ಲಕ್ಷಹೋಮೇ ಕೋಟಿಹೋಮೇ ಹಲಾಕೃತಿಃ ।**
**ನಕ್ಷತ್ರಾಣಿ ತಥಾ ಮೂಲಂ ಶಸ್ಯತೇ ದ್ರುಮರೋಪಣೇ ॥ ೨೨ ॥**

**ಏವಂ ಶಸ್ತೋದಿತಾಂ ಭೂಮಿಂ ಶುದ್ಧಾಂ ಪೂರ್ವಪ್ಲವಾನ್ವಿತಾಂ ।**
**ಪರಿಗೃಹ್ಯ ಯಜೇದ್ದೇವಂ ವನಪಾಲಂ ಶಿಖಿಧ್ವಜಂ ॥ ೨೩ ॥**

**ಸೋಮಂ ಚ ನಾಗರಾಜಾನಂ ತತೋ ಬೀಜಂ ಸುಶೋಧಯೇತ್ ।**
**ಆನಯೋದ್ಧಾರಯೇತ್ಪಶ್ಚಾದ್ರುದ್ರತಾಪೇನ ತಾಪಯೇತ್ ॥ ೨೪ ॥**

**ದಿನದ್ವಯಾಂತರೇ ಚೈವ ಮಂತ್ರೈಶ್ಚ ಪರಿಮಂತ್ರಯೇತ್ ।**
**ಗರ್ಭಾಧಾನಂ ತತಃ ಕುರ್ಯಾದ್ವಿಷ್ಣುಮಂತ್ರಂ ಜಪಂಸ್ತ್ರಿಧಾ ॥ ೨೫ ॥**

---

೨೧. ನರಮೇಧಯಜ್ಞ ಮಾಡುವ ಸ್ಥಳದಲ್ಲಿ ನರಾಕೃತಿಯನ್ನೂ, ಗೋಮೇಧ ಯಜ್ಞದ ಸ್ಥಳದಲ್ಲಿ ವೃಷಭಾಕಾರವನ್ನೂ, ಗೃಹಯಾಗದಲ್ಲಿ ಧ್ವಜಾಕೃತಿಯನ್ನೂ ರಚಿಸಬೇಕು. ಸ್ಮಶಾನಪ್ರತಿಷ್ಠೆ, ಹುಲ್ಲುಗಾವಲುಪ್ರತಿಷ್ಠೆ ಇವನ್ನು ಮಾಡುವ ಸ್ಥಳದಲ್ಲಿ ಉತ್ತಮವಾದ ಚೈತ್ಯವೃಕ್ಷಾಕೃತಿಯನ್ನು ನಿರ್ಮಿಸಬೇಕು.

೨೨. ಲಕ್ಷಹೋಮ ಮಾಡು (ವಾಗ) ವ ಸನ್ನಿವೇಶದಲ್ಲಿ ಚಂದ್ರಾಕಾರವಾಗಿಯೂ, ಕೋಟಿಹೋಮ ಮಾಡಬೇಕಾದರೆ ನೇಗಿಲಿನ ಆಕೃತಿಯಾಗಿಯೂ ರಚಿಸಬೇಕು. ಮರವನ್ನು ನೇಡುವುದಕ್ಕೆ ಮೂಲಾನಕ್ಷತ್ರವು ಪ್ರಶಸ್ತವಾದುದಾಗಿದೆ.

೨೩. ಈ ರೀತಿ ಶ್ರೇಷ್ಠವೆಂದು ಉಕ್ತವೂ, ಪ್ರಶಸ್ತವೂ ಆಗಿ ಈ ಮುಂಚೆ ಉಳುಮೆಯಾಗಿರುವ ಭೂಮಿಯನ್ನು ಆರಿಸಿ ವನಪಾಲಕನಾದ ದೇವನನ್ನೂ ಶಿಖಿ ಧ್ವಜನನ್ನೂ ಪೂಜಿಸಬೇಕು.

೨೪. ಅನಂತರ ನಾಗರಾಜನಾದ ಸೋಮನನ್ನು ಪೂಜಿಸಿ, ಅನಂತರ ಬೀಜವನ್ನು ಚೆನ್ನಾಗಿ ಶೋಧಿಸಬೇಕು. ಆ ಮೇಲೆ ಅವುಗಳನ್ನು ತಂದು ಉರಿಬಿಸಿಲಿನಲ್ಲಿ ಹರಡಿ ಒಣಗಿಸಬೇಕು.

೨೫. ಎರಡುದಿನಗಳವರೆಗೆ ಉಕ್ತಮಂತ್ರಗಳಿಂದ ಅಭಿಮಂತ್ರಣಮಾಡಬೇಕು. "ವಿಷ್ಣುರ್ಯೋನಿಂ ಕಲ್ಪಯತು" ಎಂಬ ಮಂತ್ರವನ್ನು ಮೂರುಸಾರಿ ಉಚ್ಚರಿಸಿ ಆ ಬೀಜಕ್ಕೆ ಗರ್ಭಾಧಾನ ಸಂಸ್ಕಾರ ಮಾಡಬೇಕು.

**ಏವಮಸ್ಯೇತಿ ಮಂತ್ರೇಣ ತ್ರಿಧಾ ಜಪ್ತ್ವಾ ವಿಮಾರ್ಜಯೇತ್ ।**
**ದೇಹಿಮೇತಿ ಚ ಮಂತ್ರೇಣ ಸಂಪ್ರೋಕ್ಷ್ಯ ದಶವಾರಿಣಾ ॥ ೨೬ ॥**

**ಇತ್ಯಗ್ರಹೀತಮನುನಾ ಪಂಚಧಾ ಪರಿಮಂತ್ರಿತಂ ।**
**ತ್ರ್ಯಂಬಕೇನೇತಿ ಮಂತ್ರೇಣ ಬೀಜಮಾರೋಪಯೇತ್ತತಃ ॥ ೨೭ ॥**

**ಭಾರ್ಯಾಮೃತುಮತೀಂ ಸ್ನಾತ್ವಾ ಪಂಚಮೇಹನಿ ಸತ್ತಮಾಃ ।**
**ಉತ್ಸಂಗೇ ಸ್ಥಾಪಯಿತ್ವಾ ಚ ಚುಂಬಯೇನ್ಮಂತ್ರಯೇತ್ತತಃ ॥ ೨೮ ॥**

**ಏವಂ ವೃಕ್ಷಸ್ಯ ಸಂಸ್ಕಾರಮಧ್ಯೇಽಪಿ ತ್ವನುಗಚ್ಛತಿ ।**
**ತೇನ ಪುತ್ರತ್ವಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೨೯ ॥**

**ತುಲಸ್ಯಾ ಬೀಜಮಾದಾಯ ವೈಷ್ಣವರ್ಕ್ಷೇ ದ್ವಿಜೋಽಹನಿ ।**
**ಖಾನಯೇದಪಿ ಗೋಮೂತ್ರಬಿಂದುತೋಯೈಃ ಪ್ರಸೇಚಯೇತ್ ॥ ೩೦ ॥**

---

೨೬. "ಏವಮಸ್ಯ" ಎಂಬ ಮಂತ್ರವನ್ನು ಮೂರುಸಲ ಜಪಿಸಿ ಆ ಬೀಜಕ್ಕೆ ಮಾರ್ಜನೆಮಾಡಬೇಕು. " ದೇಹಿಮೇ " ಎಂಬ ಮಂತ್ರದಿಂದ ಹತ್ತುಸಾರಿ ಜಲದಿಂದ ಪ್ರೋಕ್ಷಿಸಬೇಕು.

೨೭. " ಇತ್ಯಗ್ರಹೀತ " ಎಂಬ ಮಂತ್ರವನ್ನು ಐದುಸಾರಿ ಹೇಳಿ ಅಭಿಮಂತ್ರಿತವಾದ ಆ ಬೀಜವನ್ನು " ತ್ರ್ಯಂಬಕಂ ಯಜಾಮಹೇ " ಎಂಬ ಮಂತ್ರಪೂರ್ವಕವಾಗಿ ಬಿತ್ತಬೇಕು.

೨೮. ದ್ವಿಜಶ್ರೇಷ್ಠರೇ! ಕೇಳಿರಿ; ಋತುಮತಿಯಾಗಿದ್ದು ಐದನೆಯದಿನ ಸ್ನಾನಮಾಡಿದ ತನ್ನ ಪತ್ನಿಯನ್ನು ತೊಡೆಯಮೇಲೆ ಕೂರಿಸಿಕೊಂಡು ಬೀಜವನ್ನು ಚುಂಬನಮಾಡಿಸಿ ಅನಂತರ ಅಭಿಮಂತ್ರಿಸಬೇಕು.

೨೯. ಈ ರೀತಿ ಸಂಸ್ಕಾರವು ವೃಕ್ಷದ ಮಧ್ಯದಲ್ಲೂ ಅನುಗತವಾಗಿ ಬರುವುದು. ಹೀಗೆ ಮಾಡುವುದರಿಂದ ಹಾಗೆ ನೆಟ್ಟು ಬೆಳೆಸಿದ ಗಿಡದಲ್ಲಿ ಪುತ್ರಭಾವವುಂಟಾಗುವುದು. ಈ ವಿಷಯದಲ್ಲಿ ವಿಚಾರಪಡಬೇಕಾಗಿಯೇ ಇಲ್ಲ.

೩೦. ಶಾಸ್ತ್ರೋಕ್ತರೀತಿಯಿಂದ ಬೆಳೆಯಿಸಬೇಕೆಂಬ ಉದ್ದೇಶವುಳ್ಳ ದ್ವಿಜನು ಮೊದಲು ತುಳಸೀಬೀಜವನ್ನು ಸಂಗ್ರಹಿಸಿಕೊಳ್ಳಬೇಕು. ಶ್ರವಣನಕ್ಷತ್ರದ ದಿನ

**ಏತಾಂ ತು ಸ್ವರ್ಗಮಾಪ್ನೋತಿ ಸಿತಕುಂಭೇ ನಿಪಾತಯೇತ್ ।**
**ಏಕರಾತ್ರಂ ಪರಿಸ್ಥಾಪ್ಯ ತತ ಆರೋಪಯೇದ್ಭುವಿ　　　॥ ೩೧ ॥**

**ಅವಿಧೌ ಕೂಪವಾಪ್ಯಾದೌ ಖನನೇ ಸೂಯತೇ ಕ್ವಚಿತ್ ।**
**ಕುರ್ವಂತಿ ಸಹಕಾರಾದಿರೋಪಣಂ ಯೇ ನರಾಧಮಾಃ ॥**
**ಲಭಂತೇ ನ ಫಲಂ ತೇಷಾಮಿಹ ಚಾಭ್ಯೇತ್ಯಧೋಗತಿಂ　　　॥ ೩೨ ॥**

**ನದೀತೀರೇ ಶ್ಮಶಾನೇ ಚ ಸ್ವಗೃಹಸ್ಯ ಚ ದಕ್ಷಿಣೇ ।**
**ತುಲಸೀರೋಪಣಂ ಕೃತ್ವಾ ಯಾತಿ ಕರ್ತಾ ಯಮಾಲಯಂ　　　॥ ೩೩ ॥**

**ಪತ್ರಪುಷ್ಪಫಲಾನಾಂ ಚ ರಜೋರೇಣುಸಮಾಗಮಾಃ ।**
**ಪೋಷಯಂತಿ ಚ ಪಿತರಂ ಪ್ರತ್ಯಹಂ ಪ್ರತಿಕರ್ಮಣಿ　　　॥ ೩೪ ॥**

---

ಹಗಲಿನಲ್ಲಿ ನೆಲವನ್ನು ಅಗೆಯಬೇಕು. ಆ ದಿನ ಆ ಬೀಜಕ್ಕೆ ಹಸುವಿನ ಗಂಜಲವನ್ನು ಚುಮುಕಿಸಬೇಕು.

೩೧. ಅದನ್ನು ಬಿಳಿಯಕುಂಭದಲ್ಲಿ ತುಂಬಬೇಕು. ಒಂದುರಾತ್ರಿ ಹಾಗೆಯೇ ಇಟ್ಟಿದ್ದು ಅನಂತರ ಅಗೆದಿದ್ದ ನೆಲದಲ್ಲಿ ನೆಡಬೇಕು. ಈ ಪ್ರಕಾರ ವಿಧಿಯಂತೆ ನಡೆಸಿದವನು ಸ್ವರ್ಗವನ್ನು ಪಡೆಯುತ್ತಾನೆ.

೩೨. ವಿಧಿವಿಧಾನವನ್ನು ಲಕ್ಷ್ಯವೇಮಾಡದೆ, ಕೂಪ ವಾಪೀ ಮೊದಲಾದುವನ್ನು ಎಲ್ಲೆಲ್ಲಿಯೋ ತೋಡಿದರೆ ಮಹಾಪಾಪವುಂಟಾಗುತ್ತದೆ. ವಿಧಿಯನ್ನು ನಿರ್ಲಕ್ಷಿಸಿ ಮಾವಿನಗಿಡ ಮೊದಲಾದುವನ್ನು ನೆಡುವ ನೀಚಜನರಿಗೆ ಇಹದಲ್ಲಿ ಅಧೋಗತಿಯೊದಗುವುದಲ್ಲದೆ ಆ ವೃಕ್ಷವೂ ಫಲಬಿಡುವುದಿಲ್ಲ.

೩೩. ನದೀತೀರದಲ್ಲಿರುವ ಸ್ಮಶಾನದಲ್ಲಿಯೂ, ಮನೆಯಿಂದ ದಕ್ಷಿಣಪಾರ್ಶ್ವದಲ್ಲಿಯೂ ತುಲಸಿಯನ್ನು ನಡಬಾರದು. ಹಾಗೆ ನೆಟ್ಟವನು ಯಮಲೋಕಕ್ಕೆ ಹೋಗುತ್ತಾನೆ.

೩೪. ವಿಧಿವತ್ತಾಗಿ ನಟ್ಟ ತುಳಸಿ, ಮಾವು, ಮೊಂತಾದುವುಗಳ ಎಲೆ, ಹೂವು ಹಣ್ಣು, ಪರಾಗರೇಣು, ಇವುಗಳನ್ನು ಕಾರ್ಯಗಳಲ್ಲಿಯೂ ನಿತ್ಯವೂ ಎಲ್ಲ ಉಪಯೋಗಿಸೋಣವು ಇವನ ಪಿತೃಗಳಿಗೆ ಸಂತೋಷವುಂಟುಮಾಡುತ್ತದೆ.

ಯಸ್ತು ವೃಕ್ಷಂ ಪ್ರಕುರುತೇ ಛಾಯಾಪುಷ್ಪಫಲೋಪಗಂ ।
ಪಥಿ ದೇವಾಲಯೇ ಚಾಪಿ ಪಾಪಾತ್ತಾರಯತೇ ಪಿತ್ರ್ಯನ್ ॥
ಕೀರ್ತಿಶ್ಚ ಮಾನುಷೇ ಲೋಕೇ ಪ್ರತ್ಯಭ್ಯೇತಿ ಶುಭಂ ಫಲಂ ॥ ೩೫ ॥

ಅತೀತಾನಾಗತಾಂಶ್ಚಾತಃ ಪಿತ್ರ್ಯನ್ ಸ ಸ್ವರ್ಗತೋ ದ್ವಿಜಾಃ ।
ತಾರಯೇದ್ವೃಕ್ಷರೋಪೀ ಚ ತಸ್ಮಾದ್ವೃಕ್ಷಂ ಪ್ರರೋಪಯೇತ್ ॥ ೩೬ ॥

ಅಪುತ್ರಸ್ಯ ಹಿ ಪುತ್ರತ್ವಂ ಪಾದಪಾ ಇಹ ಕುರ್ವತೇ ।
ಯತ್ನೇನಾಪಿ ಚ ವಿಪ್ರೇಂದ್ರ ಅಶ್ವತ್ಥಾರೋಪಣಂ ಕುರು ॥ ೩೭ ॥

ಶತೈಃ ಪುತ್ರಸಹಸ್ರಾಣಾಮೇಕ ಏವ ವಿಶಿಷ್ಯತೆ ।
ಕಾಮೇನ ರೋಪಯೇದ್ವಿಪ್ರಾಃ ಏಕದ್ವಿತ್ರಿಪ್ರಸಂಖ್ಯಯಾ ॥ ೩೮ ॥

---

೩೫. ಹೂವು, ಹಣ್ಣು, ಕಾಯಿ, ಎಲೆ ಇವೆಲ್ಲವನ್ನೂ ಕೊಡುವ ಮರಗಳನ್ನು ರಸ್ತೆಗಳಲ್ಲಿಯೂ, ದೇವಾಲಯಗಳಲ್ಲಿಯೂ ನೆಡುವವನು ಪಿತೃಗಳನ್ನು ಅಧೋಗತಿಯಿಂದ ದಾಟಿಸುತ್ತಾನೆ. ಅವನಿಗೆ ಈ ಲೋಕದಲ್ಲಿಯೂ ಕೀರ್ತಿಪ್ರಾಪ್ತಿಯಾಗಿ ಶುಭಫಲವುಂಟಾಗುವುದು

೩೬. ಎಲೈ ಬ್ರಾಹ್ಮಣಶ್ರೇಷ್ಠರೇ! ಕೇಳಿರಿ; ವೃಕ್ಷಗಳನ್ನು ನೆಟ್ಟವನು ಸ್ವರ್ಗವಾಸದ ಪುಣ್ಯ ಮುಗಿದ ಪಿತೃಗಳನ್ನು ಅದಕ್ಕಿಂತ ಉತ್ತಮಸ್ಥಾನಕ್ಕೆ ಏರಿಸುವನು. ಸ್ವರ್ಗಕ್ಕೆ ಬಾರದೇ ಇರುವವರನ್ನು ಸ್ವರ್ಗಕ್ಕೆ ಬರುವಂತೆ ಮಾಡುವನು. ಇದನ್ನೇ ಅತೀತತನಾಗತ ಪಿತೃಗಳ ಉದ್ಧರಣವೆನ್ನುವರು. ಆದುದರಿಂದ ವೃಕ್ಷಗಳನ್ನು ನೆಟ್ಟು ಬೆಳೆಸಬೇಕು.

೩೭ ಮರವನ್ನು ನೆಟ್ಟು ಬೆಳೆಸಿದರೆ ಮಕ್ಕಳಿಲ್ಲದವನಿಗೆ ಮಕ್ಕಳಾಗುತ್ತವೆ. (ಅವೆಲ್ಲ ಅವನ ಮಕ್ಕಳಂತಿರುತ್ತವೆ) ಓ ಬ್ರಾಹ್ಮಣಶ್ರೇಷ್ಠರೇ! ಕೇಳಿರಿ; ಆದುದರಿಂದ ಅಶ್ವತ್ಥವೃಕ್ಷವೊಂದನ್ನು ಪ್ರಯತ್ನಪಟ್ಟಾದರೂ ನೆಟ್ಟು ಬೆಳೆಸಬೇಕು

೩೮. ಲೋಕದಲ್ಲಿ ಜನಿಸಿದ ಲಕ್ಷಾಂತರ ಮಕ್ಕಳಲ್ಲಿ ಯಾವನೋ ಒಬ್ಬನು ಮಾತ್ರ ಅತಿಶಯಮಹಿಮನಾಗುವನು. ತನಗೆ ಎಷ್ಟು ಮಕ್ಕಳಾಗಬೇಕೆಂದು ಇಚ್ಛೆ ಇದೆಯೋ, ಅಷ್ಟುಸಂಖ್ಯೆಯನ್ನು ಅನುಸರಿಸಿ ಒಂದು, ಎರಡು, ಮೂರು, ಇತ್ಯಾದಿ ಸಂಖ್ಯೆಯಿಂದ ಮರಗಳನ್ನು ನೆಡಬೇಕು.

**ಮುಕ್ತಿಹೇತುಃ ಸಹಸ್ರಾಣಾಂ ಲಕ್ಷಕೋಟೀನಿ ಯಾನಿ ಚ ।**
**ಧನೀ ಚಾಶ್ವತ್ಥವೃಕ್ಷೇ ಚ ಅಶೋಕಃ ಶೋಕನಾಶನಃ ॥ ೩೯ ॥**

**ಪ್ಲಕ್ಷೋ ಭಾರ್ಯಾಪ್ರದಶ್ಚೈವ ಬಿಲ್ವ ಆಯುಷ್ಯದಃ ಸ್ಮೃತಃ ।**
**ಧನಪ್ರದೋ ಜಂಬುವೃಕ್ಷಃ ಬ್ರಹ್ಮದಃ ಪ್ಲಕ್ಷವೃಕ್ಷಕಃ ॥ ೪೦ ॥**

**ತಿಂದುಕಾತ್ಕುಲವೃದ್ಧಿಃ ಸ್ಯಾದ್ದಾಡಿಮೀ ಕಾಮಿನೀಪ್ರದಃ ।**
**ಬಕುಲೋ ವಂಜುಲಶ್ಚೈವ ಪಾಪಹಾ ಬಲಬುದ್ಧಿದಃ ॥ ೪೧ ॥**

**ಸ್ವರ್ಗಪ್ರದಾ ಧಾತಕೀ ಸ್ಯಾದ್ವಟೋ ಮೋಕ್ಷಪ್ರದಾಯಕಃ ।**
**ಸಹಕಾರಃ ಕಾಮಪ್ರದೋ ಗುವಾಕಃ ಸಿದ್ಧಿಮಾದಿಶೇತ್ ॥ ೪೨ ॥**

---

೩೯. ಲಕ್ಷ, ಕೋಟಿ, ಸಾವಿರ ಈ ಸಂಖ್ಯೆಯ ವೃಕ್ಷರೋಪಣವು ಮುಕ್ತಿ ಹೊಂದುವುದಕ್ಕೆ ಸಾಧಕವಾಗುವುದು. ಅಶ್ವತ್ಥವೃಕ್ಷವನ್ನು ಬೆಳೆಸಿದವನು ಧನಿಕನಾಗುವನು. ಅಶೋಕವೃಕ್ಷವನ್ನು ಬೆಳೆಸಿದವನ ಶೋಕಗಳು ನಾಶವಾಗುವುವು.

೪೦. ಪ್ಲಕ್ಷತರು (ಬಸುರಿಮರ) ವನ್ನು ಬೆಳೆಯಿಸಿದರೆ ಒಳ್ಳೆಯ ಭಾರ್ಯೆ ಲಭಿಸುವಳು. ಬಿಲ್ವಪತ್ರೆಯಮರವನ್ನು ನಟ್ಟು ಬೆಳೆಸಿದವನಿಗೆ ಆಯುಸ್ಸು ವೃದ್ಧಿಯಾಗುವುದೆಂದು ತಿಳಿಯಬೇಕು. ನೇರಳೆಯಮರವನ್ನು ನೆಟ್ಟುಬೆಳೆಸಿದವನಿಗೆ ಧನವು ಲಭಿಸುವುದು. ಪ್ಲಕ್ಷತರು (ಬಸರಿಮರ) ವನ್ನು ಬೆಳೆಯಿಸುವುದರಿಂದ ಜ್ಞಾನಲಾಭವಾಗುವುದು ಎಂದು ಕೆಲವರು ಹೇಳುವರು.

೪೧. ತಿಂದುಕ (ತೂಬರ) ವೃಕ್ಷವನ್ನು ಬೆಳೆಯಿಸುವುದರಿಂದ ಕುಲಾಭಿವೃದ್ಧಿಯಾಗುವುದು. ದಾಡಿಮಾ (ದಾಳಿಂಬಿ) ಮರವನ್ನು ಬೆಳೆಯಿಸಿದರೆ ಸ್ತ್ರೀಸುಖವನ್ನುಂಟುಮಾಡುವುದು. ಪಗಡೆಯಮರವನ್ನು ನೆಟ್ಟು ಬೆಳೆಸುವುದು ಪಾಪಧ್ವಂಸಕವು; ಮಂಜುಳ (ನೀರಂಜಿ) ವೃಕ್ಷವನ್ನು ಬೆಳೆಯಿಸಿದರೆ, ಬಲವನ್ನೂ ಬುದ್ಧಿಯನ್ನೂ ಕೊಡುವುದು.

೪೨. ಧಾತಕೀವೃಕ್ಷ (ಆರೇಹೂವಿನ ಗಿಡ) ವನ್ನು ಬೆಳೆಸಿದರೆ ಸ್ವರ್ಗಪ್ರಾಪ್ತಿಯನ್ನುಂಟುಮಾಡುವುದು. ಆಲದಮರವನ್ನು ಬೆಳೆಸಿದರೆ ಮೋಕ್ಷಪ್ರಾಪ್ತಿಯುಂಟಾಗುವುದು. ಸಿಹಿಮಾವಿನಮರವನ್ನು ಬೆಳೆಸಿದರೆ ಇಷ್ಟಾರ್ಥಲಾಭವೂ, ಗುವಾಕ (ಖಪುರ) ವೃಕ್ಷವನ್ನು ಬೆಳೆಸಿದರೆ ಕಾರ್ಯಸಿದ್ಧಿಯೂ ಆಗುವುದು.

ಸರ್ವಶಸ್ಯಂ ಬಲವಲೇ ಮಧುಕೇ ಚಾರ್ಜುನೇ ತಥಾ ।
ಕದಂಬೇ ವಿಪುಲಾ ಕೀರ್ತಿಸ್ತಿಂತಿಡೀ ಧರ್ಮದೂಷಕಃ ॥ ೪೩ ॥

ಜೀವಂತ್ಯಾ ರೋಗಶಾಂತಿಃ ಸ್ಯಾತ್ಕೇಶರಃ ಶತ್ರುಮರ್ದನಃ ।
ಧನಪ್ರದಶ್ಚೈವ ವಟೋ ವಟಃ ಶ್ವೇತವಟಸ್ತಥಾ ॥ ೪೪ ॥

ಪನಸೇ ಮಂದಬುದ್ಧಿಃ ಸ್ಯಾತ್ಕಲಿವೃಕ್ಷಃ ಶ್ರಿಯಂ ಹರೇತ್ ।
ಕಲಿವೃಕ್ಷಂ ಚ ಶಾಖೋಟಿ ಉದರಾವರ್ತಕಂ ತಥಾ ॥ ೪೫ ॥

ತಥಾ ಚ ಪರ್ಕಟೀನೀ ಪರೋ ಪಣಾತ್ಸಂತತಿಕ್ಷಯಃ ।
ಶಿಂಶಪಾ ಚಾರ್ಜುನಂ ಚೈವ ಜಯಂತೀ ಹಯಮಾರಕಾನ್ ॥
ಶ್ರೀವೃಕ್ಷಂ ಕಿಂಶುಕಂ ಚೈವ ರೋಪಣಾತ್ ಸ್ವರ್ಗಮಾದಿಶೇತ್ ॥ ೪೬ ॥

---

೪೩. ಬಲವಲ, ಹಿಪ್ಪೆ, ಮತ್ತಿ ಈ ಮರಗಳನ್ನು ನೆಡುವುದು ಸರ್ವಶ್ರೇಷ್ಠ ವೆಂದೆನಿಸಿದೆ. ಕಡಹದಮರವನ್ನು ನೆಡುವುದರಿಂದ ವಿಶಾಲ ಕೀರ್ತಿಲಾಭವುಂಟು. ಹುಣಿಸೆಯಮರವನ್ನು ಬೆಳೆಯಿಸಿದರೆ ಇವನ ಧರ್ಮವೇ ದೂಷಿತವಾಗುವುದು.

೪೪. ಜೀವಂತಿಗಿಡವನ್ನು ಸ್ಥಾಪಿಸುವುದರಿಂದ ರೋಗವಿದ್ದವನಿಗೆ ಅದು ವಾಸಿಯಾಗುವುದು. ಕೇಶರವೃಕ್ಷವನ್ನು ಬೆಳೆಯಿಸುವುದರಿಂದ ಶತ್ರುಗಳು ನಾಶವಾಗುವರು. ಆಲದಮರವನ್ನು ನೆಡುವುದರಿಂದ ಧನಪ್ರಾಪ್ತಿಯಾಗುವುದು. ಶ್ವೇತವಟವೆಂಬ ಜಾತಿಯ ಆಲದಮರವನ್ನು ನೆಟ್ಟರೂ ಅದೇ ರೀತಿ ಫಲಕೊಡುವುದು.

೪೫. ಹಲಸಿನಮರವನ್ನು ನೆಟ್ಟವನಿಗೆ ಬುದ್ಧಿಮಾಂದ್ಯವುಂಟಾಗುವುದು. ತಾರೆಯಮರವನ್ನು ನೆಟ್ಟರೆ ಧನನಾಶವಾಗುವುದು. ಕಲಿದ್ರುಮ, ಶಾಖೋಟಕ, ಉದರಾವರ್ತ ಇವುಗಳನ್ನು ನೆಟ್ಟರೂ ಧನನಾಶಕರ.

೪೬. ನೀಪವೃಕ್ಷ, ಪರ್ಕಟೀವೃಕ್ಷ ಇವುಗಳನ್ನು ಬೆಳೆಯಿಸಿದರೆ ವಂಶಹಾನಿಯಾಗುವುದು. ಶಿಂಶುಪಾ, ಮತ್ತಿ, ಜಯಂತೀ, ಹಯಮಾರಕ, ಬಿಲ್ವ ಮುತ್ತುಗ, ಇವನ್ನು ನೆಟ್ಟು ಬೆಳೆಯಿಸಿದರೆ ಸ್ವರ್ಗಪ್ರಾಪ್ತಿಯಾಗುವುದು.

**ನ ಪೂರ್ವಾಂ ರೋಪಯೇಜ್ಞಾತು ಸಮಿಧಂ ಕಂಟಕೀದ್ರುಮಂ ।**
**ಕುಶಂ ಪದ್ಮಂ ಜಲಜಾನಾಂ ರೋಪಣಾದ್ದುರ್ಗತಿಂ ವ್ರಜೇತ್ ॥ ೪೭ ॥**

**ಮಂದಾರೇ ಕುಲಹಾನಿಃ ಸ್ಯಾಚ್ಛಾಲ್ಮಲೇ ಶುಕ್ರಬುದ್ಧಿರ್ವಾ ।**
**ನಿಂಬೇ ಪಶುವಿನಾಶಃ ಸ್ಯಾಚ್ಛತ್ರಾಕೇ ಕುಲಪಾಂಸಲಃ ॥ ೪೮ ॥**

**ಉತ್ಪನ್ನೇ ಕುಲಪಾತಃ ಸ್ಯಾತ್ಪಶೂನಾಂ ಸಂಕ್ಷಯೋ ಭವೇತ್ ।**
**ಶತ್ರುವೃದ್ಧಿಃ ಕಾಕನಾದೇ ಬಲಪೂಗೇ ಹತಶ್ರಿಯಃ ॥ ೪೯ ॥**

**ವಿನಾ ಕ್ರತೌ ವಿರುದ್ಧಶ್ಚ ನ ಸಿಂಹಂ ದ್ವಿಜಸತ್ತಮಾಃ ।**
**ಕ್ರತೌ ಹಿ ಸ್ಯಾದ್ವಿರುದ್ಧಶ್ಚ ಪ್ರಾಪ್ನುಯಾನ್ನರಕಾಕೃತಿಂ ॥ ೫೦ ॥**

---

೪೭. ಸಮಿಧೆಗೆ ಯೋಗ್ಯವಾದ ಮುಳ್ಳುಗಿಡವನ್ನು ಆ ಕ್ಷೇತ್ರದಲ್ಲಿ ಮೊದಲು ನೆಡಬಾರದು. ದರ್ಭೆ, ಕಮಲದ ಬಳ್ಳಿ ಇತರ ಜಲಜಪುಷ್ಪಗಳಗಿಡ ಇವನ್ನು ನೆಟ್ಟರೆ ದುರ್ಗತಿಪ್ರಾಪ್ತಿಯಾಗುವುದು.

೪೮. ಮಂದಾರವೃಕ್ಷವನ್ನು ನೆಟ್ಟರೆ ಕುಲಕ್ಕೆ ಹಾನಿಸಂಭವಿಸುವುದು, ಶಾಲ್ಮಲೀ (ಬೂರುಗ) ವೃಕ್ಷವನ್ನು ನಟ್ಟು ಬೆಳಯಿಸುವವನು ಶುಕ್ರಾಚಾರ್ಯನಂತೆ ನೀತಿಶಾಸ್ತ್ರ ವಿಶಾರದನಾಗುವನು. ಬೇವಿನಗಿಡವನ್ನು ಬೆಳೆಸಿದರೆ ಅವನ ದನಕರುಗಳು ನಾಶವಾಗುವುವು. ಛತ್ರಾಕ (ಸರ್ಪಾಕ್ಷೀ) ವೃಕ್ಷವನ್ನು ನೆಟ್ಟರೆ ಕುಲದೂಷಕನಾಗುವನು.

೪೯. ಉತ್ಪನ್ನವೃಕ್ಷವನ್ನು ನೆಡುವುದರಿಂದ ಅವನ ಕುಲವೇ ಹೀನಸ್ಥಿತಿಗೆ ಬರುವುದು. ಮತ್ತು ಅವನ ದನಕರುಗಳು ಕ್ಷೀಣಿಸುವುವು. " ಕಾಕನಾದ ಎಂಬ ವೃಕ್ಷವನ್ನು ನಟ್ಟು ಬೆಳೆಯಿಸಿದರೆ ಅವನಿಗೆ ಶತ್ರುಗಳು ಹೆಚ್ಚಾಗುವರು. ಬಲಪೂಗ ವೃಕ್ಷವನ್ನು ಬೆಳೆಯಿಸಿದರೆ ಶ್ರೀನಾಶವಾಗುವುದು.

೫೦. ಓ ಬ್ರಾಹ್ಮಣೋತ್ತಮರೇ ! ಕೇಳಿ ; ಕ್ರತುವೃಕ್ಷ (ಬನ್ನಿಮರ) ವನ್ನು ನೆಡದೇಇದ್ದರೆ ವಿರೋಧವೆನ್ನುವರು. ಕೆಲವರು ನೆಡುವುದರಿಂದ ವಿರೋಧವುಂಟೆನ್ನುವರು. ಸಿಂಹವೃಕ್ಷವನ್ನು ಎಂದೂ ಸ್ಥಾಪಿಸಬಾರದು. ಹಾಗೆ ಸ್ಥಾಪಿಸಿದವನು ದುರ್ಬಲಾಕೃತಿಯನ್ನು ಹೊಂದುತ್ತಾನೆ.

ಸಹಕಾರಸಹಸ್ರಾತ್ತು ವರಿಷ್ಠಂ ಧಾತಕೀದ್ವಯಂ ।
ತಸ್ಮಾಚ್ಚೈವ ಸಹಸ್ರಾದ್ಧಿ ಪಾಟಲ್ಯೈಕಾ ವಿಶಿಷ್ಯತೇ ॥ ೫೧ ॥

ಪಾಡಲಾನಾಂ ಶತಾತ್ಪಶ್ಚಾದೇಕರಕ್ತವಟೋ ಭವೇತ್ ।
ವಟಾನಾಂ ದ್ವಿಸಹಸ್ರಾಚ್ಚ ಪಂಚಕಂ ನಾಗಕೇಸರಂ ॥ ೫೨ ॥

ತಸ್ಮಾದ್ವರಿಷ್ಠಃ ಶ್ರೀವೃಕ್ಷೋ ಜಂಬೂವೃಕ್ಷಃ ಪ್ರಶಸ್ಯತೇ ।
ತಸ್ಮಾದ್ಧಿಮವತೋ ಜ್ಞೇಯಃ ಶ್ರೀಪರ್ಣೀವೃಕ್ಷ ಉತ್ತಮಃ ॥ ೫೩ ॥

ತಿಂದುಕಸ್ಯ ತ್ರಯಂ ಚೈವ ಜಂಬೂವೃಕ್ಷಸ್ಯ ಪಂಚಕಂ ।
ಕದಂಬಾರ್ಜುನವೃಕ್ಷಸ್ಯ ನಾರಿಕೇರಸ್ಯ ಚ ತ್ರಯಂ ॥
ಏವಮುಕ್ತ್ವಾ ಸ ಧರ್ಮಾತ್ಮಾ ಕಾರಯೇತ್ಕೀದೃಶಂ ಬಲಂ ॥ ೫೪ ॥

---

೫೧. ಒಂದುಸಾವಿರ ಸಿಹಿಮಾವಿನಮರಗಳನ್ನು ಬೆಳೆಸುವುದಕ್ಕಿಂತ ಎರಡು ಧಾತಕೀ (ಆರೇಹೂವಿನಗಿಡ) ವೃಕ್ಷಗಳನ್ನು ನೆಡುವುದು ಶ್ರೇಷ್ಠ. ಇಂತಹ ಸಹಸ್ರಾರು ಧಾತಕೀವೃಕ್ಷ ಸ್ಥಾಪನೆಗಿಂತ ಒಂದುಪಾದರೀ ಗಿಡದ ಸ್ಥಾಪನೆಯು ಶ್ರೇಷ್ಠವೂ, ಹೆಚ್ಚು ಪುಣ್ಯಪ್ರದವೂ ಆಗಿದೆ.

೫೨. ನೂರು ಪಾದರೀವೃಕ್ಷಗಳನ್ನು ನೆಡುವುದಕ್ಕಿಂತ ಒಂದುಕೆಂಪು ಆಲದ ಮರವನ್ನು ನೆಡುವುದು ಹೆಚ್ಚುಪುಣ್ಯ. ಎರಡುಸಾವಿರ ಕೆಂಪು ಆಲದಮರಗಳನ್ನು ನೆಡು ವುದಕ್ಕಿಂತ ಐದು ನಾಗಕೇಸರ ವೃಕ್ಷಗಳನ್ನು ನೆಡುವುದು ಹೆಚ್ಚಿನ ಪುಣ್ಯವನ್ನು ಕೊಡು ವುದು,

೫೩. ಒಟ್ಟಿನಲ್ಲಿ ಅದಕ್ಕಿಂತ ಬಿಲ್ವಪತ್ರೆಮರ ಶ್ರೇಷ್ಠ, ನೇರಿಳೆಮರಗಳನ್ನು ಬೆಳೆ ಸುವುದೂ ಶ್ರೇಷ್ಠವೆನ್ನಬೇಕು. ಅದಕ್ಕಿಂತ ಹಿಮವತವೃಕ್ಷವು ಶ್ರೇಷ್ಠವು. ತೇಗದ ವೃಕ್ಷವನ್ನು ನೆಡುವುದು ಅದಕ್ಕಿಂತ ಉತ್ತಮ

೫೪. ತನ್ನ ಜೀವಮಾನದಲ್ಲಿ ಮೂರು ತಿಂದುಕ (ತೂಬರೆ) ವೃಕ್ಷಗಳು, ಐದು ನೇರಳೆಯಮರಗಳು, ಮೂರು ಕಡಹದಮರ, ಮೂರುಮತ್ತಿಮರ, ಮೂರು ತೆಂಗಿನಮರ ಇವನ್ನು ನೆಡುವುದು ಶ್ರೇಷ್ಠವು. ಹಾಗೆ ನೆಟ್ಟ ಆ ಧರ್ಮಾತ್ಮನು ಎಂಥ ಸಾಮರ್ಥ್ಯವನ್ನು ಹೊಂದುವನೆಂಬುದನ್ನು ಹೇಳಲಾದೀತೆ. (ಎಂದರೆ ತುಂಬಾ ಬಲ ಶಾಲಿಯಾಗುವನು.)

**ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।**
**ಸರ್ವಭೋಗಂ ಸಮಶ್ನಾತಿ ವಿಧಿವದ್ದ್ರುಮರೋಪಕೇ ॥ ೫೫ ॥**

**ಜನ್ಮತ್ರಯೋದಿಕಂ ಪಾಪಂ ವಿನಾಶ್ಯ ಸ್ವರ್ಗಮಾದಿಶೇತ್ ।**
**ಶತರೋಪೀ ಚ ಬ್ರಹ್ಮತ್ವಂ ವಿಷ್ಣುತ್ವಂ ಚ ಸಹಸ್ರಕೇ ॥ ೫೬ ॥**

**ತುಲಸೀ ರೋಪಕಾಚ್ಚೈತ್ರ ಆಧಿವ್ಯಾಧಿಯುತೋ ಭವೇತ್ ।**
**ವೈಶಾಖೇ ಕೀರ್ತಿಮಾಪ್ನೋತಿ ಜ್ಯೇಷ್ಠೇ ತು ಮರಣಂ ವ್ರಜೇತ್ ॥ ೫೭ ॥**

**ಆಷಾಢೇ ಕೀರ್ತಿಮಾಪ್ನೋತಿ ಶ್ರಾವಣೇ ಪರಮಾಂ ಗತಿಂ ।**
**ಭಾದ್ರೇ ಧನಾಗಮಶ್ಚೈವ ಆಶ್ವಿನೇ ಕಾರ್ತಿಕೇ ಕ್ಷಯಃ ॥**
**ತುಲಸೀ ತ್ರಿವಿಧಾ ಲೋಕೇ ಕೃತೇ ಶ್ವೇತಾ ಪ್ರಶಸ್ಯತೆ ॥ ೫೮ ॥**

---

೫೫. ಈ ವೃಕ್ಷಗಳನ್ನು ಸುಮ್ಮನೆ ನೆಡುವುದಕ್ಕಿಂತ ವಿಧಿಪ್ರಕಾರ ನೆಟ್ಟರೆ ಶತ ಕೋಟಿಸಹಸ್ರಕಲ್ಪಗಳವರೆಗೆ ಸಮಸ್ತವಾದ ಭೋಗವನ್ನೂ ಅನುಭವಿಸುತ್ತಾನೆ.

೫೬. ಅವನು ಹಿಂದಿನ ಜನ್ಮದಲ್ಲಿಯೂ, ಮುಂದಿನ ಜನ್ಮದಲ್ಲಿಯೂ, ಈ ಜನ್ಮದಲ್ಲಿಯೂ ಈ ರೀತಿ ಮೂರುಜನ್ಮಗಳಲ್ಲಿಯೂ ಹಿಂದೆ ಮಾಡಿದ ಮತ್ತು ಮುಂದೆ ಮಾಡುವ ಪಾಪವನ್ನು ಹೋಗಲಾಡಿಸಿಕೊಂಡು ಸ್ವರ್ಗವನ್ನು ಪಡೆಯುತ್ತಾನೆ. ಹೀಗೆ ನೂರು ವೃಕ್ಷಗಳನ್ನು ನೆಟ್ಟರೆ ಚತುರ್ಮುಖಬ್ರಹ್ಮನಾಗುತ್ತಾನೆ. ಈ ಪ್ರಕಾರ ಸಾವಿರ ವೃಕ್ಷಗಳನ್ನು ನೆಟ್ಟರೆ ವಿಷ್ಣುಸ್ವರೂಪವನ್ನು ಪಡೆಯುತ್ತಾನೆ.

೫೭. ಚೈತ್ರಮಾಸದಲ್ಲಿ ತುಲಸಿಯನ್ನು ನೆಡುವವನಿಗೆ ಆಧಿವ್ಯಾಧಿಗಳು ಸಂಭವಿಸುವುವು. ವೈಶಾಖಮಾಸದಲ್ಲಿ ನೆಟ್ಟವನು ಕೀರ್ತಿವಂತನಾಗುವನು. ಜ್ಯೇಷ್ಠದಲ್ಲಿ ತುಲಸೀಗಿಡವನ್ನು ನೆಟ್ಟರೆ ಶೀಘ್ರದಲ್ಲಿಯೇ ಮರಣವು ಸಂಭವಿಸುವುದು.

೫೮. ಆಷಾಢಮಾಸದಲ್ಲಿ ಇದನ್ನು ನೆಟ್ಟರೆ ಅವನ ಕೀರ್ತಿಯು ವೃದ್ಧಿಯಾಗುವುದು. ಶ್ರಾವಣಮಾಸದಲ್ಲಿ ನೆಡುವುದರಿಂದ ಶ್ರೇಷ್ಠವಾದ ಗತಿಯು ಲಭಿಸುವುದು. ಭಾದ್ರಪದಮಾಸದಲ್ಲಿ ನೆಡುವುದರಿಂದ ಅವನಿಗೆ ಧನಾಗಮವುಂಟುಮಾಡುವುದು. ಆಶ್ವಯುಜಕಾರ್ತಿಕಮಾಸಗಳಲ್ಲಿ ತುಲಸಿ ನೆಡುವವರಿಗೆ ಸರ್ವವಿಷಯದಲ್ಲೂ ಕ್ಷೀಣತೆಯುಂಟಾಗುವುದು. ಲೋಕದಲ್ಲಿ ಮೂರುಬಗೆ ತುಳಸಿಗಳಿವೆ. ಕೃತಯುಗದಲ್ಲಿ ಬಿಳಿಯತುಳಸಿ (ಶ್ರೀತುಲಸಿ) ಶ್ರೇಷ್ಠವಾದುದು.

ಕಿಂಚಿಚ್ಛೇದಂ ಚ ಯಃ ಕುರ್ಯಾದಶ್ವತ್ಥಸ್ಯ ವಟಸ್ಯ ಚ ।
ಶ್ರೀವೃಕ್ಷಸ್ಯ ಚ ವಿಪ್ರೇಂದ್ರಾಃ ಸ ಭವೇದ್ಬ್ರಹ್ಮಘಾತಕಃ ॥ ೫೯ ॥

ಮೂಲಚ್ಛೇದೇನ ವಿಪ್ರೇಂದ್ರಾಃ ಕುಲಪಾತೋ ಭವೇದನು ।
ವೃಕ್ಷಚ್ಛೇದೀ ಭವೇನ್ಮೂಕಃ ಆಧಿವ್ಯಾಧಿಶತಂ ಭಜೇತ್ ॥
ಸಾಯಂಪ್ರಾತಶ್ಚ ಘರ್ಮಾಂತೇ ಶೀತಕಾಲೇ ದಿನಾಂತರೇ ॥ ೬೦ ॥

ಫಲಮಾಮಕುಲತ್ಥಶ್ಚ ಮಾಷೋ ಮುದ್ಗಾಸ್ತಿಲಾ ಯವಾಃ ।
ನೃತ್ಯಗೀತಪಯಃಕೇಶಫಲಪುಷ್ಪಪ್ರದೋ ಭವೇತ್ ॥ ೬೧ ॥

ಅವಿಕಾಕಸಕ್ತುಚೂರ್ಣಂ ಯವಚೂರ್ಣಾನಿ ಯಾನಿ ಚ ।
ಗೋಮಾಂಸಮುದಕಂ ಚೈವ ಸಪ್ತರಾತ್ರಂ ನಿಧಾಪಯೇತ್ ॥ ೬೨ ॥

---

೫೯. ಎಲೈ ವಿಪ್ರೋತ್ತಮರೇ! ಕೇಳಿ ಅಶ್ವತ್ಥ, ಆಲ, ಬಿಲ್ವ ಮುಂತಾದ ಮರಗಳ ಕೊಂಬೆಯನ್ನು ಕತ್ತರಿಸಿವರೂ ಬ್ರಹ್ಮಹತ್ಯಾದೋಷ ಬರುವುದು.

೬೦. ಹೀಗಿರುವಲ್ಲಿ ಅವುಗಳನ್ನು ಬುಡಕ್ಕೇ ಕಡಿದರೆ, ಕಡಿದವನ ಕುಲವೇ ನಾಶವಾಗುವುದು. ಗಿಡದ ಒಂದು ಕೊಂಬೆಯನ್ನು ಛೇದಿಸಿದವನಿಗೆ ಮೂಕತ್ವವುಂಟಾಗುವುದು. ಮತ್ತು ಅವನಿಗೆ ನೂರಾರು ಆಧಿವ್ಯಾಧಿಗಳು ಸಂಭವಿಸುವುವು. ಅಂಥ ಅವಶ್ಯಬಿದ್ದರೆ ಬೇಸಿಗೆಯ ಕಾಲದಲ್ಲಿ ಬಿಸಿಲು ತಂಪಿದ ವೇಳೆಯಲ್ಲಿ ಎಂದರೆ ಬೆಳಿಗ್ಗೆ ಸಂಜೆಗಳಲ್ಲಿಯೂ, ಛಳಿಗಾಲದಲ್ಲಿಯೂ, ಬಿಸಿಲಿರುವಾಗ ಮಧ್ಯಾಹ್ನದ ವೇಳೆಯಲ್ಲಿಯೂ ಕೊಂಬೆಯನ್ನು ಛೇದಿಸಬಹುದು.

೬೧ ಹುರಳಿ, ಉದ್ದು, ಹೆಸರು, ಎಳ್ಳು, ಜವೆಗೋಧಿ ಇವುಗಳನ್ನು ಬಿತ್ತಿ ಹಸಿಯಕಾಯಿ ದೊರೆಯುವಂತೆ ಮಾಡಿದರೆ ಇದರ ಫಲದಿಂದ ನೃತ್ಯದರ್ಶನ, ಗೀತಶ್ರವಣ, (ಕ್ಷೀರ) ಪಯಃಪಾನ, ಕೇಶಸಂಸ್ಕಾರ, ರಸಾಲಫಲ, ಮಲ್ಲಿಕಾದಿ ಪುಷ್ಪಗಳು ಇವುಗಳ ವೃದ್ಧಿಯನ್ನು ಕೊಡುವುದು.

೬೨. ಸ್ವಲ್ಪ ಅವಿಕಾಕದಪುಡಿಯನ್ನೂ ಜವೆಗೋಧಿಹಿಟ್ಟು ಅಥವಾ ಅಕ್ಕಿಯ ಹಿಟ್ಟನ್ನೂ ಗೋಮಾಂಸವನ್ನೂ ನೀರನ್ನೂ ಸೇರಿಸಿ ಏಳುಅಹೋರಾತ್ರಿಗಳ ಕಾಲ ಇಟ್ಟಿದ್ದು ಅನಂತರ ಗಿಡಕ್ಕೆ ಹಾಕಬೇಕು.

**ತಮೇಕಂ ಸರ್ವವೃಕ್ಷಾಣಾಂ ಫಲಪುಷ್ಪಾದಿ ವೃದ್ಧಿದಂ ।**
**ರೋಹಿಮತ್ಸ್ಯಸ್ಯ ಪಿತ್ತಾನಿ ಧಾನ್ಯಾಕಂ ತತ್ರ ಸ್ಥಾಪಯೇತ್ ॥ ೬೩ ॥**

**ತೇನೋದಕಾದಿಸೇಕಶ್ಚ ಕೃತೋ ವೈ ವೃದ್ಧಿಮಾದಿಶೇತ್ ।**
**ತಿತ್ತಿಡೀಬೀಜಮಾದಾಯ ಇಕ್ಷುದಂಡೇನ ಮರ್ದಯೇತ್ ॥ ೬೪ ॥**

**ತೇನಾಶೋಕೇ ಪ್ರಸೇಕಃ ಸ್ಯಾತ್ಸಹಕಾರಸ್ಯ ವೃದ್ಧಿಮಾನ್ ।**
**ನಾರಿಕೇಲೋಕದಂ ಚೈವ ಮಾಕ್ಷಿಕೈಃ ಸಹ ಸೇಚಯೇತ್ ॥ ೬೫ ॥**

**ದೋಹದಂ ಸರ್ವವೃಕ್ಷಾಣಾಂ ಪೂಗಾದೀನಾಂ ವಿಶೇಷತಃ ।**
**ದಶಶಿರಾಬೀಜಯುತಾದಭಿಷೇಕಾಚ್ಚ ಜೀವತಿ ॥ ೬೬ ॥**

**ಪ್ರಾಕ್ಪ್ರಸೂತಿರ್ಗವಾದೀನಾಂ ಛಾಗಾದಿಮಹಿಷಸ್ಯ ಚ ।**
**ಜರಾಯುತೋಯಂ ವೃಕ್ಷಾಗ್ರೇ ಸ್ಥಾಪಯೇದವಿಚಾರಯನ್ ॥ ೬೭ ॥**

---

೬೩. ಇದು ಮುಖ್ಯವಾಗಿ ಸಮಸ್ತಜಾತಿಯ ವೃಕ್ಷಗಳಲ್ಲಿ ಫಲಪುಷ್ಪ ಮುಂತಾದುವು ಹೆಚ್ಚಾಗಿ ಬಿಡುವಂತೆ ಮಾಡುವುದು. ರೋಹಿಮತ್ಸ್ಯದ ಪಿತ್ತಕೋಶವನ್ನೂ, ಕೊತ್ತಂಬರಿಯನ್ನೂ ಅದಕ್ಕೆ ಬೆರಸಿ ಹಾಕಬಹುದು.

೬೪. ಹೀಗೆ ಇವೆರಡನ್ನೂ ಬೆರಸಿ ನೆನಸಿದ ನೀರನ್ನು ಚುಮುಕಿಸಿದರೆ ಫಲಪುಷ್ಪವೃದ್ಧಿಯಾಗುವುದೆಂದು ತಿಳಿಯಬೇಕು. ತಿತ್ತಿಡಿಯ ಬೀಜವನ್ನು ತೆಗೆದುಕೊಂಡು ಕಬ್ಬಿನ (ಕೋಲಿ) ತುಂಡಿನೊಡನೆ ಜಜ್ಜಬೇಕು.

೬೫. ಅದನ್ನು ಜಜ್ಜಿ ಕದರಿವ ನೀರನ್ನು ಅಶೋಕವೃಕ್ಷದ ಮೇಲೆ ಎರಚಿದರೆ ಪುಷ್ಟಿಸುವುದು. ಸಿಹಿಮಾವಿನಮರವನ್ನು ಬೆಳೆಯಿಸಬೇಕೆಂಬ ಇಚ್ಛೆಯುಳ್ಳವನು, ಎಳನೀರಿಗೆ ಜೇನುತುಪ್ಪವನ್ನು ಬೆರಸಿ ಅದರ ಬುಡದಲ್ಲಿ ಚುಮುಕಿಸಬೇಕು.

೬೬. ಅಡಕೆ ಮೊದಲಾದ ಎಲ್ಲ ಗಿಡಗಳಿಗೂ ಕಸಿಮಾಡಬೇಕಾದರೆ, ಹತ್ತು ಶಿರಾಬೀಜಗಳನ್ನು ಹುಡಿಮಾಡಿ ನೀರಿನಲ್ಲಿ ಬೆರಸಿ ಗಿಡದ ಮೇಲೆಲ್ಲಾ ಬೀಳುವಂತೆ ಎರಚಿದರೆ ಒಣಗಿಹೋಗುತ್ತಿದ್ದ ಮರಗಳೂ ಸಹ ಬದುಕುತ್ತವೆ.

೬೭. ಹಸು ಮೊದಲಾದುವೂ, ಆಡು, ಎಮ್ಮೆ, ಮುಂತಾದುವೂ ಕರುಹಾಕಿದಾಗ ಅದರ ಜರಾಯುವೆಂಬ ಗರ್ಭಕೋಶವನ್ನು ತೊಳೆದ ನೀರನ್ನು ಗಿಡದ ಮೇಲೆ ಸುರಿಯಬೇಕು. ಈ ಕೆಲಸಮಾಡುವುದಕ್ಕೆ ವಿಚಾರವೇ ಮಾಡಬೇಕಾಗಿಲ್ಲ.

**ಪರಸ್ಯ ಸಹಕಾರಸ್ಯ ಫಲಂ ಸ್ಯಾನ್ನಾತ್ರ ಸಂಶಯಃ ।**
**ಮೇಷಸ್ಯ ಚ ವಿತಾಲಸ್ಯ ಯವಾಗೂಂ ಚ ಸಮಾಹರೇತ್ ॥ ೧೮ ॥**

**ತತ್ರ ಮಾಸೈಸ್ಸರ್ಷಪೈಶ್ಚ ಪೂರಯೇನ್ಮರ್ದಯೇತತ್ತಃ ।**
**ಗುವಾಕವೃಕ್ಷಕಂ ದೇವ ಘರ್ಷಯೇನ್ಮರ್ದಯೇತ್ರಿಭಿಃ ॥ ೧೯ ॥**

**ಮೃತೋಽಪಿ ಜೀವಯೇಚ್ಛೀಘ್ರಂ ಮ್ರಿಯಮಾಣೋಽಪಿ ಜೀವತಿ ।**
**ನಿಂಬಪತ್ರಂ ಯೋಗಪತ್ರಂ ಶತಾವರಿಪುನರ್ನವಾಂ ॥ ೨೦ ॥**

**ಕ್ಷೀರಿಕಾತಾಮ್ರಿಕೈಃ ಪತ್ರೈರ್ಧೂಮಂ ದದ್ಯಾದ್ದಿನತ್ರಯಂ ।**
**ಸಹಕಾರಸ್ಯ ಮೂಲೇನ ಕೀಟರೋಧೋ ನ ಜಾಯತೇ ॥ ೨೧ ॥**

**ತತಃ ಪ್ರಾಧಾನ್ಯತೋ ವಕ್ಷ್ಯೇ ದ್ರುಮಾಣಾಂ ದೋಹದಾನ್ ಯಥಾ ।**
**ಮಾತ್ಸ್ಯೋದಕೇನ ಸಿಕ್ತೇನ ಆಮ್ರಾಣಾಂ ವೃದ್ಧಿರಿಷ್ಯತೇ ॥ ೨೨ ॥**

---

೧೮. ಸಿಹಿಮಾವಿನಮರವು ಸ್ವಲ್ಪಫಲ ಬಿಡುತ್ತಿದ್ದಾಗ ಹೀಗೆ ಮಾಡಿದರೆ ಸಮೃದ್ಧಿಯಾಗಿ ಫಲಬಿಡುವುದು. ಮೇಷಕ್ಕೂ ವಿತಾಳಕ್ಕೂ ಗಂಜಿಯನ್ನು ಹಾಕಬೇಕು.

೧೯. ಅದರೊಳಗೆ ಕೆಲವು ತಿಂಗಳೊಳಗೆ ಸಾಸುವೆಯನ್ನು ತುಂಬಬೇಕು. ಅನಂತರ ಆದನ್ನು ಅರೆದು ಹುಡಿಮಾಡಬೇಕು. ಗುವಾಕ (ಖಪುರ–ಅಡಕೆಯಮರ) ವನ್ನು ಈ ಮೂರರಿಂದ ತಿಕ್ಕಿಸಬೇಕು.

೨೦. ಹೀಗೆ ಮಾಡಿದರೆ ಸತ್ತುಹೋದಂತೆ ತೋರುತ್ತಿದ್ದ ಗಿಡವೂ ಬದುಕುವುದಲ್ಲದೆ, ಸಾಯುವ ಹಾಗಿರುವ ಗಿಡಗಳೂ ಕುದುರಿಕೊಳ್ಳುವುವು. ಬೇವಿನಎಲೆ, ಯೋಗಪತ್ರ (ಯುಗಪತ್ರ ಕೆಂಪುಕಾಂಚನದಗಿಡ) ಆಷಾಢೀಬೇರು, ಕೊಮ್ಮೆಬೇರು ಇವನ್ನೂ

೨೧. ಮತ್ತು ಹಾಲೆಗಿಡ, ತಾಮ್ರಿಕಾ (?) ಇವುಗಳ ಎಲೆಗಳನ್ನೂ ತಂದು ಮಾವಿನಮರದ ಬುಡದಲ್ಲಿ ಮೂರುದಿನ ಹೊಗೆಹಾಕಬೇಕು. ಹೀಗೆ ಮಾಡುವುದರಿಂದ ಹುಳುಗಳ ಬಾಧೆಯುಂಟಾಗುವುದಿಲ್ಲ.

೨೨. ಇಲ್ಲಿಂದ ಮುಂದೆ ಗಿಡಗಳಿಗೆ ಸಂಸ್ಕಾರವನ್ನುಂಟುಮಾಡುವ ಗೊಬ್ಬರಗಳ ವಿಚಾರವನ್ನು ಮುಖ್ಯವಾಗಿ ಹೇಳುತ್ತೇನೆ. ಮೀನನ್ನು ಉಜ್ಜಿದ ನೀರನ್ನು ಹುಯ್ದರೆ ಮಾವಿನಗಿಡವು ಹುಲುಸಾಗಿ ಫಲಿಸುವುದು.

**ಪಕ್ವಾಮ್ರಂ ರುಧಿರಂ ಚೈವ ದಾಡಿಮಾನಾಂ ಪ್ರಶಸ್ಯತೇ ।**
**ಯವೋದಕಂ ಸಗೋಮಾಂಸಂ ಕೇತಕೀನಾಂ ಪ್ರಶಸ್ಯತೇ ॥ ೭೩ ॥**

**ಕ್ಷೀರಕೇ ಬಲವೃದ್ಧಿಃ ಸ್ಯಾತ್ತಿಂದುಕಃ ಕರಮರ್ದಕಃ ।**
**ಮಾಂಸಪೂತಿರಸಾಮಜ್ಜಾ ಶೋಕತಾಲೇ ಗುವಾಕಕೇ ॥ ೭೪ ॥**

**ಸಪೂತಿಮಾಂಸಂ ಸಘೃತಂ ನಾರಿಕೇಲಸ್ಯ ರೋಹಿತಂ ।**
**ಮಧುಯುಷ್ಟ್ಯುದಕೈಃ ಸೇಕಾತ್ಸಾಮಾನ್ಯಂ ನಿಹಿತಂ ಭವೇತ್ ॥ ೭೫ ॥**

**ಕಪಿತ್ಥಬಿಲ್ವಯೋರ್ಮೂಲಂ ಗುಡತೋಯೇನ ಸೇಚಯೇತ್ ।**
**ಜಾತೀನಾಂ ಮಲ್ಲಿಕಾನಾಂ ಚ ಕುಂದಾನಾಂ ರಂತಿಕಸ್ಯ ಚ ॥**
**ಗಂಧತೋಯಂ ಸಿತಕರಂ ಸರ್ಪನಿರ್ಮೋಕಧೂಪಕಂ ॥ ೭೬ ॥**

---

೭೩. ಕಳಿತ ಮಾವಿನಹಣ್ಣು, ಮತ್ತು ರಕ್ತ ಇವನ್ನು ಹಾಕುವುದು ದಾಳಿಂಬೆಯ ಗಿಡಕ್ಕೆ ಉತ್ತಮವಾದ ಗೊಬ್ಬರ. ಗೋಮಾಂಸ (ಜಟಾಮಾಂಸಿ) ಸಹಿತವಾದ ಕಲಗಚ್ಚು ತಾಳೆಯಗಿಡಕ್ಕೆ ಶ್ರೇಷ್ಠವಾದ ಗೊಬ್ಬರವೆನಿಸುವುದು.

೭೪. ಇದೇ ಗೊಬ್ಬರವನ್ನೇ ಕ್ಷೀರವೃಕ್ಷಕ್ಕೆ ಹಾಕಿದರೆ ಹೆಚ್ಚುಫಲಕೊಡುವುದು. ತಿಂದುಕ (ತೂಬರ) ಕರಮರ್ದಕ (ಕಮರದ್ರಾಕ್ಷಿ) ಗಿಡಗಳಿಗೆ ಹಾಕಿದರೂ ಅಷ್ಟೇಫಲ ಕೊಡುವುದು. ದುರ್ಗಂಧಯುಕ್ತವಾದ ಮಾಂಸ ತೊಳೆದ ದ್ರವವೂ, ಕೊಬ್ಬೂ ಅಶೋಕವೃಕ್ಷ, ತಾಳೆಮರ, ಅಡಕೆಮರ ಇವಕ್ಕೆ ಉತ್ತಮವಾದ ಗೊಬ್ಬರ.

೭೫. ತುಪ್ಪಸಹಿತವಾದ ಜಟಾಮಾಂಸಿ, ದುರ್ವಾಸನೆಯ ಮಾಂಸ, ರಕ್ತ, ಅತಿಮಧುರದ ಚೂರ್ಣ, ಮಿಶ್ರವಾದ ನೀರು ಇವನ್ನು ತೆಂಗಿನಗಿಡಕ್ಕೆ ಚುಮುಕಿಸಿದರೆ ಸಾಮಾನ್ಯ ಗೊಬ್ಬರ ಹಾಕಿದಹಾಗೆ.

೭೬. ಬಿಲ್ವಪತ್ರೆಯಮರ, ಬೇಲದಮರ ಇವುಗಳ ಬುಡಕ್ಕೆ, ಬೆಲ್ಲದ ನೀರನ್ನು ಚುಮುಕಿಸಬೇಕು. ಜಾಜಿ, ಮಲ್ಲಿಗೆ, ಮಲ್ಲೆ, ರಂತಿಕ ಈ ಹೂವುಗಳ ಬಳ್ಳಿಗಳಿಗೆ ಶ್ರೀಗಂಧದ ನೀರನ್ನು ಎರಚಿ ಹಾವಿನ ಪೊರೆಯ (ಧೂಪ) ಹೊಗೆಯನ್ನು ಹಾಕಬೇಕು.

ಕೂರ್ಮಮಾಂಸಮನ್ನರಸಂ ವಿಡಂಗಸ್ಯ ಚ ಪುಷ್ಪಕಂ ।
ರಥ್ಯಾವೃಕ್ಷೇ ಪ್ರತಿಷ್ಠಾಪ್ಯ ಫಲವಾನ್ ಜಾಯತೇ ತತಃ ॥ ೭೭ ॥

ವಾತಸರ್ಪಸ್ಯ ನಿರ್ಮೋಕಂ ತಗರಾಜಗವಸ್ಯ ಚ ।
ದದ್ಯಾದ್ಧೂಪಂ ಧಾನ್ಯಮಧ್ಯೇ ಧಾನ್ಯವೃದ್ಧಿಶ್ಚ ಜಾಯತೆ ॥ ೭೮ ॥

ಮಯೂರಪತ್ರಮಾದಾಯ ಚ್ಛಾಗರೋಮಾಣಿ ಸಪ್ತ ವೈ ।
ಏರಂಡತೈಲಯೋಗೇನ ದದ್ಯಾದ್ಧೂಪಂ ನಿಶಾಗಮೇ ॥ ೭೯ ॥

ಹಿಂಗುಕುಸುಮಸಂಯೋಗಾನ್ಮೂಷಿಕಾಣಾಂ ಪರಿನ್ಯಸೇತ್ । ॥ ೮೦ ॥

ಕಪಿವಿಷ್ಠಾಮೃಚ್ಛವಿಷ್ಠಾಂ ಕೃತ್ತಿಕಾಯಾಂ ಸಮಾಹರೇತ್ ।
ನಿಶಾತೋಯೇ ಪ್ರಸೇಕಃ ಸ್ಯಾತ್ ತತ್ಕ್ಷಾತ್ರಮೂಲಕಂ ಹರೇತ್ ॥ ೮೧ ॥

---

೭೭. ಆಮೆಯಮಾಂಸ, ಅನ್ನರಸ, ವಾಯುವಿಳಂಗದ ಗಿಡದಹೂವು, ಇವನ್ನು ಸೇರಿಸಿ ರಾಜಬೀದಿಯಮರಕ್ಕೆ ಹಾಕಿದರೆ, ಅದೂ ಸಹ ಫಲಬಿಡುತ್ತದೆ.

೭೮. ವಾತಸರ್ಪದ ಪೊರೆ, ತಗರ, ಅಜಗವ, ಇವನ್ನು ಸೇರಿಸಿ ಬಿತ್ತನೆಯ ಧಾನ್ಯದ ಮಧ್ಯದಲ್ಲಿ ಈ ಧೂಪದ ಹೊಗೆ ಹಾಕಿ ಅದನ್ನು ಬಿತ್ತಿದರೆ ಹೆಚ್ಚು ಬೆಳೆಯಾಗುತ್ತದೆ.

೭೯–೮೦. ನವಿಲುಗರಿಯನ್ನೂ ಏಳು ಆಡಿನ ಕೂದಲನ್ನೂ ತೆಗೆದುಕೊಂಡು ಸ್ವಲ್ಪ ಹರಳೆಣ್ಣೆಯಿಂದ ಕಲಸಿ, ಇಂಗು ಕುಸುಮೆಯಬೀಜ, ಇವುಗಳನ್ನೂ ಬೆರಸಿ ಸಂಧ್ಯಾಕಾಲದ ಹೊತ್ತು ಹೊಗೆ ಹಾಕಬೇಕು. ಹೀಗೆ ಧೂಪಹಾಕಿದರೆ ಇಲಿಗಳ ಕಾಟವು ನಿರ್ಮೂಲವಾಗುವುದು.

೮೧. ಆನೆಯ ಲದ್ದಿ, ಕರಡಿಯ ಲದ್ದಿ, ಇವುಗಳನ್ನು ಕೃತ್ತಿಕಾನಕ್ಷತ್ರದಲ್ಲಿ ತಂದು, ರಾತ್ರಿಯವೇಳೆ ನೀರಿನಲ್ಲಿ ಕದರಿ ಹುಯ್ಯಬೇಕು. ಹೀಗೆ ಹುಯ್ದರೆ ರಾಜಮೂಲಕಗಳನ್ನು ಪರಿಹರಿಸುವುದು.

**ಅಶ್ವತ್ಥಮೂಲೇ ದಶಹಸ್ತಮಾತ್ರಂ ಕ್ಷೇತ್ರಂ ಪವಿತ್ರಂ ಪುರುಷೋತ್ತಮಸ್ಯ**
**ಅಶ್ವತ್ಥಛಾಯಾಸಲಿಲಸ್ಯಮಧ್ಯೇ ವಿಶೇಷತೋ ವೈ ತ್ರಿಪಥೈವ ಗಂಗಾ ॥೮೨॥**

**ಬಾಹುವಿಂಶಾಂತರೇ ರೋಪೇತ್ಸಹಕಾರಂ ಸಧರ್ಮವಿತ್ ।**
**ಕೆಲಾಹಸ್ತಾಂತರಂ ಧಾತ್ರೀಂ ಬಕುಲಂ ವಂಜುಲಂ ತಥಾ ॥ ೮೩ ॥**

**ಶ್ರೀಪರ್ಣಿಕಂ ಚ ಪುನ್ನಾಗಂ ಶ್ರೀವೃಕ್ಷಂ ದ್ವಿಗುಣಂ ತರೌ ।**
**ಹಸ್ತೇ ಶೈಲಮಯೇ ಚೈವ ಉತ್ತಮಂ ಮಾನಮೀರಿತಂ ॥ ೮೪ ॥**

**ಶೈಲೇಷ್ಟಕಾದಿರಚಿತೇ ಚತುರ್ಹಸ್ತೇ ತು ಸಂಮಿತೇ ।**
**ವಾಪ್ಯಾದೀನಾಂ ತು ಕೂಪಾನಾಮೇಕವೃಕ್ಷಾದಿಕಸ್ಯ ಚ ॥ ೮೫ ॥**

---

೮೨. ಅಶ್ವತ್ಥವೃಕ್ಷದ ಬುಡದ ಸುತ್ತ ಹತ್ತುಮೊಳದ ಪ್ರಮಾಣದವರೆಗೆ ವಿಷ್ಣು ಕ್ಷೇತ್ರವೆನಿಸಿ ಪರಿಶುದ್ಧವಾಗಿರುವುದು. ಅಶ್ವತ್ಥವೃಕ್ಷದ ನೆರಳು ನೀರಿನಲ್ಲಿ ಬಿದ್ದಿದ್ದರೆ ಆ ನೀರು ತ್ರಿಪಥೆಯಾದ ಗಂಗೆಯಂತೆ ವಿಶೇಷ ಶುದ್ಧವಾದುದೆನಿಸುವುದು.

೮೩. ಧರ್ಮಜ್ಞನಾದ ಮನುಷ್ಯನು ಮಾವಿನ ಸಸಿಗಳನ್ನು ನಾಟುವಾಗ ಒಂದ ಕ್ಕೊಂದಕ್ಕೆ ಮಧ್ಯೆ ಇಪ್ಪತ್ತುಹಸ್ತ ಅಂತರವಿರುವಂತೆ ನೆಡಬೇಕು. ನೆಲ್ಲಿಯಮರ, ಪಗಡೆಯಮರ, ವಂಜುಳ (ನೀರಂಜಿ) ವೃಕ್ಷ, ಇವುಗಳನ್ನು ನೆಡುವಾಗ ಮಧ್ಯೆ ಹದಿನಾರುಮೊಳ ಅಂತವಿರುವಂತೆ ನೆಡಬೇಕು.

೮೪. ಶ್ರಿಪರ್ಣಿಕ (ತೇಗ) ಪುನ್ನಾಗ, ಬಿಲ್ವ (ಶ್ರೀವೃಕ್ಷ) ಈ ಮರಗಳನ್ನು ನೆಡುವುದಾದರೆ ಅದರ ಎರಡರಷ್ಟು ಜಾಗವನ್ನು ಬಿಡಬೇಕು. ಕಲ್ಲುಮಿಶ್ರವಾದ ನೆಲ ದಲ್ಲಿ ಈ ಅಂತರದ ಜತೆಗೆ ಒಂದುಮೊಳ ಆಳವಾಗಿ ಗುಂಡಿತೋಡಿ ನೆಡುವುದು ಉತ್ತಮವಾದ ಅಳತೆ ಎಂದು ಹೇಳಬೇಕು.

೮೫. ಸೇದುವ ಬಾವಿ, ಇಳಿಯುವ ಬಾವಿಗಳ ಸಮೀಪದಲ್ಲಿ ಕಲ್ಲು ಇಟ್ಟಿಗೆ ಗಳಿಂದ ನಾಲ್ಕುಮೊಳ ಪ್ರಮಾಣವುಳ್ಳ ಹಾಗೆ ಚತುರ್ರಸವಾಗಿ ಕಟ್ಟೆಯನ್ನು ಮಾಡಿ ಅಲ್ಲಿ ಒಂದು ಗಿಡವನ್ನು ನೆಡಬೇಕು.

ಶ್ರೀವಿಷ್ಣೋರ್ವಟವೃಕ್ಷೇ ಚ ವರುಣೇಷ್ಟಂ ಚ ಕೂಪಕೇ ।
ಗಣೇಶಂ ಪೂಜಯೇತ್ಕುಂಭಂ ದಿಕ್ಪಾಲಾಂಶ್ಚ ವಿಶೇಷತಃ ॥ ೮೬ ॥

ಅಗ್ನಿಕಾರ್ಯಂ ವಿನಾ ಕುರ್ಯಾತ್ಪ್ರಕುರ್ಯಾಚ್ಚ ಸತಾಂ ಗತಿಂ ।
ಶ್ರುತ್ವಾ ಕೃತಿಂ ವಿಧಾನೇನ ಅನ್ಯೇಷಾಂ ವಾ ತಥೋದ್ಭವಂ ॥ ೮೭ ॥

ಅನ್ಯೇಷಾಂ ಚೈವ ವೃಕ್ಷೇ ಚ ತಥಾ ಚ ತುಲಸೀವನೇ ।
ಕುಂಭೇ ವನಸ್ಪತಿಃ ಸ್ಥಾಪ್ಯಃ ಪೂಜಯೇದ್ಧೋಮಯೇತ್ತತಃ ॥ ೮೮ ॥

ವೃಕ್ಷಾನ್ವಾನೇನ ಸಂಸ್ಕೃತ್ಯ ವಾಸೋಭಿರಭಿವೇಷ್ಟಯೇತ್ ।
ಶುಚ್ಯಮಾನಮಿದಂ ಜ್ಞೇಯಮನ್ಯೇಷಾಂ ವಾ ತಥೋದ್ಭವಂ ॥ ೮೯ ॥

---

೮೬. ಕೂಪದ ದಡದಲ್ಲಿ ಶ್ರೀವಿಷ್ಣುವಿಗೂ, ವರುಣನಿಗೂ ಇಷ್ಟವಾದ ವಟವೃಕ್ಷವನ್ನು ನೆಡಬೇಕು. ಪೂಜಾರ್ಥವಾಗಿರಿಸಿದ ಕಲಶದಲ್ಲಿ ಗಣೇಶನನ್ನೂ, ದಿಕ್ಪಾಲಕರನ್ನೂ ಆವಾಹಿಸಿ ವಿಶೇಷವಾಗಿ ಪೂಜಿಸಬೇಕು.

೮೭. ಅಗ್ನಿಕಾರ್ಯಮಾಡಲು ಮುಂಚೆ ಈ ಕರ್ಮಮಾಡಿ ವಿದ್ಯಮಾನ ಪ್ರಾಣಿಗಳಿಗೆ ಗತಿಯನ್ನು ಕಲ್ಪನೆಮಾಡಬೇಕು. ಈ ಕಾರ್ಯವನ್ನು ಮಾಡತಕ್ಕವನು

೮೮. ವಿಧಿಪ್ರಕಾರ ಇತರ ವೃಕ್ಷಗಳ ಸ್ಥಾಪನಕ್ರಮವೂ ತುಲಸೀವನಸ್ಥಾಪನದ ವಿಚಾರದಂತೆಯೇ ಎಂದು ತಿಳಿದುಕೊಳ್ಳಬೇಕು. ಕುಂಭ (ಪೂಜಾಕಲಶ) ದಲ್ಲಿ ಮಾವಿನಕೊನೆ ಮುಂತಾದ ವನಸ್ಪತಿಯನ್ನು ಸ್ಥಾಪಿಸಿ ಪೂಜೆಮಾಡಿ ಬಳಿಕ ಹೋಮ ಮೊದಲಾದುದನ್ನು ನಡೆಸಬೇಕು.

೮೯. ಈ ವಿಧಾನದಿಂದ ವೃಕ್ಷಗಳಿಗೆ ಸಂಸ್ಕಾರವನ್ನು ನೆರವೇರಿಸಿ ಬಳಿಕ ಅವಕ್ಕೆ ವಸ್ತ್ರಗಳನ್ನು ಸುತ್ತಬೇಕು. ಇದು ಶ್ರೇಷ್ಠವಾದ ಕ್ರಮವೆಂದು ತಿಳಿಯಬೇಕು.

**ತುಲಸ್ಯಾಃ ಸಹಕಾರಸ್ಯ ಬ್ರಹ್ಮವೃಕ್ಷಸ್ಯ ಚೈವ ಹಿ ।**
**ಅಶ್ವತ್ಥಸ್ಯ ವಟಸ್ಯೈವ ಸ್ವರ್ಣತಾಮಥ ವೇಧಯೇತ್ ॥ ೯೦ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ದಶಮೋಽಧ್ಯಾಯಃ.**



೯೦. ತಾವಾಗಿ ಹುಟ್ಟಿಕೊಂಡ ಇತರ ವೃಕ್ಷಗಳಿಗೂ ಹೀಗೆಯೇ ಸಂಸ್ಕಾರವು ಶುಚಿಪ್ರದ. ತುಲಸಿ, ಸಿಹಿಮಾವು, ಬ್ರಹ್ಮಜ್ಞಾನದಾಯಕವಾದ ಪ್ಲಕ್ಷ (ಬಸರಿಯ ಮರ) ಅರಳಿ, ಆಲ ಈ ಗಿಡಗಳಿಗೆ ಚಿನ್ನದ ಶಲಾಕೆಯಿಂದ ಚುಚ್ಚಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ಪ್ರಥಮಭಾಗೇ

## ಏಕಾದಶೋಽಧ್ಯಾಯಃ

---

॥ ಸೂತ ಉವಾಚ ॥

ಅಥ ತಂತ್ರವಿಧಿಂ ವಕ್ಷ್ಯೇ ಪುರಾಣೇಷ್ವಪಿ ಗೀಯತೇ ।
ತಂತ್ರೇ ಚೈವ ಪ್ರತಿಷ್ಠಾಂ ಚ ಕುರ್ಯಾತ್ಪುಣ್ಯತಮೇಽಹನಿ ॥ ೧ ॥

ಶತವೃಕ್ಷಕ್ಷುದ್ರವೃಕ್ಷೇ ದಶದ್ವಾದಶವೃಕ್ಷಕೇ ।
ದೃಷ್ಟಿಮಾತ್ರಾಂತರೇ ಸೇತೌ ಕೂಪಯಾಗೇ ಸಮುತ್ಸೃಜೇತ್ ॥ ೨ ॥

ನ ಕೂಪಮುತ್ಸೃಜೇಜ್ಜ್ಞಾತು ವೃಕ್ಷಯಾಗೇ ಕಥಂಚನ ।
ತುಲಸೀವನಯಾಗೇ ತು ನ ಚಾನ್ಯಂ ಯಾಗಮಾಚರೇತ್ ॥ ೩ ॥

---

## ಹನ್ನೊಂದನೆಯ ಅಧ್ಯಾಯ

೧. ಸೂತರು ಮುಂದುವರಿಸಿ ಹೇಳುತ್ತಾರೆ—ಪುರಾಣಗಳಲ್ಲಿ ಹೇಳಿರುವ ಪ್ರಕಾರ ತಂತ್ರವಿಧಿಯನ್ನು ಹೇಳುತ್ತೇನೆ ಕೇಳಿ. ಪಂಚಾಂಗಶುದ್ಧಿ ಇರುವ ಅತ್ಯಂತ ಶುಭದಿನದಲ್ಲಿ ತಂತ್ರವಿಧಿಪ್ರಕಾರವಾಗಿಯೇ ವೃಕ್ಷಾದಿಗಳನ್ನು ಪ್ರತಿಷ್ಠೆಮಾಡಬೇಕು.

೨. ಶತವೃಕ್ಷರೋಪಣ, ಕ್ಷುದ್ರವೃಕ್ಷರೋಪಣ, ದಶವೃಕ್ಷರೋಪಣ, ದ್ವಾದಶ ವೃಕ್ಷರೋಪಣ ಇವುಗಳಲ್ಲಿ ಗಿಡಗಳ ಮಧ್ಯೆ ಕಣ್ಣಿಗೆ ಕಾಣುವಷ್ಟು ಅಂತರ ಬಿಡಬೇಕು. ಸೇತುವೆಬಾವಿ ಇವುಗಳನ್ನು ರಚಿಸುವುದಾದರೆ ಸದ್ಯಃ ಇರುವ ಸೇತುವೆ, ಭಾವಿ ಇವುಗಳ ಸಮೀಪದಲ್ಲಿ ಮಾಡಬಾರದು.

೩. ವೃಕ್ಷರೋಪಣ ಮಾಡುವುದಾದರೆ ಯಾವಾಗಲೂ ಕೂಪಕ್ಕೆ ಬಹು ದೂರ ಸಾಗಿರುವಂತೆ ಮಾಡಬಾರದು. ತುಲಸೀ ವನಸ್ಥಾಪನ ಮಾಡುವುದರ ಜೊತೆಯಲ್ಲಿ ಇನ್ನು ಬೇರೆ ವೃಕ್ಷ ಮೊದಲಾದುವುಗಳನ್ನು ಸ್ಥಾಪನೆಮಾಡಬಾರದು.

**ತಡಾಗಯಾಗೇ ಸೇತ್ವಾದೀನ್ ನ ಚಾರಾಮೇ ಕದಾಚನ ।**
**ನ ಸೇತುಂ ದೇವಯಾಗೇ ತು ತಡಾಗಂ ನ ಸಮುತ್ಸೃಜೇತ್ ॥ ೪ ॥**

**ತಂತ್ರೇ ಶ್ರಾದ್ಧಂ ಪೃಥಙ್ನಾಸ್ತಿ ಕರ್ತೃಭಿರ್ಭೇದೇ ಪೃಥಗ್ಭವೇತ್ ।**
**ಶಿವಲಿಂಗಸ್ಥಾಪನಾಯಾಂ ನ ಚಾನ್ಯದ್ದೇವಸ್ಥಾಪನಂ ॥ ೫ ॥**

**ಸ್ವದೇಶೇ ವರ್ಜಯೇತ್ತಂ ತಂ ಸ್ವತಂತ್ರೇಣ ವಿಧೀಯತೇ ।**
**ವಿಪರೀತೇ ಕೃತೇ ಚಾಪಿ ಆಯುಃಕ್ಷಯ ಇತಿ ಸ್ಮೃತಿಃ ॥ ೬ ॥**

**ತಡಾಗೇ ಪುಷ್ಕರಿಣ್ಯಾಂ ವಾ ಆರಾಮೇऽಪಿ ದ್ವಿಜೋತ್ತಮಾಃ ।**
**ಮಾನಹೀನೇ ಮಾನಪೂರ್ಣೇ ದಶಹಸ್ತೇ ನ ದೂಷಣಂ ॥ ೭ ॥**

---

೪. ತಡಾಗಯಾಗ (ಕೆರೆಯಪ್ರತಿಷ್ಠೆ) ಮಾಡುವಾಗಲೂ, ಅದರ ಸೌಕರ್ಯಕ್ಕೆ ಬೇಕಾದ ಸೇತುವೆ ಇತ್ಯಾದಿಗಳನ್ನು ಪ್ರತಿಷ್ಠೆಮಾಡದೆ ಬಿಡಬಾರದು. ತೋಟವನ್ನು ಪ್ರತಿಷ್ಠೆಮಾಡುವಾಗಲೂ, ಅದಕ್ಕೆ ಅವಶ್ಯಕವಾದ ಸೇತುಪ್ರತಿಷ್ಠೆ ಮುಂತಾದ್ದನ್ನು ಮಾಡದೆ ಬಿಡಬಾರದು. ದೇವಯಾಗ ಎಂದರೆ ದೇವತಾಪ್ರತಿಷ್ಠೆ ಮಾಡುವ ಸಂದರ್ಭವಲ್ಲಿ ಅದರಜೊತೆ ತಡಾಗಪ್ರತಿಷ್ಠೆಯನ್ನು ಮಾಡದೆ ಬಿಡಬಾರದು.

೫. ಅನೇಕ ಜನರು ಒಟ್ಟಿಗೆಸೇರಿ, ಒಂದುಕೆರೆ, ತೋಟ, ಇವುಗಳನ್ನು ತಂತ್ರಕ್ರಮದಲ್ಲಿ ಪ್ರತಿಷ್ಠೆಮಾಡಿಸುವಾಗ ಪ್ರತಿಯೊಬ್ಬನೂ ಬೇರೆಬೇರೆಯಾಗಿ ಪೂಜಾಶ್ರಾದ್ಧಾದಿಗಳನ್ನು ಮಾಡಬೇಕಾಗಿಲ್ಲ. (ಮುಖಂಡನು ಮಾತ್ರ ಮಾಡಿದರೆ ಸಾಕು) ಕರ್ತೃಗಳು ಬೇರೆಬೇರೆಯಾಗಿ ಮಾಡಿಸಿದ್ದರೆ, ಪೂಜಾದಿಗಳು ಬೇರೆಬೇರೆ ಆಗಬೇಕು. ಶಿವಪ್ರತಿಷ್ಠೆ ಮಾಡುವುದರ ಜೊತೆಯಲ್ಲಿ ಬೇರೆ ದೇವರುಗಳನ್ನು ಪ್ರತಿಷ್ಠಿಸಬಾರದು.

೬. ಒಂದು ದೇವಾಲಯದಲ್ಲಿ ಮೂರ್ತಿಗಳನ್ನು ಪ್ರತಿಷ್ಠಾಪಿಸುವಾಗ ಆ ದೇವರಿಗೂ ಆ ದೇವಾಲಯಕ್ಕೂ ಉಕ್ತವಾದ ತಂತ್ರದಿಂದಲೇ ಪ್ರತಿಷ್ಠಿಸಬೇಕೇ ಹೊರತು ನಾನಾತಂತ್ರಗಳನ್ನೆಲ್ಲಾ ಮಿಶ್ರಮಾಡಿ ಪ್ರಯೋಗಿಸಬಾರದು. ಯಥೋಕ್ತವಾದ ತಂತ್ರಕ್ಕೆ ಅತಿರಿಕ್ತವಾಗಿ ಮಾಡುವುದರಿಂದ ಆಯುಸ್ಸು ಕ್ಷೀಣವಾಗುವುದೆಂದು ಸ್ಮೃತಿಯಲ್ಲಿ ಹೇಳಿದೆ.

೭. ಓ ಬ್ರಾಹ್ಮಣೋತ್ತಮರೇ ! ಕೇಳಿ ; ಕೆರೆಯಾಗಲಿ, ತೋಟವಾಗಲಿ, ಕೊಳವಾಗಲಿ ಹತ್ತುಹಸ್ತ ಪೂರ್ಣಅಳತೆ, ಅದಕ್ಕಿಂತ ಕಡಿಮೆ ಇರುವಾಗ ಪ್ರತಿಷ್ಠಾದಿಗಳನ್ನು ಮಾಡದಿದ್ದರೂ ದೂಷ್ಯವಲ್ಲ.

**ದ್ವಿಸಹಸ್ರಾಧಿಕಂ ಯತ್ರ ತತ್ಪ್ರತಿಷ್ಠಾಂ ಸಮಾಚರೇತ್ ।**
**ದಶದ್ವಾದಶವೃಕ್ಷೇ ಚ ಆರಾಮೇ ಪೂರ್ವವದ್ದ್ವಿಜಾಃ ॥ ೮ ॥**

**ಪ್ರತಿಷ್ಠಾಂ ಬಿಲ್ವವೃಕ್ಷೇ ಚ ಅನ್ಯಥಾ ಕರ್ಣವೇಧನಂ ।**
**ಕುರ್ಯಾದ್ಧೇಹದದಾನಂ ಚ ತತ್ಸನಿರ್ಮಂಥನಾದಿಕಂ ॥ ೯ ॥**

**ಅನಂತರಂ ಪ್ರದಾತವ್ಯಾ ಲಾಜಾಮೂರ್ಧ್ನ್ಯಕ್ಷತಾದಿಕಂ ॥ ೧೦ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ಏಕಾದಶೋಽಧ್ಯಾಯಃ.**



---

೮. ಸ್ವಾಮಿ ದ್ವಿಜರೇ! ಯಾವ ತೋಟದಲ್ಲಿ ಎರಡುಸಾವಿರಕ್ಕಿಂತ ಹೆಚ್ಚು ಮರಗಳನ್ನು ನೆಡಲಾಗಿದೆಯೋ ಅಲ್ಲಿ ಆರಾಮಪ್ರತಿಷ್ಠಾಕಾರ್ಯವನ್ನು ಮಾಡಲೇಬೇಕು. ಹತ್ತುಗಿಡ ಅಥವಾ ಹನ್ನೆರಡುಗಿಡ ಇದ್ದರೂ ಆರಾಮಪ್ರತಿಷ್ಠೆ ಮಾಡಬೇಕು.

೯. ಕೇವಲ ಬಿಲ್ವ ವೃಕ್ಷಗಳೇ ಇರುವ ಪಕ್ಷದಲ್ಲೂ, ಈ ರೀತಿ ಪ್ರತಿಷ್ಠೆಮಾಡಲೇಬೇಕು. ಹಾಗೆ ಮಾಡದೆಹೋದ ಪಕ್ಷದಲ್ಲಿ ಆ ವೃಕ್ಷಗಳಿಗೆ ಚಿನ್ನದ ಸಲಾಕೆಯಿಂದ ಚುಚ್ಚುವ ಸಂಸ್ಕಾರ ಮಾಡಬೇಕು.

೧೦. ವೃಕ್ಷಪ್ರತಿಷ್ಠೆ ಮಾಡುವ ಸ್ಥಳದಲ್ಲಿ ಮಣ್ಣನ್ನು ಚೆನ್ನಾಗಿ ತಳಮೇಲು ಆಗುವಂತೆ ಅಗೆದು ಗೊಬ್ಬರ ಮೊದಲಾದುವನ್ನು ಹಾಕಬೇಕು. ವೃಕ್ಷವನ್ನು ನಾಟಿದ ಅನಂತರ ಅದರ ಶಿರಸ್ಸಿನಲ್ಲಿ ಲಾಜಾಕ್ಷತೆ (ಅರಳು) ಮುಂತಾದುವನ್ನು ಎರಚಬೇಕು.

ಇಲ್ಲಿಗೆ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೊದಲನೆಯ ಭಾಗದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ಪ್ರಥಮಭಾಗೇ

## ದ್ವಾದಶೋಽಧ್ಯಾಯಃ

---

॥ ಸೂತ ಉವಾಚ ॥

ಪ್ರತಿಮಾಲಕ್ಷಣಂ ವಕ್ಷ್ಯೇ ಯಥಾಶಾಸ್ತ್ರಮತಂ ದ್ವಿಜಾಃ ।
ಪ್ರತಿಮಾಂ ಲಕ್ಷಣೈರ್ಹೀನಾಂ ಗೃಹೀತಾನ್ನೈವ ಪೂಜಯೇತ್ ॥ ೧ ॥

ಶೈಲಜಾ ದಾರುಜಾ ತಾಮ್ರಾ ಮೃದ್ಭವಾ ಸರ್ವಕಾಮದಾ ।
ಏಕಹಸ್ತಾ ದ್ವಿಹಸ್ತಾ ವಾ ಸಾರ್ಧಹಸ್ತಾ ತಥಾಥವಾ ॥ ೨ ॥

---

### ಹನ್ನೆರಡನೆಯ ಅಧ್ಯಾಯ

೧. ಪುನಃ ಸೂತರು ಋಷಿಗಳಿಗೆ ಹೇಳುತ್ತಾರೆ—ಎಲೈ ಬ್ರಾಹ್ಮಣಶ್ರೇಷ್ಠರೇ! ಕೇಳಿರಿ; ಶಾಸ್ತ್ರಮತಾನುಸಾರವಾಗಿ ಪ್ರತಿಮಾಲಕ್ಷಣವನ್ನು ಹೇಳುವೆನು. ಪ್ರತಿಮೆಯನ್ನು ತಾನು ಸ್ವೀಕರಿಸದಿದ್ದರೂ ಅದು ಲಕ್ಷಣಹೀನವಾಗಿದ್ದರೆ ಆ ಪ್ರತಿಮೆಯನ್ನು ಪೂಜಿಸಬಾರದು.

೨. ಕಲ್ಲು, ಮರ, ತಾಮ್ರ, ಮಣ್ಣು ಇವುಗಳಿಂದ ಪ್ರತಿಮೆಗಳನ್ನು ಮಾಡಬಹುದು. ಇವು ಸಮಸ್ತ ಇಷ್ಟಾರ್ಥಗಳನ್ನೂ ಕೊಡುವುವು. ಇವು ಒಂದುಮೊಳ ಅಥವಾ ಎರಡು ಮೊಳ ಇರಬಹುದು.

ಸ್ವಾಪ್ರಸಾದಮಾನಮಥವಾ ಅಥವಾ ಸರ್ವಲಕ್ಷಣಂ ।
ಅಷ್ಟಾಂಗುಲೋತ್ಸೇಧಕಂ ಚ ನ ತು ಗೇಹೇsರ್ಚಯೇತ್ಕೃತೀ ॥ ೩ ॥

ದೇವಾಗಾರಸ್ಯ ಯದ್ದ್ವಾರಂ ತಸ್ಮಾದಷ್ಟಾಂಗುಲೇನ ತು ।
ತ್ರಿಭಾಗಪಿಂಡಿಕಾ ಕಾರ್ಯಾ ದ್ವೌ ಭಾಗೌ ಪ್ರತಿಮಾ ಭವೇತ್ ॥ ೪ ॥

ಅಂಗುಲಂ ವೈ ಭವೇದ್ವೃದ್ಧಿರಶೀತಿಶ್ಚತುರುತ್ತರಾ ।
ವಿಸ್ತಾರಮಾನತಃ ಕಾರ್ಯಂ ವದನಂ ದ್ವಾದಶಾಂಗುಲಂ ॥ ೫ ॥

ಮುಖತ್ರಿಭಾಗೇ ಚಿಬುಕಂ ಲಲಾಟಂ ನಾಸಿಕಾಂ ತಥಾ ।
ಕರ್ಣೌ ನಾಸಿಕಾಯಾ ಗ್ರೀವಾತುಲ್ಯಾ ವಾ ನಿಯತೌ ತು ಯೌ ॥ ೬ ॥

---

೩. ಅಥವಾ ಪ್ರತಿಮೆಯು ಒಂದೂವರೆಮೊಳ ಉದ್ದವಿರಬಹುದು. ಅಥವಾ ದೇವಾಲಯದ ಅಳತೆಗನುಸಾರವಾಗಿ ಇರಬಹುದು. ಅದು ಸರ್ವಲಕ್ಷಣಯುಕ್ತವಾಗಿರಬೇಕು. ಪುಣ್ಯಶಾಲಿಯು ಎಂಟುಅಂಗುಲ ಪ್ರಮಾಣ ಎತ್ತರ ಇಟ್ಟು ಮಾಡಿರುವ ಪ್ರತಿಮೆಯನ್ನು ಮನೆಯಲ್ಲಿ ಪೂಜಿಸಲಾಗದು. ಆ ದೊಡ್ಡ ಪ್ರತಿಮೆಗಳು ದೇವಾಲಯಕ್ಕೆ ಅರ್ಹವಾದುವುಗಳು.

೪. ದೇವಾಲಯದ ಬಾಗಿಲಿನ ಅಳತೆಗಿಂತ ಎಂಟು ಅಂಗುಲದಷ್ಟು ಕಿರಿದಾಗಿರುವ ಕಲ್ಲಿನದಿಮ್ಮಿಯ (ಪಿಂಡಿಕೆ) ಯನ್ನು ಒಟ್ಟು ಮೂರುಭಾಗಮಾಡಿ ಎರಡುಭಾಗದಷ್ಟಲ್ಲಿ ಪ್ರತಿಮೆಯನ್ನು ಮಾಡಬೇಕು.

೫. ಪ್ರತಿಮೆಯು ಎಂಭತ್ತುನಾಲ್ಕು ಅಂಗುಲ ಎತ್ತರವಿದ್ದರೆ ವೃದ್ಧಿಯುಂಟಾಗುವುದು. ಈ ಎತ್ತರದ ಪ್ರಮಾಣಕ್ಕನುಸಾರವಾ ಮುಖವು ಹನ್ನೆರಡು ಅಂಗುಲದಷ್ಟು ಇರಬೇಕು

೬. ಮುಖದ ಅಳತೆಯ ಮೂರನೆಯ ಒಂದುಭಾಗದಲ್ಲಿ ಗಡ್ಡವನ್ನೂ, ಮಿಕ್ಕ ಮೂರನೆಯ ಎರಡುಭಾಗದಲ್ಲಿ ಹಣೆಯನ್ನೂ, ಮೂಗನ್ನೂ ಮಾಡಬೇಕು. ಕಿವಿ, ಮೂಗು ಇವನ್ನು ಕುತ್ತಿಗೆಯ ಪ್ರಮಾಣಕ್ಕೆ ಸರಿಯಾಗಿ ರಚಿಸಬೇಕು.

ನಯನೇ ದ್ವ್ಯಂಗುಲೇ ಸ್ಯಾತಾಂ ತ್ರಿಭಾಗಾ ತಾರಕಾ ಭವೇತ್ ।
ತೃತೀಯತಾರಕಾಭಾಗೇ ಶುಭದೃಷ್ಟಿಂ ಚ ವಿನ್ಯಸೇತ್ ॥ ೭ ॥

ಲಲಾಟಮಸ್ತಕಗ್ರೀವಂ ಕುರ್ಯಾತ್ತತ್ಸಮಮೇವ ತು ।
ಪರಿಣಾಹಸ್ತು ಶಿರಸೋ ಭವೇದ್ದ್ವಾತ್ರಿಂಶದಂಗುಲಃ ॥ ೮ ॥

ತುಲ್ಯಾ ನಾಸಿಕಯಾ ಗ್ರೀವಾ ಮುಖೇನ ಹೃದಯಾಂತರಂ ।
ಅಥ ವಿಸ್ತಾರಪಂಕ್ತಿಸ್ತು ತತೋऽರ್ಧಂ ತು ಕಟೇಃ ಸದಾ ॥ ೯ ॥

ಬಾಹೂ ಚ ಬಾಹುತುಲ್ಯೌ ಚ ಊರೂ ಜಂಘೇ ಚ ಜಾಘನಂ ।
ಗುಲ್ಫಾವಧಸ್ತು ಪಾದಃ ಸ್ಯಾದ್ವ್ಯಾಟಿತಶ್ಚತುರಂಗುಲಃ ॥
ಷಡಂಗುಲಸ್ತು ವಿಸ್ತಾರಸ್ತುಲ್ಯಾಂಗುಷ್ಠೋऽಂಗುಲತ್ರಯಂ ॥ ೧೦ ॥

---

೭. ಕಣ್ಣುಗಳು ಎರಡಂಗುಲ ವಿಸ್ತಾರವಿರಬೇಕು. ಕಣ್ಣಿನ ಮೂರನೇ ಒಂದು ಭಾಗದಷ್ಟು ಕರಿಯಗುಡ್ಡೆ ಇರಬೇಕು. ಆ ಗುಡ್ಡೆಯ ಮೂರನೆಯಭಾಗದಲ್ಲಿ ಶುಭ ದೃಷ್ಟಿಯನ್ನಿಡಬೇಕು.

೮. ಹಣೆ, ನೆತ್ತಿ, ಕತ್ತು ಇವುಗಳನ್ನು ಅವಕ್ಕೆ ಅನುಗುಣವಾಗಿ ಮಾಡಬೇಕು ತಲೆಯ ವೈಶಾಲ್ಯವು ಮೂವತ್ತೆರಡು ಅಂಗುಲಗಳಿರಬೇಕು.

೯. ಕುತ್ತಿಗೆಯ ಎತ್ತರವು ಮೂಗಿನ ಉದ್ದಕ್ಕೆ ಸಮನಾಗಿರಬೇಕು. ಎದೆಯ ಮಧ್ಯದ ಅಳತೆಯು ಮುಖದಷ್ಟು ಇರಬೇಕು. ಎದೆಯ ಅವಯವಗಳ ಪಂಕ್ತಿಯು ತಕ್ಕಮಟ್ಟಿಗೆ ಅಗಲವಾಗಿರುವಂತೆ ವಿಸ್ತರಿಸಿಕೊಂಡಿರಬೇಕು. ಸೊಂಟದ ಸುತ್ತಳತೆಯು ಎದೆಯ ಸುತ್ತಳತೆಯ ಅರ್ಧದಷ್ಟು ಇರಬೇಕು.

೧೦. ಎರಡು ಬಾಹುಗಳೂ ನೀಳವಾಗಿರಬೇಕು. ಆ ಬಾಹುವಿನ ದಪ್ಪಕ್ಕೆ ತಕ್ಕಹಾಗೆ ಎರಡುತೊಡೆಗಳು, ಎರಡುಕಾಲು, ಜಘನಪ್ರದೇಶ, ಎರಡುಕಾಲಿನ ಹರಡುಗಳು ಇವು ಸ್ಫುಟವಾಗಿರಬೇಕು ಹರಡುಗಳಿಗಿಂತ ಕೆಳಗಿನಭಾಗವು ಪಾದವೆನಿಸುವುದು. ಇದು ನಾಲ್ಕು ಅಂಗುಲ ಎತ್ತರವಿರಬೇಕು. ಅದರ ಅಗಲವು ಆರುಅಂಗುಲವಿರಬೇಕು. ಅಂಗುಷ್ಠಗಳು ಒಂದಕ್ಕೊಂದು ಸಮನಾಗಿಯೂ ಮೂರುಅಂಗುಲ ಪ್ರಮಾಣವುಳ್ಳವಾಗಿಯೂ ಇರಬೇಕು. ತರ್ಜನೀ ಬೆರಳು ಅದಕ್ಕೆ ಸಮಪ್ರಮಾಣದಲ್ಲಿ ಇರಬೇಕು.

**ಪ್ರದೇಶಿನೀ ಚ ತತ್ತುಲ್ಯಾ ಹೀನಾ ಶೇಷಾನ್ನಖಾನಖಂ ।**
**ಚತುರ್ದಶಾಂಗುಲಃ ಪಾದಸ್ಯಾಯಾಮಃ ಪರಿಕೀರ್ತಿತಃ ॥ ೧೧ ॥**

**ಏವಂ ಲಕ್ಷಣಸಂಯುಕ್ತಾ ಸಾ ಪೂಜ್ಯಾ ಪ್ರತಿಮಾ ಶುಭಾ ।**
**ಅಧರೋಷ್ಠಸ್ತಥೈವೋರೂ ಭ್ರೂಲಲಾಟಮನೀಷಿಕಂ ॥ ೧೨ ॥**

**ಗಂಡಂ ಚ ನಿಯತಂ ಮಾರ್ತೌ ಕುರ್ಯಾದಂಗಸಮುನ್ನತೇಃ ।**
**ವಿಶಾಲನಯನಸ್ತಾಮ್ರಪದೋ ವಾಯತಲೋಚನಃ ॥ ೧೩ ॥**

**ಸವಿತಾನಲಪತ್ರಸ್ಯ ಚಾರುವಿದ್ಯಾಧರಸ್ತಥಾ ।**
**ವತ್ಸಪ್ರೋಕ್ತೋऽತಿಮುಕುಟಃ ಕಟಿಕಾಂಗದಹಾರವಾ ॥ ೧೪ ॥**

**ಅಭ್ಯಂಗಪದಬಂಧಾದಿ ಸಾಮಾನ್ಯೇನೋಪಶೋಭಿ ಚ ।**
**ಸುಪ್ರಭಾಮಂಡಲಾ ಚಾರು ವಿಚಿತ್ರಮಣಿಕುಂಡಲಾ ॥ ೧೫ ॥**

---

೧೧. ಉಳಿದುವು ಒಂದಕ್ಕೊಂದಕ್ಕೆ ಉಗುರಿನಷ್ಟು ಉದ್ದ ಕಡಿಮೆಯಾಗ ಬೇಕು. ಪಾದದವಿಸ್ತಾರವು ಹದಿನಾಲ್ಕು ಅಂಗುಲವೆಂದು ಹೇಳಿದೆ.

೧೨. ಈ ಪ್ರಕಾರವಾದ ಲಕ್ಷಣಗಳುಳ್ಳ ಪ್ರತಿಮೆಯು ಮಂಗಳಕರವಾದುದು. ಕೆಳತುಟಿ, ತೊಡೆಗಳು, ಹುಬ್ಬು, ಹಣೆ ಇವುಗಳ ಪ್ರಮಾಣವನ್ನು ಶಿಲ್ಪಿಯು ತನ್ನ ಅನುಭವದಿಂದ ತಿಳಿಯಬೇಕು.

೧೩. ಅಂಗದ ಎತ್ತರದ ಪ್ರಮಾಣಕ್ಕೆ ಅನುರೂಪವಾಗುವಂತೆ ನೋಡಿಕೊಂಡು ಕೆನ್ನೆಯನ್ನು ಮಾಡಬೇಕು. ನಯನಗಳು ವಿಶಾಲವಾಗಿಯೂ, ನೀಳವಾಗಿಯೂ ಇರಬೇಕು. ಕಾಲುಗಳು ಕೆಂಪಾಗಿರಬೇಕು.

೧೪. ಇಂತಹ ಪ್ರತಿಮೆಯನ್ನು ರಚಿಸುವ ಕೌಶಲ್ಯವುಳ್ಳವನು ವಿದ್ಯಾಧರಸದೃಶನೇ ಸರಿ. ಬಳೆ, ಭುಜಕೀರ್ತಿ, ಹಾರ ಇವುಗಳನ್ನು ಮೀರಿಸಿದ ಕಿರೀಟ ಇವುಳ್ಳ ಪ್ರತಿಮೆಯನ್ನು ವತ್ಸಪ್ರತಿಮಾ ಎಂದು ಹೇಳುವರು.

೧೫. ಪ್ರತಿಮೆಗೆ ನುಣುಪೂ, ಹೊಳಪೂ ಬರಬೇಕಾದರೆ ಎಣ್ಣೆಮಜ್ಜನ ಮಾಡಬೇಕು. ಕಾಲುಗಳೆರಡೂ ಜೋಡಿಸಿದಂತೆ ಸಮೀಪವಾಗಿರುವುದು ಸಾಮಾನ್ಯವಾಗಿ ಶುಭಕರವಾದುದು. ಒಳ್ಳೆಯ ಪ್ರಭಾವಳಿಯಿಂದ ಕೂಡಿ ಮನೋಹರವೂ, ವಿಚಿತ್ರವೂ

ಕರಾಭ್ಯಾಂ ಕಾಂಚನೀಂ ಮಾಲಾಂ ಚೋದ್ವಹಂತೀಂ ಶಿರೋರುಹಾ್ । 
ಏವಂ ಲಕ್ಷಣಸಂಪನ್ನಾಂ ಕಾರಯೇದ್ವಿಹಿತಪ್ರದಾಂ ॥ ೧೬ ॥

ಸುಸ್ನಿಗ್ಧಾಂ ವರದಾಂ ಸೌಮ್ಯಾಂ ದ್ವಿತೀಯಾಶ್ರಮಿಣಾಮಿಮಾಂ ।
ನವತಾಲೋ ಭವೇದ್ವಿಷ್ಣುಃ ವಾಸುದೇವಸ್ತ್ರಿತಾಲಕಃ ॥ ೧೭ ॥

ನೃಸಿಂಹ ಪಂಚತಾಲಃ ಸ್ಯಾದ್ಧಯಗ್ರೀವಸ್ತು ಪಂಚಮಃ ।
ನಾರಾಯಣಶ್ಚಾಷ್ಟತಾಲೋ ಮಹೇಶಃ ಪಂಚತಾಲಕಃ ॥ ೧೮ ॥

ನವತಾಲಾ ಭವೇದ್ದುರ್ಗಾ ಲಕ್ಷ್ಮೀಶ್ಚೈವ ತ್ರಿತಾಳಿತಾ ।
ವಾಣೀಂ ತ್ರಿತಾಲಿಕಾಂ ವಿದ್ಯಾತ್ ಸವಿತಾ ಸಪ್ತತಾಲಕಃ ॥ ೧೯ ॥

---

ಆದ ಮಣಿಕುಂಡಲಗಳುಳ್ಳದೂ ಆಗಿರಬೇಕಲ್ಲದೆ, ಮೇಲ್ಮುಖವಾಗಿರುವ ಎರಡು ಕೈಗಳಿಂದ ಕೂಡಿ ಕಂಠದಲ್ಲಿರುವ ಸುವರ್ಣಮಾಲಿಕೆಯನ್ನೂ ತಲೆಗೂದಲನ್ನೂ ಎತ್ತಿಹಿಡಿದು ಕೊಂಡಿದೆಯೋ ಎಂಬಂತೆ ಇರಬೇಕು. ಈ ಲಕ್ಷಣಗಳಿಂದ ಕೂಡಿದ ಪ್ರತಿಮೆಯನ್ನು ನಿರ್ಮಿಸಿದರೆ ವಿಹಿತಫಲವನ್ನು ಕೊಡುವುದು.

೧೭. ಸೌಮ್ಯವಾಗಿಯೂ, ನುಣುಪಾಗಿಯೂ ಇರುವಂತೆ ಮಾಡಲ್ಪಟ್ಟ ಪ್ರತಿಮೆಯು ಗೃಹಸ್ಥರಾದವರಿಗೆ ವರವನ್ನು ಕೊಡತಕ್ಕದ್ದಾಗಿರುವುದು.

೧೮ ವಿಷ್ಣುವಿಗೆ ನವತಾಲ ಪ್ರಮಾಣ ಎತ್ತರವೂ, ವಾಸುದೇವನಿಗೆ ಮೂರು ತಾಲಪ್ರಮಾಣವೂ, ನರಸಿಂಹನಿಗೆ ಐದುತಾಲವೂ, ಹಯಗ್ರೀವನಿಗೆ ಐದುತಾಲವೂ, ನಾರಾಯಣಪ್ರತಿಮೆಗೆ ಎಂಟುತಾಲವೂ ಇರಬೇಕು. ಮಹೇಶಪ್ರತಿಮೆಯು ಐದು ಕಾಲ ಪ್ರಮಾಣವಿರಬೇಕು.

೧೯. ದುರ್ಗೆಯು ಒಂಭತ್ತುತಾಲ ಪ್ರಮಾಣವುಳ್ಳವಳು, ಲಕ್ಷ್ಮಿಯು ಮೂರು ತಾಲಪ್ರಮಾವುಳ್ಳವಳು, ವಾಣಿಯು ಮೂರುತಾಲವುಳ್ಳವಳು, ಸೂರ್ಯನು ಏಳುತಾಲ ಪ್ರಮಾಣವುಳ್ಳವನು ಎಂದು ತಿಳಿಯಬೇಕು.

ದಕ್ಷಿಣೇ ವಾಸುದೇವಸ್ಯ ಕರೇ ಚಕ್ರಂ ಪ್ರತಿಷ್ಠಿತಂ ।
ಗದಾ ಭವೇಚ್ಚ ತದಧಃ ವಾಮಾರ್ಧೇ ತಸ್ಯ ಶಂಖಕಃ ॥ ೨೦ ॥

ತದಧಶ್ಚ ಭವೇತ್ಪದ್ಮಂ ಶ್ರೀವತ್ಸೇನೋಪಶೋಭಿತಂ ।
ಸವ್ಯೇಽರ್ಧೇ ತಾರಕಾಸ್ಯಂ ಚ ತ್ರಿನೇತ್ರಮುಭಯಾತ್ಮಕಂ ॥ ೨೧ ॥

ಪಾರ್ಶ್ವೇ ನಲಿನಸಿಂಹೌ ದ್ವೌ ಸುಭದ್ರಾಂ ದಕ್ಷಿಣೇ ನ್ಯಸೇತ್ ।
ರುಕ್ಮಿಣೀಂ ವಾಮಭಾಗೇ ಚ ತದಧಸ್ತಾದ್ದಿವೀಂದ್ರಕಂ ॥ ೨೨ ॥

ಕೃತಾಂಜಲಿಪುಟಸ್ಥಶ್ಚ ನಾರದಃ ಕಪಿಲಸ್ತಥಾ ।
ಧರ್ಮಾಧರ್ಮಾವುಭೌ ಪಾರ್ಶ್ವೇ ಕರ್ತವ್ಯೌ ಸ್ರಗ್ವಿಣಾಂ ವರೌ ॥ ೨೩ ॥

ಯದುಗ್ರಂ ವಾಸುದೇವಸ್ಯ ತಥಾ ನಾರಾಯಣಸ್ಯ ಚ ।
ವೈಪರೀತ್ಯಂ ವಿಜಾನೀಯಾನ್ಮಾಧವಾನಾಂ ತಥೈವ ಚ ॥ ೨೪ ॥

---

೨೦. ವಾಸುದೇವನ ಬಲಗೈಯ್ಯಲ್ಲಿ ಚಕ್ರವನ್ನು ಹಿಡಿದಿರುವಂತೆ ರಚಿಸಬೇಕು. ಎಡಗೈಯ್ಯಲ್ಲಿ ಶಂಖವಿರಬೇಕು. ಆ ಚಕ್ರದ ಕೆಳಗಡೆಯ ಕೈಯ್ಯಲ್ಲಿ ಗದೆಯೂ, ಶಂಖದ ಕೆಳಗಡೆಯ ಕೈಯ್ಯಲ್ಲಿ ಪದ್ಮವೂ, ಅದರ ಪಕ್ಕದಲ್ಲಿ ಹೃದಯಪ್ರದೇಶದಲ್ಲಿ ಶ್ರೀವತ್ಸ ವೆಂಬ ಮಚ್ಚೆಯೂ ಇರಬೇಕು.

೨೧. ವಾಸುದೇವ ಪ್ರತಿಮೆಯ ಎಡಅರ್ಧಭಾಗದಲ್ಲಿ ತಾರಕಾಸ್ಯ ಮತ್ತು ತ್ರಿನೇತ್ರ ಎಂಬ ಉಭಯಾತ್ಮಕವಾದ ಪ್ರತಿಮೆಯು ಇರಬೇಕು. ಒಂದು ಪಕ್ಕದಲ್ಲಿ ನಳಿನ ಸಿಂಹ ಇವುಗಳೂ ಮತ್ತು ಸುಭದ್ರಾ ವಿಗ್ರಹವೂ ಇರಬೇಕು.

೨೨. ಎಡಭಾಗದಲ್ಲಿ ರುಕ್ಮಿಣೀಪ್ರತಿಮೆಯನ್ನೂ ರಚಿಸಿ ಆ ವಿಗ್ರಹದ ಕೆಳಭಾಗ ದಲ್ಲಿ ದೇವೇಂದ್ರನನ್ನೂ, ಕೈಮುಗಿದುಕೆಂಡಿರುವ ಕಪಿಲ, ನಾರದ ಇವರ ಪ್ರತಿಮೆ ಯನ್ನೂ ರಚಿಸಬೇಕು. ಎರಡು ಪಕ್ಕಗಳಲ್ಲೂ ಶ್ರೇಷ್ಠವೆನಿಸಿದ ಧರ್ಮ, ಅಧರ್ಮ ಮೂರ್ತಿಗಳು ಮಾಲಿಕೆಯನ್ನು ಹಿಡಿದುಕೊಂಡಿರುವಂತೆ ರಚಿಸಬೇಕು.

೨೪. ವಾಸುದೇವಪ್ರತಿಮೆ, ನಾರಾಯಣಪ್ರತಿಮೆ, ಮಾಧವಪ್ರತಿಮೆ ಇವು ಗಳನ್ನು ರಚಿಸುವಾಗ ಉಗ್ರಲಕ್ಷಣ, ವಿಪರೀತ ಲಕ್ಷಣಗಳಾವುವೆಂಬುದನ್ನು ತಿಳಿದು ಕೊಂಡು ಆ ರೀತಿ ಆಗದೆ ಸೌಮ್ಯವಾಗುವಂತೆ ಮಾಡಬೇಕು.

**ತೀರ್ಥೇ ಗಿರೌ ತಟಾಗೇ ಚ ಸಮೀಪೇ ಸ್ಥಾಪಯೇತ್ಸುಧೀಃ ।**
**ನಗರಗ್ರಾಮಮಧ್ಯೇ ವಾ ಬ್ರಾಹ್ಮಣಾನಾಂ ಚ ಸಂಸದಿ ॥ ೨೫ ॥**

**ಅವಿಮುಕ್ತೇ ವಿಶೇಷೇಣ ಸಿದ್ಧಕ್ಷೇತ್ರೇ ದಶಾರ್ಣಕೇ ।**
**ತ್ರೀಣ್ಯುತ್ತರಸಹಸ್ರಾಣಿ ಪಂಚಪಂಚೋತ್ತರಾಣಿ ಷಟ್ ॥ ೨೬ ॥**

**ಕುಲಾನಿ ಪೂರ್ವಂ ವಿಪ್ರೇಂದ್ರಾಃ ಸಮುದ್ಧರತಿ ನಾನ್ಯಥಾ ।**
**ಕಲೌ ದಾರುಮಯಃ ಕಾರ್ಯೋ ಹ್ಯಶಕ್ತೌ ಮೃಣ್ಮಯೋಽಥವಾ ॥ ೨೭ ॥**

**ಚಂದನಾಗುರುಭಿಃ ಕುರ್ಯಾದ್ಬಿಲ್ವಶ್ರೀಪರ್ಣಿಕಸ್ಯ ಚ ।**
**ಪದ್ಮಕಾಷ್ಠಮಯಶ್ಚೈವ ವಾಮಮಸ್ಯ ತಥೈವ ಹಿ ॥ ೨೮ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ**
**ಪ್ರಥಮಭಾಗೇ ದ್ವಾದಶೋಽಧ್ಯಾಯಃ.**

---

೨೫. ವಿದ್ವಾಂಸನಾದವನು ಪುಣ್ಯನದೀತೀರದಲ್ಲಿಯೋ, ಬೆಟ್ಟಗಳ ಮೇಲೋ, ದೊಡ್ಡ ತಟಾಕಗಳ ಸಮೀಪದಲ್ಲಿಯೋ, ದೊಡ್ಡ ಪಟ್ಟಣಗಳ ಅಥವಾ ಗ್ರಾಮಗಳ ಮಧ್ಯೆ ಬ್ರಾಹ್ಮಣಶ್ರೇಣಿಯಿರುವ ಕಡೆಯೋ, ಪ್ರತಿಮಾ ಸ್ಥಾಪನೆಮಾಡಬೇಕು.

೨೬. ದೇವಮಂದಿರ ಮತ್ತು ಪ್ರತಿಮಾಪ್ರತಿಷ್ಠೆಮಾಡಬೇಕೆನ್ನುವವರು ಬಹುತರವಾಗಿ ಅವಿಮುಕ್ತ, ದಶಾರ್ಣ, ಮುಂತಾದ ಸಿದ್ಧಕ್ಷೇತ್ರಗಳಲ್ಲಿ ಪ್ರತಿಮಾಸ್ಥಾಪನ, ದೇವಾಲಯನಿರ್ಮಾಣಾದಿಗಳನ್ನು ಮಾಡಬೇಕು. ಅಯ್ಯಾ ಬ್ರಾಹ್ಮಣರೇ! ಹೀಗೆ ಮಾಡಿದವನು ಒಂದುಸಾವಿರದನೂರುಮೂರು ತಲೆಮುಂದೆನವರು ಐವತ್ತಾರುತಲೆ ಹಿಂದಿನವರು ಇವರುಗಳನ್ನು ಉದ್ಧಾರಮಾಡುತ್ತಾನೆ.

೨೭ ಈ ವಿಚಾರವು ಬೇರೆಯ ಮಾತೇ ಇಲ್ಲದೆ ಸಿದ್ಧಾಂತವಾದುದಾಗಿದೆ. ಕಲಿಯುಗದಲ್ಲಿ ಪ್ರತಿಮೆಯನ್ನು ಮರದಿಂದ ಮಾಡಿಸಬಹುದು. ಅಷ್ಟು ಶಕ್ತಿಯಿಲ್ಲದಿದ್ದರೆ ಮಣ್ಣಿನಿಂದ ಪ್ರತಿಮೆಯನ್ನು ಮಾಡಿಸಬಹುದು ಹಾಗೆಯೇ ಮರದಿಂದಲೋ ಮಣ್ಣಿನಿಂದಲೋ ದೇವಾಲಯಾದಿಗಳನ್ನು ರಚಿಸಬೇಕು. ಚಂದನ, ಅಗುರು, ಶ್ರೀಪರ್ಣಿ, ಬಿಲ್ವ, ಪದ್ಮಕಾಷ್ಠ ಇವುಗಳಿಂದ ಪ್ರತಿಮೆಗಳನ್ನು ಮಾಡುವುದು ಒಳ್ಳೆಯದು. ಒಟ್ಟಿನಲ್ಲಿ ಆ ಪ್ರತಿಮೆಯು ಸುಂದರವಾಗಿರಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮ ಪರ್ವಣಿ ಪ್ರಥಮಭಾಗೇ
## ತ್ರಯೋದಶೋಽಧ್ಯಾಯಃ

॥ ಸೂತ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಕುಂಡಾನಾಮಥ ನಿರ್ಣಯಂ ।
ತಸ್ಯೋದ್ಧಾರಂ ಚ ಸಂಸ್ಕಾರಂ ಶೃಣುಧ್ವಂ ದ್ವಿಜಸತ್ತಮಾಃ ॥ ೧ ॥

ಚತುರಸ್ರಂ ಚ ವೃತ್ತಂ ಚ ಪಾದಾರ್ಧಂ ಚಾರ್ಧಚಂದ್ರಕಂ ।
ಯೋನ್ಯಾಕಾರಂ ಚಂದ್ರಕಂ ಚ ಅಷ್ಟಾಸ್ರಮಥ ಪಂಚಮಂ ॥ ೨ ॥

ಸಪ್ತಾಸ್ರಂ ಚ ನವಾಸ್ರಂ ಚ ಕುಂಡಂ ದಶಕಮೀರಿತಂ ।
ಭೂಮಿಂ ಸಂಶೋಧ್ಯ ವಿಧಿವತ್ತುಷಕೇಶಾದಿ ವರ್ಜಿತಂ ॥ ೩ ॥

---

### ಹದಿಮೂರನೆಯ ಅಧ್ಯಾಯ

೧. ಸೂತಮಹರ್ಷಿಗಳು ಮುಂದುವರಿಸಿ ಹೇಳುತ್ತಾರೆ—ಇಲ್ಲಿಂದ ಮುಂದೆ ಕುಂಡಗಳ ಸ್ವರೂಪನಿರ್ಣಯವನ್ನೂ ಆ ಕುಂಡಗಳ ಉದ್ಧಾರಕ್ರಮ, ಸಂಸ್ಕಾರಗಳು ಇವನ್ನೂ ಹೇಳುವೆನು.

೨-೩. ಓ ಬ್ರಾಹ್ಮಣೋತ್ತಮರೇ! ಕೇಳಿ; ಕುಂಡಗಳಲ್ಲಿ ಚತುರಸ್ರ, ವೃತ್ತ ಕುಂಡ, ಪಾದಾರ್ಧಕುಂಡ, ಅರ್ಧಚಂದ್ರಕುಂಡ, ಯೋನಿಕುಂಡ, ಚಂದ್ರಕುಂಡ, ಅಷ್ಟಾಸ್ರಕುಂಡ, ಪಂಚಾಸ್ರಕುಂಡ, ನವಾಸ್ರಕುಂಡ, ಸಪ್ತಾಸ್ರಕುಂಡ ಎಂಬದಾಗಿ ಹತ್ತು ವಿಧಗಳುಂಟು. ಕುಂಡರಚನೆ ಮಾಡುವ ಸ್ಥಳವನ್ನು ಅಗೆದು ಆ ಮಣ್ಣಿನಲ್ಲಿ ಹೊಟ್ಟು, ಕೂದಲು ಮೊದಲಾದುವು ಯಾವುವೂ ಇಲ್ಲದಂತೆ ಭೂಶೋಧನ ಮಾಡಬೇಕು.

**ಭ್ರಾಮಯೇಚ್ಚೋರ್ಧ್ವತಸ್ತಸ್ಯಾ ಭಸ್ಮಾಂಗಾರಾಣಿ ಯತ್ನತಃ ।**
**ಅಂಕುರಾರ್ಪಣಕಂ ಕುರ್ಯಾತ್ ಸಪ್ತಾಹಾದೇವ ಬುದ್ಧಿಮಾನ್ ॥ ೪ ॥**

**ಸ್ಥಾನಂ ವಿಮರ್ದಿತಂ ಕುರ್ಯಾತ್ ಖನಿತ್ವಾ ಸೇಚಯೇಜ್ಜಲೈಃ ।**
**ಮುಷ್ಟಿಹಸ್ತೋಚ್ಛ್ರಾಯಮಿತಂ ಪ್ರಕುರ್ಯಾತ್ಪರಿಸೂತ್ರಯೇತ್ ॥ ೫ ॥**

**ಅರ್ಕಾಂಗುಲಮಿತಂ ಸೂತ್ರಂ ಚತುರಸ್ರಂ ಪ್ರಕಲ್ಪಯೇತ್ ।**
**ಅಷ್ಟಾದಶಾಂಗಕೇ ಕ್ಷೇತ್ರೇ ನ್ಯಸೇದೇಕಂ ಬಹಿಸ್ತತಃ ॥ ೬ ॥**

**ಭ್ರಾಮಯೇತ್ತೇನ ಮಾನೇನ ತ್ರಿವೃತ್ತಂ ಕುಂಡಮುಜ್ಜ್ವಲಂ ।**
**ಪೂರ್ವವದ್ವಿಭಜೇತ್ ಕ್ಷೇತ್ರಂ ಭಾಗೈಕಂ ಪುರತೋ ನ್ಯಸೇತ್ ॥ ೭ ॥**

**ವೃತ್ತಾನಿ ಕರ್ಣಿಕಾದೀನಿ ಬಹಿಸ್ತ್ರೀಣಿ ಪ್ರಕಲ್ಪಯೇತ್ ।**
**ಪದ್ಮಕುಂಡಮಿದಂ ಪ್ರೋಕ್ತಂ ವಿಲೋಚನಮನೋಹರಂ ॥ ೮ ॥**

---

೪. ಮತ್ತು ಆ ಪ್ರದೇಶವ ಮೇಲುಭಾಗದಲ್ಲಿ ಭಸ್ಮಸಹಿತವಾಗಿ ಕೆಂಡಗಳನ್ನು ತಟ್ಟೆಯಲ್ಲಿ ಹಿಡಿದು ಸುತ್ತಲೂ ಸುತ್ತಿಸಬೇಕು. ಇದಾದ ಏಳುದಿನಗಳು ಕಳೆದಮೇಲೆ ವಿದ್ವಾಂಸನಾದವನು ಅಂಕುರಾರ್ಪಣವೆಂಬ ಸಂಸ್ಕಾರವನ್ನು ಮಾಡಬೇಕು.

೫. ಕುಂಡರಚನಾ ಪ್ರದೇಶವು ತುಳಿದು ಗಟ್ಟಿಯಾಗಿದ್ದರೆ ಅಗೆದು ನೀರನ್ನು ಚುಮುಕಿಸಿ ಆ ಸ್ಥಳವು ಮೊದಲಿನ ಮಟ್ಟಕ್ಕಿಂತ ಒಂದು ಮುಷ್ಟಿಯಷ್ಟು ಎತ್ತರವಾಗುವಂತೆ ಮಾಡಬೇಕು.

೬. ಬಳಿಕ ಹನ್ನೆರಡು ಅಂಗುಲ ಅಳತೆಯುಳ್ಳ ಚತುರಸ್ರವನ್ನು ನಿರ್ಮಿಸಬೇಕು. ಕುಂಡಮಧ್ಯದ ನಾಲ್ಕುಪಾರ್ಶ್ವಗಳಲ್ಲಿಯೂ ಕಂಠಸೂತ್ರದ ಅರ್ಧದೊಳಗೆ ಎಂಟನೇ ಒಂದುಭಾಗವನ್ನು ಬಿಡುವುದರಿಂದ ವೃತ್ತಕುಂಡವಾಗುವುದು.

೭-೮. ವೃತ್ತಕುಂಡದ ಮೇಲುಭಾಗವನ್ನು ಹದಿನೆಂಟು ಅಂಶ (ಭಾಗ) ಗಳಾಗಿ ಮಾಡಿ ಅದನ್ನು ನಾಲ್ಕಾಗಿ ಪೂರ್ವದಂತೆ ಭಾಗಿಸಲು ನಾಲ್ಕೂವರೆಅಂಗುಲ ಅಳತೆಯಲ್ಲಿ ರೀತಿ ವೃತ್ತವಾಗುವುದು. "ದ್ವಿಭಾಗಂದಳಮಾನಂ ಸ್ಯಾದೇಕಮಾನಂ ತು ಕರ್ಣಿಕಾ" ಎಂಬ ಒಂದು ಒಳಸುತ್ತಿನಲ್ಲಿ ಕರ್ಣಿಕೆಯನ್ನೂ, ಉಳಿದ ಅಳತೆಯ ಹೊರವೃತ್ತದಲ್ಲಿ ಅಷ್ಟದಳಗಳನ್ನೂ ಏರ್ಪಡಿಸಬೇಕು. ಹೀಗೆ ಏರ್ಪಟ್ಟುದು, ನೋಡುವುದಕ್ಕೆ ಮನೋಹರ ವಾದ ಪದ್ಮಕುಂಡವೆನಿಸುವುದು.

ದಶಧಾ ಭೇದಯೇತ್ಕ್ಷೇತ್ರೇ ಊರ್ಧ್ವಾಧೋರ್ಧ್ವಾಂಗುಲದ್ವಯಂ ।
ಸಂಪರಿಪಾತಯೇತ್ಸೂತ್ರಂ ಪಾಟಯೇತ್ತತ್ಪ್ರಮಾಣತಃ ॥ ೯ ॥

ಪಂಚಧಾ ಭೇದಿತೇ ಕ್ಷೇತ್ರೇ ಕಾಮಂ ವಾ ವಿಭಜೇತ್ಸುಧೀಃ ।
ನ್ಯಸೇತ್ಪುರಸ್ತಾದೇಕಾಂಶಂ ಕೋಣಾರ್ಧಾರ್ಧಪ್ರಮಾಣತಃ ॥ ೧೦ ॥

ಯೋನಿಸ್ಥಾನಂ ಪ್ರತಿಷ್ಠಾಪ್ಯ ಅಶ್ವತ್ಥಸ್ಯ ದಲಾಕೃತಿ ।
ಸೂತ್ರದ್ವಯಂ ತತೋ ದದ್ಯಾತ್ ಕುಂಡಂ ಪರಿಮಿತಂ ಭವೇತ್ ॥ ೧೧ ॥

ಚತುರಸ್ರಂ ಸಮುದ್ಧೃತ್ಯ ಸೂತ್ರಂ ಸಂಕಲ್ಪಯೋಗತಃ ।
ದಿಶಂ ಪ್ರತಿ ಯಥಾನ್ಯಾಯಂ ಪಾತಯೇಚ್ಚ ದ್ವಿಜೋತ್ತಮಾಃ ॥ ೧೨ ॥

---

೯. ಕುಂಡರಚನಾಕ್ಷೇತ್ರವನ್ನು ಹತ್ತುಭಾಗಮಾಡಿ, ಮೇಲುಗಡೆಯೂ, ಕೆಳಗಡೆಯೂ ಎರಡೆರಡು ಅಂಗುಲಗಳ ಮನೆಗಳನ್ನು ಬಿಟ್ಟು, ದಾರವನ್ನು ಅದೇ ಅಳತೆಯಲ್ಲಿ ಅಗಲದಲ್ಲೂ ಗುರುತಿಸಬೇಕು.

೧೦-೧೧. ಚತುಷ್ಕೋಣಾಕಾರವಾಗಿ ಮಾಡಲ್ಪಟ್ಟ ಕ್ಷೇತ್ರವನ್ನು ಐದು ಭಾಗವಾಗಿ ಮಾಡಿಕೊಳ್ಳಬೇಕು. ಆ ಐದರಲ್ಲಿ ಒಂದುಭಾಗವನ್ನು ಮುಂದುಗಡೆಯಲ್ಲಿ ಎಂದರೆ ಹೊರಗಡೆಯಲ್ಲಿ ಬಿಡುವುದರ ಮೂಲಕ ಅಲ್ಲಿಂದ ಕೋಣಸೂತ್ರದ ಅರ್ಧದಲ್ಲಿ ಅರ್ಧ ಎಂದರೆ ನಾಲ್ಕನೆಯ ಒಂದುಭಾಗದಿಂದ ಕ್ಷೇತ್ರಮಧ್ಯದವರೆಗೆ ಎರಡು ಪಾರ್ಶ್ವಗಳಲ್ಲೂ ಸುತ್ತುವುದರಿಂದ ಯೋನಿಸ್ಥಾನವು ಅರಳಿಯ ಎಲೆಯಂತೆ ಏರ್ಪಟ್ಟು, ಯೋನಿಕುಂಡವಾಗುವುದು. ಇದನ್ನು ಬೇರೆ ರೀತಿಯಲ್ಲಿ ಹೇಳಿದೆ. "ಶ್ರುತ್ಯಸ್ರಂತು ಪುರಾಲಿಖ್ಯ ಪಂಚಭಾಗಂ ಪ್ರಕೀರ್ತಿತಂ ಚತುರಂಶಂಮಧ್ಯಬಾಹ್ಯ ಭ್ರಮಣಂಯೋನಿರುಚ್ಯತೆ" ಎಂದು ಹೇಳಿದೆ.' ಮಧ್ಯೆ ಎರಡುಭಾಗದಷ್ಟು ಪರಿಮಾಣವು ಯೋನಿಸ್ಥಾನಕ್ಕಿರಬೇಕು.

೧೨. ಓ ಬ್ರಾಹ್ಮಣಶ್ರೇಷ್ಠರೇ ! ಕೇಳಿ ; ನಾವು ಯಾವ ಕಾರ್ಯವನ್ನು ಮಾಡಬೇಕೋ ಆ ಕಾರ್ಯಕ್ಕನುಸಾರ ಸಂಕಲ್ಪಮಾಡಿ, ಶಾಸ್ತ್ರೋಕ್ತರೀತಿ ಯಾವ ಕುಂಡವನ್ನು ಯಾವ ದಿಕ್ಕಿನಲ್ಲಿ ನಿರ್ಮಿಸಬೇಕೋ, ಆಯಾದಿಕ್ಕಿನಲ್ಲಿ ಮೊದಲು ಚತುರ್ರಸವಾಗಿ ಸೂತ್ರವನ್ನು ನ್ಯಾಸಮಾಡಿಕೊಂಡು, ಆ ಬಳಿಕ ಕುಂಡರಚನೆ ಮಾಡಬೇಕು.

**ಶೃಂಗಾಟಕಂ ಯುಗ್ಮಪುಟಂ ಷಡಸ್ರಂ ಕುಂಡತ್ರಯಂ ಬುಧಾಃ ।**
**ಜಲಾಶಯಾರಾಮಕೂಪೇ ನಿತ್ಯೇ ಗೃಹಗತೇ ಯಥಾ ॥ ೧೩ ॥**

**ಚತುರಸ್ರಂ ಭವೇತ್ಕುಂಡಂ ದ್ವಿಜಸಂಸ್ಕಾರಕರ್ಮಣಿ ।**
**ದೇವಪ್ರತಿಷ್ಠಾಯಾಗೇ ಚ ಗೃಹವಾಸ್ತೌ ಚತುರ್ಥಕಂ ॥ ೧೪ ॥**

**ವಸುಂಧರಾಯೋಗಭೇದೇ ಪ್ರಪಂಚೇ ವೃತ್ತಮಾದಿಶೇತ್ ।**
**ಸೋಮೇಷ್ಟೌ ಪಂಕಜಂ ಪ್ರೋಕ್ತಂ ನರಮೇಧಾಶ್ವಮೇಧಯೋಃ ॥ ೧೫ ॥**

**ಅಂಕುರಾರ್ಪಣಯಾಗೇ ಚ ವೈಷ್ಣವೇ ಯಾಗಕರ್ಮಣಿ ।**
**ಶಿವದೇವ್ಯೋಶ್ಚ ಜನ್ಮಾದಾರವಷ್ಟಮ್ಯಾಂ ಚಾರ್ಧಚಂದ್ರಕಂ ॥ ೧೬ ॥**

**ಮಾರ್ಜಾರಪೌಷ್ಟಿಕೇ ವೈರಂ ರಮ್ಯೇ ಚ ಶಾಂತಿಕೇ ತಥಾ ।**
**ಶಾಂತಿಪ್ರತಿಷ್ಠಾಯಾಗೇ ತು ಶಾಕ್ತಾನಾಂ ಕಾಮ್ಯಕರ್ಮಣಿ ॥ ೧೭ ॥**

---

೧೩. ಜಲಾಶಯ ಎಂದರೆ ಕೆರೆ, ಕೊಳ ಇವುಗಳನ್ನು ಪ್ರತಿಷ್ಠೆಮಾಡುವ ಕರ್ಮದಲ್ಲಿ ಹೋಮಕ್ಕೆ ಶೃಂಗಾಟಕಕುಂಡವನ್ನೂ, ಆರಾಮ (ತೋಟ) ಪ್ರತಿಷ್ಠಾಂಗವಾಗಿ ಯುಗ್ಮಪುಟಕುಂಡವನ್ನೂ, ಮನೆಯಬಳಿ ಇದ್ದು ನಿತ್ಯವೂ ನೀರುಸೇದುವ ಕೂಪಪ್ರತಿಷ್ಠೆಯಲ್ಲಿ ಷಡಸ್ರಕುಂಡವನ್ನೂ ನಿರ್ಮಿಸಬೇಕು.

೧೪. ಉಪನಯನವಾಗಿ ದ್ವಿಜಸಂಸ್ಕಾರಕಾರ್ಯದಲ್ಲಿ ಚತುರಸ್ರಕುಂಡವನ್ನು ರಚಿಸಬೇಕು. ದೇವಮೂರ್ತಿಯನ್ನು ಪ್ರತಿಷ್ಠಿಸುವುದು, ಯಾಗ, ಗೃಹವಾಸ್ತುಪ್ರತಿಷ್ಠಾಂಗಹೋಮ ನಾಲ್ಕನೆಯದಾಗಿ ಭೂಮಿಪ್ರಾಪ್ತ್ಯರ್ಥವಾಗಿ ಮಾಡುವ ಯಾಗ ಇವುಗಳಿಗೆ ವೃತ್ತಾಕಾರದ ಕುಂಡವನ್ನೇ ರಚಿಸಬೇಕು.

೧೫. ಸೋಮಯಾಗ ಮಾಡುವಾಗಲೂ, ನರಮೇಧಯಾಗ ಮಾಡುವಾಗಲೂ ಅಶ್ವಮೇಧಯಾಗ ಮಾಡುವಾಗಲೂ ಪದ್ಮಕುಂಡವನ್ನು ರಚಿಸಬೇಕು.

೧೬. ಅಂಕುರಾರ್ಪಣವೆಂಬ ಕರ್ಮದಲ್ಲಿಯೂ, ವೈಷ್ಣವಯಾಗ ಕರ್ಮದಲ್ಲಿಯೂ ಶಿವ, ಶಕ್ತಿ (ದೇವಿ) ಇವರ ಜನ್ಮೋತ್ಸವಾಂಗವಾಗಿ ಅಷ್ಟಮಿಯದಿನ ಮಾಡಬೇಕಾದ ಯಾಗದಲ್ಲಿಯೂ, ಅರ್ಧಚಂದ್ರಾಕಾರವಾದ ಕುಂಡವನ್ನೇ ರಚಿಸಬೇಕು.

೧೭-೧೮. ವೈರಶಾಂತ್ಯರ್ಥವಾಗಿ ಮಾಡಬೇಕಾದ ಮಾರ್ಜರಪೌಷ್ಟಿಕ ಯಾಗಕ್ಕೂ, ಶಾಂತಿಹೋಮ, ಪ್ರತಿಷ್ಠಾಂಗವಾದ ಹೋಮ, ಇವಕ್ಕೂ ಶಕ್ತಿಸಂಬಂಧಿ

ಪುರಶ್ಚರಣಕಾಮ್ಯೇಷು ಜ್ವರಾದೀನಾಂ ವಿಮೋಕ್ಷಣೇ ।
ಏವಂ ವಿಧೇಷು ಕಾರ್ಯೇಷು ಯೋನಿಕುಂಡಂ ಪ್ರಶಸ್ಯತೇ ॥ ೧೮ ॥

ದೇವತಾತೀರ್ಥಯಾತ್ರಾದೌ ಮಹಾಯುದ್ಧಪ್ರವೇಶನೇ ।
ಸೌರೇ ಶಾಂತೇ ಪೌಷ್ಟಿಕೇ ಚ ಷಟ್ಕೋರಂ ಕುಂಡಮುತ್ತಮಂ ॥ ೧೯ ॥

ಮಾರಣೋಚ್ಚಾಟನೇ ಚೈವ ತಥಾ ರೋಗೋಪಶಾಂತಯೇ ।
ವೈಷ್ಣವಾನಾಂ ಕೋಟಿಹೋಮೇ ನೃಪಾಣಾಮತ್ತಿಶೋಚನೇ ॥ ೨೦ ॥

ಅಷ್ಟಾಸ್ರಮಬ್ಜಕುಂಡಂ ಚ ಸಪ್ತಾಸ್ರಂ ನಿಧಿಸಾಧನೇ ।
ರಾಜ್ಞಾಸಾಧ್ಯೇ ಚ ಪಂಚಾಸ್ರಂ ಕನ್ಯಾಪ್ರಾಪ್ತೌ ತ್ರಿರಸ್ರಕಂ ॥ ೨೧ ॥

---

ಯಾದ ಕಾಮ್ಯಕರ್ಮಗಳಲ್ಲೂ, ಕಾಮ್ಯವಾದ ಪುನಶ್ಚರಣಾದಿ ಹೋಮಗಳಲ್ಲಿಯೂ, ಜ್ವರ ಮೊದಲಾದುವುಗಳ ನಿವಾರಣಾರ್ಥವಾಗಿ ಮಾಡುವ ಹೋಮಗಳಲ್ಲಿಯೂ, ಇನ್ನೂ ಇತರ ಪೀಡಾಪರಿಹಾರರೂಪವಾದ ಶಾಂತಿ ಹೋಮಗಳಲ್ಲೂ ಯೋನಿಕುಂಡವು ಶ್ರೇಷ್ಠವಾದುದು.

೧೯. ದೇವರದರ್ಶನಕ್ಕಾಗಿ ಹೋಗುವ ಯಾತ್ರಾರಂಭ, ತೀರ್ಥಯಾತ್ರಾರಂಭ ಮಹಾಯುದ್ಧದ ದಂಡಯಾತ್ರಾರಂಭ, ಈ ಕಾಲಗಳಲ್ಲಿ ಕಾರ್ಯಸಿದ್ಧಿಗಾಗಿ ಮಾಡುವ ಹೋಮದಲ್ಲೂ, ಸೌರೋತ್ಸವಾಂಗವಾದ ಹೋಮ, ಕುಹೂಯೋಗವೊದಗಿದಾತನ ಶಾಂತಿಹೋಮ, ಮತ್ತು ಕಾಮ್ಯಾರ್ಥಸಿದ್ಧಿಗಾಗಿ ಮಾಡುವ ಪೌಷ್ಟಿಕಹೋಮ ಇವುಗಳಲ್ಲೂ ಷಡಸ್ರಕುಂಡವನ್ನು ರಚಿಸುವುದು ಉತ್ತಮ.

೨೦. ಮಾರಣಹೋಮ, ಗ್ರಹೋಚ್ಚಾಟನಹೋಮ, ವ್ಯಾಧಿಪೀಡಾ ಶಾಂತಿ ಹೋಮ, ವೈಷ್ಣವಕೃತವಾದ ಕೋಟಿಹೋಮ, ರಾಜರಿಗೆ ಒದಗುವ ಮಹಾಕ್ಲೇಶ ನಿವಾರಣ ಹೋಮ, ಇವುಗಳನ್ನು ಮಾಡಬೇಕಾದರೆ ಅಷ್ಟಾಸ್ರಕುಂಡವನ್ನಾಗಲಿ ಅಥವಾ ಪದ್ಮಕುಂಡವನ್ನಾಗಲಿ ರಚಿಸಬೇಕು.

೨೧. ಭೂಮಿಯಲ್ಲಿ ನಿಧಿಯಿರುವ ಕುರುಹು ತೋರಿದಾಗ ಅದನ್ನು ಸಾಧಿಸುವುದಕ್ಕಾಗಿ ಮಾಡುವ ಹೋಮಕ್ಕೆ ಸಪ್ತಾಸ್ರಕುಂಡವನ್ನೂ, ರಾಜರನ್ನು ವಶಮಾಡಿಕೊಳ್ಳುವುದಕ್ಕಾಗಿ ಮಾಡುವ ಹೋಮಕ್ಕೆ ಪಂಚಾಸ್ರಕುಂಡವನ್ನೂ, ರಚಿಸಬೇಕು. ಕನ್ಯಾಪ್ರಾಪ್ತಿಗೋಸ್ಕರಮಾಡುವ ಹೋಮಕ್ಕೆ ತ್ರಿಕೋಣಾಕೃತಿಯ ಕುಂಡವನ್ನು, ರಚಿಸಬೇಕು.

**ಯಾವನ್ನಿಮ್ನಂ ಭವೇದೇವ ವಿಸ್ತಾರಸ್ತಾವದೇವ ತು ।**
**ಕುಂಡಾನುರೂಪತಃ ಕಾರ್ಯಾ ಮೇಖಲಾ ಸರ್ವತೋ ಬುಧೈಃ ॥ ೨೨ ॥**

**ಅಯುತಾದಿಷು ಹೋಮೇಷು ಮೇಖಲಾಂ ಯೋಜಯೇತ್ಸುಧೀಃ ।**
**ನಿಮ್ನಪ್ರಮಾಣೇ ಚಾತ್ರಾಪಿ ಮೂಲೇ ಸಾರ್ಧಾಂಗುಲಂ ತ್ಯಜೇತ್ ॥ ೨೩ ॥**

**ಕೋಣವೇದರಸೈರ್ಮಾನಂ ಯಥಾಯೋಗ್ಯಮನುಕ್ರಮಾತ್ ।**
**ಮುಷ್ಟಿಹಸ್ತೇ ಸಮುತ್ಸೇಧೋ ಸಾರ್ಧಾಂಗುಲಪರಿಷ್ಕೃತಃ ॥ ೨೪ ॥**

**ಅರತ್ನಿಮಾತ್ರಕುಂಡೇ ತು ತ್ರಿಶ್ಚೈಕಾಂಗುಲತಃ ಕ್ರಮಾತ್ ।**
**ಏಕಹಸ್ತಮಿತೇ ಕುಂಡೇ ವೇದಾಗ್ನಿನಯನಾಂಗುಲಾಃ ॥ ೨೫ ॥**

---

೨೨. ಕುಂಡದ ಉದ್ದವೂ ಅಗಲವೂ ಕೂಡ ಆಳದಷ್ಟೇ ಇರಬೇಕು. ಕುಂಡದ ಸುತ್ತಲೂ ಕಟ್ಟಿರುವ ಕಟ್ಟೆಗೆ ಮೇಖಲೆಯೆಂದು ಹೆಸರು (ನೇಮಿ ಎಂತಲೂ ಹೆಸರು) ಈ ಮೇಖಲೆಯ ದಪ್ಪ, ಎತ್ತರ, ಇವು ಆಯಾ ಕುಂಡದ ಅಳತೆಗಳಿಗೆ ತಕ್ಕಹಾಗೆ ಇರಬೇಕು. (ಇದೇ ವಿಚಾರವನ್ನು ಗ್ರಂಥಾಂತರದಲ್ಲಿ "ಖಾತಾಂತಂ ತತ್ರ ವಿಸ್ತಾರಂ ಮಧ್ಯೇ ಕಂಠಂ ತು ದ್ವ್ಯಂಗುಲಂ। ಮೇಖಲಂ ತ್ರಿತಯಂ ಕಾರ್ಯಂ ವೇದಾಗ್ನಿ ಮಂಗುಲ ದ್ವಯಂ" ಎಂದು ಹೇಳಿದೆ.)

೨೩. ಹತ್ತುಸಾವಿರ ಆಹುತಿಯ ಹೋಮ ಮುಂತಾದ ದೊಡ್ಡ ಹೋಮಗಳಲ್ಲಿ ಮೇಖಲೆಯು ಎತ್ತರವು ಕುಂಡದ ಆಳದಷ್ಟು ಇರಬೇಕು. ಈ ಆಳದ ಅಳತೆಯನ್ನು ತೆಗೆದುಕೊಳ್ಳುವಾಗ ಬುಡದಿಂದ ಒಂದೂವರೆ ಅಂಗುಲವನ್ನು ಬಿಟ್ಟು ಲೆಕ್ಕಿಸಬೇಕು.

೨೪. ಚತುಷ್ಕೋಣ(ಚತುರಸ್ರ) ಷಡಸ್ರಕುಂಡಗಳಿಗೆ ಮೇಖಲೆಯ ಅಳತೆಯು ಅನುಕ್ರಮವಾಗಿ ಅವಕ್ಕೆ ತಕ್ಕ ಪ್ರಮಾಣದಲ್ಲಿ ಇರಬೇಕು. ಒಂದು ಗುದ್ದುಮೊಳ ಚತುರ್ರಸವಾದ ಕುಂಡದ ಮೇಖಲೆಯ ಎತ್ತರವು ಒಂದೂವರೆಅಂಗುಲ ಇರಬೇಕು.

೨೫ ಕಿರುಬೆರಳು ನೀಡಿದ ಮೊಳ ಅಳತೆಯುಷ್ಟು ವಿಸ್ತಾರವುಳ್ಳ ಕುಂಡಕ್ಕೆ ಮೂರು ಮೆಟ್ಟಲಾದ ಮೇಖಲೆಯಿರಬೇಕು. ಕೆಳಗಿನ ಮೆಟ್ಟಲು ಮೂರು ಅಂಗುಲ, ಅದರ ಮೇಲಿನದು ಎರಡು ಅಂಗುಲ, ಅದರ ಮೇಲಿನದು ಒಂದು ಅಂಗುಲ, ಅಗಲ ಎಲ್ಲವೂ ಒಂದೊಂದು ಅಂಗುಲ ಎತ್ತರ ಇರಬೇಕು. ಒಂದುಮೊಳ ಪೂರ್ತ ವಿಸ್ತಾರ ವುಳ್ಳ ಕುಂಡಕ್ಕೆ ಮೇಖಲೆಯು ಕ್ರಮವಾಗಿ ಕೆಳಗಡೆಯ ಮೆಟ್ಟಲು ನಾಲ್ಕು ಅಂಗುಲ, ಅದರ ಮೇಲಿನದು ಮೂರು ಅಂಗುಲ, ಅದರ ಮೇಲಿನದು ಎರಡು ಅಂಗುಲ ಅಗಲವೂ ಎಲ್ಲವೂ ಒಂದೊಂದು ಅಂಗುಲ ಎತ್ತರವೂ ಇರಬೇಕು.

**ಸಪ್ತಮೇಖಲಕಂ ಯುಕ್ತಂ ಲಕ್ಷಹೋಮೇ ಪ್ರಶಸ್ಯತೇ ।**
**ಪಂಚಮೇಖಲಕಂ ವಾಥ ಲಕ್ಷಕೋಟ್ಯಾಂ ಚ ಯೋಜಯೇತ್ ॥ ೨೬ ॥**

**ಏಕಾಂಗುಲಾದಿ ಮಾನೇನ ನೇಮಿಂ ಸಂವರ್ಧಯೇತ್ಸುಧೀಃ ।**
**ಚತುರ್ಹಸ್ತಮಿತೇ ಕುಂಡೇ ತಾವದೇವ ಗುಣಾಂಗುಲಾ ॥ ೨೭ ॥**

**ಬಹುಹಸ್ತೇ ಭಾನುಪಂಕ್ತಿಯುಗ್ಮಹೀನೇಽಪಿ ತಾಃ ಕ್ರಮಾತ್ ।**
**ಸರ್ವಾಃ ಸಮಾಃ ಗ್ರಹಮಖೇ ಮೇಖಲಾಶ್ಚ ಸಹಸ್ರಕೇ ॥ ೨೮ ॥**

**ಪಾರ್ಶ್ವತೋ ಯೋಜಯೇತ್ತತ್ರ ಮೇಖಲಾಸ್ತಾ ಯಥಾಕ್ರಮಂ ।**
**ಸಾರ್ಧಾಂಗುಲಾದಿಮಾನೇನ ನೇಮಿಂ ಸಂವರ್ಧಯೇತ್ಸುಧೀಃ ॥ ೨೯ ॥**

---

೨೬. ಲಕ್ಷಹೋಮ ಮಾಡಬೇಕಾದಾಗ, ಕುಂಡಕ್ಕೆ ಏಳು ಮೇಖಲೆಗಳಿರುವುದು ಪ್ರಶಸ್ತ. ಐದುಮೇಖಲೆಯ ಕುಂಡವಾದರೂ ಆಗಬಹುದು. ಲಕ್ಷಹೋಮ ಕೋಟಿ ಹೋಮಗಳಿಗೆ ಇಂಥ ಹೆಚ್ಚು ಮೇಖಲೆಯ ಕುಂಡಗಳನ್ನೇ ರಚಿಸಿ ಉಪಯೋಗಿಸ ಬೇಕು.

೨೭. ಬುದ್ಧಿಶಾಲಿಯಾದವನು ಕುಂಡದ ಮೇಖಲೆಗಳು ಒಂದಕ್ಕಿಂತ ಮತ್ತೊಂದು ಒಂದೊಂದುಅಂಗುಲ ಹೆಚ್ಚು ಎತ್ತರವಾಗುವಂತೆ ಮೆಟ್ಟಲು ಮೆಟ್ಟಲಾಗಿ ರಚಿಸಬೇಕು. ನಾಲ್ಕುಮೊಳ ಆಳತೆಯ ಕುಂಡಕ್ಕೆ ಆದರ ಚತುರ್ಗುಣದಷ್ಟು ಅಂಗುಲದ ಮೇಖಲೆಯು ರಚಿತವಾಗಿರಬೇಕು

೨೮. ಅನೇಕಮೊಳ ಆಳತೆಯ (ಎಂಟುಮೊಳ ಅಳತೆಯ) ಕುಂಡಕ್ಕೆ ಹನ್ನೆರಡು ಸಾಲು ಮೇಖಲೆಗಳಿರಬೇಕು. ವಿಷಮ (ಪಂಚ, ಸಪ್ತ, ನವಭುಜ) ಕುಂಡಗಳಿಗೂ ಆದೇ ಕ್ರಮದಲ್ಲಿ ಮೇಖಲಾರಚನೆ ಮಾಡಬೇಕು. ನವಗ್ರಹಹೋಮ, ಸಹಸ್ರಾಹುತಿ ಹೋಮ ಇವುಗಳನ್ನು ಮಾಡುವಾಗ ಕುಂಡದ ಸುತ್ತಿನ ಎಲ್ಲ ಮೇಖಲೆಗಳ ಅಗಲ ಗಳೂ ಸಮವಾಗಿರಬೇಕು.

೨೯. ಈ ಮೇಖಲೆಗಳು ಕುಂಡದ ಹೊರಪಾರ್ಶ್ವದಲ್ಲಿ ಮಾತ್ರ ಕ್ರಮವಾಗಿ ಒಂದೊಂದಾಗಿಪಕ್ಕದಲ್ಲಿ ಸೇರಿಕೊಂಡಂತೆ ಇರಬೇಕು. ವಿದ್ವಾಂಸನಾದವನು ಒಂದೂವರೆ ಅಂಗುಲ ಪ್ರಮಾಣ ಅಗಲವನ್ನಿಟ್ಟಾದರೂ ಮೇಖಲೆಗಳನ್ನು ಹೆಚ್ಚಿಸಿಕೊಳ್ಳಬಹುದು.

**ಏಕಮೇಖಲಯೋಗೇನ ಯೋಜಯೇಚ್ಛಕ್ತಿಭಾವತಃ ।**
**ಹೋಮಾಧಿಕ್ಯೇ ಬಹುಫಲಮನ್ಯೂನಂ ನಾಧಿಕಂ ಭವೇತ್ ॥ ೩೦ ॥**

**ಕುಂಡಸ್ಯ ರೂಪಂ ಜಾನೀಯಾತ್ ಪರಮಂ ಪ್ರಕೃತೇರ್ವಪುಃ ।**
**ತತೋ ಹೋಮೇ ಶತಗುಣಂ ಸ್ಥಂಡಿಲೇ ಸ್ವಲ್ಪಕಂ ಫಲಂ ॥ ೩೧ ॥**

**ಷಟ್ಚತುರ್ಥಾಗುಣಾಯಾಮ ವಿಸ್ತಾರೋನ್ನತಶಾಲಿನೀ ।**
**ಏಕಾಂಗುಲಂ ತಂ ಯೋನ್ಯಗ್ರಂ ಕುರ್ಯಾದೀಷದಧೋಮುಖಂ ॥ ೩೨ ॥**

**ಏಕೈಕಾಂಗುಲತೋ ಯೋನಿಂ ಕುಂಡಶೂನ್ಯೇಷು ವರ್ಧಯೇತ್ ।**
**ಸಮಮಧ್ಯೇ ಮೇಖಲಾಯಾಃ ಸಪರ್ಯಾ ಯಾ ಸುಲಕ್ಷಣಾ ॥ ೩೩ ॥**

---

೩೦. ಒಂದೇ ಮೇಖಲೆಯನ್ನು ರಚಿಸಿದ ಕುಂಡಗಳಲ್ಲಿ ದೇವಿಶಕ್ತಿಯೂ ಇದ್ದಂತೆ ಭಾವಿಸಿ ಹೆಚ್ಚಾಗಿ ಹೋಮಮಾಡಿದಷ್ಟೂ ಫಲ ಹೆಚ್ಚು. ಇದಕ್ಕಾಗಿ ಕುಂಡದ ರೂಪವನ್ನು ಮಾತ್ರ ಹೆಚ್ಚುಕಡಿಮೆಮಾಡಬಾರದು.

೩೧. ಹೋಮಕುಂಡವನ್ನು ಶ್ರೇಷ್ಠವಾದ ಮೂಲಪ್ರಕೃತಿಯ ಶರೀರವೆಂಬ ಭಾವನೆಯಿಂದ ಹೋಮಮಾಡಿದರೆ ಒಂದಕ್ಕೆ ನೂರರಷ್ಟುಫಲ. ಅದು ಸಾಮಾನ್ಯ ನೆಲವೆಂದು ಭಾವಿಸಿ ಹೋಮಮಾಡಿದರೆ ಫಲವು ಸ್ವಲ್ಪವೇ ಬರುವುದು.

೩೨. ಆರುಮೊಳ ಉದ್ದ, ನಾಲ್ಕುಮೊಳ ಅಗಲ, ಮೂರುಮೊಳ ಎತ್ತರವುಳ್ಳದ್ದಾಗಿರುವ ಕುಂಡದಲ್ಲಿ, ಮುಂಭಾಗದಲ್ಲಿ ರಚಿಸಿರುವ ಯೋನಿಯ ತುದಿಯು ಒಂದು ಅಂಗುಲದಷ್ಟು ಅಧೋಮುಖವಾಗಿರುವಂತೆ ಮಾಡಬೇಕು.

೩೩-೩೪ ಶಾಸ್ತ್ರೋಕ್ತವಾದ ಅಳತೆಯ ಕುಂಡವು ಇಲ್ಲದ ಪಕ್ಷದಲ್ಲಿಯಾಗಲಿ, ಕುಂಡದ ಅಳತೆಯು ವ್ಯತ್ಯಾಸವಾಗಿದ್ದ ಪಕ್ಷದಲ್ಲಿಯಾಗಲಿ, ಒಂದೊಂದುಅಂಗುಲದಂತೆ ಯೋನಿಯ ಪ್ರಮಾಣವನ್ನು ಹೆಚ್ಚಿಸಿಕೊಳ್ಳಬೇಕು. ಸುತ್ತಿನ ಮೇಖಲೆಯಲ್ಲಿ ಮುಂಭಾಗದ ಮೇಖಲೆಯ ಮಧ್ಯಕ್ಕೆ ಸರಿಯಾಗಿ ಪೂಜೆಮಾಡಿದರೆ ಸುಲಕ್ಷಣವಾಗಿರುವುದು. ಈ ಯೋನಿಯನ್ನು ಕುಂಡಕೋಣಗಳಲ್ಲಿ ಸ್ಥಾಪಿಸಬೇಕು. ಕುಂಡಗಳ ನಾಭಿಯು ಕಮಲಾಕೃತಿಯಾಗಿ ಸ್ಫುಟವಾಗಿ ಕಾಣುವಂತೆ ರಚಿತವಾಗಿರಬೇಕು. ಇದೇ ವಿಚಾರವಾಗಿ ಗ್ರಂಥಾಂತರದಲ್ಲಿ "ಗಜತುಂಡಾಕೃತಿರ್ನಾಭೌ ಮಧ್ಯೇಪಿಪ್ಪಲ ಪತ್ರವತ್" ಎಂಬದಾಗಿ

ಸ್ಥಾಪಯೇತ್ಕುಂಡಕೋಣೇಷು ಯೋನಿಂ ತಾಂ ದ್ವಿಜಸತ್ತಮಾಃ ।
ಕುಂಡಾನಾಂ ಕಲ್ಪಯೇನ್ನಾಭಿಂ ಸ್ಫುಟಮಂಬುಜಸನ್ನಿಭಾಂ ॥ ೩೪ ॥

ತತ್ತು ಕುಂಡಾನುರೂಪಂ ವಾ ಸುವ್ಯಕ್ತಂ ಸುಮನೋಹರಂ ।
ಯೋನಿಕುಂಡೇ ಯೋನಿಮಬ್ಜಂ ಕುಂಡೇ ನಾಭಿಂ ಚ ವರ್ಜಯೇತ್॥೩೫॥

ಯಾವದ್ಯವಪ್ರಮಾಣೇನ ಅರ್ಧಾಂಗುಲಕ್ರಮಾದ್ಬಹಿಃ
ನಾಭಿಂ ಪ್ರವರ್ಧಯೇದೇಕಂ ಕುಂಡಾನಾಂ ರೂಪತೋ ಯಥಾ ॥ ೩೬ ॥

ತತ್ರತತ್ರ ಭವೇತ್ಕುಂಡಂ ಬಿಂಬಶೂನ್ಯಂ ನ ಹೋಮಯೇತ್ ।
ಶಿವಶಕ್ತಿಸಮಾಯೋಗಾತ್ ಕಾಮ ಉತ್ಪದ್ಯತೇ ಯಃ ॥ ೩೭ ॥

---

ಹೇಳಿದಾನೆ. ಯಾಜಕನು ಕುಳಿತುಕೊಳ್ಳುವ ಕುಂಡದ ಮೇಖಲೆಗೆ ಭೂಮಿಯಿಂದ ಓರೆಯಾಗಿ ಕಡೆ ಆನೆಯಸೊಂಡಲಿನಂತಹ ದುಂಡಾದ ದಿಂಡು ಏರಿಬಂದಂತೆ ರಚಿತವಾಗಿ ಅದರ ತುದಿಯಲ್ಲಿ ಕಮಲಾಕೃತಿಯೋ ಅರಳಿಎಲೆಯ ಆಕೃತಿಯೋ ಆಗಿ ರಚಿತ ವಾಗಿರುವುದನ್ನು ಸಾಮಾನ್ಯವಾಗಿ ಎಲ್ಲ ಕುಂಡಗಳಲ್ಲಿಯೂ ಕಾಣಬಹುದು.

೩೫. ಹೀಗೆ ರಚಿತವಾಗುವ ನಾಭಿ, ಯೋನಿ, ಇವುಗಳು ಆಯಾ ಕುಂಡದ ಅಳತೆಗೆ ಅನುಸಾರವಾಗಿರಬೇಕು. ಮತ್ತು ಪ್ರಕಾಶವಾಗಿ ಚೆನ್ನಾಗಿ ಕಾಣುವಂತೆ ಮನೋಹರವಾಗಿ ರಚಿತವಾಗಿರಬೇಕು. ಯೋನಿಕುಂಡದಲ್ಲಿ ಯೋನಿರಚನೆಯನ್ನು ಮಾಡಬಾರದು. ಮಿಕ್ಕ ಕುಂಡಗಳಿಗೆ ಯೋನಿಯನ್ನು ರಚಿಸಿರಬೇಕು. ಪದ್ಮಕುಂಡದಲ್ಲಿ ನಾಭಿರಚನೆಯು ಅನವಶ್ಯ. ಮಿಕ್ಕಕುಂಡಗಳಿಗೆ ನಾಭಿಯನ್ನು ರಚಿಸಬೇಕು.

೩೬. ಕುಂಡಗಳ ಆಕಾರಕ್ಕೆ ತಕ್ಕಹಾಗೆ ಒಂದು ಅಕ್ಕಿಯಕಾಳಿನ ಪ್ರಮಾಣದಿಂದ ಅರ್ಧಅಂಗುಲ ಪ್ರಮಾಣದವರೆಗೆ, ಹೊರಗೆ ಕುಂಡನಾಭಿಯನ್ನು ಹೆಚ್ಚಿಸಿಕೊಳ್ಳಬಹುದು.

೩೭-೩೮. ಹಿಂದೆ ಎಂದೋ ರಚಿತವಾಗಿದ್ದ ಕುಂಡಗಳು ಅಲ್ಲಲ್ಲಿ ಇರುತ್ತವೆ. ಅದು ಬಿಂಬಶೂನ್ಯವಾಗಿದ್ದರೆ ಅದರಲ್ಲಿ ಹೋಮಮಾಡಬಾರದು. ಶಿವ ಮತ್ತು ಶಕ್ತಿ ಇವರ ಸಮಾಗಮದಿಂದ ಫಲವು ಲಭ್ಯವಾಗಬೇಕು. ಶಕ್ತಿ ಎನಿಸಿದ ಉಮಾದೇವಿಯು ಕುಂಡದ (ಹಳ್ಳ) ಗರ್ತಸ್ವರೂಪಳು. ಸದಾಶಿವನು ಕುಂಡದ ಬಿಂಬಸ್ವರೂಪನು ಎಂಬದಾಗಿ ಪ್ರಸಿದ್ಧವಾಗಿದೆ. ಶಿವ ಶಕ್ತಿ ಈ ದ್ವಯದಲ್ಲಿ ಯಾವುದು ಹೀನವಾಗಿರುವಂತೆ

**ಅವಟೋಪಿ ಉಮಾದೇವೀ ಬಿಂಬಃ ಖ್ಯಾತಃ ಸದಾಶಿವಃ ।**
**ನ ಕುರ್ಯಾದೇಕಯಾ ಹೀನಂ ಮರಣಂ ಚ ಸಮುದ್ದಿಶೇತ್ ॥ ೩೮ ॥**

**ತ್ರಯೋದಶಾಂಗುಲಂ ಹಿತ್ವಾ ವಹ್ನಿಹಸ್ತಮಥಾಪಿ ವಾ ।**
**ಮಹಾತೀರ್ಥೇ ಸಿದ್ಧಕ್ಷೇತ್ರೇ ಯತ್ರ ಶಂಭುಗೃಹೇ ಕುಲೇ ॥ ೩೯ ॥**

**ತಸ್ಯ ದಕ್ಷಿಣದಿಗ್ಭಾಗೇ ಅಗ್ರತೋ ಮಂಡಲಂ ಲಿಖೇತ್ ।**
**ತತ್ರ ಪೂಜಾ ಪ್ರಕರ್ತವ್ಯಾ ಪೂರ್ವಮಾನೇನ ಚಾಶ್ರಯೇತ್ ॥ ೪೦ ॥**

**ಅರ್ಕಹಸ್ತಾಂತರೇ ಕುರ್ಯಾಚ್ಛತೋಧ್ವಾಂತೇ ಶತೇನ ವಾ ॥ ೪೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ**
**ಪ್ರಥಮಭಾಗೇ ತ್ರಯೋದಶೋಽಧ್ಯಾಯಃ.**



---

ಮಾಡಿ ಹೋಮಾದಿಕಾರ್ಯಗಳನ್ನು ಮಾಡಿದರೆ ಹಾಗೆ ಮಾಡಿದವರು ಮರಣ ಹೊಂದುವರು. ಆದುರಿಂದ ಬಿಂಬ, ಗರ್ತ ಇವುಗಳಲ್ಲಿ ಯಾವು ಹೀನವಾಗುವಂತೆ ರಚಿಸಬಾರದು.

೩೯-೪೦. ಪುಣ್ಯತೀರ್ಥಸಮೀಪ, ಪುಣ್ಯನದೀತೀರ, ಸಿದ್ಧಕ್ಷೇತ್ರ, ಶಿವಾಲಯ, ಮನೆ ಇವುಗಳಲ್ಲಿ ಹದಿಮೂರು ಅಂಗುಲವನ್ನಾದರೂ ಬಿಟ್ಟು ಅಥವಾ ಮೂರುಮೊಳ ದೂರವನ್ನು ಬಿಟ್ಟು ಅದರ ಬಲಗಡೆ ಕುಂಡವನ್ನು ರಚಿಸಿ, ಮುಂಭಾಗದಲ್ಲಿ ಮಂಡಲ ವನ್ನು ಬರೆಯಬೇಕು. ಅಲ್ಲಿ ಹಿಂದೆ ಹೇಳಿದ ಅಳತೆಯ ಕ್ರಮವನ್ನೇ ಅನುಸರಿಸಿ ರಚಿಸಿ, ಪೂಜೆ ಮೊದಲಾದುವನ್ನು ನೆರವೇರಿಸಬೇಕು.

೪೧. ನೂರುಹಸ್ತವೋ ಅಥವಾ ನೂರುಹಸ್ತಕ್ಕಿಂತ ಹೆಚ್ಚಾಗಿಯೋ ವಿಸ್ತಾರ ವಿರುವ ಪ್ರದೇಶದಲ್ಲಿಯಾದರೆ ಹನ್ನೆರಡುಮೊಳ ಅಂತರದಲ್ಲಿ ಕುಂಡವನ್ನು ಮಾಡಬೇಕು

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮ ಪರ್ವಣಿ ಪ್ರಥಮಭಾಗೇ

## ಚತುರ್ದಶೋಽಧ್ಯಾಯಃ

॥ ಸೂತ ಉವಾಚ ॥

ಯಸ್ಯ ಯಜ್ಞಸ್ಯ ಯನ್ಮಾನಂ ತತ್ತು ತೇನೈವ ಯೋಜಯೇತ್ ।
ಅಮಾನೇನ ಹತೋ ಯಜ್ಞಃ ತಸ್ಮಾನ್ಮಾನಂ ನ ಹಾಪಯೇತ್ ॥ ೧ ॥

ಶತಾರ್ಧಂ ಪ್ರಥಮಂ ಮಾನಂ ಶತಸಾಹಸ್ರಮೇವ ಚ ।
ಅಯುತಂ ಚ ತಥಾ ಲಕ್ಷಂ ಕೋಟಿಹೋಮಮತಃ ಪರಂ ॥ ೨ ॥

---

## ಹದಿನಾಲ್ಕನೆಯ ಅಧ್ಯಾಯ

೧. ಸೂತಮಹರ್ಷಿಗಳು ಕುಂಡ ಮೊದಲಾದುವುಗಳ ವಿಚಾರವನ್ನು ಮುಂದು ವರಿಸಿ ಹೇಳುತ್ತಾರೆ—ಯಾವ ಯಜ್ಞಮಾಡುವುದಕ್ಕೆ ಕುಂಡದ ಅಳತೆ ಎಷ್ಟಿರಬೇಕೆಂದು ಉಕ್ತವಾಗಿದೆಯೋ, ಆ ಯಜ್ಞಕ್ಕೆ ಅಷ್ಟು ಅಳತೆಯುಳ್ಳ ಕುಂಡವನ್ನೇ ರಚಿಸಬೇಕು. ಆಯಾ ಯಜ್ಞಕ್ಕೆ ಕ್ಲುಪ್ತವಾದ ಅಳತೆಗನುಸಾರವಾಗಿ ರಚಿಸದೆ ಇರುವ ಕುಂಡದಲ್ಲಿ ಯಜ್ಞಮಾಡಿದರೆ ಅದು ನಿಷ್ಫಲ. ಆದುದರಿಂದ ಕ್ಲುಪ್ತವಾದ ಅಳತೆಯಂತೆ ಕುಂಡರಚನೆ ಮಾಡುವ ವಿಚಾರದಲ್ಲಿ ಎಂದೂ ಅಲಕ್ಷ್ಯಮಾಡಬಾರದು

೨-೩. ಐವತ್ತುಆಹುತಿ ಸಂಖ್ಯೆಯುಳ್ಳ ಹೋಮವೇ ಪ್ರಥಮದರ್ಜೆಯದು. ಅದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಎಂದರೆ ನೂರು, ಸಾವಿರ, ಹತ್ತುಸಾವಿರ, ಲಕ್ಷ, ಕೋಟಿ ಈ ಪ್ರಕಾರ ಸಂಖ್ಯೆಯ ಆಹುತಿಯುಳ್ಳದಾಗಿರಬಹುದು. ಅನುಕೂಲವಿದ್ದರೆ ಅದಕ್ಕಿಂತಲೂ ಹೆಚ್ಚುಸಂಖ್ಯೆಯ ಹೋಮವನ್ನೂ ಮಾಡಬಹುದು. ಅಂತಹ ವೈಭವ ಕಾರ್ಯಗಳು ಸಾಮಾನ್ಯವಾಗಿ ರಾಜರಿಗೋ, ಅಥವಾ ಬೇರೆ ಅನುಕೂಲಶಾಲಿಗೋ

**ಅತಃಪರಂ ತು ವಿಭವೇ ರಾಜಾ ವಾನ್ಯೋ ದ್ವಿಜೋತ್ತಮಾಃ ।**
**ನ ಸ ಸಿದ್ಧಿಮವಾಪ್ನೋತಿ ಅಯಾಗಫಲಭಾಗ್ಭವೇತ್ ॥ ೩ ॥**

**ವಿಪಾಕಂ ಕರ್ಮಣಾಂ ಸರ್ವಂ ನರಃ ಪ್ರಾಪ್ನೋತಿ ಸರ್ವದಾ ।**
**ಶುಭಾಶುಭಂ ತತೋ ನಿತ್ಯಂ ಪ್ರಾಪ್ನೋತಿ ಮನುಜಃ ಕಿಲ ॥ ೪ ॥**

**ಯುಕ್ತಾಶ್ಚಾಪಿ ಗ್ರಹಾಸ್ತಸ್ಯ ನಿತ್ಯಂ ಶಾಂತಿಕಪೌಷ್ಟಿಕೇ ।**
**ತಸ್ಮಾತ್ಪ್ರಯತ್ನತೋ ಭಕ್ತ್ಯಾ ನಿತ್ಯಂ ಪೂಜಾ ಯಥಾವಿಧಿ ॥ ೫ ॥**

**ಅದ್ಭುತೇ ಚ ತಥಾ ಶಾಂತಿಂ ಕುರ್ಯಾದ್ಭಕ್ತಿಸಮನ್ವಿತಃ ।**
**ತಸ್ಮಾದ್ಗ್ರಹಾಭಿಜನಿತಂ ಶುಭಾಶುಭಫಲಂ ಖಲು ॥ ೬ ॥**

---

ಮಾಡಲುಸಾಧ್ಯ. ಅಯ್ಯಾ ವಿಪ್ರೋತ್ತಮರೇ! ಕೇಳಿ; ಅನುಕೂಲಶಾಲಿಯಾಗಿದ್ದೂ ಅಂತಹ ಹೋಮಾದಿಗಳನ್ನು ಮಾಡದೆ ಹೋದರೆ ಅವನು ಸಿದ್ಧಿಹೊಂದುವುದಿಲ್ಲ. ಮತ್ತು ಮಾಡಿದ ಯಾಗವೂ ನಿಷ್ಫಲವಾಗುವುದು.

೪. ಮನುಷ್ಯನು ಯಾವಾಗಲೂ ತನ್ನ ಕರ್ಮಕ್ಕೆ ಅನುಸಾರವಾಗಿ ಸಮಸ್ತ ಫಲವನ್ನೂ ಹೊಂದುತ್ತಾನೆ. ಆದುದರಿಂದಲೇ ಯಾವಾಗಲೂ ಮಾನವನು ಶುಭಾಶುಭ ಫಲಗಳೆರಡನ್ನೂ ಹೊಂದುವನು.

೫. ಕುಹೂ ಇತ್ಯಾದಿ ಯೋಗಗಳೊದಗಿದಾಗ ಮಾಡುವ ಶಾಂತಿ ಹೋಮಗಳಲ್ಲಿಯೂ, ಕಾಮ್ಯಸಿದ್ಧಿಗಾಗಿ ಮಾಡುವಪೌಷ್ಟಿಕಹೋಮದಲ್ಲಿಯೂ ನವಗ್ರಹಹೋಮವು ನಡೆದೇನಡೆಯುವುದು. ಆದುದರಿಂದ ಯಾವಾಗಲೂ ಪ್ರಯತ್ನಪಟ್ಟು ಭಕ್ತಿಪೂರ್ವಕವಾಗಿ ವಿಧಿವಿಧಾನವನ್ನು ಅತಿಕ್ರಮಿಸದೆ ಪೂಜಾದಿಗಳನ್ನು ಮಾಡಬೇಕು.

೬. ಅದ್ಭುತಗಳು ಎಂದರೆ ಧೂಮಕೇತುದರ್ಶನ, ವೀರಕ್ಷಾಮ, ಮಹಾಮಾರಿಕೋಪದ್ರವ ಇವು ಪ್ರಾಪ್ತವಾದಾಗ ವಿಶೇಷ ಭಕ್ತಿಯುಕ್ತನೂ, ವಿಶೇಷ ನಿಯಮಪರನೂ ಆಗಿ, ವಿಧಿಪ್ರಕಾರ ಸ್ವಲ್ಪವೂ ಲೋಪವಿಲ್ಲದೆ ಶಾಂತಿಕರ್ಮವನ್ನು ಮಾಡಲೇಬೇಕು. ನವಗ್ರಹಹೋಮ ಮಾಡುವುದರಿಂದ ಶುಭಫಲಗಳೂ, ನವಗ್ರಹಹೋಮ ಮಾಡದೆ ತಾತ್ಸಾರಮಾಡುವುದರಿಂದ ಅಶುಭಫಲಗಳೂ ಉಂಟಾಗುವುವು.

ಅದ್ಭುತೇಷು ಚ ಸರ್ವೇಷು ಅಯುತಂ ಕಾರಯೇನ್ನರಃ ।
ಹೋಮಂ ಯಥಾಭಿರುಚಿತಂ ಪೌಷ್ಟಿಕೇ ಕಾಮ್ಯಕರ್ಮಣಿ ॥ ೭ ॥

ಲಕ್ಷಹೋಮಂ ಕೋಟಿಹೋಮಂ ರಾಜಾ ಕುರ್ಯಾದ್ಯಥಾವಿಧಿ ।
ಅನ್ಯಃ ಶತಾದಿಕಂ ಕುರ್ಯಾದಯುತಂ ವಿಭವೇ ಸತಿ ॥ ೮ ॥

ಗ್ರಹಾಣಾಂ ಲಕ್ಷಹೋಮಸ್ತು ಕೋಟಿಹೋಮಸ್ತಥಾ ಕಲೌ ।
ನಿಧಿಹೋಮಂ ಚಾಭಿಸಾರಂ ತನ್ನ ಕುರ್ಯಾದ್ಗೃಹಾಶ್ರಮೀ ॥ ೯ ॥

ಯತ್ರಯತ್ರ ಜಪಃ ಕಾರ್ಯೋ ಹೋಮೋ ವಾ ಯತ್ರಕುತ್ರಚಿತ್ ।
ಮಾನಂ ನೈವ ಚ ಕರ್ತವ್ಯಂ ಮಾನಾದೌ ಚಾಷ್ಟಕಂ ನ್ಯಸೇತ್ ॥ ೧೦ ॥

---

೭. ಎಲ್ಲ ವಿಧವಾದ ಅದ್ಭುತಾರಿಷ್ಟಪ್ರಾಪ್ತಿ ಸಂದರ್ಭಗಳಲ್ಲಿ ಹತ್ತುಸಾವಿರ ಆಹುತಿಹೋಮವನ್ನು ಮಾಡಬೇಕು. ಕಾಮ್ಯಸಿದ್ಧ್ಯರ್ಥವಾದ ಪೌಷ್ಟಿ ಹೋಮಕರ್ಮ ದಲ್ಲಿ ಮಾತ್ರನಮ್ಮ ಇಷ್ಟಬಂದಷ್ಟು ಸಂಖ್ಯೆಯ ಆಹುತಿಹೋಮವನ್ನು ಮಾಡಬಹುದು.

೮. ಲಕ್ಷಹೋಮ, ಕೋಟಿಹೋಮ ಇಂತಹ ಮಹತ್ತರವಾದ ಹೋಮಕರ್ಮ ವನ್ನು ವಿಧಿಪ್ರಕಾರ ಮಾಡಿಸಿ ನಿರ್ವಹಿಸಲು ರಾಜರಿಗೆ ಸಾಧ್ಯವಾಗುವುದು. ಸಾಮಾನ್ಯ ಮಾನವರು ಸಾಧಾರಣ ಸಂದರ್ಭಗಳಲ್ಲಿ ಶತಾಹುತಿಹೋಮವನ್ನು ಧಾರಾಳವಾಗಿ ಮಾಡಬಹುದು. ಅನುಕೂಲ ಚೆನ್ನಾಗಿದ್ದವರು ಹತ್ತುಸಾವಿರ ಆಹುತಿಹೋಮವನ್ನೂ ಮಾಡಬಹುದು.

೯. ಕಲಿಯುಗದಲ್ಲಿ ಗೃಹಸ್ಥನಾದವನು ನವಗ್ರಹ ಪ್ರೀತ್ಯರ್ಥವಾಗಿ ಲಕ್ಷ ಹೋಮ ಕೋಟಿಹೋಮಗಳನ್ನು ಮಾಡಬಹುದು. ನಿಧಿಪ್ರಾಪ್ತ್ಯರ್ಥವಾದ ಹೋಮ ವನ್ನೂ ಮಾಟ, ಶೂನ್ಯ ಮುಂತಾದ್ದಕ್ಕೆ ಅಂಗವಾದ ಅಭಿಚಾರಹೋಮವನ್ನೂ ಕಲಿ ಯುಗದಲ್ಲಿ ಸಂಸಾರವಂದಿಗರು ಮಾಡಬಾರದು.

೧೦. ಎಲ್ಲಿ ಜಪಮಾಡಬೇಕಾಗಿಬರುವುದೋ ಅಲ್ಲೂ, ಎಲ್ಲಿ ಹೋಮಮಾಡ ಬೇಕಾಗಿಬರುವುದೋ ಆ ಸಂದರ್ಭದಲ್ಲೂ, ಅಳತೆಯ ಕ್ಲುಪ್ತಸಂಖ್ಯೆಯನ್ನು ಉಚ್ಚರಿ ಸಬಾರದು. (ಎಂದರೆ ಆಯುಸ್ಸು ಅನಿತ್ಯವಾದುದರಿಂದ ಸಂಕಲ್ಪದಲ್ಲಿ ಲಕ್ಷ, ಕೋಟಿ, ಇತ್ಯಾದಿಗಳನ್ನು ನಿರ್ದೇಶಮಾಡಿ ನೆರವೇರಿಸಲಾರದೆ ಕಾರ್ಯಕ್ಕೆ ವಿಘಾತವಾಗಿ ಹಾನಿ ತಟ್ಟುವುದು. ಆದ್ದರಿಂದ ಯಥಾಶಕ್ತಿ ಎನ್ನುವುದು ರೂಢಿ) ಹಾಗೆ ಸಂಕಲ್ಪಪೂರ್ವಕ ನೂಡುವುದರ ಪ್ರತಿಯಾಗಿ ಆದಿಯಲ್ಲಿ ಅಷ್ಟಕವನ್ನು ನ್ಯಾಸಮಾಡಬೇಕು.

**ಯುಗ್ಮಸಾಧ್ಯಂ ನ ಕರ್ತವ್ಯಂ ಯುಗ್ಮತೋ ಭಯಮಾದಿಶೇತ್ ।**
**ಲಕ್ಷೇ ಸಪ್ತತಾಲಸಂಖ್ಯಾ ಕೋಟಿಹೋಮೇ ಚ ವಿಶಂತಿಃ ॥ ೧೧ ॥**

**ಏಕತ್ರಿಂಶದ್ದಿನೈರ್ವಾಪಿ ನ ಕುರ್ಯಾದ್ವ್ಯತ್ಯಯಂ ಕ್ವಚಿತ್ ।**
**ಆರಂಭಸ್ತ್ರಿಸಹಸ್ರಃ ಸ್ಯಾದ್ದ್ವಿತೀಯೇಽಷ್ಟಸಹಸ್ರಕಃ ॥ ೧೨ ॥**

**ತೃತೀಯೇ ತು ಸಹಸ್ರಂ ಸ್ಯಾದ್ಗ್ರಹಸಾಧ್ಯಃ ಸ್ಮೃತೋ ವಿಧಿಃ ।**
**ಪಂಚಾಹೇ ಚ ಸಮಾರಂಭೇ ಸಹಸ್ರಂ ಜುಹುಯಾದ್ಬುಧಃ ॥ ೧೩ ॥**

**ದ್ವಿತೀಯೇಽಹ್ನಿ ದ್ವಿಸಾಹಸ್ರಂ ತೃತೀಯೇ ತು ಸಹಸ್ರಕಂ ।**
**ಗುಣಸಾಹಸ್ರಕಂ ತುರ್ಯೇ ಪಂಚಾಹೇ ಶೇಷಮೀರಿತಂ ॥ ೧೪ ॥**

---

೧೧. ಇಂಥ ದೊಡ್ಡ ಕರ್ಮವು ಇಬ್ಬರ ಯಜಮಾನ್ಯದಲ್ಲಿ ನೆರವೇರುವಂತೆ ಮಾಡಬಾರದು. ಹೀಗೆ ಯುಗ್ಮಸಾಧ್ಯವನ್ನಾಗಿ ಮಾಡಿದರೆ ಕೆಲವುವೇಳೆ ಭಯಕ್ಕೆ ಕಾರಣವಾಗುವುದು. ಲಕ್ಷಹೋಮಕ್ಕೆ ಏಳುತಾಳ ಪ್ರಮಾಣದಲ್ಲಿಯೂ ಕೋಟಿಹೋಮಕ್ಕೆ ಇಪ್ಪತ್ತು ತಾಳಪ್ರಮಾಣದಲ್ಲಿಯೂ ಏರ್ಪಡಿಸಬೇಕು.

೧೨-೧೪. ಹೀಗೆ ಏರ್ಪಡಿಸಿಕೊಂಡು ಅಂತಹ ದೊಡ್ಡ ಹೋಮಗಳನ್ನು ಮೂವತ್ತೊಂದು ದಿನಗಳಲ್ಲಿ ಪೂರ್ತಿಮಾಡಬೇಕು. ಇಂತಹ ಕರ್ಮಗಳಲ್ಲಿ ಉಕ್ತವಿಧಿಗಳಿಗೆ ಸ್ವಲ್ಪವೂ ವ್ಯತಿರಿಕ್ತವಾಗಿ ಮಾಡಬಾರದು. ಮೊದಲನೆಯದಿನ ಮೂರುಸಹಸ್ರ, ಎರಡನೆಯದಿನ ಎಂಟುಸಹಸ್ರ, ಮೂರನೆಯದಿನ ಒಂದುಸಾವಿರ ಈ ರೀತಿಯಲ್ಲಿ ಗ್ರಹಹೋಮ ಮಾಡಿದರೆ ಅದರಿಂದ, ವಿಧಿಯಂತೆ ಕರ್ಮವು ಸಾಂಗವಾಗಿ ನಡೆದು ಕಾರ್ಯಸಿದ್ಧಿಯಾಗುವುದು. ಪರಿಶ್ರಮವುಳ್ಳ ವಿದ್ವಾಂಸನು ಐದನೆಯದಿನ ಮಾಡಬೇಕಾದ ಸಮಾರಂಭದಲ್ಲಿಯೂ ಒಂದುಸಹಸ್ರಹೋಮ ಮಾಡಬೇಕೆಂಬುದು ಒಂದುಮತ. ಎರಡನೆಯದಿನ ಎರಡುಸಾವಿರ, ಮೂರನೆಯದಿನ ಒಂದುಸಾವಿರ, ನಾಲ್ಕನೆಯ ದಿನ ಮೂರುಸಾವಿರ, ಐದನೆಯದಿನ ಮಿಕ್ಕಷ್ಟುಸಾವಿರ ಹೀಗೆ ಮಾಡಬೇಕೆಂದು ಮತ್ತೊಂದುಕಡೆ ಹೇಳಿದೆ.

ನವಾಹೇ ಕಲ್ಪಯೇಲ್ಲಕ್ಷಮೇಕೈಕಾಂಗಂ ದಿನೇ ದಿನೇ ।
ಪಂಚಮೇ ಚ ತಥಾ ಷಷ್ಠೇ ಕುಲೇ ಭಾಗದ್ವಯಾಧಿಕಂ ॥ ೧೫ ॥

ಕೋಟಿಹೋಮೇ ಚ ತಿಥ್ಯಂಗೇ ಶತಭಾಗೇನ ಕಲ್ಪಯೇತ್ ।
ನ ನ್ಯೂನಂ ನಾಧಿಕಂ ಕಾರ್ಯಮೇತನ್ಮಾನಮುದಾಹೃತಂ ॥ ೧೬ ॥

ನಿತ್ಯಮೇಕಂ ದಿನೇ ದದ್ಯಾತ್ಪೃಥಙ್ನಿತ್ಯಂ ನ ಚಾಚರೇತ್ ।
ಸ ಸಮಾಜೇ ಜಪೇನ್ನಿತ್ಯಂ ಪಂಚತಾರೇಣ ಸ್ವಿಷ್ಟಕೃತ್ ॥ ೧೭ ॥

ಅಯುತೇ ಲಕ್ಷಹೋಮೇ ಚ ಕೋಟಿಹೋಮೇ ಚ ಸರ್ವದಾ ।
ಪ್ರಥಮೇ ದಿವಸೇ ಕುರ್ಯಾದ್ದೇವತಾನಾಂ ಚ ಸ್ಥಾಪನಂ ॥ ೧೮ ॥

---

೧೫. ಮನೆಯಲ್ಲಿ ಲಕ್ಷಹೋಮ ಮಾಡಬೇಕಾದರೆ, ಒಂಭತ್ತುದಿನಗಳಲ್ಲಿ ನಡೆಯುವಂತೆ ಸಂಕಲ್ಪಿಸಬೇಕು. ಪ್ರತಿದಿನವೂ ಒಂದು ಅಂಗ ಭಾಗದಷ್ಟು ಹೋಮ ನಡೆಯುವಂತೆ ಏರ್ಪಡಿಸಬೇಕು. ಐದನೆಯದಿನ ಮತ್ತು ಆರನೆಯದಿನಗಳಲ್ಲಿ ಅದರ ಹಿಂದಿನ ದಿನಗಳಲ್ಲಿ ನಡೆದ ಹೋಮದ ಎರಡರಷ್ಟು ಹೋಮವನ್ನು ಅಧಿಕವಾಗಿ ಮಾಡಬೇಕು.

೧೬. ಕೋಟಿಹೋಮ ಮಾಡಬೇಕಾದ ಸಂದರ್ಭದಲ್ಲಿ ತಿಥಿಸಂಖ್ಯೆಯಾದ ಹದಿನೈದುದಿನದಲ್ಲಿ ನಡೆಯಿಸುವಂತೆ ಸಂಕಲ್ಪಮಾಡಿ, ನೂರುಹೋಮಕ್ಕೆ ಒಂದು ಅಂಗವಾಗಿ ವಿಂಗಡಿಸಬೇಕು. ಇದಕ್ಕೆ ಕಡಿಮೆಯಾಗಿ ಆಗಲಿ ಹೆಚ್ಚಾಗಿ ಆಗಲಿ ಮಾಡಬಾರದು. ಇದೇ ಸರಿಯಾದ ಪ್ರಮಾಣವೆಂದು ತಿಳಿಯಬೇಕು.

೧೭. ಪ್ರತಿದಿನದಲ್ಲಿ ಒಂದೊಂದು ನಿತ್ಯಹೋಮವನ್ನು ಮಾಡಬೇಕು, ಆದರೆ ಇದನ್ನು ಅವುಗಳ ಎಂದರೆ ಆ ಅಂಗಗಳ ಜೊತೆಯಲ್ಲಿ ಸೇರಿಸದೆ, ಪ್ರತ್ಯೇಕವಾಗಿ ಮಾಡಬಾರದು. ಸ್ವಿಷ್ಟಕೃತ್ ಹೋಮವನ್ನು ಮಾಡುವಾಗ ಪಂಚಪ್ರಣವೋಚ್ಚಾರಣಪೂರ್ವಕವಾಗಿ ಮಾಡಬೇಕು.

೧೮. ಹಿಂದೆ ಹೇಳಿದ ಹೋಮಪ್ರಭೇದಗಳ ಸಮುದಾಯಮಧ್ಯದಲ್ಲಿ ಇದನ್ನು ಮಾಡಬೇಕೇ ವಿನಾ, ಪ್ರತ್ಯೇಕವಾಗಿ ಮಾಡಬಾರದು. ದಶಸಹಸ್ರಹೋಮ, ಲಕ್ಷಹೋಮ, ಕೋಟಿಹೋಮ ಇವುಗಳನ್ನು ಮಾಡುವಾಗ ಯಾವಾಗಲೂ ಮೊದಲನೆಯದಿವಸ ಕಲಶಗಳನ್ನಿಟ್ಟು ದೇವತಾಸ್ಥಾಪನೆಯನ್ನು ಮಾಡಬೇಕು.

**ಮಹೋತ್ಸವೇ ದ್ವಿತೀಯೇ ತು ಬಲಿದಾನಂ ತಥೈವ ಚ ।**
**ತ್ರ್ಯಹಸ್ಯಾಥ್ಯೇ ತ್ರಿರಾತ್ರೇ ಚ ಪೂರ್ಣಂ ಕೃತ್ವಾ ವಿಸರ್ಜಯೇತ್ ॥ ೧೯ ॥**

**ಪಂಚಾಹೇ ತು ತೃತೀಯೇಽಹ್ನಿ ಬಲಿದಾನಂ ಪ್ರಶಸ್ಯತೇ ।**
**ಸಪ್ತಾಹೇ ಚಾಷ್ಟದಿವಸೇ ನವಾಹೇ ಪಂಚಮೇಽಹನಿ ॥ ೨೦ ॥**

**ಪಂಚಾಹೇ ದ್ವಾದಶಾಹೇ ತು ದ್ವಾತ್ರಿಂಶತ್ಷೋಡಶೇಽಹನಿ ।**
**ಇತ್ಥೋಽನ್ಯಥಾ ನ ಕುರ್ವೀತ ನಾತ್ರ ಯಜ್ಞಫಲಂ ಲಭೇತ್ ॥ ೨೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ**
**ಪ್ರಥಮಭಾಗೇ ಚತುರ್ದಶೋಽಧ್ಯಾಯಃ.**



---

೧೯. ಎರಡನೆಯದಿನ ಮಹೋತ್ಸವವನ್ನು ನಡೆಯಿಸಿ, ಬಲಿಪ್ರದಾನ ಮಾಡಬೇಕು. ಮೂರುಹಗಲಿನಲ್ಲಿ, ಅಥವಾ ಮೂರುರಾತ್ರಿಗಳಲ್ಲಿ, ಹೋಮಕಾರ್ಯವನ್ನು ಪೂರ್ತಿಮಾಡಿ, ಆ ಕಲಶಗಳನ್ನು ವಿಸರ್ಜನಮಾಡಬೇಕು.

೨೦-೨೧. ಐದನೆಯದಿನದ ಮೂರನೆಯಜಾವದಲ್ಲಿ ಬಲಿಪ್ರದಾನ ಮಾಡುವುದು ಪ್ರಶಸ್ತವಾದ ಕ್ರಮ. ಏಳನೆಯದಿನ ಎಂಟನೆಯದಿನ ಒಂಭತ್ತನೆಯ ದಿನ, ಐದನೆಯದಿನದ-ಹಗಲು, ಮತ್ತು ಐದನೆಯದಿನ ರಾತ್ರಿ, ಹನ್ನೆರಡನೆಯದಿನದ ಮತ್ತು ಹದಿನಾರನೆಯದಿನದ ಹಗಲು, ಈ ದಿನಗಳಲ್ಲಿ ಮೂವತ್ತೆರಡು ಹೋಮಗಳನ್ನು ಮಾಡಬೇಕು. ಇದಕ್ಕೆ ವ್ಯತ್ಯಾಸವಾಗಿ ಮಾಡಬಾರದು ಹಾಗೆ ಮಾಡಿದರೆ ಯಜ್ಞಫಲವು ಲಭಿಸುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ಪ್ರಥಮಭಾಗೇ

## ಪಂಚದಶೋऽಧ್ಯಾಯಃ

---

॥ ಸೂತ ಉವಾಚ ॥

**ಕುಂಡಾನಾಮಥ ಸಂಸ್ಕಾರೇ ವಕ್ಷ್ಯೇ ಶಾಸ್ತ್ರಮತಂ ಯಥಾ ।**
**ಅಸಂಸ್ಕೃತೇ ಚಾರ್ಥಹಾನಿಃ ತಸ್ಮಾತ್ಸಂಸ್ಕೃತ್ಯ ಹೋಮಯೇತ್ ॥ ೧ ॥**

**ಅಷ್ಟಾದಶ ಸ್ಯುಃ ಸಂಸ್ಕಾರಾಃ ಕುಂಡಾನಾಂ ತತ್ರ ದರ್ಶಿತಾಃ ।**
**ತಾರೇಣಾವೇಕ್ಷಯೇತ್ಸ್ಥಾನಂ ಕುಶತೋಯೈಃ ಪ್ರಸೇಚಯೇತ್ ॥ ೨ ॥**

---

## ಹದಿನೈದನೆಯ ಅಧ್ಯಾಯ

೧. ಸೂತಋಷಿಗಳು ಕುಂಡಸಂಸ್ಕಾರ ಕ್ರಮವನ್ನು ಹೇಳುತ್ತಾರೆ—ಶಾಸ್ತ್ರ ಸಿದ್ಧಾಂತರೀತಿಯಾಗಿ ಕುಂಡಸಂಸ್ಕಾರ ಮಾಡುವ ವಿಧಾನವನ್ನು ಹೇಳುತ್ತೇನೆ. ಕುಂಡಕ್ಕೆ ಮಾಡಬೇಕಾದ ಸಂಸ್ಕಾರಮಾಡದೆ ಅಗ್ನಿಸ್ಥಾಪನೆ ಮಾಡಿ ಹೋಮಮಾಡಿದರೆ ದ್ರವ್ಯನಾಶ ಸಂಭವಿಸುವುದು. ಆದುದರಿಂದ ಕುಂಡಸಂಸ್ಕಾರವನ್ನು ಮಾಡಿಯೇ ಹೋಮಮಾಡಬೇಕು.

೨. ಕುಂಡಗಳಿಗೆ ಹದಿನೆಂಟುಬಗೆಯಾದ ಸಂಸ್ಕಾರಗಳು ನಡೆಯತಕ್ಕದ್ದೆಂದು ಶಾಸ್ತ್ರದಲ್ಲಿ ದರ್ಶಿತವಾಗಿದೆ. ಮೊದಲು ಕುಂಡರಚನಾ ಸ್ಥಾನವನ್ನು ಪ್ರಣವೋಚ್ಚಾರಣಪೂರ್ವಕವಾಗಿ ವೀಕ್ಷಣಮಾಡಬೇಕು. ಮತ್ತು ಆ ಸ್ಥಳವನ್ನು ಕುಶೋದಕದಿಂದ ಪ್ರೋಕ್ಷಣಮಾಡಬೇಕು.

ತ್ರಿಸೂತ್ರೀಕರಣಂ ಪಶ್ಚಾತ್ ವೃತ್ತಸೂತ್ರಂ ನಿಪಾತಯೇತ್ ।
ವಾರೇಣ ಕೀಲಕಂ ದದ್ಯಾನ್ನಾರಸಿಂಹೇನ ಕುಡ್ಮಲಂ ॥ ೩ ॥

ಜಿಹ್ವಾಂ ಪ್ರಕಲ್ಪಯೇತ್ಪಶ್ಚಾತ್ತಸ್ಮಾದಗ್ನಿಂ ಸಮಾಹರೇತ್ ।
ನ ಚ ಮ್ಲೇಚ್ಛಗೃಹಾದಗ್ನಿಂ ನ ಶೂದ್ರನಿಲಯಾತ್ಕ್ವಚಿತ್ ॥ ೪ ॥

ನದೀಪರ್ವತಶಾಲಾಭ್ಯಃ ಸ್ತ್ರೀಹಸ್ತಾತ್ಪರಿವರ್ಜಯೇತ್ ।
ಸಂಸ್ಕೃತ್ಯ ಪರಿಗೃಹ್ಣೀಯಾತ್ ತ್ರಿಧಾ ಕೃತ್ವಾ ಸಮುದ್ಧರೇತ್ ॥ ೫ ॥

ತಮಗ್ನಿಂ ಪರಿಗೃಹ್ಣೀಯಾದಾತ್ಮನೋಽಭಿಮುಖಂ ಯಥಾ ।
ವಹ್ನಿಬೀಜೇನ ಮತಿಮಾನ್ ಶಿವಬೀಜೇನ ಪ್ರೋಕ್ಷಯೇತ್ ॥ ೬ ॥

---

೩. ಆ ಸ್ಥಂಡಿಲದಲ್ಲಿ (ಆ ನೆಲದಲ್ಲಿ) ಊರ್ಧ್ವವಾಗಿಯೂ, ಅಡ್ಡಲಾಗಿಯೂ ಸಮದೂರದ ಮೂರುಮೂರು ಗೆರೆಗಳು ಏರ್ಪಡುವಂತೆ ಸೂತ್ರದಿಂದ ಗುರುತಿಸಬೇಕು. ಆ ಮೇಲೆ ವೃತ್ತಸೂತ್ರವನ್ನು ಹಾಕಬೇಕು. ಬಳಿಕ ವಾರಣವಿಧಾನದಿಂದ ಕೀಲಕನ್ಯಾಸ ವೆಂಬ ಸಂಸ್ಕಾರವನ್ನೂ, ನಾರಸಿಂಹ ಮಂತ್ರವಿಧಾನದಿಂದ ಕುಡ್ಮಲಸಂಸ್ಕಾರವನ್ನೂ ನೆರವೇರಿಸಬೇಕು.

೪. ಆ ಮೇಲೆ ಸಪ್ತಾಗ್ನಿ ಜಿಹ್ವಾಸ್ಥಾನಗಳನ್ನು ರಚಿಸಿ ಅನಂತರ ಅಗ್ನಿಯನ್ನು ತರಿಸಬೇಕು. ಮ್ಲೇಚ್ಛರ ಮನೆಯಿಂದಲಾಗಲಿ ಶೂದ್ರರ ಮನೆಯಿಂದಲಾಗಲಿ ಎಂದೂ ಅಗ್ನಿಯನ್ನು ತರಿಸಬಾರದು.

೫. ನದಿಯ ದಡದಲ್ಲಿ ಉತ್ಪನ್ನವಾದ ಅಗ್ನಿ, ಪರ್ವತಾಗ್ರದಲ್ಲಿ ಉತ್ಪನ್ನವಾದ ಅಗ್ನಿ, ಆಚಾರ್ಯನ ಮನೆಯಲ್ಲಿದ್ದ ಅಗ್ನಿ, ಇವು ಯಾವುವನ್ನಾದರೂ ತರಿಸಬಹುದು ಅದನ್ನು ಸ್ತ್ರೀಹಸ್ತದಿಂದ ತರಿಸಿ ನೆಲದಮೇಲೆ ಇರಿಸಿಸಬೇಕು ಬಳಿಕ ಅದಕ್ಕೆ ಪ್ರೋಕ್ಷಣಾದಿ ಸಂಸ್ಕಾರಗಳನ್ನು ಮಾಡಿದ ಮೇಲೆ, ಆ ಪಾತ್ರವನ್ನು ಸ್ಪರ್ಶಿಸಬೇಕು. ಅನಂತರ ಅದನ್ನು ಮೂರಾಗಿ ವಿಂಗಡಿಸಿ ಆ ಪಾತ್ರೆಯನ್ನು ಹಿಡಿದು ಎತ್ತಿಕೊಳ್ಳಬೇಕು.

೬. ಮಂತ್ರಜ್ಞನಾದವನು ಅಗ್ನಿಬೀಜ ಮಂತ್ರೋಚ್ಚಾರಣದಿಂದ ಅಗ್ನಿಯನ್ನು ತನಗೆ ಅಭಿಮುಖವಾಗಿರುವಂತೆ ಮೇಲಕ್ಕೆ ಎತ್ತಿಹಿಡಿದು, ಶಿವಬೀಜಾಕ್ಷರಯುಕ್ತವಾದ ಮಂತ್ರದಿಂದ ಅದನ್ನು ಪ್ರೋಕ್ಷಿಸಬೇಕು.

ವಾಗೀಶ್ವರೀಮೃತುಸ್ನಾತಾಂ ವಾಗೀಶ್ವರ ಸಮಾಗತಾಂ ।
ಧ್ಯಾತ್ವಾ ಸಮೀರಣಂ ದದ್ಯಾತ್ಕಾಮಮುತ್ಪದ್ಯತೇ ತತಃ ॥ ೭ ॥

ಕಾಲಬೀಜೇನ ಚೈಶಾನ್ಯಾಂ ಯೋನಾವಗ್ನಿಂ ವಿನಿಕ್ಷಿಪೇತ್ ।
ಪಶ್ಚಾದ್ದೇವಸ್ಯ ದೇವ್ಯಾಶ್ಚ ದದ್ಯಾದಾಚಮನೀಯಕಂ ॥ ೮ ॥

ಪಿತೃಪಿಂಗಲ ದಹದಹ ಪಚಯುಗ್ಮಮುದೀರ್ಯ ಚ ।
ಸರ್ವಜ್ಞಾಜ್ಞಾಪಯ ಸ್ವಾಹಾ ಮಂತ್ರೋsಯಂ ವಹ್ನಿಪೂಜನೇ ॥ ೯ ॥

ವಹ್ನಿಬರ್ಹಿಷಿ ಸಂಯುಕ್ತಾಃ ಸಾದಿಯಾಂತಾಃ ಸಬಿಂದವಃ ।
ವಹ್ನಿಮಂತ್ರಾಃ ಸಮುದ್ದಿಷ್ಟಾ ದ್ವಿಜಾನಾಂ ಮಂತ್ರ ಈರಿತಃ ॥ ೧೦ ॥

---

೭. ಸ್ಥಂಡಿಲದಲ್ಲಿ ಕಟ್ಟಿ ಇರಿಸಿದ ಕೂರ್ಚದಲ್ಲಿ, ಋತುಸ್ನಾನ ಮಾಡಿ ಶುದ್ಧಳಾದ ವಾಗೀಶ್ವರಿ ಮತ್ತು ವಾಗೀಶ್ವರ, ಇವರಿಬ್ಬರನ್ನೂ ಆವಾಹಿಸಿ, ಅಲ್ಲಿ ಅವರಿಬ್ಬರೂ ಸೇರಿರುವಂತೆ ಧ್ಯಾನಮಾಡಬೇಕು. ಬಳಿಕ ಅಗ್ನಿಯನ್ನು ಅಲ್ಲಿ ಪ್ರತಿಷ್ಠಾಪಿಸಿ, ಪ್ರೋಕ್ಷಣೆಮಾಡಿ ಸಂಸ್ಕರಿಸಿದ ಆ ಅಗ್ನಿಗೆ ಧಮನಿಯಿಂದ ಗಾಳಿಯನ್ನು ಹಾಕಿದರೆ (ಊದಿದರೆ) ಆದರಿಂದ ಅಗ್ನಿಯು ಸಮೃದ್ಧಿಯಾಗಿ ಉತ್ಪನ್ನವಾಗುವುದು.

೮. ಕುಂಡದ ಈಶಾನ್ಯಭಾಗದಲ್ಲಿ ರಚಿಸಿರುವ ಕುಂಡಯೋನಿಸ್ಥಾನದಲ್ಲಿ ಕಾಲ ಬೀಜಾಕ್ಷರ ಮಂತ್ರೋಚ್ಚಾರಪೂರ್ವಕವಾಗಿ ಅಗ್ನಿಯನ್ನು ಸ್ಥಾಪಿಸಬೇಕು. ಅನಂತರ ವಾಗೀಶ್ವರದೇವನಿಗೂ ವಾಗೀಶ್ವರಿದೇವಿಗೂ ಆಚಮನವನ್ನು ಸಮರ್ಪಿಸಬೇಕು.

೯. ಲೋಕಪಿತೃವೇ! ಪಿಂಗಳವರ್ಣನೇ! ದಹ ದಹ, ಪಚ ಪಚ, ಎಂದು ಎರಡುಸಲ ಹೇಳಬೇಕು. ಅಲ್ಲದೆ ಅಗ್ನಿಯನ್ನು ಪೂಜೆಮಾಡುವಾಗ "ಸರ್ವಜ್ಞಾ ಜ್ಞಾಪಾಯಸ್ವಾಹಾ" ಎಂಬಈ ಮಂತ್ರವನ್ನು ಹೇಳಬೇಕು.

೧೦. ಅಗ್ನಿಯ ಸಮೀಪದಲ್ಲಿ ಸುತ್ತಲೂ ಬರ್ಹಿಸ್ಸಿನಿಂದ (ದರ್ಭೆ) ಯುಕ್ತ ವಾಗಿರುವಂತೆ ಮಾಡಬೇಕು. (ಪರಸ್ತರಣವನ್ನೂ ಕಟ್ಟಿ ಇಡಬೇಕು) ಮಂತ್ರ ಪ್ರಕರಣದಲ್ಲಿ ಸಕಾರವು ಆದಿಯಲ್ಲಿ ಉಳ್ಳದ್ದಾಗಿಯೂ, ಯಕಾರವು ಅಂತ್ಯದಲ್ಲಿ ಉಳ್ಳ ದ್ದಾಗಿಯೂ, ಬಿಂದುಸಹಿತವಾಗಿಯೂ, ಇರುವ ವಹ್ನಿಮಂತ್ರಗಳು ಬ್ರಾಹ್ಮಣರಿಗೆ ಉದ್ದೇಶಮಾಡಿ ಹೇಳಲ್ಪಟ್ಟಿವೆ.

**ಜಿಹ್ವಾಸ್ತಾಸ್ತ್ರಿವಿಧಾಃ ಪ್ರೋಕ್ತಾ ಯಜ್ಞದತ್ತೇನ ಸತ್ತಮಾಃ ।**
**ಹಿರಣ್ಯಾಮಾಜ್ಯಹೋಮೇಷು ಹೋಮಯೇತ್ಸಂಯತಾತ್ಮನಾ ॥ ೧೧ ॥**

**ತ್ರಿಮಧ್ವಕ್ತೈರ್ಯತ್ರ ಹೋಮಂ ಕರ್ಣಿಕಾಯಾಂ ಚ ಹೋಮಯೇತ್ ।**
**ಕನಕಾಸ್ಯಾತ್ತು ಕೃಷ್ಣಾಸ್ಯಾದ್ಧಿರಣ್ಯಾ ಶುಭ್ರತಾ ತಥಾ ॥ ೧೨ ॥**

**ಬಹುರೂಪಾತಿರೂಪಾ ಚ ಸಾತ್ತ್ವಿಕಾ ಯೋಗಕರ್ಮಸು ।**
**ವಿಶ್ವಮೂರ್ತಿಸ್ಫುಲಿಂಗಿನ್ಯೌ ಧೂಮ್ರವರ್ಣಾ ಮನೋಜವಾ ॥ ೧೩ ॥**

**ಲೋಹಿತಾಸ್ಯಾ ಕರಾಲಾಸ್ಯಾಕಾಲೀಭಾಸ್ಯೇತಿ ಚೋದಿತಾಃ ।**
**ಏತಾಃ ಸಪ್ತ ನಿಯುಂಜೀತ ವಿಜ್ಞೇಯಾಃ ಕ್ರೂರಕರ್ಮಸು ॥ ೧೪ ॥**

---

೧೧. ಎಲೈ ದ್ವಿಜಶ್ರೇಷ್ಠರೇ ! ಕೇಳಿ ; ಅಗ್ನಿಜಿಹ್ವೆಗಳು ಮೂರುಪ್ರಕಾರವಾಗಿ ವೆಯೆಂದು ಯಜ್ಞದತ್ತನು ಹೇಳಿದ್ದಾನೆ. ಹಿರಣ್ಯವರ್ಣ ಜಿಹ್ವೆಯಲ್ಲಿ ಆಜ್ಯಹೋಮ ಗಳನ್ನು ಮಾಡುವಾಗ ನಿಗ್ರಹೀತಮನಸ್ಕನಾಗಿ ಎಂದರೆ ಗಮನವಿಟ್ಟು ಆಹುತಿಯನ್ನು ಕೊಡಬೇಕು.

೧೨-೧೩. ತ್ರಿಮಧುಪದಾರ್ಥಗಳಲ್ಲಿ (ಜೇನು ಸಕ್ಕರೆ ಹಾಲು) ಅದ್ದಿದ ವಸ್ತು ವನ್ನು ಆಹುತಿಕೊಡುವಾಗ ಕರ್ಣಿಕೆಯ ಸ್ಥಾನದಲ್ಲಿ ಹೋಮಮಾಡಬೇಕು. ಅಗ್ನಿ ಜಿಹ್ವೆಯು ಕನಕದಂತೆ ಮುಖ, ಕೃಷ್ಣವರ್ಣದಮುಖ, ಅಪರಂಜಿಯ ಚಿನ್ನದವರ್ಣದ ಮುಖ,-ಈ ಪ್ರಕಾರವಾಗಿ ಬಹುವಿಧವಾದ ರೂಪವುಳ್ಳವಳೂ ಅತಿ ಸುಂದರರೂಪವುಳ್ಳ ವಳೂ ಆಗಿದ್ದರೂ, ಯೋಗಕರ್ಮಾಂಗವಾದ ಹೋಮದ ಸಂದರ್ಭದಲ್ಲಿ ಸಾತ್ವಿಕರೂಪ ವನ್ನು ಪಡೆಯುತ್ತಾಳೆ.

೧೪. ಕ್ರೂರಕಾರ್ಯಾಂಗವಾದ ಹೋಮಗಳಲ್ಲಿ ವಿಶ್ವಮೂರ್ತಿ, ಸ್ಫುಲಿಂಗಿನಿ, ಧೂಮ್ರ, ವರ್ಣೆ, ಮನೋಜವೆ, ಲೋಹಿತಾಸ್ಯೆ, ಕರಾಳಾಸ್ಯೆ, ಕಾಲೀಭಾಸ್ಯೆ ಎಂಬ ಈ ಏಳುಮಂದಿ ಅಗ್ನಿಜಿಹ್ವಾಭಿಮಾನಿದೇವತೆಗಳನ್ನು ವಿನಿಯೋಗಿಸಬೇಕು.

**ಸಮಿದ್ಭೇದೇಷು ಯಾ ಜಿಹ್ವಾಸ್ತಾಸ್ತು ತೇನೈವ ಯೋಜಯೇತ್ ।**
**ಹಿರಣ್ಯಾಮಾಜ್ಯಹೋಮೇಷು ಹೋಮಯೇತ್ಸಂಯುತಾತ್ಮಕಃ ॥ ೧೫ ॥**

**ತ್ರಿಮಧ್ವಕ್ತೈರ್ಯಥಾ ಹೋಮಂ ಕರ್ಣಿಕಾಯಾಂ ಚ ಹೋಮಯೇತ್ ।**
**ಶುದ್ಧಕ್ಷೀರೇಣ ರಕ್ತಾಯಾಂ ನೈತ್ಯಿಕೇಷು ಪ್ರಭಾ ಸ್ಮೃತಾ ॥ ೧೬ ॥**

**ಬಹುರೂಪಾ ಪುಷ್ಪಹೋಮೇ ಕೃಷ್ಣಾ ಚಾನ್ನೇನ ಪಾಯಸೈಃ ।**
**ಇಕ್ಷುಹೋಮೇ ಪದ್ಮರಾಗಾ ಸುವರ್ಣಾ ಪದ್ಮಹೋಮಕೇ ॥ ೧೭ ॥**

---

೧೫ ಬಗೆಬಗೆಯ ಸಮಿತ್ತುಗಳಲ್ಲಿ ಯಾವುದು ಯಾವ ಜಿಹ್ವಾಭಿಮಾನಿ ದೇವತೆಗೆ ಇಷ್ಟವೋ, ಆ ಸಮಿತ್ತುಗಳನ್ನೇ ಆಯಾ ದೇವತೆಯ ಆಹುಗಳಿಗೆ ವಿನಿಯೋಗಿಸಬೇಕು ಆಜ್ಯಹೋಮ ಮಾಡುವಾಗ ಹಿರಣ್ಯಾವರ್ಣಜಿಹ್ವೆಯಲ್ಲಿ ಮಾಡಬೇಕು ಆಗ ಮನಸ್ಸನ್ನು ನಿಗ್ರಹಿಸಿ ಎಂದರೆ ಏಕಾಗ್ರಚಿತ್ತನಾಗಿ ಗಮನವಿಟ್ಟು, ಆಹುತಿಯು ಉಕ್ತವಾದ ಸ್ಥಾನದಲ್ಲಿ ಬೀಳುತ್ತದೆಯೋ, ಅನ್ಯತ್ರಬೀಳುತ್ತಿವೆಯೋ, ಎಂಬುದನ್ನು ನೋಡಿಕೊಂಡು ಸೂಕ್ತವಾದ ಸ್ಥಾನದಲ್ಲಿ ಸರಿಯಾಗಿ ಬೀಳುವಂತೆ ಹೋಮಮಾಡಬೇಕು.

೧೬. ತ್ರಿಮಧುರಸದಿಂದ ಅದ್ದಿದ ವಸ್ತುಗಳನ್ನು ಹೋಮಮಾಡುವಾಗ ಕುಂದಕರ್ಣಿಕೆಯ ಸ್ಥಾನದಲ್ಲಿಯೇ ಹೋಮಮಾಡಬೇಕು ಕ್ಷೀರವನ್ನು ಹೋಮಮಾಡುವಾಗ ರಕ್ತವರ್ಣವಾದ "ಸುಲೋಹಿತಾ" ಜಿಹ್ವೆಯಲ್ಲಿ ಹೋಮಮಾಡಬೇಕು. ಪ್ರತಿನಿತ್ಯವೂ ಮಾಡತಕ್ಕ ಹೋಮಾದಿಗಳನ್ನು "ಪ್ರಭಾ" ಎಂಬ ಜಿಹ್ವೆಯಲ್ಲಿ ಮಾಡಬೇಕು.

೧೭. ಪುಷ್ಪಹೋಮ ಮಾಡುವಾಗ "ವಿಶ್ವರುಚಿ" ಸಂಜ್ಞಕವಾದ (ಬಹುರೂಪಾ) ಜಿಹ್ವೆಯಲ್ಲಿ ಹೋಮಮಾಡಬೇಕು. ಅನ್ನ ಪಾಯಸ ಮೊದಹಾದುವುಗಳನ್ನು 'ಕಾಲೀ' ಜಿಹ್ವೆಯಲ್ಲಿ ಹೋಮಮಾಡಬೇಕು ಕಬ್ಬಿನ ಚೂರುಗಳನ್ನು 'ಪದ್ಮವರ್ಣಾ' ಎಂಬ ಜಿಹ್ವೆಯಲ್ಲಿಯೂ ಕಮಲಪುಷ್ಪವನ್ನು 'ಸುವರ್ಣಾ' ಜಿಹ್ವೆಯಲ್ಲಿಯೂ ಹೋಮಮಾಡಬೇಕು.

**ಲೋಹಿತಾ ಪದ್ಮಹೋಮೇ ಚ ಶ್ವೇತಾ ವೈ ಬಿಲ್ವಪತ್ರಕೇ ।**
**ಧೂಮಿನೀ ತಿಲಹೋಮೇ ಚ ಕಾಷ್ಠಹೋಮೇ ಕರಾಲಿಕಾ ॥ ೧೮ ॥**

**ಲೋಹಿತಾಸ್ಯಾ ಪಿತೃಹೋಮೇ ತತೋ ಜ್ಞೇಯಾ ಮನೋಜವಾ ।**
**ವೈಶ್ವಾನರಂ ಸ್ಥಿತಂ ಹೋಮೇ ಸಮಿದ್ಧೋಮೇಷು ಸತ್ತಮಾಃ ॥ ೧೯ ॥**

**ಸಮಾನಮಾಜ್ಯಹೋಮೇ ಚ ನಿಷಣ್ಣಂ ಶೇಷವಸ್ತುಷು ।**
**ಅಸ್ಯಾತ್ತು ಜುಹುಯಾದ್ವಹ್ನೌ ಪಿಪತ್ರ್ಯ ಸರ್ವಕರ್ಮಸು ॥ ೨೦ ॥**

**ಕರ್ಣಹೋಮೇ ತು ವೈ ವ್ಯಾಧಿರ್ನೇತ್ರೇ ತು ಭಯಮೀರಿತಂ ।**
**ನಾಸಿಕಾಯಾಂ ಮನಃಪೀಡಾ ಮಸ್ತಕೇsಧ್ವಾ ನ ಸಂಶಯಃ ॥ ೨೧ ॥**

---

೧೮. ಪದ್ಮಹೋಮವನ್ನು "ಲೋಹಿತಾ" ಜಿಹ್ವೆಯಲ್ಲೂ ಮಾಡಬಹುದು ಎಂದು ಕೆಲವರಮತ. ಬಿಲ್ವಹೋಮವನ್ನು "ಶ್ವೇತ" ಜಿಹ್ವೆಯಲ್ಲಿಯೂ, ತಿಲಹೋಮವನ್ನು "ಧೂಮ್ರವರ್ಣಾ" (ಧೂಮಿನೀ) ಜಿಹ್ವೆಯಲ್ಲಿಯೂ, ಸಮಿತ್ತುಗಳ ಹೋಮವನ್ನು "ಕರಾಳಿಕಾ" ಜಿಹ್ವೆಯಲ್ಲಿಯೂ ಮಾಡಬೇಕು.

೧೯. ಪಿತೃಗಳನ್ನುದ್ದೇಶಿಸಿ ಮಾಡುವ ಹೋಮವನ್ನು "ಸುಲೋಹಿತಾ" ಜಿಹ್ವೆಯಲ್ಲಿಯೂ, ಆಮೇಲೆ ಮಾಡುವ ಹೋಮಗಳನ್ನು "ಮನೋಜವಾ" ಜಿಹ್ವೆಯಲ್ಲಿಯೂ ಹೋಮಮಾಡಬೇಕು. ಈ ಹೋಮಗಳನ್ನು ಮಾಡುವಾಗಲೂ, ಸಮಿದ್ಧೋಮದಲ್ಲಿಯೂ ವೈಶ್ವಾನರನು ಸಾಕ್ಷಾತ್ತಾಗಿದ್ದಾನೆಂದು ಭಾವಿಸಬೇಕು.

೨೦. ಆಜ್ಯಹೋಮದಲ್ಲಿಯೂ, ಇತರ ವಸ್ತುಗಳ ಹೋಮದಲ್ಲಿಯೂ ಅಗ್ನಿಯು ನಿಷಣ್ಣ (ಕುಳಿತಿರುವನು) ಎಂಬದಾಗಿ ಭಾವಿಸಿ ಹೋಮಮಾಡಬಹುದು. ಎಲ್ಲ ಹೋಮಕರ್ಮದಲ್ಲೂ ಸ್ರುವದಿಂದ ತುಂಬಿ ಸ್ರುಕ್ಕಿನಲ್ಲಿ ಹಾಕಿ, ಅವನ ಮುಖದಿಂದ ಅಗ್ನಿಯಲ್ಲಿ ಹೋಮಮಾಡಬೇಕು. ಈ ರೀತಿ ಮಾಡಿ ಹೋಮಕಾರ್ಯವನ್ನು ಪೂರ್ಣ ಮಾಡಬೇಕು.

೨೧. ಅಗ್ನಿಯ ಕರ್ಣಸ್ಥಾನದಲ್ಲಿ ಹೋಮಮಾಡಿದವನಿಗೆ ವ್ಯಾಧಿಯುಂಟಾಗುವುದು. ನೇತ್ರಸ್ಥಾನದಲ್ಲಿ ಹೋಮಮಾಡಿದರೆ ಭಯಪ್ರಾಪ್ತಿಯಾಗುವುದು. ನಾಸಿಕದ ಸ್ಥಾನದಲ್ಲಿ ಹೋಮಮಾಡಿದರೆ ಮನಃಕ್ಲೇಶವುಂಟಾಗುವುದು. ಮಸ್ತಕ (ಶಿರಸ್ಸಿನ) ಸ್ಥಾನದಲ್ಲಿ ಹೇಮಮಾಡಿದರೆ ಪ್ರಯಾಣವೊದಗುವುದು. ಇದರಲ್ಲಿ ಸಂಶಯವಿಲ್ಲ.

ಗುಹ್ಯೇ ವಿಪತ್ಕರಂ ಚೈವ ತಸ್ಮಾತ್ತತ್ರ ನ ಹೋಮಯೇತ್ ।
ಸಾಧಾರಣಮಥೋ ವಕ್ಷ್ಯೇ ವಹ್ನೇರ್ಜಿಹ್ವಾಶ್ಚ ಕೀರ್ತಿತಾಃ ॥ ೨೨ ॥

ಪ್ರವಕ್ಷ್ಯಾಮಿ ವಿಧಿಂ ಕೃತ್ಸ್ನಂ ಯದ್ವಿಶೇಷಂ ಪುನಃ ಶೃಣು ।
ಘೃತಾಹುತೌ ಹಿರಣ್ಯಾಖ್ಯಾ ಗಗನಾ ಪಾಣಿಹೋಮತಃ ॥ ೨೩ ॥

ವಕ್ರಾ ಖ್ಯಾತಾ ಮಹಾಹೋಮೇ ಕೃಷ್ಣಾಭಾ ಸಾ ಕ್ರತೌ ಮತಾ ।
ಸುಪ್ರಭಾ ಮೋದಕವಿಧೌ ಬಹುರೂಪಾತಿರೂಪಿಕಾಃ ॥ ೨೪ ॥

ಪುಷ್ಪಪತ್ರವಿಧೌ ಹೋಮೇ ವಹ್ನೇರ್ಜಿಹ್ವಾಃ ಪ್ರಕೀರ್ತಿತಾಃ ।
ನ ವಾ ಸಂಕಲ್ಪಯೇತ್ಕುಂಡೇ ಶೂದ್ರಾಕಾರವಿಭೇದತಃ ॥ ೨೫ ॥

---

೨೨. ಗುಹ್ಯಸ್ಥಾನದಲ್ಲಿ ಹೋಮಮಾಡುವುದರಿಂದ ವಿಪತ್ತುಂಟಾಗುವುದು. ಆದುದರಿಂದ ಗುಹ್ಯಸ್ಥಾನದಲ್ಲಿ ಎಂದಿಗೂ ಹೋಮಮಾಡಬಾರದು. ಅಗ್ನಿಜಿಹ್ವೆಗಳನ್ನೆಲ್ಲಾ ತಿಳಿಸಿದುದಾಯಿತು. ಹೋಮದ ಸಾಮಾನ್ಯ ವಿಧಿಯನ್ನು ಸಂಕ್ಷೇಪವಾಗಿ ಹೇಳುತ್ತೇನೆ. ಮತ್ತು ವಿಶೇಷವಿಧಿಯನ್ನು ಸಮಗ್ರವಾಗಿ ಹೇಳುತ್ತೇನೆ ಪುನಃ ಕೇಳಿರಿ.

೨೩. ಆಜ್ಯಹೋಮ ಮಾಡುವಾಗ "ಹಿರಣ್ಯವರ್ಣಾ" ಎಂಬ ಜಿಹ್ವೆಯಲ್ಲೀ ಆಹುತಿಕೊಡಬೇಕು. ಪಾಣಿಹೋಮ ಮಾಡುವಾಗ "ಗಗನಾ" ಎಂಬ ಜಿಹ್ವೆಯಲ್ಲಿ ಆಹುತಿ ಕೊಡುವೆನೆಂಬ ಭಾವನೆಯಿರಬೇಕು.

೨೪. ಮಹಾಹೋಮಗಳನ್ನು "ವಕ್ರಾ" ಎಂಬ ಜಿಹ್ವೆಯಲ್ಲಿ ಮಾಡಬೇಕು. ಯಜ್ಞಗಳಲ್ಲಿ "ಕೃಷ್ಣಾಭಾ" ಎಂಬ ಜಿಹ್ವೆಯಲ್ಲಿ ಹೋಮಮಾಡಬೇಕು. ಮೋದಕ ಹೋಮವನ್ನು "ಸುಪ್ರಭಾ" ಎಂಬ ಜಿಹ್ವೆಯಲ್ಲಿ ಮಾಡಬೇಕು. ಪುಷ್ಪಹೋಮವನ್ನು "ಬಹುರೂಪಾ" ಎಂಬ ಜಿಹ್ವೆಯಲ್ಲಿ ಮಾಡಬೇಕು.

೨೫. ಪತ್ರಹೋಮವನ್ನು "ಅತಿರೂಪಾ" ಎಂಬ ಜಿಹ್ವೆಯಲ್ಲಿ ಮಾಡಬೇಕು. ಈ ಪ್ರಕಾರ ಅಗ್ನಿಯ ಸಾಮಾನ್ಯ ಜಿಹ್ವೆಗಳನ್ನು ಹೇಳಿದುದು ಆಯಿತು. ಮಡಿವಸ್ತ್ರಗಳನ್ನು ಧರಿಸದೆ, ನೇಮನಿಷ್ಠೆಯಿಲ್ಲದೆ ಶ್ವಪಚನಾಗಿ ಕುಂಡಸಮೀಪಕ್ಕೇ ಹೋಗಬಾರದು. ಅಶುಚಿಯಾಗಿ ಸಂಕಲ್ಪಾದಿಗಳನ್ನೂ ಮಾಡಬಾರದು.

ಇಂಧಕೋಷ್ಠ ಮಸ್ತಕಂ ಸ್ಯಾದೀಶಾಗ್ನೇಯಯೋ ಚ ಮಸ್ತಕೇ ।
ತತ್ಕೋಷ್ಠಪಾರ್ಶ್ವೇ ದ್ವೇ ನೇತ್ರೇ ದ್ವೌ ಕರೌ ಚ ಪದೌಕ್ರಮಾತ್ ॥ ೨೬ ॥

ಅವಿಶಿಷ್ಟಂ ಭವೇತ್ಪುಚ್ಛಂ ಮಧ್ಯೇ ಚೋದರಸಂಭವಂ ।
ಉದರೇ ಹೋಮಯೇತ್ಪುಷ್ಟಿಮನ್ನಂ ಪಾಯಸಕಂ ಚ ಯತ್ ॥ ೨೭ ॥

ಹುತ್ವಾ ವ್ರೀಹಿಗಣಂ ತತ್ರ ಕರ್ಣೇ ಪುಷ್ಪಾಹುತಿಂ ಹುನೇತ್ ।
ವಾಮಕರ್ಣೇ ವಾಮನೇತ್ರೇ ಹುನೇದಬ್ಜಾದಿಕಂ ಬುಧಃ ॥ ೨೮ ॥

ಶ್ರವಣೇ ಚೈವ ನೇತ್ರೇ ಚ ದಕ್ಷಿಣೇ ಚೇಕ್ಷುಖಂಡಕಂ ।
ವಾಮಪಾದೇ ವಾಮಕರೇ ಅಭಿಚಾರೇಷು ಶಸ್ಯತೆ ॥ ೨೯ ॥

---

೨೬. ಪೂರ್ವದಿಕ್ಕು ಅಗ್ನಿಯ ಶಿರಸ್ಸಿನ ಸ್ಥಾನವು. ಈಶಾನ್ಯ ಆಗ್ನೇಯ ಎಂಬ ಎರಡು ದಿಕ್ಕುಗಳೂ, ಎರಡುತಲೆಗಳು ("ದ್ವೇಶೀರ್ಷೇ ಸಪ್ತಹಸ್ತಾಸೋ ಅಸ್ಯಾ" ಎಂದು) ಶ್ರುತಿ ಹೀಗೆ ಹೇಳಿದ ಕೋಷ್ಠದ ಶಿರಸ್ಸಿನ ಪಾರ್ಶ್ವದಲ್ಲಿ ಎರಡುಕಣ್ಣು, ಎರಡುಕೈ (ಹಸ್ತ) ಎರಡುಪಾದಗಳು ಹೀಗೆ ಕ್ರಮವಾಗಿರುತ್ತವೆ.

೨೭. ಉಳಿದ ಭಾಗವು ಪುಚ್ಛವೆನಿಸಿಕೊಂಡಿದೆ. ಮಧ್ಯಭಾಗವು ಅಗ್ನಿಯ ಉದರ ಸ್ಥಾನವಾಗಿದೆ. ಪುಷ್ಟಿಕರವಾದ ಅನ್ನ ಪಾಯಸ ಮುಂತಾದುವುಗಳನ್ನು ಉದರದ ಸ್ಥಾನದಲ್ಲಿಯೇ ಆಹುತಿ ಬೀಳುವಂತೆ ಹೋಮಮಾಡಬೇಕು.

೨೮. ಭತ್ತದಕಾಳುಗಳನ್ನೂ ಉದರಸ್ಥಾನದಲ್ಲಿ ಹೋಮಮಾಡಬೇಕು ಪುಷ್ಪಗಳನ್ನು ಕರ್ಣಸ್ಥಾನದಲ್ಲಿ ಹೋಮಮಾಡಬೇಕು. ವಿದ್ವಾಂಸನಾದವನು ಕಮಲ ಮುಂತಾದ ಪುಷ್ಪಗಳನ್ನು ಎಡಗಿವಿಯ ಅಥವಾ ಎಡಗಣ್ಣಿನ ಸ್ಥಾನದಲ್ಲಿ ಹೋಮ ಮಾಡಬೇಕು.

೨೯. ಕಬ್ಬಿನ ಚೂರುಗಳನ್ನು ಬಲಗಿವಿ ಅಥವಾ ಬಲಗಣ್ಣಿನ ಸ್ಥಾನದಲ್ಲಿ ಮಾಡುವುದು ಪ್ರಶಸ್ತವಾದುದು. ಮಾಟ ಮುಂತಾದ ಅಭಿಚಾರ ಹೋಮ ಮಾಡುವಾಗ ಎಡಗಾಲಿನ ಸ್ಥಾನದಲ್ಲಿ ಹೋಮಮಾಡುವುದು ಪ್ರಶಸ್ತ.

ಮಾರಣೇ ಪುಷ್ಪದೇಶೇ ತು ನ ಚಾನ್ಯಂ ಹೋಮಯೇತ್ಕ್ವಚಿತ್ ।
ವಿಪತ್ಕರಂ ವಿಜಾನೀಯಾದ್ಧ್ವನಿಃ ಸರ್ವವಿನಾಶಕೃತ್ ॥ ೩೦ ॥

ಚಂದನಾಗುರುಕರ್ಪೂರಪಾಟಲಾಯೂಥಿಕಾನಿಭಃ ।
ಪಾವಕಸ್ಯ ಸುತೋ ಗಂಧಃ ಸಮಂತಾತ್ಸುಮಹೋದಯಃ ॥ ೩೧ ॥

ಪ್ರದಕ್ಷಿಣಾ ತ್ಯಕ್ತಕಲ್ಪಾ ಛತ್ರಾಕಾ ಶಿಥಿಲಾ ಶಿಖಾ ।
ಶುಭದಾ ಯಜಮಾನಸ್ಯ ರಾಜ್ಯಸ್ಯಾಪಿ ವಿಶೇಷತಃ ॥ ೩೨ ॥

ಛಿನ್ನವೃತ್ತಾಃ ಶಿಖಾಃ ಕುರ್ಯಾನ್ಮೃತ್ಯುರ್ಧನಪರಿಕ್ಷಯಃ ।
ನಿರ್ವಾಪ್ಯಂ ಮರಣಂ ವಿದ್ಯಾನ್ಮಹಾಧೂಮಾಕುಲೇಽಪಿ ಚ ॥ ೩೩ ॥

---

೩೦. ಮಾರಣಹೋಮ ಮಾಡುವಾಗ ಪುಷ್ಪವೇಶದಲ್ಲಿ ಹೋಮಮಾಡಬೇಕು. ಆ ಸ್ಥಳದಲ್ಲಿ ಬೇರೆ ಯಾವ ಹೋಮವನ್ನೂ ಮಾಡಬಾರದು. ಹೋಮದ ಆಹುತಿ ಪಚನವಾಗುವಾಗ ಧ್ವನಿಯು ಕೇಳಬಂದರೆ ವಿಪತ್ತುಂಟಾಗುವುದೆಂದೂ ಕರ್ತೃವಿಗೆ ವಿನಾಶಕರವೆಂದೂ ತಿಳಿಯಬೇಕು.

೩೧. ಹೋಮಾಗ್ನಿಯು ಉರಿಯುವಾಗ ಅದರಿಂದ ಸುತ್ತಲೂ ಹೊರಟ ಜ್ವಾಲೆಯು ಚಂದನ, ಅಗಿಲು, ಕರ್ಪೂರ, ಪಾದರಿಹೂ, ಸೇವಂತಿಗೆಹೂ, ಇವುಗಳ ವಾಸನೆಗೆ ಸಮಾನವಾದ ವಾಸನೆಯನ್ನು ಸುತ್ತಲೂ ಪ್ರಸುವಿಸಿದರೆ (ಹೊರಸೂಸಿದರೆ) ಕರ್ತನಿಗೆ ಹೆಚ್ಚಾದ ಅಭಿವೃದ್ಧಿಯನ್ನೂ ಧನ, ಸೌಖ್ಯ, ಆಯುಷ್ಯಗಳನ್ನೂ ಉಂಟು ಮಾಡುವುದು.

೩೨. ಜ್ವಾಲೆಯು ಕ್ಲುಪ್ತವಾಗಿ ನಿಂತು ಉರಿಯದೆ ಪ್ರದಕ್ಷಿಣವಾಗಿಯೂ, ಚಲಿಸುವ ಛತ್ರಿಯ ಆಕಾರವುಳ್ಳದ್ದಾಗಿ ಸಡಿಲವಾಗಿ (ತುಂಬಾ ಅಡತುಕೊಳ್ಳದೆಯೂ) ಧಾರಾಳವಾಗಿಯೂ ಉರಿದರೆ,ಯಜಮಾನನಿಗೆ ಶುಭವಾಗುವುದು. ಅಲ್ಲದೆ ಆ ರಾಜ್ಯಕ್ಕೇ ಶುಭವಾಗುವುದು.

೩೩. ಅಗ್ನಿಜ್ವಾಲೆಯಿಂದ ಕಲ್ಪಿತವಾದ ವೃತ್ತಗಳು ಸಂತತವಾಗಿರದೆ ವೃತ್ತವು ಛೇದಿಸಿದಂತೆ ಭಿನ್ನವಾಗಿದ್ದರೆ ಮೃತ್ಯುಪ್ರಾಪ್ತಿಯೂ, ಧನನಾಶವೂ ಸಂಭವಿಸುವುದು. ಹೋಮಮಧ್ಯೆ ಉರಿಯು ಆರಿಯೇಹೋದರೂ, ಬಹುವಾಗಿ ಹೊಗೆ ಸುತ್ತಿಕೊಂಡರೂ ಯಜಮಾನನಿಗೆ ಮರಣವುಂಟಾಗುವುದು.

**ಏವಂವಿಧೇಷು ದೋಷೇಷು ಪ್ರಾಯಶ್ಚಿತ್ತಂ ಸಮಾಚರೇತ್ ।**
**ಅಷ್ಟಾವಿಂಶಾಹುತೀರ್ದತ್ವಾ ಬ್ರಾಹ್ಮಣಾನ್ ಭೋಜಯೇತ್ತತಃ　॥ ೩೪ ॥**

**ಮೂಲೇ ನಾಜ್ಯೇನ ಜುಹುಯಾಜ್ಜುಹುಯಾತ್ಪಂಚವಿಂಶತಿಂ ।**
**ಮಹಾಸ್ನಾನಂ ಪ್ರಕರ್ತವ್ಯಂ ತ್ರಿಕಾಲಂ ಹರಿಪೂಜನಂ　॥ ೩೫ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಮಥಭಾಗೇ ಪಂಚದಶೋಽಧ್ಯಾಯಃ.**



೩೪. ಇಂತಹ ದೋಷ ಸಂಭವಿಸಿದರೆ ಕೂಡಲೆ ಪ್ರಾಯಶ್ಚಿತ್ತವನ್ನು ಮಾಡಬೇಕು. ಎಂದರೆ ಪ್ರಾಯಶ್ಚಿತ್ತಕ್ಕಾಗಿ ಇಪ್ಪತ್ತೆಂಟು ಆಜ್ಯಾಹುತಿಗಳನ್ನು ಕೊಟ್ಟು ಅನಂತರ ಬ್ರಾಹ್ಮಣರಿಗೆ ಸಂತರ್ಪಣೆಮಾಡಬೇಕು.

೩೫. ಮೂಲಮಂತ್ರೋಚ್ಚಾರಣಪೂರ್ವಕ ಆಜ್ಯಾಹುತಿಯಿಂದ ಈ ಪ್ರಾಯಶ್ಚಿತ್ತ ಹೋಮಮಾಡಬೇಕು. ಇಪ್ಪತ್ತೈದು ಆಜ್ಯಾಹುತಿಗಳನ್ನು ಕೊಡಬೇಕು. ಎಂಬುದು ಕೆಲವರ ಮತ. ಪ್ರಾತರ್ಮಧ್ಯಾಹ್ನ ಸಾಯಂಕಾಲಗಳಲ್ಲಿ ಸ್ನಾನಮಾಡಿ ಹರಿಪೂಜೆ ಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೊದಲನೆ ಭಾಗದಲ್ಲಿ ಹದಿನೈದನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ಪ್ರಥಮಭಾಗೇ

## ಷೋಡಶೋಽಧ್ಯಾಯಃ

॥ ಸೂತ ಉವಾಚ ॥

**ನಿತ್ಯಂ ನೈಮಿತ್ತಿಕಂ ಚೈವ ಯಾಗಾದೌ ಚ ಸಮಾಪ್ತಿಕೇ ।**
**ಹೋಮಾವಸಾನೇ ಪ್ರಜಪೇದುಪಚಾರಾಂಶ್ಚ ಷೋಡಶ ॥ ೧ ॥**

**ದದ್ಯಾತ್ಸಮೀರಣಂ ಪಶ್ಚಾತ್ ಪೀಠಪೂಜಾಂ ಸಮಾಚರೇತ್ ।**
**ಗೃಹೀತ್ವಾ ರಕ್ತಪುಷ್ಪಂ ಚ ಧ್ಯಾಯೇದ್ವಹ್ನಿಂ ಯಥಾವಿಧಿ ॥ ೨ ॥**

---

## ಹದಿನಾರನೆಯ ಅಧ್ಯಾಯ

೧. ಸೂತಪುರಾಣಿಕರು ಪೂಜಾವಿಧಾನವನ್ನು ಹೇಳುತ್ತಾರೆ—ನಿತ್ಯಕರ್ಮಗಳನ್ನು ಯಾಗಕ್ಕೆ ಮುಂಚೆಯೂ, ನೈಮಿತ್ತಿಕ ಕರ್ಮಗಳನ್ನು ಯಾಗಸಮಾಪ್ತಿಯಾದ ಮೇಲೂ ಆಚರಿಸಬೇಕು. ಹೋಮಮಾಡಿ ಆದಮೇಲೆ ಹೋಮಾಂತಯಜ್ಞೇಶ್ವರನಿಗೆ ಷೋಡಶೋಪಚಾರ ಪೂಜಾಮಂತ್ರವನ್ನು ಜಪಿಸಬೇಕು. ಇದು ಸಂಕ್ಷೇಪವಿಧಾನ. ವಿಸ್ತಾರವಾದ ಪೂಜಾಕ್ರಮವೂ ಮುಂದೆ ಉಕ್ತವಾಗಿದೆ.

೨. ಮೊದಲು ಧಮನಿಯಿಂದ ಗಾಳಿಯನ್ನು ಹಾಕಬೇಕು. ಕೆಂಪುಬಣ್ಣದ ಪುಷ್ಪವನ್ನು ಕೈಯ್ಯಲ್ಲಿ ಹಿಡಿದುಕೊಂಡು ವಿಧಿಪ್ರಕಾರ ಅಗ್ನಿಯನ್ನು ಧ್ಯಾನಮಾಡಬೇಕು.

ಇಷ್ಟಂ ಶಕ್ತಿಸ್ವಸ್ತಿಕಾಭೀತಿಮುಚ್ಚೈಃ ।
ದೀರ್ಘೈರ್ದೋರ್ಭಿರ್ಧಾರಯಂತಂ ವರಾಂತಂ ॥
ಹೇಮಾಕಲ್ಪಂ ಪದ್ಮಸಂಸ್ಥಂ ತ್ರಿನೇತ್ರಂ ।
ಧ್ಯಾಯೇದ್ವಹ್ನಿಂ ಬದ್ಧಕಲ್ಪಂ ಜಟಾಭಿಃ ॥ ೩ ॥

ಪೂರ್ವಾದಿದ್ವಾರದೇಶೇಷು ಕಾಮದೇವಂ ಶತಕ್ರತುಂ ।
ವಾರಾಹಂ ಷಣ್ಮುಖಂ ಚೈವ ಗಂಧಾದ್ಯೈಃ ಸಾಧು ಪೂಜಯೇತ್ ॥ ೪ ॥

ಆವಾಹ್ಯ ಸ್ಥಾಪಯೇತ್ಪಶ್ಚಾದಷ್ಟೌಮುದ್ರಾಃ ಪ್ರದರ್ಶಯೇತ್ ।
ದತ್ವಾಸನಂ ಸ್ವಾಗತಂ ಚ ದದ್ಯಾತ್ಪಾದ್ಯಾದಿಕತ್ರಯಂ ॥ ೫ ॥

ಅತಃ ಪೂರ್ವಾದಿಪಾತ್ರೇಷು ಯಾವತಾ ಚ ಹುತಾಶನಂ ।
ಸುವರ್ಣವರ್ಣಮಮಲಂ ಸಮಿದ್ಧಂ ಸರ್ವತೋಮುಖಂ ॥ ೬ ॥

---

೩. ಉನ್ನತವಾದ ಭುಜಶಿರಸ್ಸುಳ್ಳವನೂ, ನೀಳವಾದ ತೋಳುಳ್ಳವನೂ, ಇಷ್ಟಾರ್ಥಕೊಡುವ ಒಂದು ಅಭಯಹಸ್ತ, ಇನ್ನೊಂದರಲ್ಲಿ ಶಕ್ತ್ಯಾಯುಧ, ಇನ್ನೊಂದರಲ್ಲಿ ಸ್ವಸ್ತಿಕ, ಮತ್ತೊಂದು ವರದಹಸ್ತ ಈ ಪ್ರಕಾರ ಹಸ್ತಗಳುಳ್ಳವನೂ, ಸುವರ್ಣದಿಂದ ರಚಿತವಾದ ಭೂಷಣವುಳ್ಳವನೂ, ಕಮಲಸ್ಥಿತನಾದವನೂ, ಮೂರು ಕಣ್ಣುಳ್ಳವನೂ, ಜಟಾಬದ್ಧವಾದ ಮೌಳಿಯುಳ್ಳವನೂ ಆದ ಅಗ್ನಿದೇವನನ್ನು ಧ್ಯಾನಿಸಬೇಕು

೪ ಪೂರ್ವ ಮೊದಲಾದ ನಾಲ್ಕುದಿಕ್ಕುಗಳ ದ್ವಾರಗಳಲ್ಲಿ ಕಾಮದೇವ, ಇಂದ್ರ, ವರಾಹ, ಷಣ್ಮುಖ ಎಂಬ ದೇವತೆಗಳನ್ನು ಸ್ಥಾಪಿಸಿ, ಗಂಧ ಪುಷ್ಪ ಮೊದಲಾದುವುಗಳಿಂದ ಪೂಜಿಸಭೇಕು.

೫. ಆ ಬಳಿಕ ಅಗ್ನಿಯನ್ನು ಆವಾಹನಮಾಡಿ ಸ್ಥಾಪಿಸಿ, ಅಷ್ಟಮುದ್ರೆಗಳನ್ನು ಬಂಧನಮಾಡಿ ತೋರಿಸಬೇಕು. ಬಳಿಕ ಆಸನವನ್ನು ಸಮರ್ಪಿಸಿ, ಸ್ವಾಗತವನ್ನು ಪ್ರಶ್ನಿಸಿ, ಅರ್ಘ್ಯ, ಪಾದ್ಯ ಆಚಮನ ಇವನ್ನುಕೊಡಬೇಕು.

೬. ಪೂರ್ವದಿಕ್ಕು ಮೊದಲುಗೊಂಡು ಯಜ್ಞೇಶ್ವರನ ಸುತ್ತಲೂ ಎಂಟುದಿಕ್ಕಿನಲ್ಲಿಯೂ ಮಂತ್ರಾಕ್ಷತೆಗಳನ್ನು ಹಾಕಬೇಕು. ಚಿನ್ನದಬಣ್ಣವುಳ್ಳವನೂ, ಪರಿಶುದ್ಧನೂ ಪ್ರಕಾಶಮಾನನೂ, ಸರ್ವತೋಮುಖವಾಗಿರುವವನೂ

ಮಹೋದರಂ ಮಹಾಜಿಹ್ವಮಾಕಾಶತ್ವೇನ ಪೂಜಯೇತ್ ।
ತಾರಕಾದೀನ್ ಸಮಾಪ್ತೇ ಚ ಗಂಧೈಃ ಪುಷ್ಪೈಃ ಪೃಥಗ್ವಿಧೈಃ ॥ ೭ ॥

ತತ್ರೈವ ಜಿಹ್ವಾಸ್ತ್ರಿವಿಧಾ ಧ್ಯಾಯೇನ್ಮಂತ್ರಪುರಃಸರಾಃ ।
ವಕ್ಷ್ಯಮಾಣೇನ ಮಂತ್ರೇಣ ಉಪಚಾರೈರನಂತರಂ ॥ ೮ ॥

ತ್ವಮಾದಿಃ ಸರ್ವಭೂತಾನಾಂ ಸಂಸಾರಾರ್ಣವತಾರಕಃ ।
ಪರಮಜ್ಯೋತಿರೂಪಸ್ತ್ವಮಾಸನಂ ಸಫಲೀಕುರು ॥ ೯ ॥

ದದ್ಯಾದಾಸನಮೇಕೇನ ಪುಷ್ಪಗುಚ್ಛತ್ರಯೇಣ ತು ।
ಪುಟಾಂಜಲಿಂ ತತೋ ಬಧ್ವಾ ಪೃಚ್ಛೇತ್ಕುಶಲಪೂರ್ವಕಂ ॥ ೧೦ ॥

ವೈಶ್ವಾನರ ನಮಸ್ತೇಽಸ್ತು ನಮಸ್ತೇ ಹವ್ಯವಾಹನ ।
ಸ್ವಾಗತಂ ತು ಸುರಶ್ರೇಷ್ಠ ಶಾಂತಿಂ ಕುರು ನಮೋಽಸ್ತು ತೇ ॥ ೧೧ ॥

---

೭. ಮಹಾಉದರವುಳ್ಳವನೂ, ದೊಡ್ಡ ಜಿಹ್ವೆಗಳುಳ್ಳವನೂ, ಆದ ಅವನನ್ನು ಆಕಾಶಸ್ವರೂಪನೆಂದು ಭಾವಿಸಿ ಪೂಜಿಸಬೇಕು. ಹೋಮಾಂತದಲ್ಲೂ ಬೇರೆಬೇರೆ ಗಂಧಗಳು, ನಾನಾವಿಧವಾದ ಪುಷ್ಪ ಇವುಗಳಿಂದಲೂ ಅರ್ಚಿಸಬೇಕು, ತಾರಕಾದಿಗಳನ್ನೂ ಸಹ ಪೂಜಿಸಬೇಕು.

೮. ತ್ರಿವಿಧವಾದ ಅಗ್ನಿಜಿಹ್ವೆಗಳನ್ನು ಮಂತ್ರಪೂರ್ವಕವಾಗಿ ಧ್ಯಾನಮಾಡಬೇಕು. ಬಳಿಕ ಮುಂದೆ ಹೇಳುವ ಮಂತ್ರದಿಂದ ಉಪಚಾರ ಪೂಜೆಮಾಡಬೇಕು.

೯-೧೦. ಸಂಸಾರಸಮುದ್ರವನ್ನು ದಾಟಿಸುವನಾದ ನೀನು ಸಮಸ್ತ ಭೂತಗಳಿಗೂ ಆದಿಯೆನಿಸಿದ್ದೀ. ಮಹಾಪ್ರಕಾಶ ಸ್ವರೂಪನಾದ ನೀನು ಈ ಆಸನವನ್ನು ಅಲಂಕರಿಸಿ ಸಫಲವಾಗಿ ಮಾಡು. ಈ ಅರ್ಥವುಳ್ಳ ಮಂತ್ರವನ್ನು ಹೇಳಿ, ಮೂರುಹೂವಿನ ಗೊಂಚಲಿನಿಂದ ಆಸನವನ್ನು ಸಮರ್ಪಿಸಬೇಕು. ಅನಂತರ ಬೊಗಸೆಯಾಗಿ ಕೈಜೋಡಿಸಿಕೊಂಡು ಕುಶಲವಾಚಕಶಬ್ದ ಘಟಿತವಾಗಿ ಸ್ವಾಗತಪ್ರಶ್ನೆ ಮಾಡಬೇಕು.

೧೧. ವೈಶ್ವಾನರನೇ! ನಿನಗೆ ನಮಸ್ಕಾರ, ಹವ್ಯವಾಹನನೇ! ನಿನಗೆ ನಮಸ್ಕಾರ, ಸುರಶ್ರೇಷ್ಠನೇ! ನಿನಗೆ ನಮಸ್ಕಾರ. ನಿನಗೆ ಸ್ವಾಗತವೇ? ಎಂದು ಕೇಳಬೇಕು. ಬಳಿಕ ನನಗೆ ಶಾಂತಿಯನ್ನು ಕರುಣಿಸು. ನಿನಗೆ ನಮಸ್ಕಾರ ಎಂದು ಹೇಳಬೇಕು.

**ನಮಸ್ತೇ ಭಗವನ್ ದೇವ ಆಪೋನಾರಾಯಣಾತ್ಮಕ ।**
**ಸರ್ವಲೋಕಹಿತಾರ್ಥಾಯ ಪಾದ್ಯಂ ಚ ಪ್ರತಿಗೃಹ್ಯತಾಂ ॥ ೧೨ ॥**

**ನಾರಾಯಣಪರಂಧಾಮ ಜ್ಯೋತೀರೂಪ ಸನಾತನ ।**
**ಗೃಹಾಣಾರ್ಘ್ಯಂ ಮಯಾ ದತ್ತಂ ವಿಶ್ವರೂಪ ನಮೋಽಸ್ತು ತೇ ॥ ೧೩ ॥**

**ಜಗದಾದಿತ್ಯರೂಪೇಣ ಪ್ರಕಾಶಯತಿ ಯಃ ಸದಾ ।**
**ತಸ್ಮೈ ಪ್ರಕಾಶರೂಪಾಯ ನಮಸ್ತೇ ಜಾತವೇದಸೇ ॥ ೧೪ ॥**

**ಧನಂಜಯ ನಮಸ್ತೇಽಸ್ತು ಸರ್ವಪಾಪಪ್ರಣಾಶನ ।**
**ಸ್ನಾನೀಯಂ ತೇ ಮಯಾ ದತ್ತಂ ಸರ್ವಕಾಮಾರ್ಥಸಿದ್ಧಯೇ ॥ ೧೫ ॥**

**ಹುತಾಶನ ಮಹಾಬಾಹೋ ದೇವದೇವ ಸನಾತನ ।**
**ವಸನಂ ತೇ ಪ್ರಯಚ್ಛಾಮಿ ದೇಹಿ ಮೇ ಪರಮಂ ಪದಂ ॥ ೧೬ ॥**

---

೧೨. ಓ ಭಗವಂತನೇ! ಜಲಾತ್ಮಕನೂ, ನಾರಾಯಣಸ್ವರೂಪನೂ, ಆದ ದೇವನೇ! ನಿನಗೆ ನಮಸ್ಕಾರ. ಸಮಸ್ತಲೋಕಗಳಿಗೂ ಹಿತವಾಗುವುದಕ್ಕಾಗಿ ಈ ಪಾದ್ಯವನ್ನು ಸ್ವೀಕರಿಸು.

೧೩. ಉತ್ಕೃಷ್ಟವಾದ ಸ್ಥಾನಸ್ವರೂಪನೇ! ಪ್ರಕಾಶಸ್ವರೂಪನೇ! ಪುರಾತನನೇ! ನಾರಾಯಣನೇ! ವಿಶ್ವರೂಪನೇ! ನಾನು ಸಮರ್ಪಿಸುವ ಈ ಅರ್ಘ್ಯವನ್ನು ಗ್ರಹಣಮಾಡು. ನಿನಗೆ ನಮಸ್ಕಾರ.

೧೪. ಆದಿತ್ಯರೂಪಿನಿಂದ ಲೋಕವನ್ನೆಲ್ಲಾ ಸದಾ ಪ್ರಕಾಶವಾಗುವಂತೆ (ಗೋಚರವಾಗುವಂತೆ) ಮಾಡುವ ತೇಜಸ್ವರೂಪನೂ, ವೇದಗಳಿಗೆ ಪಿತೃವೂ ಎನಿಸಿದ ಅಗ್ನಿ ದೇವನೇ! ನಿನಗೆ ನಮಸ್ಕಾರ.

೧೫. ಸಮಸ್ತಪಾಪಗಳನ್ನೂ ನಾಶಮಾಡತಕ್ಕ ಧನಂಜಯ ನಾಮಕನೇ! ನಿನಗೆ ನಮಸ್ಕಾರ. ನಾನು ನಿನ್ನ ಸ್ನಾನಾರ್ಥವಾಗಿ ಉದಕವನ್ನು ಸಮರ್ಪಿಸಿದ್ದೇನೆ. ನನ್ನ ಸಮಸ್ತಇಷ್ಟಾರ್ಥಗಳೂ ಸಿದ್ಧಿಸುವಂತೆ ಮಾಡು.

೧೬. ಮಹಾಬಾಹುವೂ, ದೇವದೇವನೂ, ಪುರಾತನನೂ ಆದ ಅಗ್ನಿ ದೇವನೇ! ನಿನಗೆ ವಸ್ತ್ರವನ್ನು ಸಮರ್ಪಿಸುವೆನು. ನನಗೆ ಪರಮಪದವನ್ನು ದಯಪಾಲಿಸು.

ಜ್ಯೋತಿಷಾಂ ಜ್ಯೋತಿರೂಪಸ್ತ್ವಮನಾದಿನಿಧನಾಚ್ಯುತ ।
ಮಯಾ ದತ್ತಮಲಂಕಾರಮಲಂಕುರು ನಮೋಽಸ್ತು ತೇ ॥ ೧೭ ॥

ದೇವ್ಯೋದೇವಾ ಮುದಂ ಯಾಂತಿ ಯಸ್ಯ ಸಮ್ಯಕ್ಸಮಾಗಮಾತ್ ।
ಸರ್ವದೋಷೋಪಶಾಂತ್ಯರ್ಥಂ ಗಂಧೋಽಯಂ ಪ್ರತಿಗೃಹ್ಯತಾಂ ॥ ೧೮ ॥

ತ್ವಂ ವಿಷ್ಣುಸ್ತ್ವಂ ಹಿ ಬ್ರಹ್ಮಾ ಚ ಜ್ಯೋತಿಷಾಂ ಗತಿರೀಶ್ವರಃ ।
ಗೃಹಾಣ ಪುಷ್ಪಂ ದೇವೇಶ ಸಾನೋದಂ ತು ಜಗತ್ಪತೇ ॥ ೧೯ ॥

ದೇವತಾನಾಂ ಪಿತೄಣಾಂ ಚ ಸುಖಮೇಕಂ ಸನಾಕನಂ ।
ಧೂಪೋಽಯಂ ದೇವದೇವೇಶ ಗೃಹ್ಯತಾಂ ಮೇ ಧನಂಜಯ ॥ ೨೦ ॥

---

೧೭. ಆದ್ಯಂತಶೂನ್ಯನಾದ ವಿಷ್ಣುಸ್ವರೂಪನೂ, ಜ್ಯೋತಿಸ್ಸುಗಳಲ್ಲಿ ಉತ್ಕೃಷ್ಟ ಜ್ಯೋತಿಸ್ವರೂಪನೂ (ಎಂದರೆ ಪ್ರಕಾಶವಸ್ತುಗಳನ್ನು ಪ್ರಕಾಶಪಡಿಸತಕ್ಕವನೂ) ಆದ ನೀನು, ಈಗ ನಾನು ಸಮರ್ಪಿಸುವ ಆಭರಣಗಳಿಂದ ಅಲಂಕರಿಸಿಕೋ. ನಿನಗೆ ನಮಸ್ಕಾರ.

೧೮. ದೇವಿಯರೂ ಮತ್ತು ದೇವರುಗಳೂ ಲೇಪನಮಾಡಿಕೊಂಡು ಸಂತೋಷಪಡುವಂಥ ಸುಗಂಧವು ಇದು. ನನ್ನ ಸಮಸ್ತದೋಷಗಳ ಪರಿಹಾರಾರ್ಥವಾಗಿ ಈ ಗಂಧವನ್ನು ಸ್ವೀಕರಿಸು. ಇದರಿಂದ ಜಗತ್ತು ಸುವಾಸನಾಯುಕ್ತವಾಗಿ ಪರಿಣಮಿಸಲಿ. ನನ್ನ ದೋಷಗಳನ್ನು ಪರಿಹರಿಸು.

೧೯. ನೀನೇ ವಿಷ್ಣು, ನೀನೇ ಬ್ರಹ್ಮ, ನೀನೇ ಪ್ರಕಾಶಿಸುವ ವಸ್ತುಗಳಲ್ಲಿರುವ ಪ್ರಕಾಶಸ್ವರೂಪನಾದ ಈಶ್ವರ; ಓ ದೇವಾಧಿಪನೇ! ನಾನು ಸಮರ್ಪಿಸುವ ಈ ಪುಷ್ಪವನ್ನು ಸ್ವೀಕರಿಸು. ಇದರಿಂದ ಜಗತ್ತು ಸುವಾಸನಾಯುಕ್ತವಾಗಿ ಪರಿಣಮಿಸಲಿ.

೨೦. ದೇವೇಶನಾದ ಧನಂಜಯನೇ! ದೇವತೆಗಳಿಗೂ, ಪಿತೃಗಳಿಗೂ ಪುರಾತನಕಾಲದಿಂದ ಸುಖಕರವಾಗಿರುವ ಈ ಧೂಪವನ್ನು ನೀನು ಸ್ವೀಕರಿಸು.

ತ್ವಮೇಕಃ ಸರ್ವಭೂತೇಷು ಸ್ಥಾವರೇಷು ಚರೇಷು ಚ ।
ಪರಮಾತ್ಮಾ ಪರಾಕಾರಃ ಪ್ರದೀಪಃ ಪ್ರತಿಗೃಹ್ಯತಾಂ ॥ ೨೧ ॥

ನಮೋಽಸ್ತು ಯಜ್ಞಪತಯೇ ಪ್ರಭವೇ ಜಾತವೇದಸೇ ।
ಸರ್ವಲೋಕಹಿತಾರ್ಥಾಯ ನೈವೇದ್ಯಂ ಪ್ರತಿಗೃಹ್ಯತಾಂ ॥ ೨೨ ॥

ಹುತಾಶನ ನಮಸ್ತುಭ್ಯಂ ನಮಸ್ತೇ ರುಕ್ಮವಾಹನ ।
ಲೋಕನಾಥ ನಮಸ್ತೇಽಸ್ತು ನಮಸ್ತೇ ಜಾತವೇದಸೇ ॥ ೨೩ ॥

ಇತ್ಯನೇನ ತು ಮಂತ್ರೇಣ ದದ್ಯಾದ್ದಿವ್ಯೋಽಪ್ಯಧೀತಕಂ ।
ಸರ್ವಸ್ವಂ ಯಜ್ಞಸೂತ್ರಂ ಚ ಪರಮಾನ್ನಂ ಸಮಾಕ್ಷಿಕಂ ॥ ೨೪ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ಷೋಡಶೋಽಧ್ಯಾಯಃ.

---

೨೧. ಸ್ಥಾವರ, ಜಂಗಮ ಮೊದಲಾದ ಸಮಸ್ತಭೂತಗಳಲ್ಲಿಯೂ ಮುಖ್ಯನಾಗಿರುವವನೂ, ಅದ್ವಿತೀಯನೂ, ಉತ್ಕೃಷ್ಟವಾದ ಆಕೃತಿಯುಳ್ಳವನೂ ಆದ ನೀನು ಈ ದೀಪವನ್ನು ಸ್ವೀಕರಿಸು.

೨೨. ಯಜ್ಞಪತಿಯಾದ ಪ್ರಭುವೇ! ವೇದಪಿತೃವೇ! ನಿನಗೆ ನಮಸ್ಕಾರ. ಸಮಸ್ತಲೋಕಗಳಿಗೆ ಹಿತವಾಗುವುದಕ್ಕಾಗಿ ಈ ನೈವೇದ್ಯವನ್ನು ಸ್ವೀಕರಿಸು.

೨೩–೨೪. ಹುತಾಶನನೇ! ನಿನಗೆ ನಮಸ್ಕಾರ. ಸುವರ್ಣರೇತಸನೇ! ನಿನಗೆ ನಮಸ್ಕಾರ. ಲೋಕನಾಥನೇ! ನಿನಗೆ ನಮಸ್ಕಾರ. ಜಾತವೇದಸನೇ! ನಿನಗೆ ನಮಸ್ಕಾರ ಈ ಅರ್ಥವುಳ್ಳ ಮಂತ್ರವನ್ನುಚ್ಚರಿಸಿ ತಾನು ಸಂಪಾದಿಸಿದುದರಲ್ಲಿ ಶ್ರೇಷ್ಠವಾದ ಸರ್ವಸ್ವವನ್ನೂ ಮತ್ತು ಜೇನುತುಪ್ಪಮಿಶ್ರವಾದ ಪರಮಾನ್ನವನ್ನೂ ಯಜ್ಞೋಪವೀತಿಯಾಗಿ ನಿವೇದನಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ಪ್ರಥಮಭಾಗೇ
## ಸಪ್ತದಶೋಽಧ್ಯಾಯಃ

॥ ಸೂತ ಉವಾಚ ॥

ಯಜ್ಞಭೇದಂ ತ್ರಿಭೇದಂ ಚ ವಕ್ಷ್ಯೇ ಶಾಸ್ತ್ರಮತಂ ಯಥಾ ।
ಯಥಾ ವೇದಾನುಸಾರೇಣ ಯಥಾಗ್ರಹಣಯೋಜನಂ ॥ ೧ ॥

ಶತಾರ್ಧೇ ವಹ್ನಿರುದ್ದಿಷ್ಟಃ ಶತಾರ್ಧೇ ಕಾಶ್ಯಪಃ ಸ್ಮೃತಃ ।
ಘೃತಪ್ರದೀಪಕೇ ವಿಷ್ಣುಸ್ತಿಲಯಾಗೇ ವನಸ್ಪತಿಃ ॥ ೨ ॥

ಸಹಸ್ರೇ ಬ್ರಾಹ್ಮಣೋ ನಾಮ ಅಯುತೇ ಹರಿರುಚ್ಯತೇ ।
ಲಕ್ಷಹೋಮೋ ತು ವಹ್ನಿಃ ಸ್ಯಾತ್ಕೋಟಿಹೋಮೋ ಹುತಾಶನಃ ॥ ೩ ॥

---

## ಹದಿನೇಳನೆಯ ಅಧ್ಯಾಯ

೧. ಸೂತರು ಹೋಮಾಗ್ನಿಗಳ ಹೆಸರುಗಳನ್ನು ಹೇಳುತ್ತಾರೆ—ವೇದಗಳಿಗನುಸಾರವಾಗಿ ಮೂರುಪ್ರಕಾರವಾದ ಯಜ್ಞಭೇದವನ್ನೂ ಅವುಗಳ ಗ್ರಹಣ, ವಿನಿಯೋಗ ಇವುಗಳನ್ನೂ ಶಾಸ್ತ್ರಸಿದ್ಧಾಂತಾನುಸಾರವಾಗಿ ಹೇಳುತ್ತೇನೆ.

೨–೪. ಐವತ್ತು ಆಹುತಿಕೊಡುವ ಹೋಮಾಗ್ನಿಯನ್ನು ವಹ್ನಿಯೆಂದೂ, ಇನ್ನೊಂದು ಐವತ್ತುಸೇರಿದ ಶತಹೋಮಾಗ್ನಿಯನ್ನು ಕಾಶ್ಯಪನೆಂದೂ ತಿಳಿಯಬೇಕು. ತುಪ್ಪದ ದೀಪ ಉರಿಯುವಾಗ ಜ್ವಾಲೆಯ ಅಗ್ನಿಯನ್ನು ವಿಷ್ಣುವೆಂದೂ, ತಿಲಹೋಮಾಗ್ನಿಯನ್ನು ವನಸ್ಪತಿಯೆಂದೂ, ಸಹಸ್ರ ಸಂಖ್ಯಾಹೋಮದಲ್ಲಿನ ಅಗ್ನಿಯನ್ನು ಬ್ರಾಹ್ಮಣನೆಂದೂ, ದಶಸಹಸ್ರ ಹೋಮದ ಅಗ್ನಿಯನ್ನು ಹರಿ ಎಂಬದಾಗಿಯೂ ಹೇಳಬೇಕು. ಲಕ್ಷಸಂಖ್ಯಾ ಹೋಮದಲ್ಲಿನ ಅಗ್ನಿಯನ್ನು ವಹ್ನಿಯೆಂದೂ,

**ವರುಣಃ ಶಾಂತಿಕೇ ಜ್ಞೇಯೋ ಮಾರಣೇ ಹ್ಯರುಣಃ ಸ್ಮೃತಃ ।**
**ನಿತ್ಯಹೋಮೇಽನಲೋ ನಾಮ ಪ್ರಾಯಶ್ಚಿತ್ತೇ ಹುತಾಶನಃ ॥ ೪ ॥**

**ಲೋಹಿತಶ್ಚಾನ್ನಯಜ್ಞೇ ಯೋ ಗ್ರಹಾಣಾಂ ಪ್ರತ್ಯನುಕ್ರಮಾತ್ ।**
**ದೇವಪ್ರತಿಷ್ಠಾಯಾಗೇ ತು ಲೋಹಿತಃ ಪರಿಕೀರ್ತಿತಃ ॥ ೫ ॥**

**ಪ್ರಜಾಪತಿರ್ವಾಸ್ತುಯಾಗೇ ಮಂಡಪೇ ಚಾಪಿ ಪದ್ಮಕೇ ।**
**ಪ್ರಪಾಯಾಂ ಚೈವ ನಾಗಾಖ್ಯೋ ಮಹಾದಾನೇ ಹವಿರ್ಭುಜಃ ॥ ೬ ॥**

**ಗೋದಾನೇ ಚ ಭವೇದ್ರುದ್ರಃ ಕನ್ಯಾದಾನೇ ತು ಗೋಽಜಕಃ ।**
**ತುಲಾಪುರುಷದಾನೇ ಚ ಧಾತಾಗ್ನಿಃ ಪರಿಕೀರ್ತಿತಃ ॥ ೭ ॥**

---

ಕೋಟಿಹೋಮದ ಅಗ್ನಿಯನ್ನು ಹುತಾಶನನೆಂದೂ, ಶಾಂತಿಹೋಮಗಳಲ್ಲಿನ ಅಗ್ನಿಯನ್ನು ವರುಣನೆಂಬದಾಗಿಯೂ, ಮಾರಣಹೋಮಾಗ್ನಿಯನ್ನು ಅರುಣನೆಂಬದಾಗಿಯೂ ತಿಳಿಯಬೇಕು. ನಿತ್ಯಗಟ್ಟಲೆ ಹೋಮಾಗ್ನಿಯನ್ನು ಅನಲನೆಂದೂ ಪ್ರಾಯಶ್ಚಿತ್ತಹೋಮದಲ್ಲಿ ಹುತಾಶನನೆಂದೂ ತಿಳಿಯಬೇಕು.

೫. ಗ್ರಹಯಜ್ಞದಲ್ಲಿ ಚರುಹೋಮ ಮಾಡುವಾಗ ಆ ಅಗ್ನಿಗೆ ಲೋಹಿತನೆಂದು ಹೆಸರು. ಪ್ರತಿಮಾಪ್ರತಿಷ್ಠೆಯಲ್ಲಿ ಸ್ಥಾಪಿಸುವ ಅಗ್ನಿಯನ್ನು ಲೋಹಿತನೆಂದೇ ಹೇಳಿದೆ.

೬. ವಾಸ್ತುಹೋಮದಲ್ಲಿನ ಅಗ್ನಿಗೆ ಪ್ರಜಾಪತಿಯೆಂದೂ ಮಂಟಪ, ಪುಷ್ಕರಿಣೀ, ಅರವಟ್ಟಿಗೆ ಇವುಗಳನ್ನು ಪ್ರತಿಷ್ಠೆಮಾಡುವಾಗಿನ ಅಗ್ನಿಗೆ ನಾಗನೆಂದೂ, ಮಹಾದಾನಾಂಗವಾಗಿ ಪ್ರತಿಷ್ಠಿಸುವ ಅಗ್ನಿಗೆ ಹವಿರ್ಭುಜನೆಂದೂ ಹೆಸರು.

೭. ಮಹಾನಾಮ್ನ್ಯಾದ್ಯಂತರ್ಗತವಾದ ಗೋದಾನಕರ್ಮದಲ್ಲಿ ಪ್ರತಿಷ್ಠಿತವಾದ ಅಗ್ನಿಯನ್ನು ರುದ್ರನೆಂದೂ, ಕನ್ಯಾದಾನ ಕಾಲದಲ್ಲಿ ಪ್ರತಿಷ್ಠಿವಾದ ಅಗ್ನಿಯನ್ನು ಗೋಜಕನೆಂದೂ, ತುಲಾಭಾರ ಮಾಡುವಾಗ ಸ್ಥಾಪಿತವಾದ ಅಗ್ನಿಗೆ ಧಾತಾಗ್ನಿ ಎಂಬದೂ.

ವೃಷೋತ್ಸರ್ಗೇ ಭವೇತ್ಸೂರ್ಯೋ ವಸಾನಾಂತೇ ರವಿಃ ಸ್ಮೃತಃ ।
ಪಾವಕೋ ವೈಶ್ವದೇವೇ ಚ ದೀಕ್ಷಾಪಕ್ಷೇ ಜನಾರ್ದನಃ ॥ ೮ ॥

ತ್ರಾಸನೇ ಚ ಭವೇತ್ಕಾಲಃ ಕ್ರವ್ಯಾದಃ ಶವದಾಹನೇ ।
ಪರ್ಣದಾಹೇ ಯಮೋ ನಾಮ ಹ್ಯಸ್ಥಿದಾಹೇ ಶಿಖಂಡಿಕಃ ॥ ೯ ॥

ಗರ್ಭಾಧಾನೇ ಚ ಮರುತಃ ಸೀಮಂತೇ ಪಿಂಗಲಃ ಸ್ಮೃತಃ ।
ಪುಂಸವೇತ್ವಿಂದ್ರ ಆಖ್ಯಾತಃ ಪ್ರಶಸ್ತೋ ಜಾತಕರ್ಮಣಿ ॥ ೧೦ ॥

ನಾಮಸಂಸ್ಥಾಪನೇ ಚೈವಮುಪಸ್ನ್ಯಸ್ಯೇ ಚ ಪಾರ್ಥಿವಃ ।
ನಿಷ್ಕ್ರಮೇ ಹಾಟಕಶ್ಚೈವ ಪ್ರಾಶನೇ ಚ ಶುಚಿಸ್ತಥಾ ॥ ೧೧ ॥

---

೮. ವೃಷೋತ್ಸರ್ಗ ಹೋಮಾಗ್ನಿಗೆ "ಸೂರ್ಯ" ನೆಂದೂ, ಮೃತಿಕಾಲದಲ್ಲಿ ಹಾಕುವ ಅಗ್ನಿಯನ್ನು "ರವಿ" ಎಂದೂ, ವೈಶ್ಯದೇವ ಹೋಮಕರ್ಮದಲ್ಲಿನ ಅಗ್ನಿಯನ್ನು "ಪಾವಕ" ನೆಂದೂ, ಕರ್ಮಾಂಗವಾಗಿ ದೀಕ್ಷೆವಹಿಸುವ ಸಂದರ್ಭದ ಅಗ್ನಿಯನ್ನು "ಜನಾರ್ದನ" ನೆಂದೂ ಹೇಳಬೇಕು.

೯. ಉದ್ವೇಗಪಡಿಸುವ ಕರ್ಮವಾಡುವುದಕ್ಕಾಗಿ ಸ್ಥಾಪಿಸಿದ ಅಗ್ನಿಗೆ 'ಕಾಲ' ನೆಂದು ಹೆಸರು. ಶವದಹನಕ್ಕೆ ಉಪಯೋಗಿಸುವ ಅಗ್ನಿಯನ್ನು 'ಕ್ರವ್ಯಾದ' ಎನ್ನಬೇಕು. ಎಲೆಗಳನ್ನು ಸುಡುವುದಕ್ಕೆ ಹಾಕುವ ಅಗ್ನಿಯನ್ನು 'ಯಮ' ನೆಂದೂ (ಯಚ್ಛನಿಗ್ರಹೇ ಎಂಬುದು ಧಾತು ಯಚ್ಛತೀತಿಯಮಃ ಎಂದು ಅರ್ಥ) ಅಸ್ಥಿ ಹೋಮಕ್ಕಾಗಿ ಪ್ರತಿಷ್ಠಿಸುವ ಅಗ್ನಿಯನ್ನು ಶಿಖಂಡಿಕನೆಂದೂ ಹೇಳುವರು.

೧೦. ಗರ್ಭಾದಾನಕರ್ಮದಲ್ಲಿನ ಹೋಮಾಗ್ನಿಯನ್ನು "ಮರುತ" ನೆಂದೂ ಸೀಮಂತಕರ್ಮದಲ್ಲಿನ ಹೋಮಾಗ್ನಿಯನ್ನು 'ಪಿಂಗಲ' ನೆಂದೂ ತಿಳಿಯಬೇಕು. ಪುಂಸವನಕರ್ಮದಲ್ಲಿ ಪ್ರತಿಷ್ಠಿತವಾದ ಅಗ್ನಿಗೆ 'ಇಂದ್ರ' ನೆಂದು ಸಂಜ್ಞೆ. ಚೂಡಾಕರ್ಮದಲ್ಲಿನ ಅಗ್ನಿಗೆ 'ಪ್ರಶಸ್ತ' ನೆಂದು ಹೆಸರು.

೧೧. ನಾಮಕರಣ ಮತ್ತು ದೇವಸಾನ್ನಿಧ್ಯದಲ್ಲಿ ಶಿಶುವನ್ನಿಡುವ ಸಂದರ್ಭದಲ್ಲಿ ಸ್ಥಾಪಿಸುವ ಅಗ್ನಿಯನ್ನು ಪಾರ್ಥಿವನೆಂದೂ, ಮಗುವನ್ನು ಮನೆಯಿಂದ ಹೊರಕ್ಕೆ ಕರೆದೊಯ್ಯುವ ದಿನ ಸ್ಥಾಪಿಸುವ ಹೋಮಾಗ್ನಿಯನ್ನು "ಹಾಟಕಾಗ್ನಿ" ಯೆಂದೂ ಅನ್ನಪ್ರಾಶನ ಕರ್ಮಾಂಗವಾದ ಹೋಮಾಗ್ನಿಯನ್ನು ಶುಚಿ ಎಂದೂ ಹೇಳಬೇಕು.

**ಚೂಡಾಕರ್ಮಣಿ ಸಭ್ಯಃ ಸ್ಯಾದ್ವ್ರತಾದೇಶೇ ಚ ಮಾಧವಃ ।**
**ವೀತಿಹೋತ್ರಶ್ಚೋಪನಯನೇ ಸಮಾವರ್ತೇ ಧನಂಜಯಃ　　　॥ ೧೨ ॥**

**ಉದರೇ ಜಠರಾಗ್ನಿಸ್ತು ಸಮುದ್ರೇ ಬಡಬಾನಲಃ ।**
**ಶಿಖಾಯಾಂ ಚ ವಿಭುರ್ಜ್ಞೇಯಃ ಸ್ವರಸ್ಯಾಗ್ನಿಃ ಸರೀಸೃಪಃ　　　॥ ೧೩ ॥**

**ಅಶ್ವಾಗ್ನಿರ್ಮಂಥರೋನಾಮ ರಥಾಗ್ನಿರ್ಜಾತವೇದಸಃ ।**
**ಗಜಾಗ್ನಿರ್ಮಂದರಶ್ಚೈವ ಸೂರ್ಯಾಗ್ನಿರ್ವಿಂಧ್ಯ ಸಂಜ್ಞಕಃ　　　॥ ೧೪ ॥**

**ತೋಯಾಗ್ನಿರ್ವರುಣೋನಾಮ ಬ್ರಾಹ್ಮಣಾಗ್ನಿರ್ಹವಿರ್ಭುಜಃ ।**
**ಪರ್ವತಾಗ್ನಿಃ ಕ್ರತುಭುಜೋ ದಾವಾಗ್ನಿಃ ಸೂರ್ಯ ಉಚ್ಯತೆ　　　॥ ೧೫ ॥**

---

೧೨. ಚೂಡಾಕರ್ಮಾಂಗವಾಗಿ ಮಾಡುವ ಹೋಮಾಗ್ನಿಯನ್ನು "ಸಭ್ಯ" ನೆಂದೂ, ವ್ರತಾದೇಶಕಾಲದ ಅಗ್ನಿಯನ್ನು "ಮಾಧವ" ನೆಂದೂ, ಉಪನಯನಾಗ್ನಿಯನ್ನು "ವೀತಿಹೋತ್ರ" ನೆಂದೂ, ವ್ರತಸಮಾವರ್ತನ ಕರ್ಮಾಂಗವಾದ ಅಗ್ನಿಯನ್ನು "ಧನಂಜಯ" ನೆಂದೂ ಹೇಳುವರು.

೧೩. ಪ್ರಾಣಿಗಳ ಉದರದಲ್ಲಿರುವುದು "ಜಠರಾಗ್ನಿ"ಯೆನಿಸುವುದು. ಸಮುದ್ರದಲ್ಲಿರುವ ಅಗ್ನಿಯನ್ನು 'ಬಡಬಾಗ್ನಿ' ಯೆನ್ನುವರು. ಜ್ವಾಲಾಗ್ರಸ್ಥಿತವಾದ ಅಗ್ನಿಯನ್ನು 'ವಿಭು' ವೆಂದೂ, ಸ್ವರದ ಅಗ್ನಿಯನ್ನು 'ಸರೀಸೃಪ' ವೆಂದೂ ಹೇಳುವರು.

೧೪. ಅಶ್ವದ ಉದರಾಗ್ನಿಗೆ 'ಮಂಥರ' ವೆಂದು ಹೆಸರು. ರಥನೇಮಿ ಘರ್ಷಣಾಗ್ನಿಯನ್ನು 'ಜಾತವೇದ' ನೆಂದು ಕರೆಯುವರು. ಗಜಾಗ್ನಿಯನ್ನು 'ಮಂದರ'ವೆಂದು ತಿಳಿಯಬೇಕು. ಸೂರ್ಯನ ಸಂಬಂಧವಾದ ಅಗ್ನಿಯನ್ನು ಎಂದರೆ ಸೂರ್ಯಕಿರಣಗಳ ಸ್ಪರ್ಶದಿಂದ ಸೂರ್ಯಕಾಂತಶಿಲೆಯಲ್ಲಿ ಉತ್ಪನ್ನವಾದ ಅಗ್ನಿಯನ್ನು 'ವಿಂಧ್ಯ' ವೆಂದು ವ್ಯವಹರಿಸುವರು.

೧೫. ನೀರಿನಲ್ಲಿರುವ ಅಗ್ನಿಗೆ 'ವರುಣ'ನೆಂದೂ, ಬ್ರಾಹ್ಮಣನಲ್ಲಿರುವ ತೇಜೋರೂಪವಾದ ಅಗ್ನಿಗೆ 'ಹವಿರ್ಭುಜ' ನೆಂತಲೂ, ಪರ್ವತಾಗ್ನಿಗೆ 'ಕ್ರತುಭಕ್' ಎಂದೂ, ಕಾಳ್ಗಿಚ್ಚಿಗೆ 'ಸೂರ್ಯ' ನೆಂದೂ ಈ ಪ್ರಕಾರ ಅಗ್ನಿಯ ನಾಮಗಳನ್ನು ತಿಳಿಯಬೇಕು.

**ದೀಪಾಗ್ನಿಃ ಪಾವಕೋ ನಾಮ ಗೃಹ್ಯಾಗ್ನಿರ್ಧರಣೀಪತಿಃ ।**
**ಘೃತಾಗ್ನಿಶ್ಚಾನಲೋ ವಾಯುಃ ಸೂತಿಕಾಜ್ಞೋ ರಾಕ್ಷಸಃ ॥ ೧೫ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ಅಗ್ನಿನಾಮವರ್ಣನಂ ನಾಮ ಸಪ್ತದಶೋಽಧ್ಯಾಯಃ.**



---

೧೬. ದೀಪದಲ್ಲಿರುವ ಅಗ್ನಿಯನ್ನು 'ಪಾವಕ'ನೆಂದೂ, ಮಹಾರಾಜನಲ್ಲಿರುವ ಪ್ರತಾಪರೂಪವಾದ ಅಗ್ನಿಯನ್ನು 'ಗುಹ್ಯಾಗ್ನಿ' ಯೆಂದೂ ತಿಳಿಯಬೇಕು. ಘೃತ ಸಂಯೋಗದಿಂದ ದೇಹದಲ್ಲಿ ಉತ್ಪನ್ನನಾದ ಶಾಖರೂಪವಾದ ಅಗ್ನಿಯನ್ನು 'ಅನಲ' ನೆಂದೂ, "ವಾಯು"ವೆಂದೂ ಪ್ರಸವಗೃಹಾಗ್ನಿಯನ್ನು ರಾಕ್ಷಸ ಎಂದೂ ಕರೆಯುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ ಅಗ್ನಿನಾಮ ವರ್ಣನೆಯೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ಪ್ರಥಮಭಾಗೇ

## ಅಷ್ಟಾದಶೋಽಧ್ಯಾಯಃ

---

॥ ಸೂತ ಉವಾಚ ॥

ಅಥಾತೋ ಹೋಮದ್ರವ್ಯಾಣಾಂ ಪ್ರಮಾಣಮಭಿಧೀಯತೇ ।
ಪ್ರಮಾಣೇ ಚಾಪ್ರಮಾಣೇ ಚ ನಿಷ್ಫಲಂ ಭವತಿ ಧ್ರುವಂ ॥ ೧ ॥

ಕರ್ಷಮಾತ್ರಂ ಘೃತಂ ಹೋಮೋ ಶುಕ್ತಿಮಾತ್ರಂ ಪಯಃ ಸ್ಮೃತಂ ।
ತತ್ಸಮಂ ಪಂಚಗವ್ಯಂ ಚ ದಧಿ ದುಗ್ಧಂ ತಥಾ ಮಧು ॥ ೨ ॥

---

### ಹದಿನೆಂಟನೆಯ ಅಧ್ಯಾಯ

೧. ಸೂತರು ಹೇಳುತ್ತಾರೆ—ಇನ್ನು ಹೋಮದ್ರವ್ಯಗಳ ಆಹುತಿಯನ್ನು ಎಷ್ಟೆಷ್ಟು ಪ್ರಮಾಣದಲ್ಲಿ ಕೊಡಬೇಕು, ಎಂಬ ಅಳತೆಯ ವಿಚಾರವನ್ನು ಹೇಳುತ್ತೇನೆ. ಪ್ರಮಾಣಾನುಸಾರವಾಗಿ ಮಾಡಬೇಕಾದುದನ್ನು ಪ್ರಮಾಣವಿಲ್ಲದೆ ಮಾಡಿದರೆ ಯಥೋಕ್ತವಾದ ಫಲವಿಲ್ಲದೆ ಹೋಗುವುದು.

೨. ಒಂದು ಕರ್ಷ (೮೦ ಗುಲಗಂಜಿ) ತೂಕ ಪ್ರಮಾಣದಷ್ಟು ತುಪ್ಪವು ಒಂದು ಆಹುತಿಯಲ್ಲಿರಬೇಕು. ಹಾಲಿನ ಆಹುತಿಯು ಒಂದು ಕಪ್ಪೇಚಿಪ್ಪಿನಲ್ಲಿ ಹಿಡಿಯುವಷ್ಟು ಇರಬೇಕು. ಪಂಚಗವ್ಯ, ಹಾಲು, ಮೊಸರು, ಜೇನು ಇವೆಲ್ಲಕ್ಕೂ ಕಪ್ಪೇಚಿಪ್ಪಿನಷ್ಟೇ ಪ್ರಮಾಣವೆಂದು ನಿರ್ದಿಷ್ಟವಾಗಿದೆ.

ಮುಷ್ಟಿಮಾನೇನ ಪೃಥುಕಾ ಲಾಜಾಃ ಸ್ಯುರ್ಮುಷ್ಟಿಸಂಮಿತಾಃ ।
ಶರ್ಕರಾ ಮುಷ್ಟಿಮಾತ್ರಾ ಚ ಶರ್ಕರಾತೋಲಕಂ ವಿದುಃ ॥ ೩ ॥

ತ್ರಿತೋಲಕಂ ಗುಡಂ ವಿದ್ಯಾದಿಕ್ಷುಪರ್ವವಿಧಿರ್ಭವೇತ್ ।
ಏಕೈಕಂ ಪುಷ್ಪಪತ್ರಾಣಿ ಶಾಲೂಕಸ್ಯ ತ್ರಿಮುಷ್ಟಿಕಂ ॥ ೪ ॥

ಏಕಲಗ್ನೇ ನ ಜುಹುಯಾನ್ನ ಪೃಥಗ್ಜುಹುಯಾತ್ಕ್ವಚಿತ್ ।
ಸವೃಂತಕಂ ಜಪಾಪುಷ್ಪಂ ಕೇಶರಂ ತತ್ಸವೃಂತಕಂ ॥ ೫ ॥

ಏಕೈಕಶಶ್ಚ ಪದ್ಮಾನಾಂ ಜಲಜಾನಾಂ ತಥೈವ ಚ ।
ಜೀವಂತ್ಯಾಃ ಫಲಮಾನೇನ ಪಿಷ್ಟಕಾನಾಂ ಪ್ರಸಂಖ್ಯಯಾ ॥ ೬ ॥

---

೩. ಅರಳು, ಅವಲಕ್ಕಿ ಇವುಗಳನ್ನು ಒಂದುಹಿಡಿಯಷ್ಟು ಹೋಮಮಾಡಬೇಕು. ಸಕ್ಕರೆಯನ್ನು ಒಂದುಹಿಡಿಯಷ್ಟು ಎಂದು ಕೆಲವರೂ, ಒಂದು ತೊಲದಷ್ಟೆಂದು ಮತ್ತೆ ಕೆಲವರೂ ಹೇಳುವರು.

೪. ಬೆಲ್ಲವಾದರೆ ಒಂದು ಆಹುತಿಗೆ ಮೂರುತೊಲದಷ್ಟು ಇರಬೇಕು. ಕಬ್ಬನ್ನು ಒಂದೊಂದು ಗಿಣ್ಣಿನ ಪ್ರಮಾಣದಂತೆ ಹೋಮಮಾಡಬೇಕು. ಪತ್ರ ಪುಷ್ಪಗಳು ಇವುಗಳನ್ನು ಒಂದೊಂದನ್ನೇ ಹೋಮಮಾಡಬೇಕು. ಕಮಲದ ಗೆಡ್ಡೆಯನ್ನು ಮೂರು ಮುಷ್ಟಿಯು ಪ್ರಮಾಣದಂತೆ ಹೋಮಮಾಡಬೇಕು.

೫. ಎರಡು ಮೂರುಗಡ್ಡೆಗಳು ಸೇರಿ ಒಂದೇ ಗೊಂಚಲಾಗಿರುವಾಗ ಉಂಡೆಯಾಗಿ ಹೋಮಮಾಡಬಾರದು. ಬಿಡಿಸಿ ಹೋಮಮಾಡಬೇಕು. ದಾಸವಾಳದಹೂ, ಕೇಶರಪುಷ್ಪ, ಇವನ್ನು ತೊಟ್ಟುಸಹಿತವಾಗಿ ಹೋಮಮಾಡಬೇಕು.

೬. ಪದ್ಮಪುಷ್ಪ, ಜಲಜಪುಷ್ಪ ಇವನ್ನು ಒಂದೊಂದನ್ನೇ ತೊಟ್ಟುಸಹಿತವಾಗಿ ಹೋಮಮಾಡಬೇಕು. ಜೀವಂತಿಮೂಲಿಕೆಯನ್ನು ಒಂದು ಹಣ್ಣಿನ ಗಾತ್ರದಲ್ಲಿಯೂ ಪಿಷ್ಟಸಂಖ್ಯೆಯಾಗಿಯೂ ಹೋಮಮಾಡಬೇಕು.

**ವಸಂತಕಂ ಧಾತ್ರಿಮಾನೇ ಮೋದಕಸ್ಯ ಪ್ರಮಾಣತಃ ।**
**ಏಕೈಕಶಃ ಫಲಾನಾಂ ಚ ಮಾತುಲಿಂಗತ್ರಿಖಂಡಕಂ ॥ ೭ ॥**

**ಅಷ್ಟಧಾ ನಾಲಿಕೇರಸ್ಯ ಪನಸಂ ದಶಧಾ ಭವೇತ್ ।**
**ಪದ್ಮಬೀಜಪ್ರಮಾಣೇನ ಕೂಷ್ಮಾಂಡಂ ಚಾಷ್ಟಧಾ ಭವೇತ್ ॥ ೮ ॥**

**ಉರ್ವಾರುಕಂ ಚಾಷ್ಟಧಾ ಚ ಗುಡೂಚೀ ಚತುರಂಗುಲಂ ।**
**ಪೂಗಮಾನಂ ಚ ಮಾಂಸಸ್ಯ ಸಗುಡಂ ತತ್ರ ದೃಶ್ಯತೇ ॥ ೯ ॥**

**ಅನ್ಯತ್ರ ಬದರೀಮಾನಂ ತಿಂದುಕಂ ಚ ತ್ರಿಧಾಕೃತಂ ।**
**ಕಾಷ್ಠಂ ಪ್ರಾದೇಶಮಾತ್ರಂ ಸ್ಯಾದ್ದೂರ್ವಾಯಾಶ್ಚ ತ್ರಿಪತ್ರಕಂ ॥ ೧೦ ॥**

---

೭. ವಸಂತಕವನ್ನು ನೆಲ್ಲಿಯಕಾಯಿಯ ಗಾತ್ರವಾಗಿಯೂ, ಮೋದಕಪ್ರಮಾಣದಲ್ಲಿಯೂ, ಮಾದಲದ ಹಣ್ಣನ್ನು ಮೂರುಮೂರು ಚೂರುಗಳನ್ನಾಗಿ ಕತ್ತರಿಸಿ ಒಂದೊಂದನ್ನಾಗಿ ಹೋಮಮಾಡಬೇಕು.

೮. ತೆಂಗಿನಕಾಯನ್ನು ಎಂಟುಚೂರು ಮಾಡಿ ಒಂದುಪಾಲನ್ನೂ, ಹಲಸಿನ ಹಣ್ಣುಗಳನ್ನು ಹತ್ತುಪಾಲು ಮಾಡಿ ಒಂದುಪಾಲನ್ನೂ, ಕುಂಬಳಕಾಯನ್ನು ಎಂಟು ಚೂರಾಗಿ ಕತ್ತರಿಸಿ ಒಂದುಚೂರನ್ನೂ ಕಮಲದ ಮಣಿಯ ಗಾತ್ರದ ಪ್ರಮಾಣದಲ್ಲಿ ಹೋಮಮಾಡಬೇಕು.

೯. ಸೌತೇಕಾಯಿಯನ್ನು ಎಂಟುಭಾಗ ಮಾಡಿ ಒಂದುಪಾಲನ್ನು ಹೋಮ ಮಾಡಬೇಕು. ಅಮೃತವಳ್ಳಿಯನ್ನು ನಾಲ್ಕುಅಂಗುಲ ಉದ್ದವಾದ ತುಂಡುಮಾಡಿ, ಹೋಮಮಾಡಬೇಕು. ಮಾಂಸಕ್ಕೆ ಬೆಲ್ಲವನ್ನು ಮಿಶ್ರಮಾಡಿ ಒಂದೊಂದು ಅಡಿಕೆ ಕಾಯಿ ಗಾತ್ರದಷ್ಟು ಹೋಮಮಾಡಬೇಕು.

೧೦. ಹಾಗೆ ಬೆಲ್ಲವನ್ನು ಮಿಶ್ರಮಾಡದಿದ್ದರೆ ಒಂದು ಎಗಚೀಹಣ್ಣಿನ ಗಾತ್ರದಷ್ಟು ಅಥವಾ ತೂಬರಹಣ್ಣಿನ ಗಾತ್ರದಷ್ಟು ಎಂದು ಹೀಗೆ ಮೂರುತರಹ ಪ್ರಮಾಣದಲ್ಲಿ ಹೋಮಮಾಡಬಹುದು. ಒಂದು ಜೋಟಿನಷ್ಟುದ್ದವಾಗಿರುವಂತೆ ಹೋಮ ಮಾಡಬೇಕು. ಹುಲ್ಲುಗರಿಕೆಯಾದರೆ ಮೂರುಎಲೆ ಇರುವಷ್ಟು ಉದ್ದವನ್ನು ಮಾತ್ರ ಚಿಗಟಿ ಹೋಮಮಾಡಬೇಕು.

ಭೂರ್ಜಪತ್ರಂ ಚ ಗೃಹ್ಣೀಯಾಚ್ಛವಿಷಾಂ ಪ್ರಾದೇಶಮಾತ್ರಿಕಾಂ ।
ವ್ರೀಹಯೋ ಮುಷ್ಟಿಮಾತ್ರಾಃ ಸ್ಯುಃ ಶುಕ್ತಿಮಾನೇನ ಸರ್ಷಪಾಃ ॥ ೧೧ ॥

ಮರಿಚಾಃ ಸ್ಯುರ್ವಿಮಾನೇನ ಮೃಣಾಲಂ ಚಾಥ ಮೂಲಕಂ ।
ಸಪ್ತಖಂಡಂ ಚ ವಾರ್ತಾಕಂ ತ್ರಿಪುಷ್ಪಂ ಚ ತ್ರಿಧೋದಿಕಂ ॥ ೧೨ ॥

ಚಂದನಾಗುರುಕರ್ಪೂರ ಕಸ್ತೂರೀ ಕುಂಕುಮಾನಿ ಚ ।
ತಿಂತ್ರಿಡೀಬೀಜಮಾನೇನ ಸಮುದ್ದಿಷ್ಟಾನಿ ದೇಶಿಕೈಃ ॥ ೧೩ ॥

ಸಮಿದಾಪ್ಲವನೇ ತ್ರ್ಯಂಗ ತಿಲಾನಾಮಪಿ ಮಧ್ಯತಃ ।
ದಶಕಂ ಪ್ಲಾವನೇನೈವ ಸಹಸ್ರಾಣಾಂ ಶತಂ ವಿನಾ ॥ ೧೪ ॥

ಏವಂ ವ್ರೀಹಿಪ್ಲಾವನೇ ಚ ಕಾಷ್ಠವದಿಕ್ಷುದಂಡಕಂ ।
ಪ್ರೋಕ್ಷಣಂ ಮೃದುಪುಷ್ಪಾಣಾಂ ಲತಾದೀನಾಂ ತಥೈವ ಚ ॥ ೧೫ ॥

---

೧೧. ಭೂರ್ಜಪತ್ರ ಬನ್ನಿ, ಇವುಗಳನ್ನು ಒಂದು ಚೋಟುದ್ದ ಮಾತ್ರ ತೆಗೆದು ಕೊಳ್ಳಬೇಕು. ಭತ್ತವನ್ನು ಒಂದುಹಿಡಿಯ ಪ್ರಮಾಣದಲ್ಲೂ, ಸಾಸುವೆಯಾದರೆ ಒಂದು ಕಪ್ಪೇಚಿಪು ಹಿಡಿಯುವಷ್ಟನ್ನೂ ಹೋಮಮಾಡಬೇಕು.

೧೨. ಮೆಣಸಿನಕಾಳನ್ನು ಅಳತೆಮಾಡದೆ ಸುಮಾರಾಗಿ ಹಾಕಬೇಕು. ತಾವರೆ ದಂಟು, ಮೂಲಂಗಿ, ಇವನ್ನು ಏಳುಚೂರುಮಾಡಿ ಒಂದೊಂದು ಚೂರನ್ನು ಉಪ ಯೋಗಿಸಬೇಕು. ವಾರ್ಕಾಕವನ್ನೂ, (?) ತ್ರಿಪುಷ್ಪವನ್ನೂ ಮೂರುಮೂರಾಗಿ ಹೋಮಮಾಡಬೇಕೆಂದು ಹೇಳಿದೆ.

೧೩. ಚಂದನ, ಅಗಿಲು, ಕರ್ಪೂರ, ಕೇಸರಿ ಇವುಗಳನ್ನು ಒಂದು ತಿಂತ್ರಿಡೀ ಬೀಜದಷ್ಟು ಗಾತ್ರ ಹೋಮಮಾಡತಕ್ಕದ್ದೆಂದು ಗುರುಗಳು (ಆಚಾರ್ಯರು) ಪ್ರಮಾಣ ವನ್ನು ಗೊತ್ತುಮಾಡಿದ್ದಾರೆ

೧೪. ಮೂರುಮೂರು ಸಮಿತ್ತುಗಳನ್ನೂ ಅದರ ಜೊತೆ ಹತ್ತುಕಾಳುಗಳಿಗೆ ಕಮ್ಮಿಇಲ್ಲದಂತೆ ಎಳ್ಳುಗಳನ್ನೂ ಸಹ ಒಂಭೈನೂರು ಸಲ ಹೋಮಮಾಡಬೇಕು.

೧೫. ಭತ್ತವನ್ನು ಕೇರಿಸಿ, ಜಾಲಿಸಿಯೂ; ಕಬ್ಬನ್ನು ಒಂದೊಂದು ಸಮಿತ್ತಿ ನಂತೆ ತುಂಡುಮಾಡಿಕೊಂಡೂ, ಮೃದುವಾದ ಪುಷ್ಪಗಳನ್ನೂ, ಮತ್ತು ಬಳ್ಳಿಗಳನ್ನೂ, ಪ್ರೋಕ್ಷಣಮಾಡಿಕೊಂಡೂ ಹೋಮಕ್ಕೆ ಸಿದ್ಧಪಡಿಸಿಕೊಂಡು ಉಪಯೋಗಿಸಬೇಕು.

ಪಾಯಸಾನ್ನೇ ತಥಾನ್ನೇ ಚ ಮೋದಕೇ ಪಿಷ್ಟಕೇಽಪಿ ಚ ।
ಶಾಲ್ಯಾಸಕ್ತೇನ ಜುಹುಯಾದ್ವ್ಯತ್ಯಯೇ ವ್ಯತ್ಯಯಂ ಫಲಂ ॥ ೧೬ ॥

ಬಿಲ್ವಪತ್ರಸ್ಯ ಪ್ಲವನಂ ದಂಡಂ ಹಿತ್ವಾ ಚ ಪ್ಲಾವಯೇತ್ ।
ವೃಂತಸಂಪ್ಲಾವನಾದೇವ ಫಲಂ ಹರತಿ ರಾಕ್ಷಸಃ ॥ ೧೭ ॥

ಬಿಲ್ವಪತ್ರಸ್ಯ ಪೂರ್ವಾರ್ಧಪ್ರಾಪ್ತಮಾತ್ರೇಣ ಯೋಜಯೇತ್ ।
ಪತ್ರತ್ರಯಂ ತಥಾ ಹೋಮೇ ಭಿನ್ನೇ ಭಿನ್ನೇತಿದೂಷಣಂ ॥ ೧೮ ॥

ನ ದ್ವಿತ್ರಿಪ್ಲವನಂ ಕುರ್ಯಾತ್ಕೃತ್ವಾ ಯಾತಿ ರಸಾತಲಂ ।
ತಸ್ಮಾಚ್ಚ ಪುತ್ರಶಿಷ್ಯಾದ್ಯೈರ್ಬ್ರಾಹ್ಮಣೈಸ್ತತ್ವಕೋವಿದೈಃ ॥ ೧೯ ॥

ಪೂರ್ವಾಶಾಭಿಮುಖೋ ಭೂತ್ವಾ ಪ್ಲಾವಯೇಚ್ಚ ಯಥಾಕ್ರಮಾತ್ ।
ನ ನ್ಯೂನಂ ನಾಧಿಕಂ ಕುರ್ಯಾಚ್ಛಾಂತಿಪಕ್ಷ ಉದಙ್ಮುಖಃ ॥ ೨೦ ॥

---

೧೬. ಪಾಯಸಾನ್ನ, ಅನ್ನ, ಮೋದಕ, ಹುರಿದಹಿಟ್ಟು,·(ಪುರೋಡಾಶ) ಅನ್ನದ ಅಗುಳು ಇವನ್ನು ಪಾಕಮಾಡಿ ಸಿದ್ಧಮಾಡಿಕೊಂಡು ಹೋಮಮಾಡಬೇಕು. ಹೀಗೆ ಮಾಡುವಕ್ರಮದಲ್ಲಿ ವ್ಯತ್ಯಾಸವಾದರೆ ಫಲವೂ ವ್ಯತ್ಯಾಸವಾಗುತ್ತದೆ.

೧೭. ಬಿಲ್ವಪತ್ರೆಯನ್ನು ಕಡ್ಡಿಸಹಿತವಾಗಿಲ್ಲದಂತೆ ಶೋಧಿಸಬೇಕು. ಕಡ್ಡಿ ಸಹಿತವಾಗಿ ಉಪಯೋಗಿಸಿದರೆ ಪೂಜಾಫಲವನ್ನು ರಾಕ್ಷಸನು ಅಪಹರಿಸುವನು.

೧೮. ಬಿಲ್ವಪತ್ರೆಯನ್ನು ತಂದಕೂಡಲೆ ಕಾಷ್ಠಭಾಗವನ್ನು ಚಿಗುಟಿ, ಪೂರ್ವಾರ್ಧಭಾಗವನ್ನೇ ಜೋಡಿಸಿ ಇಟ್ಟುಕೊಳ್ಳಬೇಕು. ಹೋಮಕ್ಕೆ ಮೂರು ಎಲೆ ಉಳ್ಳದ್ದನ್ನೇ ಉಪಯೋಗಿಸಬೇಕು. ಮೂರುಎಲೆ ಇಲ್ಲದೆ ಉದುರಿಹೋಗಿದ್ದರೂ ಹರಿದುಹೋಗಿದ್ದರೂ ಅವನ್ನು ಉಪಯೋಗಿಸುವುದು ಒಳ್ಳೆಯದಲ್ಲ.

೧೯. ಎರಡುದಳ, ಮೂರುದಳ, ಇವುಗಳನ್ನು ಒಟ್ಟಿಗೆ ಇರುವಂತೆ ಆರಿಸಬಾರದು. ಹಾಗೆ ಮಾಡಿದರೆ ಅಧೋಗತಿ ಪ್ರಾಪ್ತಿಯಾಗುವುದು. ಆದುದರಿಂದ ತನ್ನ ಪುತ್ರರು, ಶಿಷ್ಯರು, ತತ್ತ್ವಜ್ಞರಾದ ಬ್ರಾಹ್ಮಣೋತ್ತಮರು ಇವರನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಅವರಿಂದ ಅದನ್ನು ಪ್ಲಾವನಮಾಡಿಸಬೇಕು.

೨೦. ಶಾಂತಿಪಕ್ಷದಲ್ಲಿಯಾದರೆ ಉತ್ತರಾಭಿಮುಖವಾಗಿ ಕುಳ್ಳಿರಿಸಿ ಸ್ವಲ್ಪವೂ ಹೆಚ್ಚು ಕಡಿಮೆಯಾಗದಂತೆ ಅವರಿಂದ ಕ್ರಮವಾಗಿ ಪ್ಲಾವನಮಾಡಿಸಬೇಕು.

ಪಾಯಸಾನ್ಯನ್ಯದೇವೇಷು ಯತ್ನೇನ ಪರಿವರ್ಜಯೇತ್ ।
ನ ಚಾಗ್ನೌ ದಾಪಯೇದ್ಯತ್ನಾದೇತೇಭ್ಯಃ ಪ್ರತಿಪಾದಯೇತ್ ॥ ೨೦ ॥

ಕನಿಷ್ಠಾಂಗುಲಿಮಾಸಾದ್ಯ ಪ್ರಕುರ್ಯಾತ್ಪರ್ವಭೂಷಣಂ ।
ಗುಣದೋರಕಮಾನೇನ ತಾವದ್ಧೋಮಗತಿರ್ಬುಧಾಃ ॥ ೨೨ ॥

ಅಂಗುಲ್ಯೈರ್ದ್ವಿತ್ರಿಚತುರ್ಭಿಃ ಪತ್ರಹೋಮಾಕೃತಿಕ್ರಮಾತ್ ॥ ೨೩ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ
ಅಷ್ಟಾದಶೋಽಧ್ಯಾಯಃ.



೨೧. ಇತರ ದೇವತೆಗಳಿಗೆ ಆಹುತಿಕೊಡುವಾಗ ಪ್ರಯತ್ನಪೂರ್ವಕವಾಗಿ ಪಾಯಸದ ಆಹುತಿಗಳನ್ನು ಕೊಡಬೇಕಾದ್ದಿಲ್ಲ. ಆ ಅನ್ಯದೇವತೆಗಳ ತೃಪ್ತಿಗಾಗಿ ಆ ದೇವತೆಗಳಿಗೆ ಪಾಯಸ ನಿವೇದನಮಾಡಬೇಕು.

೨೨–೨೩. ಮೂರುಎಳೆಯಾಗಿ ಜೋಡಿಸಿರುವ ದಾರವನ್ನು ಕಿರುಬೆರಳಿಗೆ ಸುತ್ತಿ ಅಲಂಕಾರಮಾಡಿ, ಅನಂತರ ಆ ಕಿರುಬೆರಳಿನ ಒಂದೊಂದು ಗಿಣ್ಣಿನಲ್ಲಿಯೂ ಇರುವ ಅಂಗುಲಪ್ರಮಾಣದಂತೆ ಆ ಕೈಗೆ ಸುತ್ತಿರುವ ದಾರವನ್ನು ಕ್ರಮವಾಗಿ ಎರಡು ಅಂಗುಲ, ಮೂರುಅಂಗುಲ ಮತ್ತು ನಾಲ್ಕುಅಂಗುಲ ಅಳತೆಯಿರುವಂತೆ ಕತ್ತರಿಸಿ ತುಂಡುಮಾಡಿಕೊಂಡು ಪತ್ರಹೋಮವನ್ನು ಮಾಡುವಂತೆಯೇ ಹೋಮಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ
ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ಪ್ರಥಮಭಾಗೇ
## ಏಕೋನವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಶ್ರೀಪರ್ಣೀ ಶಿಂಶುಪಾ ಕ್ಷೀರೀ ಬಿಲ್ವಃ ಖದಿರ ಏವ ಚ ।
ಸ್ರುವೇ ಪ್ರಶಸ್ತಾಸ್ತರವಃ ಪ್ರಸಿದ್ಧಾ ಯಾಗಕರ್ಮಣಿ ॥ ೧ ॥

ಪ್ರತಿಷ್ಠಾಯಾಂ ಪ್ರಶಸ್ತಾಸ್ತು ಧಾತ್ರೀಖದಿರಕೇಶರಾಃ ।
ಸಂಸ್ಕಾರೇ ಶಶಿಭಿನ್ನಾ ಚ ಧಾತ್ರೀ ಧಾತ್ರಾ ವಿನಿರ್ಮಿತಾ ॥ ೨ ॥

---

## ಹತ್ತೊಂಭತ್ತನೆಯ ಅಧ್ಯಾಯ

೧. ಸೂತರು ಹೇಳುತ್ತಾರೆ—ಯಾಗಕರ್ಮದಲ್ಲಿ ಸಿದ್ಧಿಯನ್ನು ಕೊಡತಕ್ಕದ್ದಾಗಿಯೂ, ಹೋಮಕ್ಕೆ ಮುಖ್ಯ ಸಾಧನವಾಗಿಯೂ ಇರುವ, ಸ್ರುವದ ನಿರ್ಮಾಣಕ್ಕೆ ಶ್ರೀಪರ್ಣೀ, (ತೇಗ) ಶಿಂಶುಪಾ, ಕ್ಷೀರವೃಕ್ಷ, ಬಿಲ್ವಪತ್ರೆ, ಕಗ್ಗಲಿ ಈ ಮರಗಳು ಪ್ರಶಸ್ತಗಳು.

೨ ನೆಲ್ಲಿ, ಕಗ್ಗಲಿ, ಕೇಶರ ಈ ವೃಕ್ಷಗಳು ಪ್ರತಿಮಾರಚನೆಗೆ ಪ್ರಶಸ್ತವಾದುವು. ಶಶಿಸಂಜ್ಞಿಕವಲ್ಲದೆ ತದ್ಭಿನ್ನವಾದ ಬ್ರಹ್ಮನಿರ್ಮಿತವಾದ ಧಾತ್ರೀ ಮತ್ತು ಕೇಶರ ಈ ವೃಕ್ಷಗಳು ಸಂಸ್ಕಾರಕ್ಕೆ ಮುಖ್ಯವಾದುವುಗಳೆಂದು ತಿಳಿಯಬೇಕು.

ಸಂಪ್ರಾಶೇ ಯಃ ಸ್ರುವಃ ಪ್ರೋಕ್ತಃ ಸಂಸ್ಕಾರೇ ಯಜ್ಞಸಾಧನೇ ।
ಪ್ರತಿಷ್ಠಾಯಾಂ ತು ಕಥಿತಾಸ್ತದನ್ಯೇ ಶಾಸ್ತ್ರವೇದಿಭಿಃ ॥ ೩ ॥

ಸ್ರುವಂ ಸ್ರುಚಮಥೋ ವಕ್ಷ್ಯೇ ಯದಧೀನಶ್ಚ ಜಾಯತೆ ।
ಯಜ್ಞೇ ನ ಸರ್ವಕಂ ಧಾರ್ಯಮಕ್ಷರೇಣ ಚ ವ್ಯತ್ಯಯಃ ॥ ೪ ॥

ತಸ್ಮಾದೌ ಚ ಸ್ರುವಂ ವಕ್ಷ್ಯೇ ಯಚ್ಚ ಮಾನಂ ಯದಾಸ್ಪದಂ ।
ಕಾಷ್ಠಂ ಗೃಹೀತ್ವಾ ಬಿಲ್ವಸ್ಯ ರಿಕ್ತಾದಿ ತಿಥಿವರ್ಜಿತೇ ॥ ೫ ॥

ಸಮುಪೋಷ್ಯ ಚ ರಚಯೇದಾಮಿಷಾಣಿ ನ ಚ ಸ್ಮರೇತ್ ।
ವರ್ಜಯೇದ್ಗ್ರಾಮ್ಯಧರ್ಮಂ ಚ ನಿರ್ಮಾಣೇ ಸ್ರುಕ್‌ಸ್ರುವಸ್ಯ ವೈ ॥ ೬ ॥

---

೩. ಆಚಮನ ಪ್ರಾಶನ ಮಾಡುವಾಗ ಉದ್ಧರಣೆಯ ರೂಪದಲ್ಲಿ ಉಪಯೋಗಿಸುವ ಸಾಧನವೇ ಸ್ವಲ್ಪ ದೊಡ್ಡದಾಗಿ ರಚಿತವಾಗಿ, ಯಜ್ಞಕರ್ಮದಲ್ಲಿ ಸ್ರುವವೆನಿಸುವುದು. ಪ್ರತಿಮಾಪ್ರತಿಷ್ಠಾ ಸಾಧನದಲ್ಲಿ, ಶಾಸ್ತ್ರಜ್ಞರು ಇದನ್ನು ಬೇರೆ ಹೆಸರಿನಿಂದ ಕರೆಯುತ್ತಾರೆ.

೪-೫. ಮನುಷ್ಯನು ಯಜ್ಞದೀಕ್ಷಾಕಾಲದಲ್ಲಿ ಸ್ರುಕ್ಕು, ಸ್ರುವ, ಇವುಗಳನ್ನು ಉಪಯೋಗಿಸಿಯೇ ಹೋಮಾದಿಗಳನ್ನು ಮಾಡಬೇಕಾಗುತ್ತದೆ. ಯಜ್ಞರೂಪವಾದ ಕರ್ಮದಲ್ಲಿ ಇವೆರಡೂ ಸದಾ ಧರಿಸಬೇಕಾದ್ದೂ ಮತ್ತು ಉಪಯೋಗಿಸಬೇಕಾದುವೂ ಆಗಿರುವುವು. ಉಚ್ಚಾರಣೆಯ ಅಕ್ಷರಗಳಲ್ಲಿ ಮಾತ್ರ ಇವಕ್ಕೆ ವ್ಯತ್ಯಾಸವಿದೆ. ಈ ವಿವರಣ ಪ್ರಾರಂಭದಲ್ಲಿ ಮೊದಲು ಸ್ರುವದ ಲಕ್ಷಣವನ್ನು ಎಂದರೆ ಅದು ಎಷ್ಟು ಉದ್ದ ಎಷ್ಟು ಅಗಲ ಅಳತೆಯಿರಬೇಕು, ಪಾತ್ರಾಸಾದನ ಕಾಲದಲ್ಲಿ ಯಾವ ಸ್ಥಾನದಲ್ಲಿ ಇವನ್ನು ಇಡಬೇಕು? ಈ ಮೊದಲಾದುವುಗಳನ್ನು ಹೇಳುತ್ತೇನೆ.

೬-೭. ರಿಕ್ತೆ ಎಂದರೆ ದುಷ್ಟ ತಿಥಿಗಳನ್ನು ಬಿಟ್ಟು, ಶುಭದಿನದಲ್ಲಿ ಉಪವಾಸದಿಂದಿದ್ದು, ಬಿಲ್ವಪತ್ರೆ ಮರದ ತುಂಡನ್ನು ತೆಗೆದುಕೊಂಡು ಸ್ರುಕ್ಕು ಮತ್ತು ಸ್ರುವವನ್ನು ಮಾಡಿಸಬೇಕು. ಆ ಕಾಲದಲ್ಲಿ ಮಾಂಸಾದಿಗಳನ್ನು ಸ್ಮರಿಸಲೂ ಕೂಡದು. ಸ್ರುಕ್ಸ್ರುವಾದಿಗಳನ್ನು ರಚನೆಮಾಡುವ ದಿನದಲ್ಲಿ ಸ್ತ್ರೀ ಸಂಭೋಗವನ್ನು ಮಾಡಬಾರದು. ಆ ತುಂಡನ್ನು ಮೊದಲು ಎರಡುಹೋಳಾಗಿ ಮಾಡಿಕೊಳ್ಳಬೇಕು. ಅನಂತರ

**ಕಾಷ್ಠಂ ಗೃಹೀತ್ವಾ ವಿಭಜೇದ್ಭಾಗಾಂಸ್ತ್ರಿಂಶತ್ತ್ರಥಾ ಪುನಃ ।**
**ವಿಂಶತ್ಯಂಗುಲಮಾನಂ ತು ಕುಂಡವೇದಿಸಮೋದರಂ ॥ ೭ ॥**

**ಕಟಾಹಾಕಾರನಿಮ್ನಂ ಚ ಸ್ರುವಂ ಕುರ್ಯಾದ್ವಿಚಕ್ಷಣಃ ।**
**ಧಾತ್ರೀಫಲಸಮಾಕಾರಂ ಸ್ವಧಾನಿಮ್ನಂ ಸುಶೋಭನಂ ॥ ೮ ॥**

**ವೇದೀಂ ಶೂರ್ಪಾಕೃತಿಂ ಕುರ್ಯಾತ್ಕುಂಡಾನಿ ಪರಿಕಲ್ಪಯೇತ್ ।**
**ಹಂಸವತ್ತ್ರಿಗುಣಾ ವಾಪಿ ಹಸ್ತೇನಾನುಮುಖಂ ಲಿಖೇತ್ ॥ ೯ ॥**

**ಸ್ರುವಂ ಚತುರ್ವಿಂಶತಿಭಿರ್ಭಾಗೈಶ್ಚ ರಚಯೇದ್ಧ್ರುವಂ ।**
**ದ್ವಿತ್ರಿಂಶಂ ಸ್ಯಾತ್ಕುಂಡಮಾನಮುದ್ದೈವೇ ತಸ್ಯ ಕೀರ್ತಿತಂ ॥ ೧೦ ॥**

---

ಒಂದೊಂದು ಹೋಳಿನಲ್ಲಿಯೂ ಉದ್ದವನ್ನು ಮೂವತ್ತುಭಾಗ ಮಾಡಿ ಗುರುತಿಸಬೇಕು. ತುಂಡು ಇಪ್ಪತ್ತುಅಂಗುಲ ಅಳತೆಯುಳ್ಳದ್ದಾದರೆ ಅಗ್ನಿಕುಂಡದ ಜಗಲಿಯಷ್ಟು ಸ್ರುಕ್ಕಿನ ಉದರ (ಕಾವು) ವುಳ್ಳಂತೆ ಮಾಡಿಸಬೇಕು.

೮. ಚತುರನಾದ ಶಿಲ್ಪಿಯು ಆ ಮರದಲ್ಲಿ ಕೊಪ್ಪರಿಗೆಯ ಆಕಾರವಾಗಿ ಹಳ್ಳವಾಗುವಂತೆ ತೋಡಿ, ಸ್ರುವದ ಬಟ್ಟಲನ್ನು ಮಾಡಬೇಕು. ಅದು ನೆಲ್ಲಿಯಕಾಯಿಯಂತೆ ಆಕಾರವುಳ್ಳದ್ದಾಗಿಯೂ, ಸ್ವಧಾಜಲವು ಹರಿಯುವ ಅಂಗೈಯ ಭಾಗವು ಹಳ್ಳವಾಗಿರುವಂತೆ ಬಾಯುಳ್ಳದ್ದಾಗಿಯೂ ನೋಡುವುದಕ್ಕೆ ಸುಂದರವಾಗಿಯೂ ಇರಬೇಕು.

೯. ಅಗ್ನಿಯನ್ನು ಸ್ಥಾಪಿಸುವ ಜಗಲಿಯು ಮೊರದ ಆಕಾರವಾಗಿರಬೇಕು. ಮೂರು ಅಗ್ನಿಗಳಿಗೂ ಮೂರುಕುಂಡಗಳನ್ನು ರಚಿಸಬೇಕು. ಆ ಸ್ರುವದ ಬಟ್ಟಲಿನಲ್ಲಿ ಹಂಸದ ಕೊಕ್ಕಿನಂತೆ ಆಕೃತಿಯುಳ್ಳದ್ದಾದ ಮೂತಿಯನ್ನು ನಮ್ಮ ಮುಂಭಾಗಕ್ಕೆ ಇರುವಂತೆ ಕೊರೆಯಬೇಕು.

೧೦. ಒಟ್ಟು ಮೂವತ್ತುಭಾಗದಲ್ಲಿ ಇಪ್ಪತ್ತುನಾಲ್ಕು ಭಾಗದಷ್ಟು ಉದ್ದದಲ್ಲಿಯೇ ಸ್ರುವವನ್ನು ಮಾಡಬೇಕು. ಪಿತೃಯಾಗದಲ್ಲಿ ಕುಂಡದ ಅಳತೆ ಮೂವತ್ತೆರಡು ಅಂಗುಲವಿರಬೇಕೆಂದು ಹೇಳಿದೆ.

ಚತುರ್ಭಿರಂಗೈರಾನಾಹಂ ಕರ್ಷಾದ್ಯಗ್ರಂ ತತಃ ಸ್ರುವಂ ।
ಅಂಗದ್ವಯೇನ ವಿಲಿಖೇತ್ಪಂಕೇ ಪ್ಮದವದಾಕೃತಿಂ ॥ ೧೧ ॥

ದಂಡಮೂಲಾಶ್ರಯೇ ದಂಡೀ ಭವೇತ್ಕಂಕಣಭೂಷಿತಃ ।
ಸೌವರ್ಣಸ್ಯ ಚ ತಾಮ್ರಸ್ಯ ಕಾರ್ಯಾ ದರ್ವೀ ಪ್ರಮಾಣತಃ ॥ ೧೨ ॥

ಶ್ರೀಪರ್ಣಿಕೋದ್ಭವಂ ಯಚ್ಚ ಇಂದುವೃಕ್ಷಸಮುದ್ಭವಂ ।
ಕ್ಷೀರವೃಕ್ಷಸಮುದ್ಭೂತಂ ದ್ವಾದಶಾಂಗುಲಸಮ್ಮಿತಂ ॥ ೧೩ ॥

ದ್ವ್ಯಂಗುಲಂ ಮಂಡಲಂ ತಸ್ಯ ದರ್ವೀ ಸಾ ಯಜ್ಞಸಾಧನೇ ।
ಚತ್ವಾರಿಂಶತ್ಕೋಲಕಾಭಿರಿತಿ ತಾಮ್ರಮಯಸ್ಯ ಚ ॥ ೧೪ ॥

ಪಂಚಾಂಗುಲಂ ಮಂಡಲಂ ಚ ಅಷ್ಟಹಸ್ತಂ ಚ ದಂಡಕಂ ।
ಅನ್ನಾದಿಪಾಯಸವಿಧೌ ದರ್ವೀ ಯಜ್ಞಸ್ಯ ಸಾಧನೇ ॥ ೧೫ ॥

---

೧೧. ಆ ಮರದ ನಾಲ್ಕುಭಾಗದಷ್ಟರಿಂದ ಆನಾಹ ಎಂದರೆ ಅದರ ವಟ್ಟೆಯನ್ನೂ (ದಡಗಟ್ಟನ್ನು), ಕರ್ಷಪ್ರಮಾಣದಲ್ಲಿ ದ್ರವಹರಿಯಲು ಅವಕಾಶವಿರುವಂತೆ ಎರಡುಗುರುತಿನಷ್ಟು ಭಾಗದಲ್ಲಿ ಹಂಸದ ಕೊಕ್ಕಿನಂತೆ ತುದಿಯನ್ನೂ ಕೊರೆಯಬೇಕು.

೧೨. ಕೈಯ್ಯಲ್ಲಿ ವ್ರತಾಚರಣ ಕಂಕಣವನ್ನು ಧರಿಸಿ, ದಂಡಮೂಲವನ್ನು ಆಶ್ರಯಿಸಿದಾಗ ದಂಡಿಯೆನಿಸುವನು. ದರ್ವಿಯನ್ನು ಎಂದರೆ ಸ್ರುಕ್ಕನ್ನು ಸುವರ್ಣದಿಂದಲಾಗಲೀ, ತಾಮ್ರದಿಂದಲಾಗಲಿ ಪ್ರಮಾಣಾನುಸಾರವಾಗಿ ಮಾಡಬೇಕು.

೧೩. ತೇಗದಮರದಿಂದಲೂ ಶಶಿಸಂಜ್ಞಕವಾದ ವೃಕ್ಷದಿಂದಲೂ ಕ್ಷೀರವೃಕ್ಷದಿಂದಲೂ ಮಾಡಿದ ಸ್ರುಕ್ಕು ಹನ್ನೆರಡಂಗುಲವಿರಬಹುದು.

೧೪. ಯಜ್ಞಕ್ಕೆ ಉಪಯೋಗಿಸುವ ದರ್ವಿಯ ಚೌಕವಾದ ಬಟ್ಟಲಿನ ಅಗಲವು ಎರಡುಅಂಗುಲ ಪ್ರಮಾಣವಿರಬೇಕು. ತಾಮ್ರದಿಂದ ಮಾಡಿದ್ದಾದರೆ ಆ ದರ್ವಿಯು ಇಪ್ಪತ್ತುನಾಲ್ಕು ತೊಲವಿರಬೇಕೆಂದು ಹೇಳಿದೆ.

೧೫. ಅನ್ನ, ಪಾಯಸ ಮೊದಲಾದುವನ್ನು ಹೋಮಮಾಡುವಾಗ ಯಜ್ಞಸಾಧನವಾದ ದರ್ವಿಯು (ಸ್ರುಕ್ಕಿನ ಬಟ್ಟಲು) ಐದುಅಂಗುಲ ಅಗಲವಾಗಿಯೂ, ಕಾವು ಎಂಟುಹಸ್ತ ಉದ್ದವುಳ್ಳದ್ದಾಗಿಯೂ ಇರಬೇಕೆಂದು ವಿಧಿಯಲ್ಲಿ ಹೇಳಿದೆ.

**ದಶತೋಲಕಮಾನೇನ ಸಾ ಚ ದರ್ವೀ ಉದಾಹೃತಾ ।**
**ಆಜ್ಯಸಂಶೋಧನಾರ್ಥಂ ತು ಸಾ ತು ತಾಮ್ರಮಯಸ್ಯ ಚ ॥ ೧೬ ॥**

**ಷೋಡಶಾಂಗುಲಮಾನೇನ ಸರ್ವಾಭಾವೇ ಚ ಪೈಪ್ಪಲೀಂ ।**
**ಆಜ್ಯಸ್ಥಾಲೀಂ ಘೃತಮಯೀಂ ಮೃನ್ಮಯೀಂ ಚ ಸಮಾಶ್ರಯೇತ್ ॥ ೧೭ ॥**

**ಅಥ ತಾಮ್ರಮಯೀ ಕಾರ್ಯಾ ಸ ಚ ತಾಂ ತತ್ರ ಯೋಜಯೇತ್ ॥ ೧೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ**
**ಸ್ರುವದರ್ವೀನಿರ್ಣಯಂ ನಾಮ ಏಕೋನವಿಂಶೋಽಧ್ಯಾಯಃ.**



---

೧೬. ಸಾಮಾನ್ಯವಾಗಿ ದರ್ವಿಯು ಹತ್ತುತೊಲ ತೂಕವಾಗಿದ್ದರೆ ಉತ್ತಮ. ತುಪ್ಪವನ್ನು ಸಂಶೋಧನೆ ಮಾಡುವುದಕ್ಕೆ ಮುಖ್ಯವಾದ ಅದು ತಾಮ್ರಮಯವಾಗಿದ್ದರೆ ಉತ್ತಮ.

೧೭. ಉಕ್ತವಾದ ಮರಗಳಾವುವೂ ದೊರೆಯದೆ ಹೋದರೆ ಹದಿನಾರು ಅಂಗುಲ ಅಳತೆಯಿರುವಂತೆ ಅರಳಿಯ ಮರದಲ್ಲಿ ಮಾಡಬಹುದು. ಆದರೆ ತುಪ್ಪವನ್ನು ಇಟ್ಟುಕೊಳ್ಳುವುದಕ್ಕೆ ಮಣ್ಣಿನಿಂದ ಮಾಡಿದ ಆಜ್ಯಸ್ಥಾಲಿಯನ್ನು ಉಪಯೋಗಿಸಬಹುದು.

೧೮. ಅಥವಾ ತಾಮ್ರದಿಂದ ಮಾಡಿದುದಾದರೂ ಆಗಬಹುದು. ಆದರೆ ಅದನ್ನು ಅಲ್ಲಿ ಇರಿಸತಕ್ಕದ್ದಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ
ಸ್ರುವದರ್ವೀ ನಿರ್ಣಯವೆಂಬ ಹತ್ತೊಂಭತ್ತನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮ ಪರ್ವಣಿ ಪ್ರಥಮಭಾಗೇ
## ವಿಂಶೋಽಧ್ಯಾಯಃ

॥ ಸೂತ ಉವಾಚ ॥

ಅಥ ಪೂರ್ಣವಿಧಿಂ ವಕ್ಷ್ಯೇ ಯಥಾ ಚಂದ್ರಾರ್ಥವೇದಿನಾಂ ।
ಯಸ್ಯ ಸಮ್ಯಗನುಷ್ಠಾನಾತ್ಸಂಪೂರ್ಣಂ ಸ್ಯಾದಿತಿ ಸ್ಥಿತಿಃ ॥ ೧ ॥

ಹೋಮಪೂರ್ತೌ ವೋಕ್ಷಕಲ್ಪಃ ಪೂಜಾಂತೇಽರ್ಘ್ಯಂ ವಿಧೀಯತೇ ।
ಅಥ ತಸ್ಯಾಮಪೂರ್ಣಾಯಾಂ ಹತಶ್ರೀರ್ಯಜ್ಞಭ್ರಂಶತಾ ॥ ೨ ॥

---

## ಇಪ್ಪತ್ತೊಂದನೆಯ ಅಧ್ಯಾಯ

೧. ಸೂತರು ಇದೇ ವಿಚಾರವನ್ನೇ ಮುಂದಕ್ಕೆ ಹೇಳುತ್ತಾರೆ—ಸೋಮಯಾಗದ ಪೂರ್ಣಾಹುತಿವಿಧಿಯನ್ನು ಹೇಳುವೆನು. ಈ ಸೋಮಯಾಗವನ್ನು ಕ್ರಮವಾಗಿ ಅನುಷ್ಠಾನಮಾಡಿ ಪೂರ್ಣಾಹುತಿಯನ್ನು ಮಾಡಿದರೆ ಈ ಯಾಗವು ಸಂಪೂರ್ಣವಾಗುವುದು.

೨. ಹೋಮಪೂರ್ತಿಯಾಗುತ್ತಲೆ ಕರ್ಮವಿಸರ್ಜನಕಲ್ಪವೂ, ಪೂಜೆಯ ಕೊನೆಯಲ್ಲಿ ಪುನರರ್ಘ್ಯಸಮರ್ಪಣೆಯೂ ವಿಧಾಯಕವಾಗಿದೆ. ಕ್ರಮಪ್ರಕಾರ ಪೂರ್ಣಾಹುತಿಯು ಆಗದೆ ಇದ್ದರೆ, ಯಜಮಾನನಿಗೆ ಐಶ್ವರ್ಯನಾಶವೂ ಮತ್ತು ಯಜ್ಞಭ್ರಷ್ಟತೆಯೂ ಉಂಟಾಗುವುದು.

ತಸ್ಮಾತ್ಸರ್ವ ಪ್ರಯತ್ನೇನ ಸ್ರುವಾಧೋ ವಿನ್ಯಸೇಚ್ಚರುಂ ।
ಪೂರ್ಣಾಂ ದತ್ವಾ ಸವಿತ್ರೇಽರ್ಘ್ಯಂ ಬ್ರಾಹ್ಮಣಾನ್ಭೋಜಯೇತ್ತತಃ ॥ ೩ ॥

ಗೃಹಂ ಪ್ರವಿಶ್ಯ ಚ ತತಃ ಕುಲಪೂಜಾಂ ಸಮಾಚರೇತ್ ।
ಸಪ್ತತೇ ದೇಹಿಮೇ ಪೂರ್ಣಾಂ ಪುನಾತ್ವಿತಿ ಋಚಾ ಕ್ರಮಾತ್ ॥ ೪ ॥

ನಿಯೋಜಯೇತ್ಪ್ರತಿಷ್ಠಾಯಾಂ ನಿತ್ಯನೈಮಿತ್ತಿಕೇ ಶೃಣು ।
ಪುನಾತ್ವಿತಿ ಋಚಾ ಪೂರ್ಣಾ ಪ್ರಥಮಾ ಪರಿಕೀರ್ತಿತಾ ॥ ೫ ॥

ಸಪ್ತತೇತಿ ದ್ವಿತೀಯಾ ಸ್ಯಾದ್ದೇಹಿಮೇತಿ ತೃತೀಯಿಕಾ ।
ಪೂರ್ಣಾದರ್ವೀ ಚತುರ್ಥೀ ಸ್ಯಾತ್ಕುಲೇಽವಸ್ಥಾಪ್ಯ ದೇಶಿಕಃ ॥ ೬ ॥

---

೩. ಆದುದರಿಂದ ಸರ್ವಪ್ರಯತ್ನದಿಂದ ಸ್ರುಕ್ಕಿನಲ್ಲಿ ಚರುವನ್ನು ಇಟ್ಟು, ಅದರ ಮೇಲೆ ಸ್ರುವದಿಂದ ತುಪ್ಪವನ್ನು ಹನಿಸುತ್ತಾ, ಪೂರ್ಣಾಹುತಿಯನ್ನು ಕೊಡಬೇಕು. ಪೂರ್ಣಾಹುತಿ ಆದಮೇಲೆ ಪುನರರ್ಘ್ಯವನ್ನು ಕೊಟ್ಟು ಅನಂತರ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೪–೫. ಅನಂತರ ದೇವರಮನೆಯನ್ನು ಪ್ರವೇಶಿಸಿ ಕುಲದೇವತಾ ಪೂಜೆಯನ್ನು ಮಾಡಬೇಕು. 'ಸಪ್ತತೇಅಗ್ನೆ' ಎಂಬ ಋಕ್ಕು, 'ದೇಹಿಮೇ ಪೂರ್ಣೇ' ಎಂಬ ಋಕ್ಕು, 'ಪುನಸ್ತ್ವಾದಿತ್ಯಾ' ಎಂಬ ಋಕ್ಕು, ಇವುಗಳು ಕ್ರಮವಾಗಿ ಪ್ರತಿಮಾಪ್ರತಿಷ್ಠೆ, ನಿತ್ಯಹೋಮ, ನೈಮಿತ್ತಿಕ ಹೋಮಗಳಲ್ಲಿ ಪೂರ್ಣಾಹುತಿ ಪ್ರಕ್ಷೇಪಣ ಮಂತ್ರಗಳಾಗಿವೆ. 'ಪುನಾತು ತೇ' ಎಂಬುದು ಪೂರ್ಣಾಹುತಿಯಲ್ಲಿ ಮೊದಲನೆಯ ಋಕ್ಕೆಂದು ತಿಳಿಯಬೇಕು.

೬. 'ಸಪ್ತತೇ ಅಗ್ನೇ' ಎಂಬುದು ಪೂರ್ಣಾಹುತಿಯ ಎರಡನೆಯ ಮಂತ್ರವೆಂದೂ, 'ದೇಹಿಮೇ' ಎಂಬುದು ಮೂರನೆಯ ಮಂತ್ರವೆಂದೂ, 'ಪೂರ್ಣಾದರ್ವೀ' ಎಂಬುದು ನಾಲ್ಕನೆಯ ಮಂತ್ರವೆಂದೂ ತಿಳಿಯಬೇಕು.

**ಉತ್ಥಾಯ ದದ್ಯಾತ್ಪೂರ್ಣಾಂ ತು ನೋಪವಿಶ್ಯ ಕದಾಚನ ।**
**ಕನಕಾಯಾಂ ಚ ಜಿಹ್ವಾಯಾಂ ರಕ್ತಾಯಾಂ ಗ್ರಹಯಾಗಕೇ ॥ ೭ ॥**

**ಗ್ರಹಹೋಮೇ ಶತಾಂತೇ ಚ ಪೂರ್ಣಾ ಏಕಾ ವಿಧೀಯತೇ ।**
**ಸಹಸ್ರಾಂತೇ ಯುಗಂ ದದ್ಯಾದಯುತಾಂತೇ ಯುಗದ್ವಯಂ ॥ ೮ ॥**

**ಸಹಸ್ರಾಂತೇ ದಹೇದೇಕಂ ಪುಷ್ಪಹೋಮೇ ಚ ಸತ್ತಮಾಃ ।**
**ಪೂರ್ಣಾಂ ತ್ವೇಕಸಹಸ್ರಂ ತು ದದ್ಯಾದ್ಯಜ್ಞಫಲೇಪ್ಸಯಾ ॥ ೯ ॥**

**ಮೃದುಪುಷ್ಪಕ್ರತೌ ತ್ವೇಕಾ ಕೇವಲೇ ಚೇಕ್ಷುಹೋಮಕೇ ।**
**ಶತಂ ದ್ವೇ ಚ ಶತೇ ಚೈವ ಗರ್ಭಾಧಾನಾನ್ನಪ್ರಾಶನೇ ॥ ೧೦ ॥**

---

೭. ಕರ್ಮನಿರತನಾದ ದೀಕ್ಷಿತನು ಸ್ರುಕ್ಕಿನ ಬಟ್ಟಲಿನಲ್ಲಿ ಪೂರ್ಣಾಹುತಿ ದ್ರವ್ಯವನ್ನಿಟ್ಟುಕೊಂಡು ಎದ್ದುನಿಂತು, ಪೂರ್ಣಾಹುತಿಯನ್ನು ಕೊಡಬೇಕು. ಯಾವ ಕಾರಣದಿಂದಲೂ ಕೂತುಕೊಂಡು ಪೂರ್ಣಾಹುತಿಯನ್ನು ಕೊಡಬಾರದು. ಅಗ್ನಿಯ ಜಿಹ್ವೆಗಳಲ್ಲಿ ರಕ್ತವರ್ಣವುಳ್ಳ ಕನಕಸಂಜ್ಞಕವಾದ ಜಿಹ್ವೆಯಲ್ಲಿ ಗ್ರಹಯಜ್ಞದ ಪೂರ್ಣಾಹುತಿಯನ್ನು ಕೊಡಬೇಕು.

೮. ಗ್ರಹಹೋಮದಲ್ಲೂ, ಶತಹೋಮದ ಕೊನೆಯಲ್ಲೂ ಒಂದೊಂದು ಪೂರ್ಣಾಹುತಿಯೆಂದು ವಿಧಾಯಕವಾಗಿದೆ. ಸಹಸ್ರಹೋಮದ ಕೊನೆಯಲ್ಲಿ ಎರಡು ಸಾರಿ ಸ್ರುಕ್ಕಿನ ತುಂಬ ಘೃತವನ್ನು ತೆಗೆದುಕೊಂಡು ಪೂರ್ಣಾಹುತಿ ಕೊಡಬೇಕು.

೯. ದಶಸಹಸ್ರಹೋಮದಲ್ಲಿ ನಾಲ್ಕು ಸ್ರುಕ್ಕುಗಳ ತುಂಬ ತುಪ್ಪವನ್ನು ತೆಗೆದುಕೊಂಡು ಪೂರ್ಣಾಹುತಿಯನ್ನು ಕೊಡಬೇಕು.

೧೦-೧೧. ಪುಷ್ಪಹೋಮದ ಸಂದರ್ಭದಲ್ಲಿ ಸಾವಿರಹೋಮವಾದ ಬಳಿಕ ಒಂದುಸ್ರುಕ್ಕಿನ ತುಂಬಾ ಘೃತಾಹುತಿಯನ್ನು ಕೊಡಬೇಕು. ಮೃದುಪುಷ್ಪದ ಸಹಸ್ರಹೋಮ ಪೂರ್ಣವಾದ ಮೇಲೆ, ಯಜ್ಞಫಲವನ್ನು ಸಮಗ್ರವಾಗಿ ಹೊಂದಬೇಕೆಂಬ ಇಚ್ಛೆಯಿದ್ದರೆ ನೂರು ಮೃದುಪುಷ್ಪಗಳನ್ನು ಪೂರ್ಣಾಹುತಿಯಾಗಿ ಕೊಡಬೇಕು. ಕೇವಲ ಇಕ್ಷುಹೋಮದಲ್ಲಿ ಎರಡುನೂರು ಇಕ್ಷುಖಂಡಗಳನ್ನು ಪೂರ್ಣಾಹುತಿಹೋಮ

ಸೀಮಂತೋನ್ನಯನೇ ಚೈವ ಪ್ರಾಯಶ್ಚಿತ್ತಕೃತೀಷು ಚ ।
ವೈಶ್ವದೇವೇ ಚ ನಿತ್ಯೇ ಚ ಪೂರ್ಣಾತ್ವೇಕಾ ವಿಧೀಯತೇ ॥ ೧೧ ॥

ಸ್ರುವಸ್ರುಚೌ ಸಮೌ ಕೃತ್ವಾ ಉಪರ್ಯುಪರಿ ವಿನ್ಯಸೇತ್ ।
ಯಥಾ ನ ವ್ಯಯತೇ ಕೃತ್ವಾ ನ ಕಲ್ಪಯತಿ ಯಾವತಾ ॥ ೧೨ ॥

ಋಷಿಂ ಛಂದಾದಿಕಂ ಶ್ರುತ್ವಾ ಪ್ರತಿಮಂತ್ರಸ್ಯ ಸತ್ತಮಾಃ ।
ಅನ್ಯಥಾಽಲ್ಪಾಲ್ಪಕಫಲಂ ತಸ್ಮಾತ್ಸನ್ಯಸ್ಯ ಹೋಮಯೇತ್ ॥ ೧೩ ॥

ಸಪ್ತತೇತಿ ಬ್ರಾಹ್ಮಣಸ್ಯ ಋಷಿಃ ಕೌಂಡಿನ್ಯ ಈರಿತಃ ।
ಜಗತೀ ಚ ಭವೇಚ್ಛಂದೋ ದೇವತಾಗ್ನಿಃ ಪ್ರಕೀರ್ತಿತಃ ॥ ೧೪ ॥

ದೇಹಿಮೇತಿ ಚ ಮಂತ್ರಸ್ಯ ಪ್ರಜಾಪತಿಋಷಿಃ ಸ್ಮೃತಃ ।
ಅನುಷ್ಟುಪ್ಚ ಭವೇಚ್ಛಂದೋ ದೇವತಾಸ್ಯ ಪ್ರಜಾಪತಿಃ ॥ ೧೫ ॥

---

ಮಾಡಬೇಕು. ಗರ್ಭಾಧಾನ, ಅನ್ನಪ್ರಾಶನೆ, ಸೀಮಂತ, ಪ್ರಾಯಶ್ಚಿತ್ತಕರ್ಮ, ನಿತ್ಯ ವೈಶ್ವದೇವ ಇವುಗಳಲ್ಲಿ ಒಂದೊಂದೇ ಪೂರ್ಣಾಹುತಿಯು ವಿಧಿಸಲ್ಪಟ್ಟಿದೆ.

೧೨-೧೩. ಸ್ರುವಸ್ರುಕ್ಕುಗಳನ್ನು ಸಮನಾಗಿ ಜೋಡಿಸಿ ಸ್ರುಕ್ಕಿನ ಮೇಲೆ ಸ್ರುವವನ್ನು ಹಿಡಿದುಕೊಳ್ಳಬೇಕು. ಓ ಸದ್ಬ್ರಾಹ್ಮಣರೇ! ಕೇಳಿ; ಉಕ್ತವಾದ ವಿಧಿಯಂತೆ ಸ್ರುಕ್ಸ್ರುವಾದಿಗಳನ್ನು ಹಿಡಿದುಕೊಳ್ಳದೆ, ಆಹುತಿದ್ರವ್ಯವನ್ನೂ ಯಥೋಕ್ತವಾಗಿ ಇಡದೆ, ಪ್ರತಿಯೊಂದು ಮಂತ್ರಕ್ಕೂ ಋಷಿ, ಛಂದಸ್ಸು, ದೇವತೆ ಮುಂತಾದ್ದನ್ನೂ ಹೇಳದೆ, ಕ್ರಮಬದ್ಧತೆಯಿಲ್ಲದೆ, ಕರ್ಮವನ್ನು ಮಾಡಿದರೂ ಫಲವು ಅತ್ಯಲ್ಪವಾಗಿ ಲಭಿಸುವುದು. ಆದುದರಿಂದ ಇವೆಲ್ಲವನ್ನೂ ಉಕ್ತರೀತಿಯಿಂದ ಸರಿಯಾಗಿಟ್ಟುಕೊಂಡು ಪೂರ್ಣಾಹುತಿ ಹೋಮವನ್ನು ಮಾಡಬೇಕು.

೧೪. 'ಸಪ್ತತೇ' ಎಂಬ ಬ್ರಾಹ್ಮಣ ಮಂತ್ರಭಾಗಕ್ಕೆ ಕೌಂಡಿನ್ಯನು ಋಷಿಯೆಂದು ಉಕ್ತವಾಗಿದೆ. ಇದು ಜಗತೀ ಛಂದಸ್ಸು, ಇದಕ್ಕೆ ಅಗ್ನಿಯು ದೇವತೆಯೆಂದು ಹೇಳಲ್ಪಟ್ಟಿದೆ.

೧೫. 'ದೇಹಿಮೇ' ಎಂಬ ಮಂತ್ರಕ್ಕೆ ಪ್ರಜಾಪತಿಯು ಋಷಿಯೆಂದೂ, ಅನುಷ್ಟುಪ್ ಎಂಬುದು ಛಂದಸ್ಸೆಂದೂ, ಪ್ರಜಾಪತಿಯೇ ಮಂತ್ರದೇವತೆಯೆಂದೂ ಉಕ್ತವಾಗಿದೆ.

ಪೂರ್ಣಾದರ್ವೀತಿ ಮಂತ್ರಸ್ಯ ಶತಕ್ರತುಋಷಿಃ ಸ್ಮೃತಃ ।
ಛಂದೋಽನುಷ್ಟುಪ್ಸಮಾಖ್ಯಾತಂ ವಹ್ನಿಶ್ಚೈವಾತ್ರ ದೇವತಾ ॥ ೧೬ ॥

ಪುನಾತ್ವಿತಿ ಚ ಮಂತ್ರಸ್ಯ ಋಷಿಃ ಸ್ಯಾತ್ಪವನಃ ಸ್ಮೃತಃ ।
ಛಂದೋಽಪಿ ಜಗತೀ ಖ್ಯಾತಂ ದೇವತಾಗ್ನಿಶ್ಚ ಕೀರ್ತಿತಃ ॥ ೧೭ ॥

ತುರ್ಯಪೂರ್ಣಾ ಯಜ್ಞಮಧ್ಯೇ ನ ಕುರ್ಯಾದ್ದ್ವಿಜಸತ್ತಮಾಃ ।
ನ ಚಾಶಿಷಂ ಯಜ್ಞಮಧ್ಯೇ ಅಭಿಷೇಕಂ ಚ ತರ್ಪಣಂ ॥ ೧೮ ॥

ಋಷಿಚ್ಛಂದಃ ಸ್ಪೃಶನ್ಸಮ್ಯಗ್ದಕ್ಷಿಣಾಂಗಮಥಾಪಿ ವಾ ।
ಯಜಮಾನಃ ಸಪತ್ನೀಕೋ ಮಹೋತ್ಸವಪುರಃಸರಂ ॥ ೧೯ ॥

ವಿಶ್ವಾಮಿತ್ರೋಽಯುತಂ ತತ್ರ ಹೋಮಂ ಕುರ್ಯಾದ್ವಿಚಕ್ಷಣಃ ।
ಲವಲೀಬದರೀಶಸ್ತಂ ಪಿಚುಮಂದಕಚ್ಛತ್ರಕಂ ॥ ೨೦ ॥

---

೧೬. 'ಪೂರ್ಣಾ ದರ್ವೀ' ಎಂಬ ಮಂತ್ರಕ್ಕೆ ಶತಕ್ರತುವೇ ಋಷಿಯೆಂದೂ, ಅನುಷ್ಟುಪ್ಪೇ ಛಂದಸ್ಸೆಂದೂ, ಅಗ್ನಿಯೇ ದೇವತೆಯೆಂದೂ ತಿಳಿಯಬೇಕು.

೧೭. 'ಪುನಾತು ತೇ' ಎಂಬ ಮಂತ್ರಕ್ಕೆ ಪವನವೇ ಋಷಿ, ಜಗತೀ ಎಂಬುದೇ ಛಂದಸ್ಸು ಎಂದು ಪ್ರಸಿದ್ಧವು. ಅಗ್ನಿಯೇ ದೇವತೆಯೆಂದು ತಿಳಿಯಬೇಕು.

೧೮. ಈ ರೀತಿ ನಾಲ್ಕು ಪೂರ್ಣಾಹುತಿಗಳ ವಿವರವನ್ನೂ ನಿಮಗೆ ತಿಳಿಸಿಯಾಯಿತು. ಓ ಬ್ರಾಹ್ಮಣಶ್ರೇಷ್ಠರೇ! ಯಜ್ಞಮಧ್ಯದಲ್ಲಿ ಪೂರ್ಣಾಹುತಿಯನ್ನಾಗಲಿ, ಆಶೀರ್ವಾದವನ್ನಾಗಲಿ, ಪ್ರೋಕ್ಷಣವನ್ನಾಗಲೀ, ತರ್ಪಣವನ್ನಾಗಲೀ ಮಾಡಬಾರದು.

೧೯. ಋತ್ವಿಕ್ಕುಗಳು, ಛಂದಸ್ಸು, ಋಷಿ ದೇವತಾಪೂರ್ವಕವಾಗಿ ಮಂತ್ರವನ್ನು ಉಚ್ಚರಿಸುತ್ತಿರುವಲ್ಲಿ, ಮಂಗಳವಾದ್ಯ ಘೋಷವಾಗುತ್ತಾ ಇರುವಾಗ, ಸಪತ್ನೀಕನಾದ ಯಜಮಾನನು ಎಡಗೈಯ್ಯಿಂದ ತನ್ನ ದಕ್ಷಿಣಾಂಸವನ್ನು ಸ್ಪರ್ಶಮಾಡಿಕೊಂಡು ಯಜ್ಞೇಶ್ವರನಿಗೆ ಪೂರ್ಣಾಹುತಿಯನ್ನು ಸಮರ್ಪಣೆಮಾಡಬೇಕು.

೨೦. ಹತ್ತುಸಾವಿರ ಹೋಮದ ಕರ್ಮಮಾಡುವುದಕ್ಕೆ ವಿಶ್ವಾಮಿತ್ರಕುಲೋದ್ಭವನೂ, ವಿಚಕ್ಷಣನೂ ಆದ ಋತ್ವಿಕ್ಕನ್ನೇ ಗೊತ್ತುಮಾಡಬೇಕು. ಲವಲೀ, ಎಗಚೀ ಈ ಎರಡುಫಲಗಳೂ ಈ ಹೋಮದ ಪೂರ್ಣಾಹುತಿಗೆ ಪ್ರಶಸ್ತವಾದುವುಗಳು.

**ನಾಗರಂಗಂ ಧಾತಕೀ ಚ ಪೂರ್ಣಾಯಾಂ ಚ ವಿವರ್ಜಯೇತ್ ।**
**ಜಪ್ಯಹಾನಿರಸಂಖ್ಯಾತೇ ಹೋಮಭ್ರಂಶಶ್ಚ ಜಾಯತೇ ॥ ೨೧ ॥**

**ತಸ್ಮಾತ್ಪ್ರಾಗೇವ ಸತಿಲಾನ್ಗಣಿತ್ವಾ ಸ್ಥಾಪಯೇತ್ಪೃಥಕ್ ।**
**ಯುಗಪದ್ಗಣಯೇದ್ವಾಽಥ ನ ಚಾಂಗೇನ ಕದಾಚನ ॥ ೨೨ ॥**

**ಧಾತಕ್ಯಾಶ್ಚ ಫಲೈಃ ಸಂಖ್ಯಾ ಕರ್ತವ್ಯಾ ಫಲಮಿಚ್ಛತಾ ।**
**ಬದರ್ಯಾಶ್ಚ ಲವಲ್ಯಾಶ್ಚ ಫಲೈಃ ಸರ್ವಾರ್ಥಸಿದ್ಧಯೇ ॥ ೨೩ ॥**

**ನಾಗರಂಗಫಲೈರೇವ ಧಾತಕ್ಯಾ ಬಕುಲೈಃ ಫಲೈಃ ।**
**ಯಜ್ಞಹಾನಿಕರಂ ಯಸ್ಮಾತ್ತಸ್ಮಾತ್ತತ್ಪರಿವರ್ಜಯೇತ್ ॥ ೨೪ ॥**

---

೨೧. ಬೇವು, ಛತ್ರಕ, ನಾಗರಂಗ, ಧಾತಕೀ ಇವುಗಳ ಫಲಗಳು ಪೂರ್ಣಾಹುತಿಗೆ ಯೋಗ್ಯವಲ್ಲ. ಹೋಮಮಾಡುವಾಗ ಮಂತ್ರೋಚ್ಚಾರವು ಇಷ್ಟಾಯಿತು ಎಂಬ ಲೆಕ್ಕವಿಲ್ಲದೆ ಹೋದರೆ ಮಂತ್ರಾರ್ಥಕ್ಕೆ ನಾಶವುಂಟಾಗುತ್ತದೆ. ಅಲ್ಲದೆ ಹೋಮ ಕಾರ್ಯವೂ ಭ್ರಷ್ಟತೆ ಹೊಂದುವುದು.

೨೨. ಆದುದರಿಂದ ತಿಲಸಮೇತವಾದ ಹೋಮದ್ರವ್ಯಗಳನ್ನು ಮುಂಚಿತವಾಗಿಯೇ ಲೆಕ್ಕಮಾಡಿ ಪ್ರತ್ಯೇಕಪ್ರತ್ಯೇಕವಾಗಿಡಬೇಕು. ಅಥವಾ ಒಂದೇಸಲ ಅಂಗ ಪ್ರವ್ಯಗಳನ್ನೆಲ್ಲಾ ಸೇರಿಸಿ ಒಟ್ಟಿಗೆ ಎಣಿಸಿಟ್ಟುಕೊಳ್ಳಬೇಕು, ಅಷ್ಟೇ ಹೊರತು ಯಾವಾಗಲೂ ಪ್ರತ್ಯೇಕಿಸಿ ಎಣಿಸಬಾರದು.

೨೩. ಫಲವನ್ನು ಅಪೇಕ್ಷಿಸುವಾತನು ಹೋಮದ್ರವ್ಯಗಳಲ್ಲಿ ಧಾತಕೀ ಫಲಗಳನ್ನು ಸೇರಿಸಿ ಎಣಿಕೆಮಾಡಬಾರದು. ಬದರೀ ಮತ್ತು ಲವಲೀ ಈ ಫಲಗಳನ್ನು ಹೋಮಕ್ಕೆ ಉಪಯೋಗಿಸಿದರೆ ಸರ್ವಪ್ರಯೋಜನವೂ ಸಿದ್ಧಿಸುವುದು.

೨೪. ನಾಗರಂಗ, ಧಾತಕೀ (ಆರೇಹೂವಿನ ಮರ) ಬಕುಳ ಈ ಫಲಗಳು, ಯಜ್ಞಹಾನಿಕರಗಳಾದುದರಿಂದ ಇದನ್ನು ಉಪಯೋಗಿಸದೆ ಬಿಟ್ಟುಬಿಡಬೇಕು.

ಕರ್ಪೂರಚಂದನೈಃ ಕುರ್ಯಾದ್ಧೋಲಿಕಾಂ ಯಜ್ಞಸಿದ್ಧಯೇ ।
ಗಂಗಾಮೃತ್ತಿಕಯಾ ಯುಕ್ತೈಃ ಶುನಿಕಾಮಥ ವಾ ದ್ವಿಜಾಃ ॥ ೨೫ ॥

ರಕ್ತಗುಂಜಾಫಲೈಃ ಸಂಖ್ಯಾಂ ಪುಷ್ಟಿಕಾಮೇಷು ಯೋಜಯೇತ್ ।
ಶತಾರ್ಧೇ ಚ ಶತೇ ಚೈವ ಸಹಸ್ರೇ ಚ ತಥೈವ ಹಿ ॥ ೨೬ ॥

ಹೋತಾ ಸ್ಯಾದಯುತೇನಾಪಿ ಏಕಾಹೇ ವೇದಸಂಖ್ಯಯಾ ।
ಋಣಸಾಧ್ಯೇ ಭವೇದ್ಧೋತಾ ತ್ರಯ ಏವ ದ್ವಿಜೋತ್ತಮಾಃ ॥ ೨೭ ॥

ಲಕ್ಷಹೋಮೇ ತು ಹೋತಾರಃ ಷಡೇವ ಪರಿಕೀರ್ತಿತಾಃ ।
ಕೋಟಿಹೋಮೇ ತು ವಿಪ್ರಾಃ ಸ್ಯುಃ ಪ್ರಶಸ್ತಾಃ ಪಂಕ್ತಿಸಂಖ್ಯಯಾ ॥ ೨೮ ॥

ನವಪಂಚ ದಶದಶಕಂ ಪಂಚವಿಂಶಮಥಾಪಿ ವಾ ।
ಕಾಮಕ್ರೋಧವಿಹೀನಾಃ ಸ್ಯುಃ ಋತ್ವಿಜಃ ಶಾಂತಚೇತಸಃ ॥ ೨೯ ॥

---

೨೫-೨೬. ಯಜ್ಞಸಿದ್ಧಿಯಾಗುವುದಕ್ಕಾಗಿ ಕರ್ಪೂರ, ಚಂದನ ಇವುಗಳನ್ನು ತೆಯ್ದು ಗುಳಿಗೆಯಂತೆ ಕಟ್ಟಬೇಕು. ಪುಷ್ಟಿಕಾಮಹೋಮದಲ್ಲಿ ಗಂಗೆಯ ಮೃತ್ತಿಕೆ ಸಹಿತವಾದ ಶುನಿಕದಿಂದಲೋ ಕೆಂಪು ಗುಲಗಂಜಿಯಿಂದಲೋ ಎಣಿಕೆಮಾಡಬೇಕು. ಶತಾರ್ಧಹೋಮ, ಶತಸಂಖ್ಯಾಹೋಮ, ಸಹಸ್ರಹೋಮ ಇವಕ್ಕೆ ಒಬ್ಬನೇ ಹೋತೃವು ಸಾಕು.

೨೭ ಒಂದೇ ದಿನದಲ್ಲಿ ಹತ್ತುಸಾವಿರಹೋಮ ಮಾಡಬೇಕಾದರೆ ನಾಲ್ಕುಜನ ಹೋತೃಗಳು ಬೇಕು. ಅದನ್ನು ಮೂರುದಿನಗಳಲ್ಲಿ ನಡೆಸುವುದಾದರೆ, ಅಂತಹ ಸಂದರ್ಭದಲ್ಲಿ ಆ ಯಾಗಕ್ಕೆ ಮೂರುಜನ ಹೋತೃಗಳೇ ಸಾಕು.

೨೮. ಲಕ್ಷಹೋಮದಲ್ಲಿ ಆರುಮಂದಿ ಹೋತೃಗಳಿರಬೇಕೆಂದು ಹೇಳಿದೆ. ಕೋಟಿಹೋಮದಲ್ಲಿ ಪಂಕ್ತಿ ಎಂದರೆ ಹತ್ತುಮಂದಿ ವಿಪ್ರರಿರುವುದು ಶ್ರೇಷ್ಠವೆಂದು ಹೇಳಿದೆ.

೨೯. ಬೇಕಾದರೆ ಹದಿನಾಲ್ಕುಮಂದಿ, ಅಥವಾ ಇಪ್ಪತ್ತುಮಂದಿ ಅಥವಾ ಇಪ್ಪತ್ತೈದುಮಂದಿ ಋತ್ವಿಜರು ಇರಬಹುದು. ಇವರು ಕಾಮಕ್ರೋಧರಹಿತರೂ ಶಾಂತಚಿತ್ತರೂ ಆಗಿರಬೇಕು.

**ನವಗ್ರಹಮಖೇ ವಿಪ್ರಾಶ್ಚತ್ವಾರೋ ವೇದವೇದಿನಃ ।**
**ಅಥವಾ ಋತ್ವಿಜೌ ಶಾಂತೌ ದ್ವಾವೇವ ಪರಿಕೀರ್ತಿತೌ ॥ ೩೦ ॥**

**ಕಾರ್ಯಾವಯುತಹೋಮೇ ತು ನ ಪ್ರಸಜ್ಯೇತ ವಿಸ್ತರೇ ।**
**ತದ್ವತ್ಸ ದಶಧಾ ಚಾಷ್ಟೌ ನವಹೋಮೇ ತು ಋತ್ವಿಜಃ ॥ ೩೧ ॥**

**ಕರ್ತವ್ಯಾಃ ಶಕ್ತಿತಸ್ತದ್ವಚ್ಚತ್ವಾರೋಽಪಿ ವಿಮತ್ಸರಾಃ ।**
**ತಮೇವ ಪೂಜಯೇದ್ಬ್ರಹ್ಮಾ ದ್ವೌ ವಾ ತ್ರೀನ್ವಾ ಯಥಾವಿಧಿ ॥ ೩೨ ॥**

**ಏಕಮಪ್ಯರ್ಚಯೇದ್ಬ್ರಹ್ಮಾ ಸಹಸ್ರೇ ತ್ವೇಕಬ್ರಾಹ್ಮಣಂ ।**
**ದಕ್ಷಿಣಾಭಿಃ ಪ್ರಯತ್ನೇನ ನಿರ್ವಹೇದಲ್ಪವಿತ್ತವಾನ್ ॥ ೩೩ ॥**

**ಲಕ್ಷಹೋಮಸ್ತು ಕರ್ತವ್ಯೋ ಯದಾ ವಿತ್ತಂ ಭವೇತ್ತದಾ ।**
**ಯತಃ ಸರ್ವಮವಾಪ್ನೋತಿ ಕುರ್ಯಾತ್ಕಾಮವಿಧಾನತಃ ॥ ೩೪ ॥**

---

೩೦. ನವಗ್ರಹಹೋಮಕ್ಕೆ ವೇದಜ್ಞರಾದ ನಾಲ್ವರುಬ್ರಾಹ್ಮಣರು ಋತ್ವಿಕ್ಕುಗಳಾಗಿರಬೇಕು. ಹಾಗೆ ಸಿಕ್ಕದಿದ್ದರೆ ಶಾಂತಚಿತ್ತರಾದ ಇಬ್ಬರೇ ಇರಬಹುದು.

೩೧. ಅಯುತ (ದಶಸಹಸ್ರ) ಹೋಮದಲ್ಲಿಯೂ ಸಮರ್ಥರು ದೊರೆತರೆ ಆದಷ್ಟು ಕಡಿಮೆ ಮಂದಿಯಿಂದ ನಿರ್ವಹಿಸಬಹುದು. ಅನಾವಶ್ಯವಾಗಿ ಬ್ರಾಹ್ಮಣರ ಸಂಖ್ಯೆಯನ್ನು ಹೆಚ್ಚಿಸುವ ಪ್ರಸಂಗಕ್ಕೆ ಹೋಗಬಾರದು. ಈ ಹೋಮದಲ್ಲಿ ಹತ್ತೋ, ಎಂಟೋ ಒಂಭತ್ತೋ ಮಂದಿ ಋತ್ವಿಕ್ಕುಗಳನ್ನು ಶಕ್ತ್ಯನುಸಾರವಾಗಿ ಮಾಡಿಕೊಳ್ಳಬಹುದು.

೩೨. ಕರ್ಮಕರ್ತೃವಾದ ಬ್ರಾಹ್ಮಣನು ಹೀಗೆ ನಿರ್ಮತ್ಸರರಾದ ನಾಲ್ವರನ್ನೋ, ಮೂರುಮಂದಿಯನ್ನೋ, ಅಥವಾ ಇಬ್ಬರನ್ನೋ, ತನ್ನ ಶಕ್ತ್ಯನುಸಾರವಾಗಿ ಗೊತ್ತು ಮಾಡಿಕೊಂಡು ವಿಧಿಗನುಸಾರವಾಗಿ ನೆರವೇರಿಸಬೇಕು.

೩೩. ಸ್ವಲ್ಪವೇ ದ್ರವ್ಯಸಂಪತ್ತಿಯಿರುವವನು ಒಂದುಸಹಸ್ರ ಹೋಮಕ್ಕೆ ಒಬ್ಬ ಬ್ರಾಹ್ಮಣನ ಪ್ರಕಾರ ಕರೆದು ಪ್ರಯತ್ನದಿಂದ ದಕ್ಷಿಣಾದಿಗಳನ್ನು ಸಮರ್ಪಿಸಿ ನಿರ್ವಾಹಮಾಡಿಕೊಳ್ಳಬೇಕು.

೩೪-೩೫. ದ್ರವ್ಯಸಂಪತ್ತಿಯೊದಗಿದ್ದಾಗ ಲಕ್ಷಹೋಮವನ್ನು ಮಾಡಬಹುದು. ಲಕ್ಷಹೋಮವನ್ನೂ, ಅಯುತಹೋಮ ಸಹಸ್ರಹೋಮಗಳಲ್ಲಿ ಇಷ್ಟಬಂದುದನ್ನೂ

**ಪೂಜ್ಯತೆ ಶಿವಲೋಕೇ ಚ ವಸ್ವಾದಿತ್ಯಮರುದ್ಗಣೈಃ ।**
**ಯಾವತ್ಕಲ್ಪಶತಾನ್ಯಷ್ಟಾವಂತೇ ಮೋಕ್ಷಮವಾಪ್ನುಯಾತ್ ॥ ೩೫ ॥**

**ಅಕಾಮೋ ಯಸ್ತ್ವಿಮಂ ಕುರ್ಯಾಲ್ಲಕ್ಷಹೋಮಂ ಯಥಾವಿಧಿ ।**
**ಶತಕಾಮಮವಾಪ್ನೋತಿ ಪದಂ ಚಾನಂತಮಶ್ನುತೆ ॥ ೩೬ ॥**

**ಪುತ್ರಾರ್ಥೀ ಲಭತೇ ಪುತ್ರಂ ಧನಾರ್ಥೀ ಲಭತೆ ಧನಂ ।**
**ಭಾರ್ಯಾರ್ಥೀ ಲಭತೆ ಭಾರ್ಯಾಂ ಕುಮಾರೀ ಚ ಶುಭಂ ಪತಿಂ ॥ ೩೭ ॥**

**ಭ್ರಷ್ಟರಾಜ್ಯಸ್ತಥಾ ರಾಜ್ಯಂ ಶ್ರೀಕಾಮಃ ಶ್ರಿಯಮಾಪ್ನುಯಾತ್ ।**
**ಯಂ ಯಂ ಕಾಮಯತೇ ಕಾಮಂ ಸರ್ವಂ ಪ್ರಾಪ್ನೋತಿ ಪುಷ್ಕಲಂ ॥೩೮॥**

---

ನಡೆಯಿಸಿದರೆ ಸಮಸ್ತಕಾಮಗಳನ್ನೂ ಹೊಂದುತ್ತಾನೆ. ಅಲ್ಲದೆ ಶಿವಲೋಕದಲ್ಲಿ ಅಷ್ಟವಸುಗಳು, ದ್ವಾದಶಾದಿತ್ಯರು ಮರುದ್ಗಣಗಳು ಇವರುಗಳ ಜೊತೆಯಲ್ಲಿ ಎಂಟು ನೂರು ಕಲ್ಪಗಳವರೆಗೆ ಇದ್ದು ಅನಂತರ ಮುಕ್ತಿಯನ್ನು ಪಡೆಯುತ್ತಾನೆ.

೩೬. ಯಾವನು ನಿಷ್ಕಾಮವಾಗಿ ವಿಧಿಪ್ರಕಾರ ಲಕ್ಷಹೋಮವನ್ನು ಮಾಡುವನೋ ಅವನು ತನ್ನ ನೂರಾರು ಇಷ್ಟಾರ್ಥಗಳನ್ನು ಪಡೆಯುವನಲ್ಲದೆ ಅನಂತವಾದ ಪದವಿಯ ಫಲವನ್ನೂ ಅನುಭವಿಸುತ್ತಾನೆ.

೩೭. ಮಗುವನ್ನು ಪಡೆಯಬೇಕೆಂದು ಆಶಿಸುವವನು ಮಗುವನ್ನು ಪಡೆಯುವನು. ಹಣಬೇಕೆಂದು ಅಪೇಕ್ಷಿಸುವವನಿಗೆ ದ್ರವ್ಯ ಲಭಿಸುವುದು. ಒಳ್ಳೆಯ ಪತ್ನಿಯು ಬೇಕೆಂದು ಅಪೇಕ್ಷಿಸುವವನು ಇದನ್ನಾಚರಿಸಿದರೆ ಅವನಿಗೆ ಶ್ರೇಷ್ಠಳಾದ ಪತ್ನಿ ದೊರೆಯುವಳು. ಒಳ್ಳೆಯ ಪತಿ ದೊರೆಯಲಿ ಎಂದು ತವಕಪಡುತ್ತಿರುವ ಕುಮಾರಿಯು ಇದನ್ನು ಮಾಡಿದರೆ ಅನುರೂಪನಾದ ಪತಿಯನ್ನು ವರಿಸುವಳು.

೩೮. ರಾಜ್ಯಭ್ರಷ್ಟನಾದ ರಾಜನು ಇದನ್ನಾಚರಿಸಿದರೆ ಪುನಃ ತನ್ನ ರಾಜ್ಯವನ್ನು ಪಡೆಯುವನು. ಐಶ್ವರ್ಯಾಪೇಕ್ಷೆಯುಳ್ಳವನು ಐಶ್ವರ್ಯವನ್ನು ಹೊಂದುವನು. ಯಾರು ಯಾರು ಏನೇನನ್ನು ಅಪೇಕ್ಷಿಸುವರೋ ಅವರವರು ತಮಗೆ ಬೇಕಾದ ಫಲಗಳನ್ನು ತಪ್ಪದೆ ಪಡೆಯುವರು.

**ನಿಷ್ಕಾಮಃ ಕುರುತೇ ಯಸ್ತು ಪರಂ ಬ್ರಹ್ಮಾಧಿಗಚ್ಛತಿ ।**
**ತಸ್ಮಾಚ್ಛತಗುಣಂ ಪ್ರೋಕ್ತಃ ಕೋಟಿಹೋಮಃ ಸ್ವಯಂಭುವಾ ॥ ೩೯ ॥**

**ಆಚಾರ್ಯ ಏವ ಹೋತಾ ಸ್ಯಾದ್ಬ್ರಾಹ್ಮಣಾನಾಮಸಂಭವೇ ।**
**ನ ಯೋಜಯೇದೇಕಮೇವ ಚಾಯುತೇ ಹೋಮಕರ್ಮಣಿ ॥ ೪೦ ॥**

**ದರ್ಭಾಸನೇಽತೋ ನ ಕುಶೇ ತೃಣೇ ಪತ್ರೇ ತ್ವಚೇಽಪಿ ಚ ।**
**ಪಾಷಾಣೇ ಮೃತ್ತಿಕಾಯಾಂ ಚ ನ ಚ ವಸ್ತ್ರಾಸನೇ ಕ್ವಚಿತ್ ॥ ೪೧ ॥**

**ತತ್ರ ದಾರುಮಯಂ ಕುರ್ಯಾದಾಗಮಂ ಭಜತೆ ದ್ವಿಜಃ ।**
**ದಾನಂ ದದ್ಯಾಚ್ಚ ಹೋಮಾಂತೇ ಪೂರ್ಣಾದೌ ಚ ಯಥಾ ಭವೇತ್॥೪೨॥**

---

೩೯. ಯಾವ ಅಪೇಕ್ಷೆಯೂ ಇಲ್ಲದೆ ಇದನ್ನು ಆಚರಿಸುವವನು ಬ್ರಹ್ಮಸಾಕ್ಷಾತ್ಕಾರವನ್ನು ಹೊಂದುವನು. ನಿಷ್ಕಾಮವಾಗಿ ಮಾಡಿ ಕೋಟಿಹೋಮವು ಇದರ ನೂರರಷ್ಟು ಫಲಪ್ರದವಾದುದು ಎಂದು ಬ್ರಹ್ಮನೇ ಹೇಳಿದಾನೆ.

೪೦. ಸಹಾಯಕ್ಕೆ ಬೇರೆ ಬ್ರಾಹ್ಮಣರು ದೊರೆಯದೆ ಇದ್ದರೆ ಆಚಾರ್ಯನೇ ಹೋತೃವೂ ಆಗಬಹುದು. ದಶಸಹಸ್ರಹೋಮ ಮಾಡಬೇಕಾದಾಗ ಅಷ್ಟು ಹೋಮಕ್ಕೂ ಒಬ್ಬನನ್ನೇ ನಿಯಮಿಸಬಾರದು.

೪೧. ಅಂಥ ಮಹಾಹೋಮಗಳಲ್ಲಿ ಆತನನ್ನು ದರ್ಭಾಸನದಲ್ಲಿ, ಕುಶದಲ್ಲಿ, ಹುಲ್ಲಿನ ಮೇಲೆ, ಎಲೆಯ ಮೇಲೆ, ಕೃಷ್ಣಾಜಿನದ ಮೇಲೆ ಇಂತಹ ಕಡೆ ಕೂರಿಸಬೇಕೇ ಹೊರತು ಕಲ್ಲು, ಮಣ್ಣಿನನೆಲ, ವಸ್ತ್ರಹಾಸಿದ ಪ್ರದೇಶ ಇವುಗಳ ಮೇಲೆ ಕೂರಿಸಬಾರದು.

೪೨–೪೩. ಅಥವಾ ಮರದಮಣೆಯನ್ನು ಹಾಕಿ ಅದರಮೇಲೆ ಕೂರಿಸಬೇಕು ಇದರಿಂದ ಆ ಬ್ರಾಹ್ಮಣನು ವಿಧಾನೋಕ್ತಕಾರ್ಯವನ್ನು ನಿರಾತಂಕವಾಗಿ ನಡೆಯಿಸುವನು. ಸೋಮಯಾಗ ಅಶ್ವಮೇಧಯಾಗ ಕಾರ್ಯಗಳಲ್ಲಿಯೂ, ದ್ವಿಜಸಂಸ್ಕಾರಕರ್ಮ,

ದ್ವಿಜಸಂಸ್ಕಾರಕಾರ್ಯೇಷು ಪೂರ್ಣಾದೌ ಚಾಪಿ ದಕ್ಷಿಣಾ ।
ಮಂತ್ರೋಪಾಸನಕಾರ್ಯೇಷು ಸೋಮಯಾಗಾಶ್ವಮೇಧಕೇ ॥ ೪೩ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ವಿಂಶೋಽಧ್ಯಾಯಃ.



---

ಪೂರ್ಣಾಹುತಿ ಮೊದಲಾದುವುಗಳಲ್ಲಿಯೂ, ಹೋಮದ ಕೊನೆಯಲ್ಲಿ ಯಥಾರೀತಿ ಅವರಿಗೆ ದಕ್ಷಿಣೆಯನ್ನು ಕೊಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ಪ್ರಥಮಭಾಗೇ
## ಏಕವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಅಥಾತೋ ಮಂಡಲಂ ವಕ್ಷ್ಯೇ ಪುರಾಣೇಷು ಯಥೋದಿತಂ ।
ಯದಧೀನಾ ಭವೇತ್ಸಿದ್ಧಿಸ್ತಸ್ಮಾತ್ಕುರ್ಯಾತ್ಸಮಾಹಿತಃ ॥ ೧ ॥

ದೇವಾ ಪದ್ಮಾಸನಸ್ಥಾಶ್ಚ ಭವಿಷ್ಯಂತಿ ವಸಂತಿ ಚ ।
ವಿನಾಬ್ಜಂ ನಾರ್ಚಯೇದ್ದೇವಮರ್ಚಿತೇ ಯಕ್ಷಿಣೀ ಹರೇತ್ ॥ ೨ ॥

ಅತೋ ಮಂಡಲವಿಚ್ಛೇದಂ ಯಸ್ಮಾದ್ದಶಗುಣಂ ಭವೇತ್ ।
ರಜಃಸಾಧ್ಯೇ ಶತಗುಣಂ ಕೇವಲೇ ದ್ವಿಗುಣಂ ಫಲಂ ॥ ೩ ॥

---

## ಇಪ್ಪತ್ತೊಂದನೆಯ ಅಧ್ಯಾಯ

೧. ಸೂತರು ಹೇಳುತ್ತಾರೆ—ಪುರಾಣಗಳಲ್ಲಿ ಹೇಳಿರುವ ಮಂಡಲವನ್ನು ಕುರಿತು ಹೇಳುತ್ತೇನೆ. ಮಂಡಲಯುಕ್ತವಾಗಿ ಕಾರ್ಯನಡೆಸಿದರೆ ಅಷ್ಟಸಿದ್ಧಿಗಳೂ ಅಧೀನ ಗಳಾಗುವುವು. ಆದುದರಿಂದ ಶಾಂತಮನಸ್ಸುಳ್ಳವರಾಗಿ ಮಂಡಲವನ್ನು ರಚಿಸಬೇಕು.

೨. ದೇವತೆಗಳು ಕಮಲಾಸನಸ್ಥರಾಗಿರುವರೆಂದು ಪ್ರಸಿದ್ಧವಾಗಿದೆ. ಅಷ್ಟ ದಳ ಕಮಲಾಕೃತಿಯನ್ನು ರಚಿಸದೆ ದೇವರನ್ನು ಆವಾಹಿಸಬಾರದು ಹಾಗೆ ಕಮಲಾ ಸನವಿಲ್ಲದೆ ಪೂಜಿಸಿದರೆ ಪೂಜಾಫಲವನ್ನು ಯಕ್ಷಿಣಿಯು ಅಪಹರಿಸುವಳು.

೩. ಈ ರೀತಿ ಮಂಡಲರಚನೆಯಿಲ್ಲದೆ ದೇವಾರ್ಚನೆ ಮಾಡುವುದಕ್ಕಿಂತ ಜಲದಿಂದ ಮಂಡಲವನ್ನು ರಚಿಸಿ ಅಲ್ಲಿ ಪೂಜಿಸುವುದರಲ್ಲಿ ಹತ್ತರಷ್ಟು ಹೆಚ್ಚುಫಲವಿರು

ತ್ರಿಶತಂ ವಂದನೇ ಸಾಧ್ಯೇ ಸಹಸ್ರಂ ಚ ರಜೋಽಷ್ಟಕಂ ।
ರಜೋಭಿಃ ಷೋಡಶೈರ್ಬಿಂಬಂ ಶತಂ ಶತಮನಂತಕಂ ॥ ೪ ॥

ಯಂತ್ರೇ ಮಣೌ ಶಾಲಗ್ರಾಮೇ ಪ್ರತಿಮಾಯಾಂ ವಿಶೇಷತಃ ।
ಮಹಾಲಯೇ ಮಹಾಯೋನೌ ರಕ್ತಲಿಂಗೇ ಚ ಸಾಧಿಕಂ ॥ ೫ ॥

ರಜೋಯುಕ್ತಂ ಲಿಖೇದ್ಯಸ್ತು ಪೂಜಾಕಾರ್ಯೇ ವಿಭೂತಯೇ ।
ಕರಣಾದಿಫಲಂ ಯಸ್ಮಾತ್ತಸ್ಮಾತ್ತಂ ಪರಿವರ್ಜಯೇತ್ ॥ ೬ ॥

ಚತುರಸ್ರಂ ನವವ್ಯೂಹಂ ಕ್ರೌಂಚಘ್ರಾಣಂ ಚತುರ್ವಿಧಂ ।
ಕಾಮಬೀಜಂ ವಜ್ರನಾಭಂ ವಿಘ್ನರಾಜಂ ಗಜಾಹ್ವಯಂ ॥ ೭ ॥

---

ವುದು ರಂಗವಲ್ಲೀ ಮೊದಲಾದ ರಜಸ್ಸುಗಳಿಂದ ಮಾಡುವುದು ಸಾಧ್ಯವಾದರೆ ನೂರರಷ್ಟು ಫಲವುಂಟಾಗುವುದು. ಶಾಶ್ವತವಾಗಿ ಕೆತ್ತಿ ರಚಿಸಿದ ಮಂಡಲವೇ ಇದ್ದರೆ ಹಿಂದಿನದರ ಎರಡರಷ್ಟು ಎಂದರೆ ಇನ್ನೂರರಷ್ಟು ಫಲಬರುವುದು.

೪. ಮಂಡಲದ ಸುತ್ತಲೂ ಪ್ರದಕ್ಷಿಣನಮಸ್ಕಾರಕ್ಕೆ ಸಾಧ್ಯವಾಗುವಷ್ಟು ಸ್ಥಳವಿರುವಂತೆ ರಚಿತವಾಗಿದ್ದರೆ ಮುನ್ನೂರರಷ್ಟು ಫಲವು ಬರುವುದು. ಎಂಟು ಎಳೆ ಹದಿನಾರುಎಳೆ ರಂಗವಲ್ಲಿಯಿಂದ ರಚಿತವಾದರೆ ಅನಂತಶತಗಳಷ್ಟು ಫಲಬರುವುದು.

೫-೬. ಜನರು ಬಹುತರವಾಗಿ ಯಂತ್ರಗಳಲ್ಲೂ, ಮಣಿಗಳಲ್ಲೂ, ಶಾಲಗ್ರಾಮದಲ್ಲೂ, ಪ್ರತಿಮೆಗಳಲ್ಲೂ, ನಾನಾದೇವರುಗಳನ್ನು ಪೂಜಿಸುತ್ತಾರೆ. ಈ ದೇವತೆಗಳು ದೊಡ್ಡದೇವಾಲಯಗಳಲ್ಲೂ, ಮಹಾಯೋನಿಗಳಲ್ಲಿಯೂ, ರಕ್ತಲಿಂಗಗಳಲ್ಲಿಯೂ ಅಧಿಕ ಪ್ರಮಾಣಯುಕ್ತವಾಗಿರುವುದರಿಂದ ಅಂತಹ ಸ್ಥಳದಲ್ಲಿ ಪೂಜಾಂಗವಾಗಿ ರಂಗವಲ್ಯಾದಿಗಳಿಂದ ಮಂಡಲವನ್ನು ರಚಿಸಿದರೆ ಸಂಪತ್ತಿಗೆ ಸಾಧನವಾಗುವುದು. ಯಾವುದರಿಂದ ಕರಣಾದಿಗಳಿಗೆ ಫಲವಿದೆಯೋ ಅದನ್ನು ಸರ್ವತಃ ಮಾಡಿ ಪೂರೈಸಬೇಕು.

೭. ಚತುರಸ್ರವಾದ ಮಂಡಲಗಳಲ್ಲಿ ಒಂಬತ್ತು ವಿಧವುಂಟು, ಕ್ರೌಂಚಘ್ರಾಣ ಮಂಡಲಗಳಲ್ಲಿ ನಾಲ್ಕುವಿಧ ಉಂಟು. ಕಾಮಬೀಜ, ವಜ್ರನಾಭ, ವಿಘ್ನರಾಜ, ಗಜಾಹ್ವಯ ಎಂಬಿವೂ.

**ಪಾರಿಜಾತಂ ಚಂದ್ರಬಿಂಬಂ ಸೂರ್ಯಕಾಂತಂ ಚ ಶೇಖರಂ ।**
**ಶತಪತ್ರಂ ಸಹಸ್ರಾರಂ ನವನಾಭಂ ಚ ಮುಷ್ಟಿಕಂ ॥ ೮ ॥**

**ಪಂಚಾಬ್ಜಂ ಚೈವ ಮೈನಾಕಂ ಕಾಮರಾಜಂ ಚ ಪುಷ್ಕರಂ ।**
**ಅಷ್ಟಾಸ್ರಂ ಚೈವ ಶ್ರೀಬಿಂಬಂ ಷಡಸ್ರಂ ತ್ರ್ಯಸ್ರಮೇವ ಚ ॥ ೯ ॥**

**ಚತ್ವಾರಿಂಶತ್ತಥಾ ಪಂಚ ಸ್ವಾಧಿಕಂ ಪರಿಸಂಖ್ಯಯಾ ।**
**ಚತುರಸ್ರಂ ನವವ್ಯೂಢಂ ವೈಷ್ಣವೇ ಯಾಗಕರ್ಮಣಿ ॥ ೧೦ ॥**

**ಪ್ರಶಸ್ತಂ ಚಾಪಿ ಗೋಮೇಧೇ ಕ್ರೌಂಚಘ್ರಾಣಂ ಚತುರ್ವಿಧಂ ।**
**ಸುಭದ್ರಂ ಚಾಶ್ವಮೇಧೇ ಚ ನರಮೇಧೇ ನರಾಸನಂ ॥ ೧೧ ॥**

**ಸರ್ವತ್ರ ಸರ್ವತೋಭದ್ರಂ ಚತುರಸ್ರಂ ಸುಭದ್ರಕಂ ।**
**ಕಾಮರಾಜಂ ತಥಾ ತ್ರ್ಯಸ್ರಮಷ್ಟಾಸ್ರಂ ಚ ಷಡಸ್ರಕಂ ॥ ೧೨ ॥**

**ಶಕ್ತಾನಾಂ ಕಾಮಪಕ್ಷೇ ಚ ಪಂಚಸಿಂಹಾಸನಂ ಮಹತ್ ।**
**ಧ್ಯಾನಾಚಲೇ ಮೇರುಪೃಷ್ಠಂ ಮಣಿಮುಕ್ತಾಫಲೇಷ್ವಪಿ ॥ ೧೩ ॥**

---

೮-೧೦. ಪಾರಿಜಾತ, ಚಂದ್ರಬಿಂಬ, ಸೂರ್ಯಕಾಂತ, ಶೇಖರ, ಶತಪತ್ರ, ಸಹಸ್ರಾರ. ನವನಾಭ, ಮುಷ್ಟಿಕ, ಪಂಚಾಬ್ಜ, ಮೈನಾಕ, ಕಾಮರಾಜ, ಪುಷ್ಕರ, ಅಷ್ಟಾಸ್ರ ಶ್ರೀಬಿಂಬ, ಷಡಸ್ರ, ತ್ರ್ಯಸ್ರ ಎಂಬ ಈ ಹೆಸರಿನಲ್ಲೂ ನಲವತ್ತೋ, ಐವತ್ತೋ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲೋ ಮಂಡಲಗಳು ಇವೆ. ವೈಷ್ಣವಯಾಗಕರ್ಮ ಚತುರಸ್ರವಾದ ಒಂಭತ್ತುಬಗೆಯ ಮಂಡಲಗಳು ಪ್ರಶಸ್ತಗಳಾದುವು.

೧೧. ಗವಾಲಂಭಯಜ್ಞದಲ್ಲಿ ಕ್ರೌಂಚಘ್ರಾಣ ಮುಂತಾದ ನಾಲ್ಕುಬಗೆಯ ಮಂಡಲಗಳು ಪ್ರಶಸ್ತಗಳು. ಅಶ್ವಮೇಧಯಾಗಕ್ಕೆ ಸುಭದ್ರ ಎಂಬ ಮಂಡಲವೂ ನರಮೇಧಯಾಗದಲ್ಲಿ ನರಾಸನವೆಂಬ ಮಂಡಲಗಳೂ ತುಂಬಾ ಪ್ರಶಸ್ತಗಳಾದುವು.

೧೨-೧೩. ಸಾಮಾನ್ಯವಾಗಿ ಎಲ್ಲಾ ಶುಭಕಾರ್ಯಗಳ ಸಂದರ್ಭಗಳಲ್ಲಿಯೂ ಚತುರಸ್ರವಾದ ಸರ್ವತೋಭದ್ರಮಂಡಲವು ಮಂಗಳಕರವಾದುದು. ಕಾಮ್ಯಕರ್ಮಗಳಲ್ಲಿ ಶಕ್ತಿಯಿದ್ದರೆ ಕಾಮರಾಜ, ತ್ರ್ಯಸ್ರ, ಅಷ್ಟಾಸ್ರ, ಷಡಸ್ರ, ಸುಭದ್ರ ಈ ಐದು ಮಂಡಲಗಳನ್ನು ಪಂಚಸಿಂಹಾಸನವನ್ನಾಗಿ ರಚಿಸಬೇಕು. ನಿಶ್ಚಲವಾದ ಧ್ಯಾನಕ್ಕೆ ಕುಳಿತುಕೊಳ್ಳುವಾಗ ಮಣಿಮುಕ್ತಾಮಯವಾದ ಮೇರುಪೃಷ್ಠಮಂಡಲವನ್ನು ರಚಿಸಬೇಕು.

ಸಹಸ್ರಂ ಶತಪತ್ರಂ ಚ ಅನ್ನದಾನೇ ತಿಲಾಚಲೇ ।
ಹರಿವಲ್ಲಭಂ ರಾಜಸೂಯೇ ಸೋಮಯಾಗೇ ಚ ಶಸ್ಯತೆ ॥ ೧೪ ॥

ಪ್ರತಿಷ್ಠಾಯಾಂ ಸುಭದ್ರಂ ಚ ಸರ್ವತೋಭದ್ರಮೇವ ಚ ।
ಜಲಾಶಯಪ್ರತಿಷ್ಠಾಯಾಂ ವಿಘ್ನರಾಜಂ ಪ್ರಶಸ್ಯತೆ ॥ ೧೫ ॥

ಘಟಪ್ರಸ್ಥಾಪನೇ ಚೈವ ಗಜಾಹ್ವಂ ತುರಗಾಸನಂ ।
ಶತಪತ್ರಂ ಲಕ್ಷಹೋಮೇ ಆಯುತೇ ಚತುರಸ್ರಕಂ ॥ ೧೬ ॥

ಯಸ್ಯ ಯಜ್ಞಸ್ಯ ಯದ್ಬಿಂಬಂ ತತ್ತು ತೇನೈವ ಯೋಜಯೇತ್ ।
ಇತೋऽನ್ಯಥಾ ಭವೇದ್ದೋಷೋ ವಿಪರೀತೇಷ್ವಧೋಗತಿಃ ॥ ೧೭ ॥

---

೧೪. ಅನ್ನದಾನಕಾಲದಲ್ಲಿ "ಸಹಸ್ರದಳ ಪದ್ಮ" ಮಂಡಲವನ್ನೂ, ತಿಲಪರ್ವತ ದಾನಕಾಲದಲ್ಲಿ "ಶತಪತ್ರ ಪದ್ಮ" ಮಂಡಲವನ್ನೂ, ರಚಿಸುವುದು ಪ್ರಶಸ್ತ. ರಾಜಸೂಯಯಾಗದಲ್ಲಿಯೂ, ಸೋಮಯಾಗದಲ್ಲಿಯೂ, ಹರಿವಲ್ಲಭ ಎಂಬ ಮಂಡಲವು ಪ್ರಶಸ್ತವಾದುದು.

೧೫. ದೇವತಾಪ್ರತಿಷ್ಠೆಯಲ್ಲಿ "ಸುಭದ್ರಮಂಡಲ" ವನ್ನೇ, ಅಥವಾ "ಸರ್ವತೋಭದ್ರ" ಮಂಡಲವನ್ನೇ ರಚಿಸಬೇಕು. ಕೆರೆ, ಕೊಳ, ಭಾವಿ ಮುಂತಾದ ಜಲಾಶಯಪ್ರತಿಷ್ಠೆಯಲ್ಲಿ "ವಿಘ್ನರಾಜ" ವೆಂಬ ಮಂಡಲವು ಪ್ರಶಸ್ತವಾದುದು.

೧೬. ಕಲಶವನ್ನು ಸ್ಥಾಪಿಸುವಾಗ ಆಸನದ ಕೆಳಗೆ ಗಜಮಂಡಲ ಅಥವಾ "ತುರಗ" ಮಂಡಲವನ್ನು ರಚಿಸಬೇಕು. ಲಕ್ಷಹೋಮ ಕಾರ್ಯದಲ್ಲಿ ಅಗ್ನಿಸ್ಥಾಪನ ಸ್ಥಳದಲ್ಲಿ ಶತಪತ್ರಮಂಡಲವನ್ನೂ ದಶಸಹಸ್ರಹೋಮದಲ್ಲಿ ಚತುರಸ್ರಮಂಡಲವನ್ನೂ ರಚಿಸಬೇಕು.

೧೭. ಈ ರೀತಿಯಾಗಿ ಯಾವ ಯಾಗ ಪೂಜೆ ಇವುಗಳಿಗೆ ಯಾವ ಮಂಡಲವು ಯಥೋಕ್ತವೋ ಆ ಮಂಡಲವನ್ನೇ ಆಯಾ ಪೂಜೆಗಳಲ್ಲಿ ರಚಿಸಬೇಕು. ಹಾಗಿಲ್ಲದೆ ವ್ಯತ್ಯಾಸವಾದರೆ ದೋಷಸಂಭವಿಸುವುದು. ಯಾವ ಮಂಡಲವು ಯಾವ ಕಾರ್ಯಕ್ಕೆ ನಿಷೇಧವೋ ಅಂಥದ್ದನ್ನೇ ರಚಿಸಿ ಕ್ರಮವಿಪರ್ಯಯ ಮಾಡಿದರೆ ದುರ್ಗತಿಯೇ ಪ್ರಾಪ್ತಿಯಾಗುವುದು.

**ದ್ವಿಹಸ್ತಾ ಚತುರಸ್ರಾ ಚ ವೇದಿಕಾ ಪರಿಕೀರ್ತಿತಾ ।**
**ಚತುರಂಗುಲೋಚ್ಛ್ರಾಯಮಿತಾ ಷಡಂಗುಲಾ ಹ್ಯಥಾಪಿ ವಾ ॥ ೧೮ ॥**

**ಷಡಂಗುಲಾ ನವವ್ಯೂಹೇ ವರ್ಧಯೇದ್ಯಜ್ಞಕೋವಿದಃ ।**
**ಏಕಾಂಗುಲಸಮುತ್ಸೇಧಃ ಕರ್ತವ್ಯಸ್ಸುಸಮಾಹಿತೈಃ ॥ ೧೯ ॥**

**ಕ್ರೌಂಚಘ್ರಾಣೇ ತುರ್ಯಹಸ್ತಂ ಮುಷ್ಟಿಹಸ್ತಂ ಸಮುಚ್ಛ್ರಿತಂ ।**
**ಮಧ್ಯದ್ವಯೇ ಹೀನಕರಂ ಕನಿಷ್ಠಂ ತ್ರ್ಯಂಗುಲಾಧಿಕಂ ॥ ೨೦ ॥**

**ಕುರ್ಯಾದ್ವಿತ್ರಿಕ್ರಮಾದ್ಧೀನಮುಚ್ಛ್ರಾಯೇ ದ್ವಿಜಸತ್ತಮಾಃ ।**
**ಪಾರಿಜಾತಂ ಚಂದ್ರಬಿಂಬಂ ಸೂರ್ಯಕಾಂತಂ ಚ ಶೇಖರಂ ॥ ೨೧ ॥**

**ಗ್ರಹಾಣಾಂ ಪೌಷ್ಟಿಕೇ ಪಕ್ಷೇ ಬಾಹ್ಯಗ್ರಾಮಾದಿಸಾಧನೇ ।**
**ನಿಯೋಜಯೇತ್ತತ್ರತತ್ರ ವೇದಿಕಾಚಕ್ರಕತ್ರಯಂ ॥ ೨೨ ॥**

---

೧೮. ವೇದಿಕೆಯ ಪ್ರಮಾಣವು ಎರಡುಹಸ್ತ ಉದ್ದ, ಎರಡುಹಸ್ತ ಅಗಲವಾಗಿ, ಚಚ್ಚೌಕವಾಗಿಯೂ, ಆರುಅಂಗುಲ ಎತ್ತರವೋ ಅಥವಾ ನಾಲ್ಕುಅಂಗುಲ ಎತ್ತರವೋ ಉಳ್ಳದಾಗಿಯೂ ಇರುವಂತೆ ಮಾಡಬೇಕೆಂದು ಹೇಳಿದೆ.

೧೯. ಯಜ್ಞಕರ್ಮಸ್ವರೂಪವನ್ನು ಬಲ್ಲವನು ಚತುರಸ್ರಮಂಡಲದ ನವ ವ್ಯೂಹದಲ್ಲಿ ಆರುಅಂಗುಲದಷ್ಟು ವೃದ್ಧಿಮಾಡಿಕೊಳ್ಳಬೇಕು. ಸಮಾಹಿತಚಿತ್ತರಾದ ವರು ಒಂದುಅಂಗುಲ ಎತ್ತರವನ್ನೂ ಇಟ್ಟುಕೊಳ್ಳಬೇಕು.

೨೦. ಕ್ರೌಂಚಘ್ರಾಣವೆಂಬ ಮಂಡಲವು ನಾಲ್ಕುಮೊಳ ಉದ್ದವೂ, ಅಷ್ಟೇ ಅಗ ಲವೂ, ಒಂದು ಮುಷ್ಟಿಹಸ್ತ ಎತ್ತರವೂ ಇರಬೇಕು. ಮೇಲ್ಗಡೆ ಕೆಳಗಡೆಯ ಎರಡು ಮಧ್ಯಗಳಲ್ಲಿಯೂ ಸೇರಿ ಕನಿಷ್ಠಪಕ್ಷ ಏಳುಮೊಳಕ್ಕೆ ಮೂರುಅಂಗುಲ ಹೆಚ್ಚಾಗಿರ ಬೇಕು

೨೧-೨೨. ಅಯ್ಯಾ ದ್ವಿಜಶ್ರೇಷ್ಠರೇ! ಕೇಳಿ ; ಮೇಲೆ ಕೆಳಗೆ ಈ ಎರಡುಕಡೆ ಯಲ್ಲಿಯೂ ಕ್ರಮವಾಗಿ ಒಂದುಕಡೆಯಲ್ಲಿ ಎರಡುಹಸ್ತ, ಇನ್ನೊಂದು ಕಡೆಯಲ್ಲಿ ಮೂರುಹಸ್ತ, ಎತ್ತರದಲ್ಲಿ ಕಮ್ಮಿಯಾಗಿ ಮಾಡಬೇಕು. ಪೌಷ್ಟಿಕಯಾಗ ಮತ್ತು ಗ್ರಹ ಯಜ್ಞಗಳಲ್ಲಿಯೂ, ಗ್ರಾಮವನ್ನು ಹೊರಕ್ಕೆ ವಿಸ್ತರಿಸುವಾಗಲೂ ಅಲ್ಲಿ ವೇದಿಕಾತ್ರಯ ವನ್ನೂ, ಚಕ್ರತ್ರಯವನ್ನೂ ಮತ್ತು ಪಾರಿಜಾತ, ಚಂದ್ರಬಿಂಬ, ಸೂರ್ಯಕಾಂತ, ಶೇಖರ ಎಂಬ ಮಂಡಲಗಳನ್ನೂ ಏರ್ಪಡಿಸಬೇಕು.

ಪ್ರಥಮೋ ಮುಷ್ಟಿಹಸ್ತಃ ಸ್ಯಾತ್ಸಂಪೂರ್ಣೇ ಶೇಷಮಾನಕೈಃ ।
ನವಲಾಭೇ ಚ ಪಂಚಾಬ್ಜಂ ಕರತ್ರಯಮುದಾಹೃತಂ ॥ ೨೩ ॥

ಶೇಷಾ ಚೈವ ವರಿಷ್ಠಾ ಚ ಲವಲೀ ಭಿತ್ತಿವೇದಿಕಾ ।
ವಿಜ್ಞೇಯಾ ದ್ವಿಜಶಾರ್ದೂಲಾ ಯಥಾಕಾಮ್ಯೇಷು ಯೋಜಯೇತ್ ॥೨೪॥

ಅಯಥಾವ್ಯತ್ಯಯೋ ದೋಷಸ್ತಸ್ಮಾದ್ಯತ್ನೇನ ಸಾಧಯೇತ್ ।
ದಶಹಸ್ತೇ ಚಾಷ್ಟಹಸ್ತೇ ಅಷ್ಟಹಸ್ತೇ ಚ ಷೋಡಶಂ ॥ ೨೫ ॥

ಮುಷ್ಟಿಬಾಹುಶ್ಚ ಪ್ರಾದೇಶಂ ವರ್ಧಯೇತ್ಷೋಡಶಾಂಶಕೇ ।
ಹಸ್ತೋತ್ಸೇಧಂ ಚ ಕರ್ತವ್ಯಂ ಹೀನೇ ಹೀನಂ ಚ ಹ್ರಾಸಯೇತ್ ॥ ೨೬ ॥

---

೨೩. ಮೊದಲನೆಯ ವೇದಿಯಲ್ಲಿ ಒಂದು ಮುಷ್ಟಿಹಸ್ತ ಪ್ರಮಾಣದ ಚತುರಸ್ರವು ರಚಿತವಾಗುವಾಗ ಉಳಿದ ಸಂಪೂರ್ಣಮಾನಗಳಿಂದಲೂ, ಗ್ರಾಮವಿಸ್ತರಣರೂಪವಾದ ನವಲಾಭವಾಗುವ ಸಂದರ್ಭದಲ್ಲಿ ಪಂಚಾಬ್ಜಮಂಡಲವನ್ನು ಮೂರು ಮೊಳ ಪ್ರಮಾಣದಲ್ಲಿಯೂ ರಚಿಸಬೇಕು.

೨೪. ಓ ಬ್ರಾಹ್ಮಣಶ್ರೇಷ್ಠರೇ ! ಉಳಿದ ಮಂಡಲಗಳಲ್ಲಿ ಶ್ರೇಷ್ಠವಾದ ಲವಲೀ ಎಂಬುದರ ಮತ್ತು ಅತಿಶ್ರೇಷ್ಠವಾದ ಭಿತ್ತಿವೇದಿಕಾ ಎಂಬುದರ ಸ್ವರೂಪವನ್ನು ತಿಳಿಯಬೇಕು. ಇವನ್ನೂ ಕಾಮ್ಯಕರ್ಮಗಳಲ್ಲಿ ಉಪಯೋಗಿಸಬಹುದು.

೨೫-೨೬. ಈಗ ಹೇಳಿದ ಕ್ರಮದಂತೆ ಇಲ್ಲದೆ ಅಳತೆ ವ್ಯತ್ಯಾಸವಾದರೆ ಹಾನಿ ತಟ್ಟುವುದು. ಆದುದರಿಂದ ಪ್ರಯತ್ನಪಟ್ಟಾದರೂ ಯಥೋಕ್ತವಾದ ಕ್ರಮದಿಂದ ರಚನೆ ಮಾಡಬೇಕು. ಮೇಲ್ಗಡೆ ಅಳತೆ ಕೆಳಗಡೆ ಅಳತೆ ಇವುಗಳಲ್ಲಿ ಒಂದು ಹತ್ತುಮೊಳ ಇನ್ನೊಂದು ಎಂಟುಮೊಳ ಇರುವುದು ಒಂದುತರಹ; ಒಂದು ಹದಿನಾರುಹಸ್ತ ಮತ್ತೊಂದು ಎಂಟುಹಸ್ತ ಇರುವುದು ಇನ್ನೊಂದು ತರಹ. ಹದಿನಾರುಹಸ್ತ ಅಗಲ ವಿದ್ದರೆ ಎತ್ತರವನ್ನು ಒಂದು ಗುದ್ದುಮೊಳದ ಮೇಲೆ ಒಂದು ಚೋಟುದ್ದ ಹೆಚ್ಚಿಸಿ ಇಟ್ಟುಕೊಳ್ಳಬೇಕು. ಮತ್ತು ಸಾಮಾನ್ಯವಾಗಿ ಒಂದುಮೊಳ ಪ್ರಮಾಣ ಎತ್ತರ ಇಡಬೇಕು. ಉದ್ದವು ಆದಕ್ಕಿಂತ ಕಮ್ಮಿ ಇದ್ದರೆ ಎತ್ತರದಲ್ಲೂ ಕಮ್ಮಿಯಾಗಿರುವಂತೆ ಹ್ರಸ್ವ ಮಾಡಿಕೊಳ್ಳಬೇಕು.

ದರ್ಪಣಾಕಾರಕಂ ಕುರ್ಯಾದ್ಯಾಗಕೇ ಶಾಂತಿಕರ್ಮಣಿ ।
ಹೀನಂ ಕುರ್ಯಾತ್ಪ್ರಯತ್ನೇನ ವಪ್ರಾಕಾರಂ ಪರಿಸ್ತವೇ ॥ ೨೭ ॥

ನಿಶಾರಣ್ಯೈರ್ಗೋಮಯ್ಯೈಶ್ಚ ವೇದಿಕಾಂ ಚ ಪ್ರಲೇಪಯೇತ್ ।
ಸ್ವರ್ಣರತ್ನಮಯ್ಯೈಸ್ತೋಯ್ಯೈರಭಿಷಿಚ್ಯ ಕುಶೋದಕೈಃ ॥ ೨೮ ॥

ಹೀನವೀರ್ಯಗವಾನಾಂ ಚ ಪುರೀಷಂ ಧೈನುಕಂ ತಥಾ ।
ಕಪಿಲಾಯಾಶ್ಚ ಯತ್ನೇನ ಕುಂಡಮಂಡಲಲೇಪನೇ ॥ ೨೯ ॥

ವರ್ಜಯೇತ್ಸರ್ವಯಾಗೇಷು ಸ್ಥಂಡಿಲೇಷು ಪ್ರಯತ್ನತಃ ।
ವಿನಾ ಸೂತ್ರೈಃ ಕೀಲಕೇನ ಮಂಡಲೇನ್ನೈವ ಸೂತ್ರಯೇತ್ ॥ ೩೦ ॥

ತಸ್ಮಾತ್ಪ್ರಯತ್ನತಃ ಕಾರ್ಯಂ ಯತ್ಸೂತ್ರಂ ಯಚ್ಚ ಕೀಲಕಂ ।
ಅರ್ಕಹಸ್ತಮಿತಂ ಸೂತ್ರಂ ಮೃದು ಲಾಕ್ಷಾಮಯಂ ತಥಾ ॥ ೩೧ ॥

---

೨೭. ಶಾಂತಿಕರ್ಮರೂಪವಾದ ಯಾಗದಲ್ಲಿ ದರ್ಪಣಾಕಾರವಾಗಿ ಮಂಡಲವನ್ನು ಮಾಡಬೇಕು. ಕೋಟೆಯ ಗೋಡೆಯಂತೆ ನಾಲ್ಕುಕಡೆಯೂ ವಿಸ್ತರಿಸಿದ್ದರೆ ಪ್ರಯತ್ನದಿಂದ ಕಡಿಮೆಮಾಡಬೇಕು.

೨೮. ಗಂಜಲ ಮತ್ತು ಸಗಣಿಗಳಿಂದ ವೇದಿಕೆಯನ್ನು ಸಾರಿಸಬೇಕು. ಬಳಿಕ ಚಿನ್ನ, ರತ್ನ ಇವುಗಳನ್ನು ಹಾಕಿದ ಉದಕದಿಂದಲೂ ಕುಶೋದಕದಿಂದಲೂ ಪ್ರೋಕ್ಷಣಮಾಡಬೇಕು.

೨೯. ಮುದಿ ಎತ್ತುಗಳ ಸಗಣಿಯನ್ನೂ, ಮುದಿಹಸುಗಳ ಸಗಣಿಯನ್ನೂ, ಕಪಿಲವರ್ಣದ ಹಸುವಿನ ಸಗಣಿಯನ್ನೂ ಹೋಮಕುಂಡಲೇಪನಕ್ಕೂ, ಮಂಡಲಸ್ಥಾನ ಲೇಪನಕ್ಕೂ ಉಪಯೋಗಿಸಬಾರದು. ಅದನ್ನು ಉಪಯೋಗಿಸುವುದನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು.

೩೦–೩೧. ವೇದಿಯ ಒಳಮಂಡಲಗಳಲ್ಲಿ ಕೀಲಕವನ್ನು (ಮೊಳೆಗಳನ್ನೂ) ನೆಟ್ಟುಕೊಂಡು ಸೂತ್ರಕ್ಷೇಪಣ ಮಾಡಬೇಕೇ ವಿನಾ ಮೊಳೆಯನ್ನು ಹೊಡೆಯದೆ ಮಂಡಲದಲ್ಲಿ ಸೂತ್ರಕ್ಷೇಪಣ ಮಾಡಬಾರದು. ಆದುದರಿಂದ ಸೂತ್ರ, ಕೀಲಕ ಇವೆರಡನ್ನೂ ಪ್ರಯತ್ನಪೂರ್ವಕವಾಗಿ ಇಟ್ಟುಕೊಳ್ಳಬೇಕು. ಹೀಗೆ ಸುತ್ತುವ ಆ ಸೂತ್ರವು ಹನ್ನೆರಡುಮೊಳ ಉದ್ದವಾಗಿಯೂ ಮೃದುವಾಗಿಯೂ, ಮತ್ತು ಅರಗಿನ ಬಣ್ಣವುಳ್ಳದ್ದಾಗಿಯೂ ಇರಬೇಕು.

**ಪೀತಕಾಯಸ್ರಜಂ ಚೈವ ಕೀಲಕಂ ಸ್ವರ್ಣನಿರ್ಮಿತಂ ।**
**ರೌಪ್ಯತಾಮ್ರಮಯಂ ಕುರ್ಯಾದ್ವೈಷ್ಣವೇಯಾಗಕರ್ಮಣಿ ॥ ೩೨ ॥**

**ಗಣನಾಯಕೇ ಸುಪ್ರಶಸ್ತಂ ಶೇಷೇsಪಾಮಾರ್ಗಮೇವ ಚ ।**
**ಗ್ರಹಪಕ್ಷೇ ತಥೇಶಸ್ಯ ಕಚ್ಛಪಸ್ಯ ದ್ವಿಜೋತ್ತಮಾಃ ॥ ೩೩ ॥**

**ಷೋಡಶೇ ಚಾರ್ಕಹಸ್ತೇ ಚ ತತ್ರ ನೇಮಿಯುತಂ ಭವೇತ್ ॥ ೩೪ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ಪ್ರಥಮಭಾಗೇ ಏಕವಿಂಶೋsಧ್ಯಾಯಃ.**

## ಇತಿ ಶ್ರೀ ಮಧ್ಯಮಪರ್ವಣಿ ಪ್ರಥಮಭಾಗಃ ಸಮಾಪ್ತಃ.



---

೩೨-೩೩. ದಾರವು ಬಂಗಾರದ ಬಣ್ಣವುಳ್ಳದ್ದೂ, ಮೊಳೆಗಳು ಬಂಗಾರದವೂ ಆಗಿರಬಹುದು. ವೈಷ್ಣವಯಾಗ ಕಾರ್ಯದಲ್ಲಿ ಕೀಲಕಗಳು ಬೆಳ್ಳಿಯಿಂದಲೋ ತಾಮ್ರದಿಂದಲೋ ಮಾಡಿದುದಾಗಿಯೂ ಸೂತ್ರವೂ ಅದೇ ವರ್ಣದ್ದಾಗಿಯೂ ಇರಬೇಕು. ಗಣಪತಿಹೋಮದಲ್ಲಿ ಕೀಲಕಸೂತ್ರಗಳು ಸುಪ್ರಶಸ್ತವಾದುವುಗಳಾಗಿರಬೇಕು. ಉಳಿದ ಹೋಮಗಳಲ್ಲಿ ಉತ್ತರಣೆಯ ಕಡ್ಡಿಯಲ್ಲಿ ಕೀಲಕಗಳನ್ನು ಮಾಡಿಸಬೇಕು.

೩೪. ಅಯ್ಯಾ ದ್ವಿಜೋತ್ತಮರೇ! ಗ್ರಹಯಾಗದಲ್ಲಿಯೂ, ಕಚ್ಛಪವೆಂಬ ವೈಷ್ಣವಯಾಗದಲ್ಲಿಯೂ ಹದಿನಾರುಮೊಳ ಉದ್ದ, ಹನ್ನೆರಡುಮೊಳ ಅಗಲದ ವೇದಿಕೆಯಿದ್ದು, ಹೋಮಕುಂಡವು ಸುತ್ತಲೂ ಮೇಖಲೆಗಳುಳ್ಳದ್ದಾಗಿರಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಪ್ರಥಮಭಾಗದ ಇಪ್ಪತ್ತೊಂದನೆಯ ಅಧ್ಯಾಯು ಮುಗಿದುದು.

**ಮಧ್ಯಮಪರ್ವದ ಪ್ರಥಮಭಾಗವು ಮುಗಿದುದು.**



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮ ಪರ್ವಣಿ ದ್ವಿತೀಯಭಾಗೇ
## ಪ್ರಥಮೋಽಧ್ಯಾಯಃ

॥ ಸೂತ ಉವಾಚ ॥

ಅಥೋದ್ಧಾರಂ ಪ್ರವಕ್ಷ್ಯಾಮಿ ಚತುರಸ್ರಾದಿಕಸ್ಯ ಚ ।
ಅರ್ಕಾಂಗುಲಮಿತಂ ಕ್ಷೇತ್ರಂ ಚತುರಸ್ರಂ ಪ್ರಕಲ್ಪಯೇತ್ ॥ ೧ ॥

ಗುಣಾಂಗುಲಂ ಪ್ರತಿದಿಶಂ ವರ್ಧಯೇತ್ಸುವಿಚಕ್ಷಣಃ ।
ಚತುರಸ್ರಂ ಸಮಂ ಕುರ್ಯಾದಿಷ್ಟೇರಷ್ಟಾದಶಾಂಗುಲಂ ॥ ೨ ॥

---

## ಒಂದನೆಯ ಅಧ್ಯಾಯ

೧. ಸೂತರು ಹೇಳುತ್ತಾರೆ—ಓ ಶೌನಕಾದಿಋಷಿಗಳಿರಾ! ಈಗ ಚತುರಸ್ರವೇ ಮುನ್ತಾದ ಮಂಡಲಗಳನ್ನು ರಚನೆಮಾಡುವ ರೀತಿಯನ್ನು ಹೇಳುತ್ತೇನೆ. ಮೊದಲು ನಾಲ್ಕುಕಡೆಯಲ್ಲಿಯೂ ಹನ್ನೆರಡುಅಂಗುಲ ಅಳತೆಯಿರುವಂತೆ ಚಚ್ಚೌಕವಾಗಿ ಮಂಡಲವನ್ನು ರಚಿಸಬೇಕು.

೨. ಬುದ್ಧಿವಂತನಾದವನು ಇಷ್ಟಿಮುಂತಾದ ಯಾಗದಸಂದರ್ಭದಲ್ಲಿ, ಮಂಡಲದ ಹೊರಭಾಗದಲ್ಲಿ ನಾಲ್ಕುಕಡೆಗಳಲ್ಲಿಯೂ ಮೂರುಮೂರು ಅಂಗುಲದಷ್ಟು ಸ್ಥಳವನ್ನು ವಿಸ್ತರಿಸಿಕೊಳ್ಳಬೇಕು. (ಇಲ್ಲಿ ಗುಣಶಬ್ದಕ್ಕೆ ಮೂರು ಎಂಬ ಸಂಖ್ಯೆಯನ್ನು ಇಟ್ಟುಕೊಂಡಿದೆ) ಎಂದರೆ ಹಿಂದೆ ರಚಿಸಿರುವ ಹನ್ನೆರಡುಅಂಗುಲ ಪ್ರಮಾಣದ ಚೌಕದ ಜೊತೆಗೆ ಆಪಕ್ಕ ಈಪಕ್ಕಗಳಲ್ಲಿ ಮೂರುಮೂರು ಅಂಗುಲ ಅಗಲವನ್ನು ಮಂಡಲದ ಹೊರಗಡೆಯೇ ವಿಸ್ತರಿಸಿಕೊಳ್ಳಬೇಕು. ಹೀಗೆ ಮಾಡಿದರೆ ಹದಿನೆಂಟುಅಂಗುಲ ಪ್ರಮಾಣದ ಚತುರಸ್ರ ಮಂಡಲವಾಗುವುದು.

**ದ್ವಿಹಸ್ತೇ ಚೈವ ಸೂತ್ರಾಗ್ರೇ ತ್ರ್ಯಂಗುಲಾನಿ ಸಮಂತತಃ ।**
**ಚತುರಸ್ರೀಕೃತೇ ಪಶ್ಚಾದ್ದ್ವಿಹಸ್ತಾರ್ಧಂ ಚ ಜಾಯತೇ ॥ ೩ ॥**

**ಏವಂ ಷೋಡಶಹಸ್ತಾಂತಂ ವರ್ಧಯೇತ್ಕ್ರಮತಃ ಸ್ವಯಂ ।**
**ಹಸ್ತೇ ವಿನಿರ್ಣಯಂ ವಿಪ್ರಾ ರಚಯೇನ್ಮಂಡಲಂ ಸುಧೀಃ । ॥ ೪ ॥**

**ದ್ವಾದಶಾಂಗುಲಕಲ್ಪಾಭ್ಯಾಂ ಮಧುಹಸ್ತೇ ಚ ಮಂಡಲೇ ।**
**ದ್ವಿಹಸ್ತೇ ಹಸ್ತಮಾತ್ರಂ ಸ್ಯಾದ್ದ್ವಿಹಸ್ತಂ ತು ಚತುಷ್ಕರೇ ॥ ೫ ॥**

**ಪದ್ಮಮಾನಂ ಚತುರ್ಧಾ ತು ವೃತ್ತಂ ಕುರ್ಯಾತ್ಸಮಂತತಃ ।**
**ಪ್ರಥಮೇ ಕರ್ಣಿಕಾ ಕಾರ್ಯಾ ಕೇಶರಾಣಿ ದ್ವಿತೀಯಕೇ ॥ ೬ ॥**

---

೩. ಹೀಗೆಯೇ ಎರಡುಮೊಳ ಉದ್ದದ ಮಂಡಲದ ಎರಡುತುದಿಗಳಲ್ಲಿ ಮೂರು ಮೂರು ಅಂಗುಲದಷ್ಟು ಹೆಚ್ಚು ಅಳತೆ ಇಟ್ಟು ಚಚ್ಚೌಕವಾಗಿ ಏರ್ಪಡಿಸಿದರೆ ಎರಡೂ ವರೆಮೊಳದ ಮಂಡಲವಾಗುವುದು.

೪. ಇದೇ ಪ್ರಕಾರ ವಿಸ್ತಾರವನ್ನು ಅವಶ್ಯವಾದಷ್ಟು ಎಂದರೆ ಮಂಡಲವು ಹದಿನಾರುಮೊಳ ಅಳತೆಯುಳ್ಳದ್ದಾಗುವವರೆಗೂ ಹೆಚ್ಚಿಸಿಕೊಳ್ಳಬಹುದು. ಎಲೈ ವಿಪ್ರೋತ್ತಮರೇ! ಬುದ್ಧಿವಂತನಾದವನು ಯಥೋಕ್ತವಾಗಿ ನಿರ್ಣಯವಾದ ಅಳತೆ ಯುಳ್ಳ ಮಂಡಲವನ್ನೇ ರಚಿಸಬೇಕು.

೫. ಈ ಮಂಡಲವು ಸುಮಾರು ಹನ್ನೆರಡುಅಂಗುಲ ಚತುರಸ್ರ ಮೊದ ಲ್ಗೊಂಡು ಮೂರುಹಸ್ತ ಚತುರಸ್ರವಾಗಿಯೋ, ಎರಡುಹಸ್ತ ಚದುರವಾಗಿಯೋ, ಒಂದೇಹಸ್ತ ಚದುರವಾಗಿಯೋ ಇರಬಹುದು. ಹೊರಗಿನ ಅಳತೆ ನಾಲ್ಕುಹಸ್ತಗಳು ಇದ್ದರೆ ಒಳಮಂಡಲವು ದ್ವಿಹಸ್ತ (ಎರಡುಮೊಳ) ಪ್ರಮಾಣವಿರಬಹುದು.

೬. ಮಧ್ಯೆ ಒಂದುಪದ್ಮ ರಚನೆಮಾಡುವುದಕ್ಕಾಗಿ ಚತುರಸ್ರದಲ್ಲಿ ಅಡಕ ವಾಗುವ ಹಾಗೆ ಕರ್ಣರೇಖಾರ್ಧವನ್ನು ನಾಲ್ಕುಭಾಗ ಮಾಡಿ, ಮಧ್ಯೆ ಕೇಂದ್ರದಿಂದ ಒಂದೊಂದುಭಾಗ ತ್ರಿಜ್ಯದ ಅಳತೆಯಲ್ಲಿ ಒಂದೊಂದರಂತೆ ನಾಲ್ಕುವರ್ತುಲಗಳನ್ನು ರಚಿಸಬೇಕು. ಒಂದನೆಯ ವೃತ್ತದೊಳಗೆ ಕಮಲದ ಕರ್ಣಿಕೆಯನ್ನು ರಚಿಸಬೇಕು. ಎರಡನೆಯ ವೃತ್ತದೊಳಗೆ ಕೇಶರಗಳನ್ನು ನಿರ್ಮಿಸಬೇಕು.

**ತೃತೀಯೇ ದಲಸಂಧೀಶ್ಚ ದಲಾಗ್ರಾಣಿ ಚತುರ್ಥಕೇ ।**
**ಕರ್ಣಿಕಾಂ ಪೀತವರ್ಣೇನ ಶುಕ್ಲೇನ ಪಂಕಜಂ ಲಿಖೇತ್ ॥ ೭ ॥**

**ಕೇಶರಾಸ್ತ್ರಿವಿಧಾಃ ಪ್ರೋಕ್ತಾ ಮೂಲಮಧ್ಯಾಗ್ರದೇಶತಃ ।**
**ಮೂಲೇ ಶುಕ್ಲಾರುಣಾ ಮಧ್ಯೇ ಪೀತಾಶ್ಚಾಗ್ರೇ ಪ್ರತಿಷ್ಠಿತಾಃ ॥ ೮ ॥**

**ಪಾತ್ರಸಂದಿರ್ಭವೇಚ್ಛ್ಯಾಮಃ ಕೋಣೇ ರಕ್ತೇನ ರಂಜಯೇತ್ ।**
**ದೇವಸ್ತ್ರಾಣಿ ಲಿಖೇದ್ಬಾಹ್ಯೇ ಪುರಮಧ್ಯೇ ಚ ಕೋಣಕೇ ॥ ೯ ॥**

**ಅಷ್ಟಾಂಗುಲಪ್ರಮಾಣಂ ಯದ್ಯಥಾವರ್ಣಂ ವಿನಾದಿತಃ ।**
**ಶಂಭುಗೌರೀ ತಥಾ ಬ್ರಹ್ಮಾ ರಾಮಕೃಷ್ಣೇತ್ಯನುಕ್ರಮಾತ್ ॥ ೧೦ ॥**

**ಸೀಮರೇಖಾಂಗುಲೋಚ್ಛ್ರಾಯಂ ತತ್ತದರ್ಧೇನ ಯೋಜಯೇತ್ ।**
**ಶಿವವಿಷ್ಣ್ವೋರ್ಮಹಾಯಾಗೇ ಶಂಭುಮಾರಭ್ಯ ದಾಪಯೇತ್ ॥ ೧೧ ॥**

---

೭ ಮೂರನೆಯವೃತ್ತದಲ್ಲಿ ದಳಗಳು ಒಂದಕ್ಕೊಂದು ಸೇರುವ ಸಂಧಿಸ್ಥಾನವನ್ನೂ, ನಾಲ್ಕನೆಯವೃತ್ತದಲ್ಲಿ ತುದಿಗಳಲ್ಲೆಲ್ಲಾ ಸೋಕುವಂತೆ ಎಸಳುಗಳನ್ನೂ ರಚಿಸಬೇಕು. ಕರ್ಣಿಕೆಗೆ ಹಳದೀಬಣ್ಣವನ್ನೂ ಕಮಲಕ್ಕೆ ಬಿಳಿಯಬಣ್ಣವನ್ನೂ ಹಾಕಬೇಕು.

೮. ಕೇಸರದಲ್ಲಿ ಮೂಲ, ಮಧ್ಯ, ಅಗ್ರ ಎಂದು ಮೂರುಭಾಗವಿದೆ. ಕೇಸರವು ಮೂಲದಲ್ಲಿ ಬಿಳಿಯಬಣ್ಣವಾಗಿಯೂ, ಮಧ್ಯಭಾಗದಲ್ಲಿ ಕೆಂಪುಬಣ್ಣವಾಗಿಯೂ ಅಗ್ರಭಾಗದಲ್ಲಿ ಹಳದಿಯಬಣ್ಣವಾಗಿಯೂ ಇರಬೇಕು.

೯. ಎಸಳುಗಳ ಸಂಧಿಸ್ಥಾನವು ಕಪ್ಪುಬಣ್ಣವಾಗಿರಬೇಕು. ಎಸಳಿನ ತುದಿಗಳು ಕೆಂಪುಬಣ್ಣವಾಗಿರಬೇಕು. ಕಮಲದ ಬಾಹ್ಯದಲ್ಲಿಯೂ, ಬಾಹುಮಧ್ಯದಲ್ಲಿಯೂ, ನಾಲ್ಕುಕೋಣಗಳಲ್ಲೂ ಶಿವವಿಷ್ಣುಗಳ ಅಸ್ತ್ರಗಳಾದ ತ್ರಿಶೂಲ, ಚಾಪಾದಿಗಳನ್ನು ರಚಿಸಬೇಕು. ಈ ಆಯುಧಗಳು ಎಂಟಂಗುಲ ಪ್ರಮಾಣವಿರಬೇಕು. ಮೊದಲನೆಯ ವೃತ್ತ ಹೊರತು ಮಿಕ್ಕ ಎಲ್ಲವೂ ಸದೃಶವಾದ ಬಣ್ಣವುಳ್ಳದ್ದಾಗಿರಬೇಕು.

೧೦-೧೧. ಸೀಮಾರೇಖೆಯ ಎತ್ತರವು ಅದರದರ ಪ್ರಮಾಣದ ಅರ್ಧದಷ್ಟನ್ನು ಹೆಚ್ಚಾಗಿ ಸೇರಿಸಿದಷ್ಟಿರಬೇಕು. ಆ ಅಸ್ತ್ರಗಳಿಗೆ ಕ್ರಮವಾಗಿ ಶಂಭು, ಗೌರಿ,

ಪ್ರತಿಷ್ಠಾಯಾಂ ಚ ರಾಮಾಂತಂ ಕೃಷ್ಣಾಂತಂ ಚ ಜಲಾಶಯೇ ।
ದುರ್ಗಾಯಾಗೇ ಚ ಶ್ರೀಪಕ್ಷೇ ಬ್ರಹ್ಮಾಂತ್ಯಂ ಪರಿಕಲ್ಪಯೇತ್ ॥ ೧೨ ॥

ಗ್ರಹಾಯಾಗೇ ಚ ಪಿತಾದೀನ್ಕುರ್ಯಾಚ್ಚ ನ ತದನ್ಯಥಾ ।
ನವವ್ಯೂಹಮಥೋ ವಕ್ಷ್ಯೇ ಪುರಾಣಮತಸಮ್ಮತಂ ॥ ೧೩ ॥

ಸರ್ವಂ ಚ ಪೂರ್ವವತ್ಕಾರ್ಯಂ ಪಂಕಜಂ ಸುಲಿಖೇತ್ಸುಧೀಃ ।
ತಾವತ್ಸಂಖ್ಯಾಹರಣಯೋಃ ವೇಷ್ಟಯೇತ್ಪ್ರಕ್ರಮಾದಪಿ ॥ ೧೪ ॥

ಶುಕ್ಲಾರುಣೈಸ್ತಥಾ ಪಿತ್ತೈಃ ಪೀತಾರುಣಸಿತೈರಪಿ ।
ಪೀತಾರುಣಸಿತೈರೇವಂ ಸ್ವಭಾವೇ ಪ್ರತಿಭಾಗಕೇ ॥ ೧೫ ॥

---

ಬ್ರಹ್ಮ, ರಾಮ, ಕೃಷ್ಣ, ಎಂಬದಾಗಿ ದೇವರುಗಳ ಹೆಸರಿಡಬೇಕು. ಶಿವ, ವಿಷ್ಣು ಇವರ ಯಾಗವಿಷಯದಲ್ಲಿ ಶಂಭು ಎಂಬ ಅಸ್ತ್ರವನ್ನು ಮೊದಲುಮಾಡಿ ರಚಿಸಬೇಕು.

೧೨. ಪ್ರತಿಮಾಪ್ರತಿಷ್ಠೆಮಾಡುವಾಗ ದಶಾವತಾರದಲ್ಲಿ ಮತ್ಸ್ಯಾದಿಯಾಗಿ ರಾಮಾಂತ್ಯದವರೆಗೂ, ಜಲಾಶಯ ಪ್ರತಿಷ್ಠೆಯಲ್ಲಿ ಕೃಷ್ಣಾಂತ್ಯದವರೆಗೂ, ದುರ್ಗಾ ಯಾಗ ಲಕ್ಷ್ಮೀಹೋಮಗಳಲ್ಲಿ ಬ್ರಹ್ಮನವರೆಗೂ ಅಲ್ಲಿ ಸ್ಥಾನವನ್ನು ಕಲ್ಪಿಸಬೇಕು.

೧೩. ಗ್ರಹಯಾಗಗಳಲ್ಲಿ ಆಯಾ ಗ್ರಹಗಳಿಗೆ ಹೇಳಿದ ಪೀತವರ್ಣವೇ ಮುಂತಾದ ಬಣ್ಣಗಳನ್ನೇ ಲೇಪಿಸಬೇಕೇ ವಿನಾ ಬೇರೆ ಬಣ್ಣಗಳನ್ನು ಹಾಕಬಾರದು.

೧೪. ಎಲೈ ಮುನಿಗಳಿರಾ! ಈಗ ಪುರಾಣವಚನ ಸಮ್ಮತವಾದ 'ನವವ್ಯೂಹ' ರಚನೆಯನ್ನು ಹೇಳುವೆನು ಕೇಳಿರಿ. ಬುದ್ಧಿಶಾಲಿಯಾದ ಮಾನವನು ಹಿಂದೆ ಹೇಳಿದ ಅಳತೆಯಲ್ಲಿ ಕಮಲವನ್ನು ರಚಿಸಬೇಕು. ಒಂದು, ಎರಡು, ಮೂರು ಎಂಬ ಸಂಖ್ಯಾ ಕ್ರಮದಿಂದಲೋ ಒಂದನೇಸಲ ತೆಗೆದುದು, ಎರಡನೇಸಲ ತೆಗೆದುದು, ಮೂರನೆಯ ಸಲ ತೆಗೆದುದು ಎಂಬ ಹರಣಕ್ರಮದಿಂದಲೋ ಸುತ್ತುಗಳನ್ನು ರಚಿಸಬೇಕು.

೧೫. ಬಿಳುಪು, ಕೆಂಪು, ಹಳದಿ ಈ ಕ್ರಮದಿಂದಲೋ, ಅಥವಾ ಹಳದಿ, ಕೆಂಪು, ಬಿಳುಪು ಈ ಕ್ರಮದಿಂದಲೋ, ಅಂತು ಹಳದಿ, ಕೆಂಪು, ಬಿಳುಪು ಈ ಬಣ್ಣ ಗಳನ್ನು ವಿನ್ಯಾಸಮಾಡಬೇಕು.

**ಕಲಾಯಂತ್ರ ತದಂತೇ ಚ ಗುಹ್ಯಪತ್ರಾಗ್ರಕೇಣ ತು ।**
**ಷೋಡಶೈರ್ವಿಂಶಮಾನೇ ತು ಸಲಿಂಗಂ ಚಾಷ್ಟಪತ್ರಕೇ ॥ ೧೬ ॥**

**ಏವಂ ಮಂಡಲಯಂತ್ರಾಣಾಂ ವರ್ಜಯೇತ್ಪರಮಾರ್ಥತಃ ।**
**ತದ್ವನ್ಮೂಲೇಷು ಕೋಣೇಷು ಕೇಶರಾಣಿ ಪ್ರಕಲ್ಪಯೇತ್ ॥ ೧೭ ॥**

**ದಶದಂಡಸಮಾಕಾರಂ ತ್ರಿವರ್ಣಂ ಪ್ರತಿರಂಜಿತಂ ।**
**ಅರಂ ದದ್ಯಾದ್ದಶಾಗ್ರೇ ತು ಸರ್ವಾಂಗುಲಪ್ರಮಾಣತಃ ॥ ೧೮ ॥**

**ಪೀತೇನಾರಂ ಚ ಸರ್ವತ್ರ ತನ್ಮಧ್ಯೇ ಶೋಣತುಂಡಕಂ ।**
**ನವವ್ಯೂಹಮಿದಂ ಪ್ರೋಕ್ತಂ ಧರ್ಮಕಾಮಾರ್ಥದಾಯಕಂ ॥ ೧೯ ॥**

**ನ ಶೂದ್ರೋ ಮಂಡಲಂ ಕುರ್ಯಾನ್ನ ಕುರ್ಯಾದ್ಬ್ರಾಹ್ಮಣಬ್ರುವಃ ।**
**ಕುರ್ಯಾಚ್ಚ ಸಂಗಮೇ ತೀರ್ಥೇ ದೇವತಾಯತನೇಷು ಚ ॥ ೨೦ ॥**

---

೧೬. ಅಷ್ಟದಳಗಳ ಕೊನೆಯಲ್ಲಿ ಹದಿನಾರು ಅಥವಾ ಇಪ್ಪತ್ತು ಸಂಖ್ಯೆಯುಳ್ಳ ಎಸಳುಗಳ ತುದಿಗಳು ಗೂಢವಾಗಿ ಕಲಾಯಂತ್ರಸಮೇತವಾಗಿರುವಂತೆ ಮಾಡಬೇಕು.

೧೭. ಈ ಪ್ರಕಾರವಾಗಿ ರಚಿಸುವ ಮಂಡಲಯಂತ್ರಗಳ ಮಧ್ಯೆ ಪರಮಾರ್ಥವಾಗಿ ಸ್ಥಳಬಿಡಬೇಕು. ಆ ಕಮಲದಂತೆಯೇ ಮೂಲದಲ್ಲೂ ಕೋಣಗಳಲ್ಲೂ ಕರ್ಣಿಕೆಯನ್ನು ಕೇಸರವನ್ನೂ ರಚಿಸಬೇಕು.

೧೮-೧೯. ಅನಂತರ ಮೂರುವಿಧವಾದ ಬಣ್ಣವನ್ನು ಹಾಕಿಸಿ ಹೊಳೆಯುವಂತೆ ಮಾಡಬೇಕು. ಹೀಗೆ ಮಾಡಿದ ಮಂಡಲದ ತುದಿಯಲ್ಲಿ ದಂಡಾಕಾರವುಳ್ಳ ಹತ್ತು ಆರೆಕಾಲುಗಳನ್ನು ಆಯಾ ಮಂಡಲ ಪ್ರಮಾಣಕ್ಕನುಸಾರದಷ್ಟು ಅಂಗುಲ ದಳತೆಯಿಂದ ಜೋಡಿಸಬೇಕು ಆ ಆರೇಕಾಲುಗಳು ಮಧ್ಯಭಾಗದಲ್ಲಿ ಕೆಂಪು ಬಣ್ಣದ ಗುಂಬದಿಂದ ಕೂಡಿ ಇತರ ಎಲ್ಲಾ ಭಾಗಗಳಲ್ಲಿಯೂ ಹೊಂಬಣ್ಣವಾಗಿರಬೇಕು. ಹೀಗೆ ಮಾಡಿದರೆ ಇದು ನವವ್ಯೂಹವನಿಸುವುದು. ಇದು ಧರ್ಮ, ಅರ್ಥ ಕಾಮ ಇವುಗಳು ಸಿದ್ಧಿಯುಂಟಾಗುವಂತೆ ಮಾಡುವುದು.

೨೦. ಶೂದ್ರನು ಈ ಮಂಡಲವನ್ನು ರಚಿಸಬಾರದು. ಹಾಗೆಯೇ ನೀಚ ಬ್ರಾಹ್ಮಣನೂ ಈ ಮಂಡಲ ರಚನೆಗೆ ಅನರ್ಹನು. ನದಿಯ ಸಂಗಮ ಸ್ಥಳದಲ್ಲಿಯೋ

**ಲಿಖಿತ್ವಾ ನಾರ್ಚಯೇದ್ಯಸ್ತು ಅಗ್ನಿಕಾರ್ಯವಿಹೀನವತ್ ।**
**ಅವಿದ್ಧೋ ಜಾಯತೇ ಸೋऽಪಿ ಯತೋ ಜನ್ಮನಿಜನ್ಮನಿ ॥ ೨೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ**
**ದ್ವಿತೀಯಭಾಗೇ ಪ್ರಥಮೋऽಧ್ಯಾಯಃ.**



---

ಪುಣ್ಯತೀರ್ಥಗಳಲ್ಲಿಯೋ ಅಥವಾ ದೇವಾಲಯಗಳಲ್ಲಿಯೋ ಈ ಮಂಡಲವನ್ನು ರಚನೆ ಮಾಡಬೇಕು.

೨೧. ಅಗ್ನಿಕಾರ್ಯವನ್ನು ಮಾಡದೆ ಇರುವ ಬ್ರಾಹ್ಮಣನಂತೆ ಈ ಮಂಡಲ ವನ್ನು ಬರೆದು ಪೂಜೆಮಾಡದಿರುವ ವಿಪ್ರನು ಪ್ರತಿಜನ್ಮದಲ್ಲಿಯೂ ಅವಿದ್ಧನೆನಿಸಿ ದೋಷಕ್ಕೆ ಗುರಿಯಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೆಯ ಭಾಗದಲ್ಲಿ ಒಂದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ಪ್ರಥಮಭಾಗೇ

## ದ್ವಿತಿಯೋಽಧ್ಯಾಯಃ

---

॥ ಸೂತ ಉವಾಚ ॥

ಕ್ರೌಂಚಮಾನಂ ಪ್ರವಕ್ಷ್ಯಾಮಿ ಯಥಾವೇದಾರ್ಥವಾದಿನಾಂ ।
ಸಂಮತಂ ಸರ್ವತಂತ್ರೇಷು ಗೋಪನೀಯಂ ಪ್ರಯತ್ನತಃ ॥ ೧ ॥

ಆತ್ಮನೋಽರತ್ನಿಮಾನೇನ ದ್ವಿಗುಣಂ ಪರಿಕಲ್ಪಯೇತ್ ।
ಮಧ್ಯೇ ವೃದ್ಧ್ಯಾ ತು ತತ್ಸೂತ್ರಂ ಭ್ರಾಮಯೇತ್ಕೀಲಕೋಪರಿ ॥ ೨ ॥

---

## ಎರಡನೆಯ ಅಧ್ಯಾಯ

೧-೨. ಸೂತರು ಶೌನಕಾದಿಗಳಿಗೆ ಹೇಳುತ್ತಾರೆ—ವೇದಾರ್ಥವನ್ನು ಬಲ್ಲವರಿಗೆ ಸಮ್ಮತವಾದುದೂ, ಸಮಸ್ತತಂತ್ರಗಳಿಗೂ ಅನುಕೂಲವಾದುದೂ, ಮತ್ತು ಪ್ರಯತ್ನದಿಂದ ರಹಸ್ಯವಾಗಿರಿಸಬೇಕಾದುದೂ ಆದ ಕ್ರೌಂಚಘ್ರಾಣ ಮಂಡಲದ ರಚನಾಕ್ರಮವನ್ನು ಹೇಳುತ್ತೇನೆ ಕೇಳಿ; ಇದನ್ನು ರಚಿಸತಕ್ಕವನು ತನ್ನ ಕೈಯ್ಯ ಮೊಳದ ಅಳತೆಯ ಎರಡರಷ್ಟು ದಾರವನ್ನು ಮಾಡಿಕೊಂಡು, ನೆಲದಮೇಲೆ ಮಧ್ಯದಲ್ಲಿ ಎತ್ತರವಾಗಿ ನಾಟಿದ ಮೊಳೆಗೆ ಅದನ್ನು ಸುತ್ತಿ ಆಮೇಲೆ ದಾರವನ್ನು ಸುತ್ತಲೂ ಸುತ್ತಿಸಬೇಕು. ಇದು ವೃತ್ತರಚನಾ ವಿಧಾನವಾಯಿತು.

ಚತುಷ್ಟಯಂ ನ್ಯಸೇದ್ವೃತ್ತಂ ಮಧ್ಯಮಾಧಮಭಾವತಃ ।
ಕರ್ಣಿಕಾ ಪ್ರಥಮೋ ವೃತ್ತೇ ದ್ವಿತೀಯೇ ತ್ವಥ ಕೇಶರಂ ॥ ೩ ॥

ತೃತಿಯೇ ಪದ್ಮಪತ್ರಾಣಿ ಚತುರ್ಥೇ ಷೋಡಶಚ್ಛದಾಃ ।
ಶೋಭೋಪಶೋಭೇ ಕುರ್ಯಾಚ್ಚ ಚತುರಸ್ರೇ ಸಮೇ ಶುಭೇ ॥ ೪ ॥

ತದ್ದಕ್ಷಿಣಾಗ್ರಂ ಸುಲಿಖೇತ್ಪಾರ್ಶ್ವಯೋಃ ಪಕ್ಷಕದ್ವಯಂ ।
ತತ್ರ ಪದ್ಮಯುಗಂ ಕುರ್ಯಾನ್ಮಧ್ಯೇ ಚಾಂಗುಲಮಂತರಂ ॥ ೫ ॥

ಶುಕ್ಲಂ ಪೀತಂ ತಥಾ ರಕ್ತಂ ಕೃಷ್ಣಂ ಲೋಹಿತಸನ್ನಿಭಂ ।
ಸಂಖ್ಯಾತಂ ತಾಮ್ರಪರ್ಣಂ ಚ ಶ್ಯಾಮಲಂ ಚಾಷ್ಟಕಂ ರಜಃ ॥ ೬ ॥

---

೩. ನಾಲ್ಕುಸಮಭಾಗ ಅಳತೆಯ ಅಂತರದ ತ್ರಿಜ್ಯಗಳನ್ನಿಟ್ಟುಕೊಂಡು ಆ ದಾರವನ್ನು ಸುತ್ತಲೂ ತಿರುಗಿಸಿ ಸಣ್ಣದು, ಚಿಕ್ಕದು, ಮಧ್ಯಮ, ದೊಡ್ಡದು ಆದ ನಾಲ್ಕುವೃತ್ತಗಳಾಗುವಂತೆ ಮಾಡಬೇಕು ಮೊದಲನೆಯ ವೃತ್ತದಲ್ಲಿ ಕರ್ಣಿಕೆಯನ್ನೂ ಎರಡನೆಯವೃತ್ತದಲ್ಲಿ ಕೇಸರಗಳನ್ನೂ ಚಿತ್ರಿಸಬೇಕು.

೪. ಮೂರನೆಯವೃತ್ತದಲ್ಲಿ ಕಮಲದಳಗಳನ್ನೂ, ನಾಲ್ಕನೆಯವೃತ್ತದಲ್ಲಿ ಹೊರ ಸುತ್ತಿನ ಹದಿನಾರು ಎಸಳುಗಳನ್ನೂ ರಚಿಸಬೇಕು. ಈ ಕಮಲಕ್ಕೆ ಹೊರ ಆವರಣ ವಾಗಿ ಒಂದರಸಂಬಂಧದಿಂದ ಒಂದು ಶೋಭಿಸುವಂತೆ ಶುಭಕರವಾದ ಎರಡು ಸಮ ಚತುರಸ್ರಗಳನ್ನು ರಚಿಸಬೇಕು.

೫. ಅನಂತರ ದಕ್ಷಿಣದ ತುದಿಯನ್ನು ಮೊದಲು ಎಡಬಲಗಳಲ್ಲಿ ಎರಡು ರೆಕ್ಕೆ ಗಳನ್ನೂ ಚೆನ್ನಾಗಿ ಬರೆಯಬೇಕು. ಅಲ್ಲಿ ಮಧ್ಯೆ ಒಂದಂಗುಲ ಅಂತರವಿರುವಂತೆ ಎರಡು ಪದ್ಮಾಕೃತಿಗಳನ್ನು ರಚಿಸಬೇಕು.

೬. ಬಿಳುಪು, ಹಳದಿ, ಎಣ್ಣೆಗೆಂಪು, ಕಪ್ಪು, ಅಚ್ಚಕಪ್ಪು, ಹಸುರು, ಎಳೆಗೆಂಪು, (ಚಂದ್ರದಬಣ್ಣ) ಶ್ಯಾಮಲವರ್ಣ, ಎಂಬ ಎಂಟುವಿಧವಾದ ಬಣ್ಣದ ರಂಗೋಲಿಗಳನ್ನು ಸಿದ್ಧಮಾಡಬೇಕು.

**ಶುಕ್ಲಂ ತಂಡುಲಚೂರ್ಣೋತ್ಥಂ ಪೀತಂ ತು ನಿಶಯಾ ಸ್ಮೃತಂ ।**
**ರಕ್ತಂ ತು ನಿಶಯಾ ಯೋಗಾಚ್ಛಂಖಚೂರ್ಣಾದಿಭಾವಿತಂ ॥ ೭ ॥**

**ಕೃಷ್ಣಂ ಪುಲಕಾದಿದಗ್ಧಂ ಹರಿತ್ಪೀತಾಸ್ಯಯೋಗತಃ ।**
**ಕುಂಕುಮಾಭಂ ಪಾಂಡುರಂ ಚ ರಕ್ತಶ್ವೇತೈರ್ವಿನಿರ್ಮಿತಂ ॥ ೮ ॥**

**ತಾಮ್ರವರ್ಣಂ ಕುಸುಂಭೇನ ಶ್ಯಾಮಲಂ ಬಿಲ್ವಪತ್ರಕಂ ।**
**ಯವಗೋಧೂಮಚೂರ್ಣಾದಿಯೋಗೇನ ತು ರಜಃ ಸ್ಮೃತಂ ॥ ೯ ॥**

**ಸರ್ವರೇಖಾಸು ವಿಭಜೇಚ್ಛುಕ್ಲಂ ಮಧ್ಯೇ ತು ಪೀತಕಂ ।**
**ಕರ್ಣಿಕಾಯಾಂ ಕೇಶರೇಷು ಶುಭ್ರಮೇವ ನಿಪಾತಯೇತ್ ॥ ೧೦ ॥**

---

೭. ಅಕ್ಕಿಯಹಿಟ್ಟೇ ಬಿಳಿಯ ರಂಗೋಲಿಯಾಗುವುದು, ಅರಿಸಿನಪುಡಿಯನ್ನು ಅದರ ಜೊತೆಗೆ ಬೆರೆಸಿದರೆ ಹಳದೀ ರಂಗೋಲಿಯಾಗುವುದು, ಆ ಅರಿಶಿನಕ್ಕೆ ಶಂಖವನ್ನೋ ಸುಣ್ಣವನ್ನೋ ಪುಡಿಮಾಡಿ ಬೆರೆಸಿದರೆ ಕೆಂಪುರಂಗೋಲಿಯಾಗುವುದು.

೮. ಭತ್ತದಹೊಟ್ಟನ್ನು ಸುಟ್ಟುಪುಡಿಮಾಡಿದರೆ ಅದೇ ಕಪ್ಪುರಂಗೋಲಿಯಾಗುವುದು, ಇದರ ಜೊತೆಗೆ ಹಳದಿಯನ್ನು ಬೆರೆಸಿದರೆ ಹಸುರು ರಂಗೋಲಿಯಾಗುವುದು, ಕುಂಕುಮಸದೃಶವಾದ ಕೆಂಪುಬಣ್ಣವೂ ಬಿಳಿಯಬಣ್ಣವೂ ಎರಡೂ ಬೆರೆತರೆ ಪಾಟಲವರ್ಣವಾಗುವುದು.

೯. ತಾಮ್ರದಬಣ್ಣವು ಕುಸುಂಭಬೀಜದ ಪುಡಿಯಿಂದಲೂ, ಶ್ಯಾಮಲವರ್ಣವು ಬಿಲ್ವಪತ್ರೆಯ ಚೂರ್ಣದಿಂದಲೂ ಸಿದ್ಧವಾಗುವುದು. ಅಕ್ಕಿ ಅಥವಾ ಗೋಧಿ ಇವುಗಳ ಹಿಟ್ಟಿಗೆ ಈ ಮೇಲೆ ಹೇಳಿದ ಪುಡಿಗಳನ್ನು ಬೆರೆಸಿದರೆ ಆಯಾ ಬಣ್ಣದ ರಂಗೋಲಿಗಳಾಗುವುವು.

೧೦. ಎಲ್ಲಾ ರೇಖೆಗಳನ್ನೂ ಸಾಮಾನ್ಯವಾಗಿ ಮೊದಲು ಬಿಳಿಯರಂಗೋಲಿಯಿಂದ ಹಾಕಬೇಕು. ರೇಖೆಗಳ ಮಧ್ಯದಲ್ಲಿ ಮಾತ್ರ ಹಳದಿಯ ರಂಗೋಲಿಯನ್ನು ಬರೆಯಬೇಕು. ಕರ್ಣಿಕೆ ಮತ್ತು ಕೇಸರ ಇವುಗಳಿಗೆ ಬಿಳಿಯರಂಗೋಲಿಯನ್ನೇ ಉಪಯೋಗಿಸಬೇಕು.

**ಪೂರ್ವಾದಿಕ್ರಮಯೋಗೇನ ಶುಕ್ಲಾದೀನಿ ಪ್ರಯೋಜಯೇತ್ ।**
**ಪತ್ರಸಂಧೌ ತು ವಿಭಜೇದ್ರಜಃ ಸೇಕಾಂತರಕ್ರಮಾತ್ ॥ ೧೧ ॥**

**ತತಃ ಷೋಡಶಪತ್ರೇಷು ಪೂರ್ವಾದಿಕ್ರಮತೋ ಭವೇತ್ ।**
**ಶುಕ್ಲಂ ಪೀತಂ ತಥಾ ತಾಮ್ರಂ ತತಃ ಸಂಖ್ಯಾತಮೇವ ಚ ॥ ೧೨ ॥**

**ಶ್ಯಾಮಲಂ ಕುಂಕುಮಾಭಂ ಚ ರಕ್ತಂ ಶುಕ್ಲಂ ಚ ಕೃಷ್ಣಕಂ ।**
**ಪೀತಂ ತಾಮ್ರಂ ಚ ಸಂಖ್ಯಾಂತ ಶ್ಯಾಮಂ ಕುಂಕುಮರಕ್ತಕಂ ॥ ೧೩ ॥**

**ಏವಂ ದದ್ಯಾದ್ವಿಜಃ ಪೂರ್ವೇ ಈಶಾನಾಂತಂ ವಿಭಾವಯೇತ್ ।**
**ಕ್ರೌಂಚಮೂರ್ಧ್ನಿ ಭವೇದ್ರಕ್ತಂ ಚತುರಂಗುಲಮಾನತಃ ॥ ೧೪ ॥**

**ತುಂಡಭಾಗೇ ಭವೇತ್ಪೀತಂ ಗ್ರೀವಾಯಾಂ ಶುಕ್ಲಮೇವ ಚ ।**
**ಪುಚ್ಛೇ ವಿಂಶತಿಪತ್ರಾಣಿ ಅದೌ ಪಂಚ ರಜಃಕ್ರಮಾತ್ ॥ ೧೫ ॥**

---

೧೧. ಪೂರ್ವದಿಕ್ಕಿನಿಂದ ಮೊದಲುಗೊಂಡು ಕ್ರಮವಾಗಿ ಬಿಳುಪು, ಕೆಂಪು, ಹಳದಿ ಮುಂತಾದ ಬಣ್ಣವನ್ನುಪಯೋಗಿಸಬೇಕು. ಎಸಳುಗಳು ಸಂಧಿಸುವ ಕಡೆ ಎರಡುಬಗೆಯ ರಂಗೋಲಿಯನ್ನೂ ಹಾಕಬೇಕು.

೧೨. ಅನಂತರ ಪೂರ್ವ, ಪಶ್ಚಿಮ, ದಕ್ಷಿಣ ಮತ್ತು ಉತ್ತರ ಈ ದಿಕ್ಕುಗಳಲ್ಲಿ ರಚಿತವಾಗಿರುವ ಹದಿನಾರು ಎಸಳುಗಳಲ್ಲಿಯೂ ಆಯಾ ದಿಕ್ಕುಗಳ ಪತ್ರಗಳಿಗೆ ಬಿಳುಪು, ಹಳದಿ, ಕೆಂಪು, ಹಸುರು ಈ ಬಣ್ಣಗಳನ್ನೂ

೧೩. ಮತ್ತು ಕೆಂಪು, ಶ್ಯಾಮಲವರ್ಣ, ಕುಂಕುಮದ ಕೆಂಪುಬಣ್ಣ, ಬಿಳುಪು, ಕಪ್ಪು, ಹಳದಿ, ತಾಮ್ರವರ್ಣ, ಹಸುರು, ಕಪ್ಪು, ಕುಂಕುಮವರ್ಣ, ಪುನಃ ಕೆಂಪು ಈ ರೀತಿಯಾದ ಬಣ್ಣಗಳನ್ನು ಹಾಕಬೇಕು.

೧೪. ವಿದಿಜ್ಞನು ಪೂರ್ವದಿಕ್ಕಿನಿಂದ ಈಶಾನ್ಯದಿಕ್ಕಿನವರೆಗೆ ವಿಭಾಗಮಾಡಿ ಕ್ರಮವಾಗಿ ಬಣ್ಣಗಳನ್ನು ಹಾಕಬೇಕು. ಕ್ರೌಂಚಪಕ್ಷಿಯ ಆಕಾರವಾದ ಕ್ರೌಂಚ ಮಂಡಲದ ನೆತ್ತಿಯ ಭಾಗದಲ್ಲಿ ನಾಲ್ಕುಅಂಗುಲ ಪ್ರಮಾಣವಿರುವಂತೆ ಶಿರಸ್ಸನ್ನು ಕೆಂಪುಬಣ್ಣದಿಂದ ರಚಿಸಬೇಕು.

೧೫. ಅದರ ಮುಂಭಾಗಕ್ಕೆ ಹಳದಿಯಬಣ್ಣವನ್ನೂ, ಕುತ್ತಿಗೆಗೆ ಬಿಳಿಯಬಣ್ಣವನ್ನೂ ಹಾಕಬೇಕು. ಬಾಲದಕಡೆಯಲ್ಲಿ ಇಪ್ಪತ್ತುಗರಿಗಳನ್ನೂ ಮೊದಲಿನ ಐದು ರಂಗೋಲಿಗಳಿಂದಲೂ ಕ್ರಮವಾಗಿ ರಚಿಸಬೇಕು.

**ಷಡಂಗುಲೇಷ್ವಂಡಭಾಗೇ ಪೀತೇನ ಪರಿಕಲ್ಪಯೇತ್ ।**
**ಗ್ರೀವಾಯಾಂ ಶುಕ್ಲರಜಸಾ ಭಾವಿತಾಯಾಂ ವಿಶೇಷತಃ ॥ ೧೬ ॥**

**ತತ್ರ ಪೀತಾದಿಕಂ ಲೇಖ್ಯಂ ಪೂರ್ವೋಕ್ತಂ ಚ ಯಥಾ ಭವೇತ್ ।**
**ಶುಕ್ಲಾದಿಕಂ ಪ್ರದದ್ಯಾತ್ತು ಪತ್ರೇಷ್ವೇಕೈಕಶಃ ಪೃಥಕ್ ॥ ೧೭ ॥**

**ಚತುರಂಗುಲಕೇ ಪಾದೇ ಜಾನೋರೂರ್ಧ್ವೇ ತು ಪೀತಕಂ ।**
**ಅಧಸ್ತಾತ್ತು ಭವೇದ್ರಕ್ತಂ ತದೇವ ಚತುರಂಗುಲಂ ॥ ೧೮ ॥**

**ದ್ವ್ಯಂಗುಲೇನ ಭವೇಚ್ಛ್ಯಾಮಮಂಗುಲೀಷ್ವಪಿ ವಿನ್ಯಸೇತ್ ।**
**ಏವಂ ಪಕ್ಷದ್ವಯೇನಾಪಿ ಲಿಖೇಚ್ಛುಕ್ಲಂ ವಿಭಾವಯೇತ್ ॥ ೧೯ ॥**

**ಪದೇ ಶುಕ್ಲಂ ಚಾಂಗುಲೀಷು ರಕ್ತಂ ಶ್ಯಾಮೇನ ಭಾವಯೇತ್ ।**
**ಪೂರ್ವಪಶ್ಚಿಮದಿಗ್ಭಾಗೇ ಶುಕ್ಲಂ ಸ್ಯಾದ್ದ್ವಾರದೇಶತಃ ॥ ೨೦ ॥**

---

೧೬-೧೭. ಅಂಡಭಾಗದಲ್ಲಿ ಆರುಅಂಗುಲ ಪ್ರದೇಶಕ್ಕೆ ಹಳದಿಯಬಣ್ಣವನ್ನು ಹಾಕಬೇಕು. ಕಂಠಪ್ರದೇಶವನ್ನು ಬಿಳಿಯ ರಂಗವಲ್ಲಿಯಿಂದ ವಿಶೇಷವಾಗಿ ಅಲಂಕರಿಸಬೇಕು. ಅಲ್ಲಿ ಹಿಂದೆ ಹೇಳಿದಂತೆ ಹಳದಿ ಮುಂತಾದ ಬಣ್ಣಗಳಿಂದಲೂ ಬರೆಯಬಹುದು. ಪತ್ರಗಳಿಗೂ ಬಿಳುಪು ಮುಂತಾದ ಬಣ್ಣಗಳನ್ನು ಒಂದೊಂದನ್ನೇ ಪ್ರತ್ಯೇಕವಾಗಿ ಹಾಕಬೇಕು.

೧೮-೧೯. ಆ ಕ್ರೌಂಚಾಕೃತಿಯ ಮಂಡಿಯಿಂದ ಮೇಲಿನ ಮತ್ತು ಕೆಳಗಿನ ನಾಲ್ಕುಅಂಗುಲದಲ್ಲಿ ಕಾಲುಕಾಲುಭಾಗಕ್ಕೆ ಕೆಂಪುಬಣ್ಣವನ್ನು ಹಾಕಬೇಕು. ಬೆರಳುಗಳಿಗೆ ಎರಡುಅಂಗುಲ ಪ್ರಮಾಣಕ್ಕೆ ಕಪ್ಪುಬಣ್ಣವನ್ನು ಹಾಕಬೇಕು. ಹಾಗೇ ಎರಡು ರೆಕ್ಕೆಗಳಲ್ಲಿಯೂ ಬಿಳಿಯಬಣ್ಣವನ್ನು ಹಾಕಬೇಕು.

೨೦. ಎರಡುಕಾಲುಗಳಿಗೂ ಬಿಳಿಯಬಣ್ಣವನ್ನೂ, ಕಾಲುಬೆರಳುಗಳಿಗೆ ಕೆಂಪುಬಣ್ಣವನ್ನೂ, ಎರಡು ಅಂಗುಲಪ್ರಮಾಣಕ್ಕೆ ಕಪ್ಪುಬಣ್ಣವನ್ನೂ ಹಾಕಬೇಕು. ಪೂರ್ವದ್ವಾರ ಪಶ್ಚಿಮದ್ವಾರಗಳಲ್ಲೂ ಸಹ ಬಿಳಿಯಬಣ್ಣವನ್ನು ಹಾಕಬೇಕು.

ದಕ್ಷಿಣೋತ್ತರಶ್ಚೈವ ರಕ್ತವರ್ಣಂ ವಿನಿರ್ದಿಶೇತ್ ।
ಮಹಾಕ್ರೌಂಚಮಿದಂ ಜ್ಞೇಯಂ ಮಧ್ಯಕ್ರೌಂಚಮಿದಂ ಶೃಣು ॥ ೨೦ ॥

ಕನಿಷ್ಠಂ ಸರ್ವಯಜ್ಞೇಷು ವಿದ್ಯಾನಾಂ ಸಪ್ತಮೋತ್ತಮಂ ।
ಅಥಾಪರಂ ಪ್ರವಕ್ಷ್ಯಾಮಿ ಸರ್ವತಂತ್ರಮತಂ ಕ್ರಮಾತ್ ॥ ೨೨ ॥

ರಕ್ತಪೀತಂ ರಕ್ತಪೀತೈಃ ಕುರ್ಯಾತ್ಪುಚ್ಛಚತುಷ್ಟಯಂ ।
ಪೂರ್ವಾದಿಕ್ರಮಯೋಗೇ ತು ಪತ್ರಾಂತೇ ಧರಣೀತಲೇ ॥ ೨೩ ॥

ಸುಲೀಢೇನ್ಮೂಲಸಂಲಗ್ನಂ ಬಹಿಷ್ಕೋಣಚತುಷ್ಟಯಂ ।
ಕನಿಷ್ಠೇSಷ್ಟಕುಲಂ ಕುರ್ಯಾತ್ಪುಚ್ಛಂ ಕುರ್ಯಾಚ್ಚತುರ್ವಿಧಂ ॥ ೨೪ ॥

---

೨೧. ದಕ್ಷಿಣೋತ್ತರದ ದ್ವಾರಗಳಲ್ಲಿ ಕೆಂಪುಬಣ್ಣವನ್ನು ಹಾಕಬೇಕು. ಈ ರೀತಿ ಆಯಾಯಬಣ್ಣದ ರಂಗೋಲಿಗಳಿಂದ ಕ್ರಮವಾಗಿ ಚಿತ್ರಿಸಿದ ಮಂಡಲಕ್ಕೆ ಮಹಾ ಕ್ರೌಂಚ ಮಂಡಲವೆಂದು ಹೆಸರು.

೨೨. ಇನ್ನು ಮಧ್ಯಕ್ರೌಂಚ ಮಂಡಲವನ್ನು ಹೇಳುವೆನು ಕೇಳು. ಈ ಮಧ್ಯ ಕ್ರೌಂಚಮಂಡಲವು ಎಲ್ಲಾ ಶಾಸ್ತ್ರಸಿದ್ಧಾಂತಕ್ಕೂ ಸಮ್ಮತವಾದುದೂ, ಯಜ್ಞ ಗಳಲ್ಲಿ ಉಪಯೋಗಿಸುವ ಮಂಡಲಗಳಲ್ಲಿ ಸಣ್ಣದೂ, ವಿದ್ಯೆಗಳಲ್ಲಿ ಏಳನೆಯದಾಗಿ ಉತ್ತಮವೆನಿಸಿಕೊಂಡುದೂ ಆಗಿರುವುದು.

೨೩. ಕೆಂಪು ಮತ್ತು ಹಳದಿಬಣ್ಣದ ರಂಗೋಲಿಗಳಿಂದ ಕೆಂಪು ಮತ್ತು ಹಳದಿ ಬಣ್ಣಗಳ ನಾಲ್ಕುಪುಚ್ಛಗಳನ್ನು ಚಿತ್ರಿಸಬೇಕು. ಪೂರ್ವದಿಕ್ಕು ಮೊದಲುಗೊಂಡು ಪತ್ರಗಳ ತುದಿಗಳು ನಾಲ್ಕು ಕೋಣವಾಗಿ ಹೊರನೂಕಿಕೊಂಡು,

೨೪. ಬುಡವು ಒಂದಕ್ಕೊಂದು ತಗಲಿಕೊಂಡಿರುವಂತೆಯೂ ಭೂಮಿಯ ಮೇಲೆ ರಚಿಸಬೇಕು. ಕನಿಷ್ಠಪಕ್ಷ ಎಂಟುಮನೆಗಳುಳ್ಳ ಆಕೃತಿಯನ್ನು ರಚಿಸಬೇಕು. ಈ ಕ್ರೌಂಚದ ಪುಚ್ಛವನ್ನು ಹಿಂದೆ ಹೇಳಿದಂತೆ ನಾಲ್ಕುಬಣ್ಣಗಳಿಂದ ರಚಿಸಬೇಕು.

**ತ್ರಿವೃತ್ತಂ ವೇಷ್ಟಯೇತ್ಪಶ್ಚಾತ್ಸಿತರಕ್ತಾಸಿತೈಃ ಕ್ರಮಾತ್ ।**
**ದೃಷ್ಟಂ ಜನ್ಮಶತೋದ್ಭೂತಂ ಪಾಪಂ ನಾಶಯತೇ ಧ್ರುವಂ ॥ ೨೫ ॥**

**ಪೀತಂ ವಾ ವಿಲಿಖೇದ್ವಿಪ್ರಾ ನಶ್ಯಂತಿ ಸಕಲಾಪದಃ ।**
**ಅಂತಶ್ಚಕ್ರಂ ಬಹಿಶ್ಚಕ್ರಂ ಕ್ಷೇತ್ರೇ ಚ ಪ್ರತಿದರ್ಶನಂ ॥ ೨೬ ॥**

**ತಸ್ಯ ಕಲ್ಪಶತೋದ್ಭೂತಂ ಪಾಪಂ ನಾಶಯತೇ ಧ್ರುವಂ ।**
**ಮಯೂರಂ ವೃಷಭಂ ಚೈವ ಸಿಂಹಂ ಕ್ರೌಂಚಂ ಚ ವೈ ಕಪಿಂ ॥ ೨೭ ॥**

**ಪ್ರಮಾದಾದ್ವಾ ಗೃಹೇ ಕ್ಷೇತ್ರೇ ವೃಕ್ಷಾಗ್ರೇ ಚಾಪಿ ಭೋ ದ್ವಿಜಾಃ ।**
**ಉತ್ಥಾಯ ವಂದನಂ ಕುರ್ಯಾದ್ಬ್ರಹ್ಮಹತ್ಯಾಶತಂ ದಹೇತ್ ॥ ೨೮ ॥**

---

೨೫. ಅನಂತರ ಸುತ್ತಲೂ ಕ್ರಮವಾಗಿ ಬಿಳುಪು, ಕೆಂಪು, ಕಪ್ಪು ಈ ಬಣ್ಣದ ರಂಗೋಲಿಗಳಿಂದ ಮೂರುವೃತ್ತಗಳನ್ನು ರಚಿಸಬೇಕು. ಈ ರೀತಿ ರಚಿಸಿದ ಮಧ್ಯ ಕ್ರೌಂಚಮಂಡಲವು ನೂರುಜನ್ಮಗಳಿಂದ ಸಂಚಿತವಾದ ಪಾಪಗಳನ್ನೂ ನಿಶ್ಚಯವಾಗಿ ನಾಶಪಡಿಸುವುದು.

೨೬-೨೭. ಅಯ್ಯಾ ಬ್ರಾಹ್ಮಣರೇ! ಕೇಳಿ; ಹಳದಿಯಬಣ್ಣದ ರಂಗೋಲಿಯಿಂದ ಬರೆದರೆ ಸಮಸ್ತಆಪತ್ತುಗಳೂ ನಾಶವಾಗುವುವು. ಅಂತಶ್ಚಕ್ರ, ಬಹಿಶ್ಚಕ್ರ ಮತ್ತು ಕ್ಷೇತ್ರಗಳು ಇವುಗಳನ್ನು ದರ್ಶನಮಾಡಿದರೆ ನೂರುಕಲ್ಪಗಳಿಂದ ಬಂದಿರುವ ಪಾಪಗಳೂ ನಿಶ್ಚಯವಾಗಿ ನಾಶವಾಗುವುವು. ಓ ಬ್ರಾಹ್ಮಣರೇ! ಕೇಳಿ; ನವಿಲು, ಗೂಳಿ, ಸಿಂಹ, ಕ್ರೌಂಚ, ಕಪಿ ಇವುಗಳು.

೨೮. ಪ್ರಮಾದವಶದಿಂದ ಮನೆಗೆ ನುಗ್ಗಿದರೂ, ತನ್ನ ಜಮೀನಿನಲ್ಲಿಯೋ, ಮರದ ತುದಿಯಲ್ಲಿಯೋ ಇದ್ದರೂ ಇವುಗಳಿಗೆ ಅನುಕೂಲ ಮಾಡಿಕೊಟ್ಟು ಆಹಾರಾದಿಗಳನ್ನು ಹಾಕಿ ಅವುಗಳನ್ನು ಸಲಹಬೇಕು. ಬೆಳಗ್ಗೆ ಎದ್ದಕೂಡಲೆ ಅವುಗಳಿಗೆ ನಮಸ್ಕಾರಮಾಡಬೇಕು. ಹೀಗೆ ಮಾಡಿದವನಿಗೆ ನೂರು ಬ್ರಹ್ಮಹತ್ಯಾದೋಷವಿದ್ದರೂ ಪರಿಹಾರವಾಗುವುದು.

ಪ್ರೋಷಣಾತ್ಕೀರ್ತಿಮಾಪ್ನೋತಿ ದರ್ಶನಾತ್ಪಾಪವಿಚ್ಯುತಿಃ ।
ಸ್ಪರ್ಶನಾದ್ವರ್ಧತೇ ಲಕ್ಷ್ಮೀರಾಯುರ್ವೃದ್ಧಿಶ್ಚ ಜಾಯತೆ ॥ ೨೯ ॥

ಮಯೂರೋ ಬ್ರಹ್ಮಣೋ ಮೂರ್ತಿರ್ವೃಷಭಶ್ಚ ಸದಾಶಿವಃ ।
ಸಿಂಹೇ ಚ ಸಂಭವೇದ್ದುರ್ಗಾ ವೈಷ್ಣವೋ ಕಪಿರುಚ್ಯತೇ ॥ ೩೦ ॥

ಕ್ರೌಂಚೋ ನಾರಾಯಣೋ ದೇವೋ ವ್ಯಾಘ್ರಸ್ತ್ರಿಪುರಸುಂದರೀ ।
ಕಾಲಿಕಾ ಕೃಷ್ಣವ್ಯಾಘ್ರಶ್ಚ ಲಕ್ಷ್ಮೀಶ್ಚಿತ್ರಕಪೋತಕಃ ॥ ೩೧ ॥

ಸ್ನಾತಃ ಪಶ್ಯತಿ ಪ್ರತ್ಯಹ್ನಿ ಗ್ರಹದೋಷೋ ನ ಜಾಯತೇ ।
ತಸ್ಮಾದ್ಧಿ ಪ್ರಯತೋ ಭೂತ್ವಾ ಧಾರಯೇತ್ಪೋಷಯೇದ್ಗೃಹೇ ॥ ೩೨ ॥

ಅತಃ ಪರಂ ಪ್ರವಕ್ಷ್ಯಾಮಿ ಮಂಡಲೇ ಮಂಡಲೇಷ್ವಪಿ ।
ರಜೋ ದ್ರವ್ಯಪ್ರಮಾಣಂ ಚ ಯಥೋಕ್ತಂ ಯತ್ನವರ್ಜಿತಂ ॥ ೩೩ ॥

---

೨೯. ಇವುಗಳನ್ನು ರಕ್ಷಿಸುವುದರಿಂದ ಕೀರ್ತಿಬರುವುದು. ಇವುಗಳ ದರ್ಶನದಿಂದ ಪಾಪನಾಶವಾಗುವುದು. ಈ ಪ್ರಾಣಿಗಳನ್ನು ಸ್ಪರ್ಶಮಾಡಿದರೆ ಆಯುಸ್ಸು ಐಶ್ವರ್ಯ ಇವು ಅಭಿವೃದ್ಧಿಯಾಗುವುವು.

೩೦-೩೧. ನವಿಲು ಬ್ರಹ್ಮಸ್ವರೂಪವು. ಗೂಳಿಯು ಶಿವಸ್ವರೂಪವು. ಸಿಂಹವು ದುರ್ಗಾಸ್ವರೂಪವು. ಕಪಿಯು ವಿಷ್ಣುಸ್ವರೂಪವು. ಕ್ರೌಂಚಪಕ್ಷಿಯು ನಾರಾಯಣಸ್ವರೂಪವು. ಹುಲಿಯು ತ್ರಿಪುರಸುಂದರೀ ಸ್ವರೂಪವು. ಕಪ್ಪುಮಚ್ಚೆಯ ಹುಲಿಯು ಕಾಳಿಯಸ್ವರೂಪ. ಚಿತ್ರವರ್ಣದ ಕಪೋತವು ಲಕ್ಷ್ಮೀದೇವೀಸ್ವರೂಪ ಎಂಬದಾಗಿ ತಿಳಿಯಬೇಕು.

೩೨. ಪ್ರತಿದಿನವೂ ಸ್ನಾನಮಾಡಿದನಂತರ ಇವನ್ನು ದರ್ಶನಮಾಡಿದವರಿಗೆ ಗ್ರಹದೋಷವುಂಟಾಗುವುದಿಲ್ಲ. ಆದುದರಿಂದ ಋತುದೋಷಾದಿ ಸಂಪರ್ಕವಾಗದಂತೆ ಪರಿಶುದ್ಧವಾಗಿರುವ ಸ್ಥಳವನ್ನು ಕಲ್ಪಿಸಿ ಈ ಪ್ರಾಣಿಗಳನ್ನು ಮನೆಯಲ್ಲಿಟ್ಟುಕೊಂಡು ಸಾಕಬೇಕು.

೩೩. ಇಲ್ಲಿಂದ ಮುಂದೆ ಇನ್ನೂ ಕೆಲವು ಮಂಡಲಗಳನ್ನೂ ಆ ಮಂಡಲಗಳಿಗೆ ಉಪಯೋಗಿಸಬೇಕಾದ ಯಥೋಕ್ತವಾದ ಬಣ್ಣದ ರಂಗೋಲಿಗಳ ಪ್ರಮಾಣಗಳನ್ನೂ ಹೇಳುವೆನು. ಅಲ್ಲದೆ ಯಾವ ವಸ್ತುಗಳಿಂದ ಮಂಡಲರಚನೆ ಮಾಡಬಾರದೆಂಬುದನ್ನೂ ಹೇಳುತ್ತೇನೆ.

**ತಂಡುಲೋತ್ಥಂ ಯವೋತ್ಥಂ ವಾ ವರ್ಜ್ಯಂ ಮಕರರೋಪಣಂ ।**
**ಯದ್ಬಾಲ್ಯಶ್ರಾವಣೇ ಜಾತಂ ಹ್ಯೆಂಗುಲಂ ಗಂಧಕಂ ತಥಾ ॥ ೩೪ ॥**

**ಹರಿತಾಳಂ ಸುಭದ್ರಂ ಚ ಸದಾ ವಿಘ್ನಂ ವಿವರ್ಜಯೇತ್ ।**
**ಹೈಮಂತಿಕೋದ್ಭವಂ ಯಚ್ಚ ಸಿತಪಾಷಾಣಮೇವ ಚ ॥ ೩೫ ॥**

**ಕಾಂಚನ್ಯಾಶ್ಚ ಪ್ರಭೇದಂ ಯಚ್ಛಸ್ತಂ ಶುಕ್ಲಗುಣಂ ದ್ವಿಜಾಃ ।**
**ಶೇಫಾಲಿವೃತ್ತಂ ನಿಶಯಾ ಅತಸೀಕುಸುಮಾನಿ ಚ ॥ ೩೬ ॥**

**ಕಿಂಶುಕಸ್ಯ ಚ ಪುಷ್ಪಾಣಿ ಶಸ್ತಂ ಪೀತಗುಣಂ ಭವೇತ್ ।**
**ನಾಗಜಂ ಗೈರಿಕಂ ಚೈವ ಕುಸುಂಭಕುಸುಮಾನಿ ಚ ॥ ೩೭ ॥**

**ಕುಶೀತಂ ಗುಡಕಂ ಚೈವ ಮಂಜಿಷ್ಠಾಂ ಪಂಚರಂಗಕಂ ।**
**ವಿಜಯಾಪತ್ರಕಂ ಚೈವ ಬಿಲ್ವಪತ್ರಂ ತಥೈವ ಚ ॥ ೩೮ ॥**

---

೩೪-೩೫. ತಂಡುಲಪಿಷ್ಟದಿಂದಲಾಗಲಿ ಯವಧಾನ್ಯಪಿಷ್ಟದಿಂದಲಾಗಲಿ ಮಕರದ ಆಕೃತಿಯುಳ್ಳ ಮಂಡಲವನ್ನು ರಚಿಸಬಾರದು. ಶ್ರಾವಣಮಾಸದ ಪ್ರಾರಂಭದಲ್ಲಿ ಉತ್ಪನ್ನವಾಗುವ ಇಂಗು, ಗಂಧಕ, ಹರಿತಾಳ (ಅರದಾಳ) ಸುಭದ್ರ ಇವು ಸದಾ ವಿಘ್ನಕಾರಿಗಳಾದುದರಿಂದ ಬಣ್ಣಹಾಕುವುದಕ್ಕಾಗಿ ಅವುಗಳನ್ನು ಉಪಯೋಗಿಸಬಾರದು. ಹಿಮಂತಋತುವಿನಲ್ಲಿ ಉತ್ಪನ್ನವಾಗುವ ಬಿಳಿಯಪಾಷಾಣವನ್ನೂ ಉಪಯೋಗಿಸಬಾರದು.

೩೬. ಎಲೈ ಬ್ರಾಹ್ಮಣರೇ! ಕೇಳಿ; ಪ್ರಶಸ್ತವಾಗಿ ಸ್ವಲ್ಪ ಬಿಳಿಯ ಛಾಯೆಯುಳ್ಳ ಅರಿಸಿನದ ಪ್ರಭೇದವನ್ನು, ನಿಶಾ ಎಂಬ ಹೆಸರಿನಿಂದ ಕೂಡಿದ ಶೇಫಾಲಿಕಾ ಪುಷ್ಪವನ್ನೂ

೩೭ ಅಗಸೇಹೂ, ಮುತ್ತುಗದಹೂ ಇವನ್ನೂ ಸೇರಿಸಿದರೆ ಪ್ರಶಸ್ತವಾದ ಹಳದಿಯಬಣ್ಣದ ರಜಸ್ಸಾಗುವುದು. ಬೆಟ್ಟದಬುಡದಲ್ಲಿ ದೊರೆಯುವ ಗೈರಿಕಾದಿಧಾತುಗಳು (ಮಣಿಶಿಲೆ) ಕುಸುಮೇಹೂ,

೩೮-೩೯. ಕುಶೀತ, ಗುಡಕ, ಮಂಜಿಷ್ಠಾ, ಪಂಚರಂಗೀಲತೆ, ವಿಜಯಾಪತ್ರ (ಜಾಯಿಃಪತ್ರೆ) ಬಿಲ್ವಪತ್ರೆ, ಬನ್ನಿಯಎಲೆ, ಕೊಮ್ಮೆಯ ಗಿಡದಎಲೆ, ಕೇಸರವೃಕ್ಷದ

ಪುನರ್ನವಾಯಾಃ ಪತ್ರಂ ಚ ಕೇಶರಸ್ಯ ಬಕಸ್ಯ ಚ ।
ಕೃಷ್ಣಪಾಷಾಣಕಂ ಚೈವ ಕೃಷ್ಣಾಭ್ರಂ ಸಮಯೂಥಕಂ ॥ ೩೯ ॥

ನಾಗಪಾಷಾಣಕಂ ಚೈವ ಪುನ್ನಾಗಂ ದಗ್ಧಪಂಚಕಂ ।
ಶಂಖಚೂರ್ಣಂ ಲೋಹವಿಷ್ಠಾಂ ನಾಗವಿಷ್ಠಾಂ ಚ ವರ್ಜಯೇತ್ ॥ ೪೦ ॥

ಕರ್ಪೂರಂ ಕುಂಕುಮಂ ಚೈವ ರೋಚನಾರೋಚನಾಂ ಶ್ರಯೇತ್ ।
ಯವಶಾಲೀಯಕೈರ್ಭಿನ್ನಂ ಶುಕ್ಲಂ ಚ ಕಾರಯೇತ್ಸುಧೀಃ ॥ ೪೧ ॥

ಲಾಕ್ಷಾಂ ಚ ಯದಿ ಗೃಹ್ಣೀಯಾತ್ತದ್ವರ್ಜಿತ್ವಾ ಪ್ರದಾಪಯೇತ್ ।
ಆಕಾಶಂ ಪೃಥಿವೀಂ ಚೈವ ಭೌಮಂ ರಾಮಂ ತಥಾ ಶನೀ ॥ ೪೨ ॥

ಧರಣೀಂ ಸದನಸ್ಥಾನೇ ಪಂಚಧಾ ವಿಭಜೇದ್ಬುಧಃ ।
ಪದ್ಮಮುಲ್ಲಿಖ್ಯ ಪ್ರಥಮಂ ಕರ್ಣಿಕಾಂ ತದನಂತರಂ ॥ ೪೩ ॥

---

ಎಲೆ, ಬಕವೃಕ್ಷದಎಲೆ,ಕಪ್ಪುಪಾಷಾಣ, ಕರಿಯಕಾಗೇಬಂಗಾರ, ಸಮಯೂಥಕ, ಇವುಗಳನ್ನೂ

೪೦. ನಾಗಪಾಷಾಣ, ಪುನ್ನಾಗ, ದಗ್ಧಪಂಚಕ, ಶಂಖಚೂರ್ಣ, ಲೋಹದ ಕಿಟ್ಟ, ನಾಗವಿಷ್ಠಾ ಇವುಗಳನ್ನೂ ಸಹ ಬಣ್ಣದ ರಂಗೋಲಿ ಮಾಡಲು ಉಪಯೋಗಿಸಬಾರದು.

೪೧. ಕರ್ಪೂರ, ಕುಂಕುಮ, ಗೋರೋಚನ ಇವುಗಳನ್ನು ತಕ್ಕಷ್ಟು ಸೇರಿಸಬಹುದು. ಗೋಧಿಯಹಿಟ್ಟನ್ನೂ ಅಕ್ಕಿಯಹಿಟ್ಟನ್ನೂ ಬೆರೆಸಿ ಬಿಳಿಯರಂಗೋಲಿಯನ್ನು ಮಾಡಿಕೊಳ್ಳಬೇಕು.

೪೨-೪೩. ಬಣ್ಣಬರುವುದಕ್ಕೆ ಅರಗನ್ನು ಸೇರಿಸಬೇಕಾದರೆ ಪಾಕಮಾಡಿ ಸೇರಿಸಬಹುದು. ಸದನದಸ್ಥಾನದಲ್ಲಿ ಹೊರಗೆ ಆಕಾಶ, ಪೃಥ್ವೀ, ಭೌಮ, ರಾಮ, ಅಶ್ವಿನೀ ಎಂಬ ಐದುಭಾಗಗಳಾಗಿ ಭೂಮಿಯನ್ನು ವಿಭಾಗಿಸಬೇಕು. ಮೊದಲು ಪದ್ಮವನ್ನೂ ಅನಂತರ ಕರ್ಣಿಕೆಯನ್ನೂ ಬರೆಯಬೇಕು.

**ತರ್ಜನ್ಯಮಧ್ಯಪೂರ್ವೇತ್ಥಂ ವಿಭಜೇದ್ವಾ ಸಮಾಹಿತಃ ।**
**ತರ್ಜನ್ಯಂಗುಷ್ಠಯೋರ್ಗೈರ್ವಾ ತೃಣಮಾರಭ್ಯ ಯದ್ಭವೇತ್ ॥ ೪೪ ॥**

**ತೃಣಮಾರಭ್ಯ ಸಾಮಾನ್ಯೇ ಶಕ್ತೋ ವಾ ಮಧ್ಯಮಾದಿತಃ ।**
**ರಾಕ್ಷಸಾದಿಪ್ರತಿಷ್ಠಾಯಾಂ ಗ್ರಹಪಕ್ಷೇಽಗ್ನಿಮಾದಿತಃ ॥ ೪೫ ॥**

**ಅಂಗುಲ್ಯಗ್ರೇ ಚ ವಿಭಜೇತ್ಸರ್ವಕಾಮಾರ್ಥಸಿದ್ಧಯೇ ।**
**ಪ್ರತಿಷ್ಠಾಯಾಂ ಗ್ರಹಮುಖೇ ಕಾಮ್ಯೇಷು ಪರಿವರ್ಜಯೇತ್ ॥ ೪೬ ॥**

**ಸುಭದ್ರಂ ಮಂಡಲಂ ವಕ್ಷ್ಯೇ ಶುಭದಂ ಶುಭಮಾದಿಶೇತ್ ।**
**ಅತಃ ಸುಭದ್ರಮುದ್ದಿಷ್ಟಂ ಸ್ವರ್ಗಮೋಕ್ಷಪ್ರದಾಯಕಂ ॥ ೪೭ ॥**

---

೪೪. ತರ್ಜನೀ ಮತ್ತು ಮಧ್ಯಮ ಈ ಬೆರಳುಗಳ ಹಿಂಭಾಗದಿಂದ ರಂಗೋಲಿ ಬಿದ್ದು, ಗೆರೆಗಳು ಏರ್ಪಡುವಂತೆ ಸಮಾಹಿತಮನಸ್ಕನಾಗಿ ರಚಿಸಬೇಕು. ತರ್ಜನೀ ಅಂಗುಷ್ಠ ಇವೆರಡರ ಮೂಲಕ ರಚಿತವಾಗಿ ಹುಲ್ಲುಕಡ್ಡಿ ಹಬ್ಬಿದಂತಿರುವ ರಂಗೋಲಿಯ ಗೆರೆಯನ್ನು ತೃಣಪಂಕ್ತಿಯೆನ್ನಬೇಕು.

೪೫. ಈ ತೃಣಪಙ್ಕ್ತಿರೂಪವಾದ ರಂಗೋಲಿಯನ್ನು ಸಾಮಾನ್ಯರೂ ರಚಿಸಬಹುದು. ಶಕ್ತನಾದರೆ ಮಧ್ಯಮಬೆರಳಪಕ್ಕ ತರ್ಜನೀಬೆರಳಿನಪಕ್ಕ ಇವುಗಳಿಂದ ಎರಡು ಗೆರೆಗಳು ಒಂದೇಸಲ ಬೀಳುವಂತೆ ಮಾಡುವನು. ರಾಕ್ಷಸಾದಿಗಳನ್ನು ಮನೆಯಿಂದ ಉಚ್ಚಾಟನಾರ್ಥವಾಗಿ ಸ್ಥಾಪಿಸುವ ಅಗ್ನಿಪ್ರತಿಷ್ಠಾ ಸಂದರ್ಭದಲ್ಲಿಯೂ ಗ್ರಹೋಚ್ಚಾಟನೆಗಾಗಿ ಮಾಡುವ ಅಗ್ನಿಪ್ರತಿಷ್ಠೆಯಲ್ಲಿಯೂ

೪೬. ಎಲ್ಲಾ ಬೆರಳುಗಳ ಸಂದಿಗಳಲ್ಲಿಯೂ ರಂಗೋಲಿ ಬೀಳುವಂತೆ ಹಲವು ಗೆರೆಗಳನ್ನು ಎಳೆಯಬೇಕು ಇದರಿಂದ ಆ ಇಷ್ಟಾರ್ಥಗಳು ಸಿದ್ಧಿಸುವುವು. ಪ್ರತಿಮಾ ಪ್ರತಿಷ್ಠೆಯಲ್ಲಿಯೂ, ಗ್ರಹಯಜ್ಞದಲ್ಲಿಯೂ, ಕಾಮ್ಯಕರ್ಮಗಳಲ್ಲಿಯೂ, ಸರ್ವಾಂಗುಲಿಗಳಿಂದ ಗೆರೆ ಎಳೆಯಬಾರದು.

೪೭. ಈಗ ಶುಭಪ್ರದವಾದ ಸುಭದ್ರಮಂಡಲ ರಚನೆಯನ್ನು ಹೇಳುತ್ತೇನೆ. ಇದು ಸ್ವರ್ಗ, ಮೋಕ್ಷ, ಮುಂತಾದ ಶುಭಫಲಗಳನ್ನು ಕೊಡುವುದರಿಂದ ಇದಕ್ಕೆ ಸುಭದ್ರವೆಂಬ ಹೆಸರು ಅನ್ವರ್ಥವಾಗಿರುವುದು.

ಸಾರ್ಧಹಸ್ತೇನ ಮಾನೇನ ಕುರ್ಯಾನ್ಮಂಡಲಮುತ್ತಮಂ ।
ಚತುರ್ವಿಂಶಾಂಗುಲ್ಯೈಃ ಪೂರ್ಣಂ ಸರ್ವತ್ರ ಹಸ್ತಮಾವಿಶೇತ್ ॥ ೪೮ ॥

ಕತುರ್ವಾರ್ಧ್ಯಮಹಸ್ತಸ್ಯ ಮಧ್ಯಮಾ ಮಧ್ಯಪರ್ವಣಿ ।
ಮಧ್ಯಮಾ ದೀರ್ಘಮಾನೇನ ಮಾನಾಂಗುಲ ಮಿತಿ ಸ್ಮೃತಂ ॥ ೪೯ ॥

ರೇಖಾದ್ವಯೋಂತರಂ ಯಚ್ಚ ಮೂಲರೇಖಾಂ ನ ಚಾಶ್ರಯೇತ್ ।
ವೃದ್ಧಾಂಗುಷ್ಠನಖದ್ವಂದ್ವಂ ಮಾನಾಂಗುಲಮಥಾಪಿ ವಾ ॥ ೫೦ ॥

ಮಧ್ಯೇ ನಿಬಧ್ಯ ಶಂಕುಂ ಚ ಮುಷ್ಟಿಬಾಹುಪ್ರಮಾಣತಃ ।
ತ್ರಿವೃತ್ತಂ ಕಾರಯೇನ್ಮಧ್ಯೇ ಜ್ಯೇಷ್ಠೋತ್ತರಕನೀಯಸಂ ॥ ೫೧ ॥

ಪ್ರಕಲ್ಪ್ಯ ಕರ್ಣಿಕಾದೀನಿ ಮಧ್ಯೇ ಚಾಷ್ಟದಲಂ ಲಿಖೇತ್ ।
ಬಹಿಶ್ಚಾರ್ಕದಲಂ ಕುರ್ಯಾದ್ವರ್ಣಾನಾಂ ಕ್ರಮಕೇಣ ತು ॥ ೫೨ ॥

---

೪೮-೫೦. ಒಂದೂವರೆಮೊಳ ಅಳತೆಯಲ್ಲಿ ಉತ್ತಮವಾದ ಮಂಡಲವನ್ನು ಮಾಡಬೇಕು. ಎಲ್ಲಾ ಕಡೆಯಲ್ಲಿಯೂ ಇಪ್ಪತ್ತುನಾಲ್ಕು ಅಂಗುಲ ಪೂರ್ತಾ ಇರುವಂತೆ ಅಳತೆಯಿಡಬೇಕು. ಮಂಡಲವನ್ನು ರಚಿಸತಕ್ಕವನ ಹಸ್ತದ ಮಧ್ಯದ ಬೆರಳಿನ ನಡುಗಿಣ್ಣಿನಿಂದ ಮುಂದಿನ ಗಿಣ್ಣಿನವರೆಗಿನ ಅಳತೆಯನ್ನೇ ಮಾನಾಂಗುಲವೆನ್ನುವರು. ಎಂದರೆ ಮಧ್ಯಬೆರಳಿನ ಮೂಲರೇಖೆಯನ್ನು ಬಿಟ್ಟು, ಉಳಿದ ಎರಡುರೇಖೆಗಳ ಉದ್ದವು ಒಂದುಮಾನಾಂಗುಲವೆನಿಸುವುದು. ಅಥವಾ ಹೆಬ್ಬೆಟ್ಟಿನ ಉಗುರಿನ ಉದ್ದದ ಎರಡರಷ್ಟು ಅಳತೆಯನ್ನು ಒಂದುಮಾನಾಂಗುಲವೆನ್ನುವರು.

೫೧ ಆ ರೀತಿ ರಚಿಸಿದ ಮಂಡಲದ ಮಧ್ಯದಲ್ಲಿ ಒಂದುಮೊಳೆಯನ್ನು ನಾಟಬೇಕು. ಹಿಡಿಸಹಿತ ಒಂದು ತೋಳುದ್ದದಷ್ಟು ವ್ಯಾಸಪ್ರಮಾಣದಲ್ಲಿ ಮೊದಲು ಒಂದು ಚಿಕ್ಕವೃತ್ತ, ಅನಂತರ ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿ ಸ್ವಲ್ಪ ದೊಡ್ಡವೃತ್ತ, ಆಮೇಲೆ ಇನ್ನೂ ಸ್ವಲ್ಪ ಹೆಚ್ಚು ಪ್ರಮಾಣದಲ್ಲಿ ಅದಕ್ಕಿಂತ ದೊಡ್ಡವೃತ್ತ, ಈ ರೀತಿ ಮೂರು ವೃತ್ತಗಳನ್ನು ರಚಿಸಬೇಕು.

೫೨. ಆ ವೃತ್ತಗಳಲ್ಲಿ ಅಷ್ಟದಳಗಳನ್ನೂ ಕರ್ಣಿಕೆ ಮುಂತಾದುವುಗಳನ್ನೂ ರಚಿಸಬೇಕು. ಈ ಅಷ್ಟದಳಗಳನ್ನು ರಚಿಸಿದ ವೃತ್ತದ ಹೊರಗಿನ ಸುತ್ತಿನಲ್ಲಿ, ಹನ್ನೆರಡು ದಳಗಳನ್ನು ಕ್ರಮವಾಗಿ ಯಥೋಕ್ತವಾದ ಬಣ್ಣದಿಂದ ಕೂಡಿರುವಂತೆ ರಚಿಸಬೇಕು.

ಪಂಚಮಂ ಶ್ವೇತವರ್ಣೇನ ಬಹಿಃ ಕುರ್ಯಾತ್ರಿವೇಷ್ಟನಂ ।
ಸಿತಪೀತಾರುಣಂ ಕುರ್ಯಾತ್ಪಶ್ಚಾದ್ವೇದಾಂಗುಲಾಂತರೇ ॥ ೫೩ ॥

ವೇಷ್ಟಯೇಚ್ಛುಕ್ಲವರ್ಣೇನ ಮಧ್ಯೇ ಕಲ್ಪಲತಾಂ ಲಿಖೇತ್ ।
ಸುಭದ್ರಂ ಮಂಡಲಾತ್ಪೂರ್ವಂ ಸರ್ವತೋಭದ್ರಕಂ ಶೃಣು ॥ ೫೪ ॥

ಸರ್ವಕಾರ್ಯೇಷು ಯಜ್ಞೇಷು ಸರ್ವಕಲ್ಯಾಣಮಾಪ್ನುಯಾತ್ ।
ಮಂಡಲಂ ಸರ್ವತೋಭದ್ರಂ ಸರ್ವಯಜ್ಞೇಷು ಪುಷ್ಟಿದಂ ॥ ೫೫ ॥

ಸಾಧಕಾನಾಂ ಹಿತಾರ್ಥಾಯ ಈಶ್ವರೇಣೈವ ಭಾಷಿತಂ ।
ಚತುರ್ವಿಂಶತ್ಯಂಗುಲೇನ ಹಸ್ತಃ ಪ್ರಥಮತೋ ಭವೇತ್ ॥ ೫೬ ॥

---

೫೩. ಪರಸ್ಪರ ಐದು ಅಥವಾ ನಾಲ್ಕು ಅಂಗುಲ ದೂರವಿರುವಂತೆ ಬಿಳಿಯ ಬಣ್ಣದಿಂದ ಮೂರು ವೃತ್ತಗಳನ್ನು ರಚಿಸಿ, ಅದರಲ್ಲಿ ಬಿಳುಪು, ಹಳದಿ, ಕೆಂಪು ಈ ಬಣ್ಣಗಳಿಂದ ಕರ್ಣಿಕೆ, ದಳ ವೃತ್ತ ಇವನ್ನು ಮಾಡಬೇಕು.

೫೪. ಅದರ ಸುತ್ತಲೂ ಬಿಳಿಯಬಣ್ಣದ ಆವರಣ ವೃತ್ತವನ್ನು ರಚಿಸಿ ಈ ಎರಡು ವೃತ್ತಗಳ ಮಧ್ಯೆ ಕಲ್ಪಲತೆಯನ್ನು ಬರೆಯಬೇಕು. "ಇದು ಸುಭದ್ರ" ಮಂಡಲವೆನಿಸುವುದು. ಈ ಮಂಡಲಕ್ಕಿಂತಲೂ ಪ್ರಾಚೀನವಾದ ಸರ್ವತೋಭದ್ರ ಮಂಡಲವನ್ನು ಹೇಳುವೆನು ಕೇಳಿ.

೫೫. ಈ ಸರ್ವತೋಭದ್ರಮಂಡಲಯುಕ್ತವಾದರೆ, ಸಕಲಕಾರ್ಯಗಳಲ್ಲಿಯೂ ಸಮಸ್ತ ಯಜ್ಞಗಳಲ್ಲಿಯೂ ಪುಷ್ಟಿಯನ್ನೂ, ಸರ್ವಮಂಗಳಗಳನ್ನೂ ಉಂಟು ಮಾಡುವುದು.

೫೬. ಸಾಧಕರ ಹಿತಾರ್ಥವಾಗಿ ಈಶ್ವರನು ತಾನೇ ಸಾಕ್ಷಾತ್ತಾಗಿ ಈ ಮಂಡಲವನ್ನು ಹೇಳಿದ್ದಾನೆ. ಮೊದಲು ಇಪ್ಪತ್ತುನಾಲ್ಕು ಅಂಗುಲ ಚತುರಸ್ರವಾದ ಚೌಕವನ್ನು ರಚಿಸಬೇಕು.

**ಕೋಣೇ ಸೂತ್ರದ್ವಯಂ ದದ್ಯಾನ್ಮಧ್ಯೇ ಸೂತ್ರದ್ವಯಂ ಪುನಃ ।**
**ತತೋ ಮತ್ಸ್ಯಾನ್ವಿರಚಯೇತ್ಕರ್ಣೇ ಸೂತ್ರಾಣಿ ಸಾಧಕಃ ॥ ೫೭ ॥**

**ಚತುಃ ಸೂತ್ರಂ ಪಾತಯೇಚ್ಚ ಪೂರ್ವಾಪರವಿಭಾಗತಃ ।**
**ಪುನರ್ದದ್ಯಾಚ್ಚತುಃಸೂತ್ರಂ ಕರ್ಣಸೂತ್ರಂ ಪುನರ್ದದೇತ್ ॥ ೫೮ ॥**

**ಶತದ್ವಯಪದಂ ಯಾವತ್ಷಟ್ಪಂಚಾಶಾಧಿಕಂ ತಥಾ ।**
**ಪಾತಯೇಚ್ಚ ತಥಾ ಸೂತ್ರಮೇವಂ ಸಪ್ತದಶಂ ಭವೇತ್ ॥ ೫೯ ॥**

**ಊರ್ಧ್ವಪಂಕ್ತ್ಯಾಂ ಪದಯುಗಂ ಚಾದ್ಯೇ ಪದಚತುಷ್ಟಯಂ ।**
**ದ್ವಾರಂ ಪಾರ್ಶ್ವೇ ಭವೇದ್ಯಾವದ್ದಂತಪಂಕ್ತ್ಯಾಂ ಪದತ್ರಯಂ ॥ ೬೦ ॥**

---

೫೭. ಈ ಚತುರಸ್ರದ ಕೋಣಗಳಲ್ಲಿ ಮೂಲೆಯಿಂದ ಮೂಲೆಗೆ ಮೊಳೆಗಳನ್ನು ನೆಟ್ಟು, ಎದುರುಬದರಾಗಿ ನೆಟ್ಟಿರುವ ಆ ಮೊಳೆಗಳಿಗೆ ಎರಡು ಸೂತ್ರಗಳನ್ನು ಕಟ್ಟಬೇಕು. ಪುನಃ ಈ ಎರಡು ಸೂತ್ರಗಳ ಮಧ್ಯೆ ಇನ್ನೆರಡು ಸೂತ್ರಗಳನ್ನು ರಚಿಸಬೇಕು. ಅನಂತರ ಕರ್ಣಗಳಲ್ಲಿ ಮತ್ಸ್ಯರೇಖೆಗಳನ್ನು ರಚಿಸಬೇಕು. ಸಾಧಕನು ಈ ರೀತಿ ಸೂತ್ರಗಳನ್ನು ನಿರ್ಮಿಸಬೇಕು.

೫೮. ಪೂರ್ವಾಪರ ದಿಗ್ವಿಭಾಗವನ್ನು ನಾಲ್ಕುಭಾಗಗಳಾಗುವಂತೆ ಸೂತ್ರಗಳನ್ನು ನಿರ್ಮಿಸಬೇಕು. ಆ ಒಂದೊಂದುಭಾಗವನ್ನೂ ಪುನಃ ನಾಲ್ಕಾಗುವಂತೆ ಸೂತ್ರಗಳನ್ನು ರಚಿಸಬೇಕು. ಅಲ್ಲದೆ ಕರ್ಣರೇಖಾಸೂತ್ರಗಳನ್ನೂ ರಚಿಸಬೇಕು.

೫೯. ಒಟ್ಟಿನಲ್ಲಿ ಇನ್ನೂರ ಐವತ್ತಾರು ಪದಕಗಳಾಗುವಂತೆ ಸೂತ್ರಗಳನ್ನು ರಚಿಸಬೇಕು. ಇದು ಹದಿನೇಳು ಸುತ್ತಿನದಾಗುವುದು. ಎಂದರೆ ಪೂರ್ವಪಶ್ಚಿಮ, ಮತ್ತು ದಕ್ಷಿಣೋತ್ತರ, ಹದಿನೇಳು ಹದಿನೇಳು ರೇಖೆಗಳು ಬಂದರೆ, ಹದಿನಾರು ಹದಿನಾರು ಮನೆಗಳಾಗುವುವು. ಆಗ ಆ ಚತುರಸ್ರದಲ್ಲಿ ಇನ್ನೂರೈವತ್ತಾರು ಪದಕಗಳಾಗುವುವೆಂದು ತಿಳಿಯಬೇಕು.

೬೦. ಈ ಇನ್ನೂರೈವತ್ತಾರು ಮನೆಗಳಿರುವ ಸರ್ವತೋಭದ್ರಮಂಡಲದಲ್ಲಿ ಮೇಲಿನ ಪಂಕ್ತಿಯಲ್ಲಿ ಹದಿನಾರು ಪದಕಗಳು ಇರುತ್ತವೆ. ಅವುಗಳಲ್ಲಿ ಮಧ್ಯದ ಎಂಟು ಮತ್ತು ಒಂಬತ್ತನೆಯ ಪದಕಗಳೂ, ಕೆಳಗಿನ ಪಂಕ್ತಿಯಲ್ಲಿರುವ ಹದಿನಾರು ಪದಕಗಳಲ್ಲಿ ಏಳು, ಎಂಟು, ಒಂಭತ್ತು, ಹತ್ತು ಈ ನಾಲ್ಕುಪದಕಗಳೂ, ಪೂರ್ವ

**ರೇಖಾಂ ಸರ್ವತ್ರ ಶುಕ್ಲೇನ ರಚಯೇದ್ಯಜ್ಞಿಯೋತ್ತಮಃ ।**
**ಪಂಕಜಂ ಶುಕ್ಲವರ್ಣೇನ ವೈಷ್ಣವೇ ಯಾಗಕರ್ಮಣಿ ॥ ೬೧ ॥**

**ಶಕ್ತಿಯಾಗೇ ಭವೇದ್ರಕ್ತಂ ಶೈವೇ ಪೀತಂ ವಿನಿರ್ದಿಶೇತ್ ।**
**ಪ್ರತಿಷ್ಠಾಸು ಚ ಸರ್ವಾಸು ಶುಕ್ಲಮೇವ ಪ್ರಶಸ್ಯತೆ ॥ ೬೨ ॥**

**ಪೀತೇನ ಕರ್ಣಿಕಾ ಕಾರ್ಯಾ ಚತುರ್ಭಾಗೇನ ಮಾನತಃ ।**
**ಶುಭಂ ಚಕೋರಾವಸ್ಥಾನೇ ಸ್ಥಾಪಯಿತ್ವಾ ವಿಚಕ್ಷಣಃ ॥ ೬೩ ॥**

**ಕರ್ಣಿಕಾಮೂಲಮಾರಭ್ಯ ರೇಖಾಃ ಷೋಡಶ ಕಲ್ಪಯೇತ್ ।**
**ರೇಖಾಮೂಲೇ ಭವೇಚ್ಛುಕ್ಲಂ ಮಧ್ಯೇ ರಕ್ತಂ ನಿಪಾತಯೇತ್ ॥ ೬೪ ॥**

---

ಪಶ್ಚಿಮದಿಕ್ಕುಗಳಲ್ಲಿ ಅಂದರೆ ಪೂರ್ವಪಾರ್ಶ್ವ ಹದಿನಾರು, ಪಶ್ಚಿಮಪಾರ್ಶ್ವ ಹದಿನಾರು, (ಒಟ್ಟು ಮೂವತ್ತೆರಡು) ಪದಕಗಳಲ್ಲಿ ಕ್ರಮವಾಗಿ ಏಳು, ಎಂಟು ಮತ್ತು ಒಂಭತ್ತು ಈ ಮೂರು ಪದಕಗಳೂ ದ್ವಾರಪ್ರದೇಶಗಳೆಂದು ತಿಳಿಯಬೇಕು.

೬೧. ಉತ್ತಮವಾದ ಯಾಜಕನು ಸಾಧಾರಣವಾಗಿ ಎಲ್ಲ ಕಡೆಯಲ್ಲಿಯೂ ಬಿಳಿಯಬಣ್ಣದ ರಂಗೋಲಿಯಿಂದಲೇ ರೇಖೆಯನ್ನು ಬರೆಯಬೇಕು. ಆದರೆ ವೈಷ್ಣವ ಯಾಗದಲ್ಲಿ ಕಮಲವನ್ನೂ ಬಿಳಿಯಬಣ್ಣದಿಂದ ಬರೆಯಬೇಕು.

೬೨. ಶಕ್ತಿದೇವತಾ ಪ್ರೀತ್ಯರ್ಥವಾದ ಯಾಗದಲ್ಲಿ ಕಮಲವನ್ನು ಕೆಂಪುಬಣ್ಣ ದಿಂದಲೂ ಶಿವಸಂಬಂಧವಾದ ಯಾಗದಲ್ಲಿ ಹಳದಿಯಬಣ್ಣದಿಂದಲೂ ರಚಿಸಬೇಕು. ಯಂತ್ರಪ್ರತಿಷ್ಠೆ, ಬಿಂಬಪ್ರತಿಷ್ಠೆ ಮುಂತಾದ ಸರ್ವಪ್ರತಿಷ್ಠಾ ಕರ್ಮಗಳಲ್ಲಿಯೂ ಕಮಲ ವನ್ನು ಬಿಳಿಯರಂಗೋಲಿಗಳಿಂದಲೇ ರಚಿಸಬೇಕು. ಇದೇ ಶ್ರೇಷ್ಠವೆನಿಸುವುದು.

೬೩. ಕರ್ಣಿಕೆಯನ್ನೂ ಕಮಲದ ಕೇಸರವನ್ನೂ ಹಳದಿಯ ರಂಗೋಲಿಗಳಿಂ ದಲೇ ರಚಿಸಬೇಕು. ಆ ಕರ್ಣಿಕೆಯ ಪ್ರಮಾಣವು ಒಟ್ಟು ಕಮಲಪ್ರಮಾಣದ ನಾಲ್ಕನೆಯ ಒಂದುಪಾಲು ಅಂದರೆ ನಾಲ್ಕುಅಂಗುಲ ಕಮಲವಿದ್ದರೆ ಒಂದಂಗುಲ ಕರ್ಣಿಕೆ ಇರಬೇಕು.

೬೪-೬೬ ಚಕೋರಮಂಡಲವನ್ನು ರಚಿಸುವಾಗ ವಿಚಕ್ಷಣನಾದವನು ಮೊದಲು ಶುಭಕರವಾದ ವೃತ್ತವನ್ನು ರಚನೆಮಾಡಬೇಕು. ಅದರಲ್ಲಿ ಕರ್ಣಿಕೆಯ ಮೂಲದಿಂದಾರಂಭಿಸಿ ಹದಿನಾರು ರೇಖೆಗಳನ್ನು ನಿರ್ಮಿಸಬೇಕು. ಆ ರೇಖೆಗಳ ಬುಡ

**ಅಗ್ರೇ ಪೀತಂ ಭವೇದೇವಂ ಕೃತ್ವಾ ಪಂಕಜವೇಷ್ಟನಂ ।**
**ಶುಭ್ರವರ್ಣೇನ ತದ್ವದ್ಯಾತ್ಪೀತವರ್ಣೇನ ಸರ್ವತಃ ॥ ೬೫ ॥**

**ಮಧ್ಯೇ ರಕ್ತಂ ಭವೇತ್ತ್ರಚ್ಚ ಏವಂ ಷೋಡಶ ಕಲ್ಪಯೇತ್ ।**
**ಕೋಣೇಷು ರಕ್ತಂ ದದ್ಯಾಚ್ಚ ಪದ್ಮಂ ಕ್ಷೇತ್ರೇಷು ನಿರ್ದಿಶೇತ್ ॥ ೬೬ ॥**

**ಶುಕ್ಲೇನ ಪೀಠಗಾತ್ರಾಣಿ ಪೀಠಕೋಣೇ ಪದತ್ರಯಂ ।**
**ಪೀತವರ್ಣೇನ ರಚಯೇದ್ದ್ವಿಧಾ ಪಂಕ್ತಿದ್ವಯೇ ತಥಾ ॥ ೬೭ ॥**

**ಶುಕ್ಲೇನ ರಚಯೇತ್ಪಾದೌ ಪುನಃ ಪೀತಾದಿವರ್ಣಕೈಃ ।**
**ಚಿತ್ರಂ ಸುಶೋಭನಂ ಕಾರ್ಯಂ ತತ್ರ ಕಲ್ಪಲತಾಂ ನ್ಯಸೇತ್ ॥ ೬೮ ॥**

**ಮಾನಂ ಕಲ್ಪಲತಾಯಾಸ್ತು ದ್ವ್ಯಂಗುಲಂ ಪರಿಕೀರ್ತಿತಂ ।**
**ದ್ವೇದ್ವೇ ಶಸ್ತಂ ಚ ಭ್ರಮಣಂ ಶಂಖಾವರ್ತಕ್ರಮಾತ್ತ್ರಯಂ ॥ ೬೯ ॥**

---

ದಲ್ಲಿ ಬಿಳಿಯಬಣ್ಣ, ಮಧ್ಯದಲ್ಲಿ ಕೆಂಪುಬಣ್ಣ, ತುದಿಯಲ್ಲಿ ಹಳದಿಯಬಣ್ಣ, ಈ ರೀತಿ ಯಿರುವಂತೆ ರಚಿಸಬೇಕು. ಹೀಗೆ ರಚಿಸಿದನಂತರ ಪುನಃ ಆ ಕಮಲದ ಸುತ್ತಲೂ ಬಿಳಿಯಬಣ್ಣದಿಂದಲೂ, ಮಧ್ಯೆ ಕೆಂಪುಬಣ್ಣದಿಂದಲೂ, ಕೊನೆಯಲ್ಲಿ ಹಳದಿಯಬಣ್ಣ ದಿಂದಲೂ, ಈ ರೀತಿ ಹದಿನಾರುಗೆರೆಗಳ ಮಧ್ಯದಲ್ಲೂ, ಅಲಂಕಾರವಾಗಿ ರಚಿಸಬೇಕು. ಕಮಲದ ಎಸಳಿನ ತುದಿಮೂಲೆಗಳಲ್ಲಿ ಕೆಂಪುಬಣ್ಣವನ್ನು ಹಾಕಬೇಕು. ನೆಲದಮೇಲೆ ಈ ರೀತಿ ಪದ್ಮರಚನೆ ಮಾಡಬೇಕು.

೬೭. ಈ ಕಮಲದ ಮಧ್ಯದ ಪೀಠವನ್ನು ಬಿಳಿಯಬಣ್ಣದಿಂದಲೂ, ಪೀಠದ ಕೋಣಪ್ರದೇಶದ ಮೂರುಪದಗಳನ್ನು, ಹೊಂಬಣ್ಣ (ಹಳದಿಬಣ್ಣ) ದಿಂದಲೂ, ಎರಡು ಪಂಕ್ತಿಗಳಲ್ಲಿಯೂ ಎರಡುಬಗೆಯಾಗಿ ರಚಿಸಬೇಕು.

೬೮. ಪಾದಗಳೆರಡನ್ನೂ ಬಿಳಿಯಬಣ್ಣ ಮತ್ತು ಹಳದಿಬಣ್ಣ ಮುಂತಾದುವು ಗಳಿಂದ ರಚಿಸಬೇಕು. ಒಟ್ಟಿನಲ್ಲಿ ಮಂಗಳಕರವಾಗುವಂತೆ ಈ ಚಿತ್ರವನ್ನು ರಚಿಸ ಬೇಕು. ಈ ಚಿತ್ರದಲ್ಲಿ ಕಲ್ಪಲತೆಯನ್ನೂ ರಚಿಸಬೇಕು.

೬೯. ಈ ಕಲ್ಪಲತೆಯ ಪ್ರಮಾಣವು ಎರಡು ಅಂಗುಲ ಇರಬೇಕು. ಈ ಕಲ್ಪಲತೆಯನ್ನು ಚಿತ್ರಿಸುವಾಗ ಅದರ ಸುತ್ತಲೂ ಎರಡು ಗೆರೆಯ ವೃತ್ತವಿರುವುದು ಪ್ರಶಸ್ತ. ಒಂದುವೇಳೆ ಶಂಖದ ತಿರುವಿನಂತೆ ಸುತ್ತುಗಳೂ ಇರಬಹುದು.

ಗ್ರಂಥೌಗ್ರಂಥೌ ಪುಷ್ಪಫಲೇ ನಾನಾವರ್ಣೇನ ಭಾವಯೇತ್ ।
ನಾನಾಪಶುಗಣೈರ್ಯುಕ್ತಂ ನಾನಾಪಕ್ಷಿಗಣೈರ್ಯುತಂ ॥ ೭೦ ॥

ವೈಷ್ಣವೇ ಗಾರುಡಂ ಶಸ್ತಂ ಶೈವೇ ಕೇಶವೃಷಂ ಲಿಖೇತ್ ।
ಶಾಕ್ತೇ ವ್ಯಾಘ್ರಂ ತಥೈಶೇ ಚ ಶರಭಂ ಹರಿಮಾಲಿಖೇತ್ ॥ ೭೧ ॥

ಶೋಭಾಂ ಪೀತೇನ ರಚಯೇದುಪಶೋಭಾಂ ಚ ಪೀತಕೈಃ ।
ಕೋಣೇಷು ಕೃಷ್ಣವರ್ಣೇನ ಬಹಿಃ ಸ್ಯಾದ್ವೇಷ್ಟನತ್ರಯಂ ॥ ೭೨ ॥

ಶುಕ್ಲಪೀತಾರುಣೈಃ ಕಾರ್ಯಂ ಮಂಡಲಂ ಸ್ಯಾನ್ಮನೋಹರಂ ।
ಸರ್ವತೋಭದ್ರಮಪರಂ ಸರ್ವಸಿದ್ಧಿಪ್ರದಾಯಕಂ ॥ ೭೩ ॥

---

೭೦. ಈ ಪ್ರತಿ ಕಲ್ಪಲತೆಯ ಗಿಣ್ಣುಗಳಲ್ಲೂ ಹೂವು ಹಣ್ಣು ಇವುಗಳು ಬಿಟ್ಟಿರುವಂತೆಯೂ ರಚಿಸಬೇಕು. ಅದರಲ್ಲಿ ಅನೇಕ ಪಶುಪಕ್ಷಿಸಮೂಹಗಳು ಆವರಿಸುವಂತೆಯೂ ನಾನಾಬಣ್ಣಗಳಿಂದ ಅಂದವಾಗಿ ರಚಿಸಬೇಕು.

೭೧. ವೈಷ್ಣವಯಾಗದಲ್ಲಿ ಗರುಡನ ಚಿತ್ರರಚನೆ ಪ್ರಶಸ್ತವಾದುದು. ಶಿವದೇವತಾಯಾಗದಲ್ಲಿ, ನಂದಿ ವೃಷಭ ಮುಂತಾದ ಪ್ರಾಣಿಗಳನ್ನು ಚಿತ್ರಿಸಬೇಕು. ಶಕ್ತಿದೇವತಾಯಾಗಸಂದರ್ಭದಲ್ಲಿ ಹುಲಿಯನ್ನೂ, ಹಾಗೆಯೇ ಈಶ್ವರದೇವತಾ ಯಾಗದಲ್ಲಿ ಸಿಂಹ ಮತ್ತು ಶರಭ ಈ ಪ್ರಾಣಿಗಳನ್ನೂ ಚಿತ್ರಿಸಬೇಕು.

೭೨. ಚೆನ್ನಾಗಿ ಶೋಭಿಸಬೇಕಾದುದನ್ನು ದಟ್ಟವಾದ ಹಳದಿಯ ಬಣ್ಣದಿಂದಲೂ ಸುಮಾರಾಗಿ ಕಾಣಬೇಕಾದುದನ್ನು ಸ್ವಲ್ಪ ಹಳದಿಯ ಬಣ್ಣವಾಗಿರುವ ರಂಗೋಲಿಯಿಂದಲೂ ಚಿತ್ರಿಸಬೇಕು ಹೊರಗಡೆ ಮೂಲೆಗಳಲ್ಲಿ ಮೂರುಸುತ್ತುಗಳನ್ನೂ ದಟ್ಟವಾದ ಹಳದಿಯಬಣ್ಣದಿಂದ ರಚಿಸಬೇಕು.

೭೩. ಈ ಪ್ರಕಾರ ಬಿಳುಪು, ಹಳದಿ, ಕೆಂಪು ಈ ಬಣ್ಣಗಳ ರಂಗೋಲಿಗಳಿಂದ ಮಂಡಲವು ಮನೋಹರವಾಗುವಂತೆ ಮಾಡಬೇಕು. ಮತ್ತೊಂದು ಬಗೆಯ ಸರ್ವತೋಭದ್ರಮಂಡಲವಿರುವುದು ಅದು ಸರ್ವಸಿದ್ಧಿಗಳನ್ನೂ ಉಂಟುಮಾಡುವುದು.

ಸರ್ವಜ್ಞಾನಮಯಂ ಶುದ್ಧಂ ಧರ್ಮಕಾಮಾರ್ಥದಾಯಕಂ ।
ಚತುರಸ್ರಂ ಸಮಂ ಕೃತ್ವಾ ದಿಗ್ಭ್ಯೋ ದ್ವಾದಶಧಾ ದ್ವಿಜಾಃ ॥ ೭೪ ॥

ಪಾತಯೇತ್ತತ್ರ ಸೂತ್ರಾಣಿ ಕೋಷ್ಠಾನಾಂ ದೃಶ್ಯತೆ ಶತಂ ।
ಚತುಶ್ಚತ್ವಾರಿಂಶದಾದ್ಯಂ ಪಶ್ಚಾತ್ಷಟ್ತ್ರಿಂಶದಂಬುಜಂ ॥ ೭೫ ॥

ಕೋಷ್ಠಂ ಪ್ರಕಲ್ಪಯೇತ್ಪೀಠಂ ಪಂಕ್ತ್ಯಾ ಚೈವಾತ್ರ ವೀಥಿಕಾಂ ।
ದ್ವಾರಶೋಭೇ ಯಥಾಪೂರ್ವಮುಪಶೋಭಂ ಚ ದೃಶ್ಯತೇ ॥ ೭೬ ॥

ಅವಶಿಷ್ಟೈಃ ಪದೈಃ ಕುರ್ಯಾತ್ಸದ್ಭಿಸ್ತಂತ್ರಾಣಿ ಮಂತ್ರವಿತ್ ।
ವಿದಧ್ಯಾತ್ಪೂರ್ವವಚ್ಛೇಷಮೇವಂ ವಾ ಮಂಡಲಂ ಭವೇತ್ ॥ ೭೭ ॥

---

೭೪. ಇದರ ರಚನೆಯಿಂದ ಪರಿಶುದ್ಧವಾದ ಸಕಲಜ್ಞಾನವೂ ಉಂಟಾಗಿ ಧರ್ಮ, ಅರ್ಥ ಮತ್ತು ಕಾಮ ಎಂಬ ಪುರುಷಾರ್ಥಗಳೂ ದೊರೆಯುವುವು. ಓ ಬ್ರಾಹ್ಮಣರೇ! ಕೇಳಿ; ಸಮವಾದ ಚತುರಸ್ರವನ್ನು ರಚಿಸಿ, ಅದರ ಎಲ್ಲಾ ದಿಕ್ಕುಗಳಲ್ಲಿಯೂ ಎದುರುಬದರಾಗಿ ಹನ್ನೆರಡು ಸೂತ್ರಗಳನ್ನು ನ್ಯಾಸಮಾಡಬೇಕು.

೭೫. ಹೀಗೆ ಮಾಡಿದರೆ ಆ ಚತುರಸ್ರಮಂಡಲದಲ್ಲಿ ನೂರ ನಲವತ್ತನಾಲ್ಕು ಸಣ್ಣಮನೆಗಳು (ಕೊಟಡಿಗಳು) ಬರುತ್ತವೆ. ಮೊದಲನೆಯ ಹೊರಸುತ್ತಿನಲ್ಲಿ ನಲವತ್ತನಾಲ್ಕು ಕೊಟಡಿಗಳು, ಅದರೊಳಗೆ ಎರಡನೆಯ ಸುತ್ತಿನಲ್ಲಿ ಮೂವತ್ತಾರು ಕೊಟಡಿಗಳು ಈ ರೀತಿ ಆಗುತ್ತವೆ. ಈ ಮೂವತ್ತಾರು ಮನೆಗಳಿರುವ ಸುತ್ತಿನ ಒಳಭಾಗದಲ್ಲಿ ಕಮಲವನ್ನು ರಚಿಸಬೇಕು.

೭೬. ಮಧ್ಯದ ಕೊಟಡಿಯನ್ನು ಪೀಠವಾಗಿ ಮಾಡಿಕೊಳ್ಳಬೇಕು. ಇಂತಹ ಕೋಷ್ಠ ಪಂಕ್ತಿಯಿಂದಲೇ ಒಂದು ಶ್ರೇಣಿಯನ್ನು ಮಾಡಿಕೊಳ್ಳಬೇಕು. ದ್ವಾರನಿರ್ಣಯವನ್ನು ಹಿಂದಿನಂತೆಯೇ ಎಂದು ತಿಳಿಯಬೇಕು. ಹೀಗೆ ರಚಿಸಿದರೆ ತುಂಬಾ ಶೋಭಾಯುಕ್ತವಾಗಿ ಕಾಣುತ್ತದೆ.

೭೭. ಮಂತ್ರಜ್ಞನಾದವನು ಸತ್ಪುರುಷರೊಡಗೂಡಿ ಉಳಿದ ಪದಗಳಲ್ಲಿ ತಂತ್ರದಲ್ಲಿ ಉಕ್ತವಾಗಿರುವಂತೆ ರಚನೆಮಾಡಬೇಕು. ಮಿಕ್ಕದ್ದನ್ನೆಲ್ಲಾ ಹಿಂದಿನಂತೆಯೇ ಮಾಡಬೇಕು. ಹೀಗೆ ಮಾಡಿದರೆ ಮಂಡಲದ ರಚನೆಯು ಸಮಗ್ರವಾಗುವುದು.

ಪೂರ್ವೋಕ್ತಮಂಡಲೇ ವಿದ್ವನ್ಧರಣೀಸದನಂ ಬಹಿಃ ।
ಮಧ್ಯೇ ಕಲ್ಪಲತಾ ಕಾರ್ಯಾ ಬಹಿಷ್ಕೋಣೇಷು ಸತ್ತಮಾಃ ॥ ೭೮ ॥

ಗುಲಾಲೀ ಸೂರ್ಯವರ್ಣೇನ ಮಹಾಮತ್ತ ಇತಿ ಸ್ಮೃತಃ ।
ಶೋಭೋಪಶೋಭೇ ಶೋಭಾಗ್ರಾಂ ಕುರ್ಯಾದ್ವೈ ಮಂಡಲಂ ಭವೇತ್॥೭೯॥

ಏತದ್ಧಿ ಸರ್ವತೋಭದ್ರಂ ರಾಶಿಯುಕ್ತಮತಃ ಪರಂ ।
ಶತಪತ್ರಂ ವಜ್ರನಾಭಂ ಬಿಂಬನಾಭಂ ಸಹಸ್ರಕಂ ॥ ೮೦ ॥

ಗಜಾಹ್ವಂ ಚ ಗಜಾಕಾರಂ ಮಧ್ಯೇ ತು ಸಮಲಂಕೃತಂ ।
ಚತುಶ್ಚಂದ್ರೇ ಚಂದ್ರಬಿಂಬಂ ಚಂದ್ರಕಾಂತಮುದಾಹೃತಂ ॥ ೮೧ ॥

ಬಹಿರ್ದ್ವಾದಶಭಿಃ ಸೂರ್ಯೈಃ ಸೂರ್ಯಕಾಂತಂ ಪ್ರಕೀರ್ತಿತಂ ।
ಶೇಖರೀ ತ್ರಿಪುಟಂ ಚೈವ ಶತಪತ್ರಂ ಚ ಪ್ರಕ್ರಮಾತ್ ॥ ೮೨ ॥

---

೭೮. ಓ ವಿದ್ವಾಂಸರಾದ ಸದ್ಬ್ರಾಹ್ಮಣರೇ! ಕೇಳಿ; ಹಿಂದೆ ಹೇಳಿದ ಮಂಡಲದ ಹೊರಭಾಗದಲ್ಲಿ ಧರಣೀಸದನವನ್ನೂ ಆ ಹೊರಗಿನ ಮೂಲೆಗಳಲ್ಲಿ ಕಲ್ಪಲತೆಯ ಶಾಖೆಗಳನ್ನೂ ರಚಿಸಬೇಕು.

೭೯. ಗುಲಾಲುಬಣ್ಣ, ಮತ್ತು ಸೂರ್ಯನಂತೆ ಶುಭ್ರವಾದ ಬಿಳಿಯಬಣ್ಣ, ಇವುಗಳನ್ನು ಬೆರಸಿದರೆ ಮಹಾಮತ್ತವೆಂಬ ಬಣ್ಣವಾಗುವುದು. ಇದರಿಂದ ಹೊರಭಾಗದಲ್ಲಿ ಶೋಭೋಪಶೋಭೆಗಳನ್ನು ರಚಿಸಬೇಕು. ಹೀಗೆ ಮಾಡಿದರೆ ಮಂಡಲವು ಸಂಪೂರ್ಣತೆಹೊಂದಿ ಸಿದ್ಧವಾಗುವುದು.

೮೦-೮೧. ಇಲ್ಲಿಯವರೆಗೆ ಹೇಳಿದ ಇದು ಸರ್ವತೋಭದ್ರಮಂಡಲವೆನಿಸುವುದು. ಹೀಗೆಯೇ ಶತಪತ್ರಮಂಡಲ, ವಜ್ರನಾಭಮಂಡಲ, ಬಿಂಬನಾಭ, ಸಹಸ್ರಕ, ಗಜಾಹ್ವ ಮುಂತಾದ ಹಲವು ಮಂಡಲಗಳಿವೆ. (ಗಜಾಕೃತಿಯಾಗಿರುವುದರಿಂದ ಇದಕ್ಕೆ ಈ ಗಜಾಹ್ವವೆಂದು ಹೆಸರು ಬಂದಿದೆ) ಈ ಮಂಡಲದ ಮಧ್ಯಭಾಗವು ಚೆನ್ನಾಗಿ ಅಲಂಕರಿಸಲ್ಪಟ್ಟಿರುವುದು ನಾಲ್ಕು ಚಂದ್ರರಿಂದ ಯುಕ್ತವಾದುದು ಚಂದ್ರಬಿಂಬಮಂಡಲ, ಚಂದ್ರಕಾಂತಮಂಡಲ ಎಂದು ಉಕ್ತವಾಗಿದೆ.

೮೨-೮೩. ಹೊರಗಡೆ ದ್ವಾದಶಾದಿತ್ಯಯುಕ್ತವಾದುದು ಸೂರ್ಯಕಾಂತ ಮಂಡಲವೆಂದು ಪ್ರಸಿದ್ಧವಾಗಿದೆ ಓ ಬ್ರಾಹ್ಮಣರೇ ! ಕೇಳಿ ; ಶೇಖರೀ, ತ್ರಿಪುಟ, ಶತಪತ್ರ,

**ಸಹಸ್ರಮೇವ ವಿಪ್ರೇಂದ್ರಾಃ ಪದ್ಮಾಂತೇ ಯಸ್ಯ ಸ್ವಸ್ತಿಕಂ ।**
**ಸ್ವಸ್ತಿಕಂ ತದ್ಭವೇದ್ವಿಪ್ರಾಃ ಪುಷ್ಕರಂ ವಜ್ರಸಂಪುತಃ ॥ ೮೩ ॥**

**ಚಿಂತಾಮಣಿಂ ಕುಂಕುಮಾಂಶಂ ಖಾತಂ ಚ ಹರಿವಲ್ಲಭಂ ।**
**ಪಂಚಸಿಂಹಾಸನಸ್ಥಂ ಚ ಪಂಚಸಿಂಹಾಸನಂ ವಿದುಃ ॥ ೮೪ ॥**

**ತದ್ವದ್ವೃಷಾಸನಂ ಜ್ಞೇಯಂ ಶಿಖಿರೂಪಂ ಶಿಖಿಧ್ವಜಂ ।**
**ನಾರಸಿಂಹಂ ಪದ್ಮಗರ್ಭಂ ಕಪೋತಾಖ್ಯಂ ತಥಾ ಭವೇತ್ ॥ ೮೫ ॥**

**ಗಾರುಡಂ ಮೇರುಗರ್ಭಂ ಚ ನೀಲಕಂಠಂ ನರಾಕೃತಿಂ ।**
**ಶತಕ್ರತುಂ ಗಜಾರೂಢಂ ಶ್ರೀಬಿಂಬಂ ನವಸೂತ್ರಕಂ ॥ ೮೬ ॥**

**ಅಷ್ಟಾಸ್ರಮಷ್ಟಕೋಣಾಢ್ಯಂ ಬಹಿಃ ಪದ್ಮವನಂ ಕೃತಂ ।**
**ಕಾಮದ್ವಯೇನ ಪುಟಿತಂ ಸಹಸ್ರಂ ಪದ್ಮವೇಷ್ಟಿತಂ ॥ ೮೭ ॥**

**ತ್ರ್ಯಸ್ರಗರ್ಭಂ ಪಂಕಜಂ ಚ ತ್ರ್ಯಸ್ರಂ ತತ್ಪರಿಕೀರ್ತಿತಂ ।**
**ಅಷ್ಟಪತ್ರಾಣಿ ವೈ ಮೇರುಂ ಸುಮೇರುಂ ತದ್ವಿಪರ್ಯಯೇ ॥ ೮೮ ॥**

---

ಸಹಸ್ರಪತ್ರ, ಪದ್ಮಸದೃಶರಾದ ಸ್ವಸ್ತಿಕಮಂಡಲ ಎಂಬಿವೂ, ಪುಷ್ಕರ ಮತ್ತು ವಜ್ರಸಮ್ಮತ ಎಂಬ ಸ್ವಸ್ತಿತಪ್ರಭೇದಗಳೂ ಸಹ ಪ್ರಸಿದ್ಧವಾಗಿದೆ.

೮೪-೮೬. ಇದಲ್ಲದೆ ಚಿಂತಾಮಣಿ, ಕುಂಕುಮಾಂಶ, ಖಾತ, ಹರಿವಲ್ಲಭ, ಇವುಗಳೊಡಗೂಡಿ ಸ್ವಸ್ತಿಕವು ಪಂಚಸಿಂಹಾಸನವೆನಿಸುವುದು. ವೃಷಾಸನ, ಶಿಖಿರೂಪ, ಶಿಖಿಧ್ವಜ, ನಾರಸಿಂಹ, ಪದ್ಮಗರ್ಭ, ಕಪೋತ, ಗಾರುಡ, ಮೇರುಗರ್ಭ, ನೀಲಕಂಠ, ನರಾಕೃತಿ, ಶತಕ್ರತು, ಗಜಾರೂಢ, ಶ್ರೀಬಿಂಬ, ನವಸೂತ್ರಕ, ಅಷ್ಟಕೋಣಯುಕ್ತವಾದ ಅಷ್ಟಾಸ್ರ, ಹೊರಗಡೆ ಪದ್ಮವನಯುಕ್ತವಾದ ಪದ್ಮವನ, ಎಂಬ ಮಂಡಲಗಳನ್ನೂ ಸಹ ಮಾಡುತ್ತಾರೆ.

೮೭. ಸುತ್ತಲೂ ಸಹಸ್ರದಳವುಳ್ಳ ಪದ್ಮಮಂಡಲವು ಇಹಪರ ಸುಖಗಳೆರಡರಿಂದಲೂ ಯುಕ್ತವಾಗಿರುವುದು.

೮೮. ತ್ರಿಕೋಣವು ಮಧ್ಯದಲ್ಲಿರುವಂತೆ ರಚಿಸಿದ ಪಂಕಜಾಕೃತಿಯ ಮಂಡಲವು ತ್ರ್ಯಸ್ರಮಂಡಲವೆಂದು ಉಕ್ತವಾಗಿದೆ. ಅದೇ ಅಷ್ಟಪತ್ರಗಳಿಂದ ಕೂಡಿದ್ದರೆ ಮೇರುವೆಂದೂ, ಅದಕ್ಕೆ ಸ್ವಲ್ಪ ವ್ಯತ್ಯಾಸವಿದ್ದರೆ ಸುಮೇರುಮಂಡಲವೆಂದೂ ಹೆಸರು.

ಮಹಾಮಹಾಮೇರುಪೃಷ್ಠಂ ಶತತ್ರಯಚ್ಛದೈರ್ಯುತಂ ।
ಛಿದ್ರವ್ಯಕ್ತಿಂ ಪ್ರವಕ್ಷ್ಯಾಮಿ ಯಥಾಮಾನೇನ ಭೋ ದ್ವಿಜಾಃ ॥ ೮೯ ॥

ವಸುದಿಗ್ವಿಂಶಕೈಶ್ಚೈವ ಚತ್ವಾರಿಂಶಚ್ಛತಾರ್ಧಕಂ ।
ದಂಡಿಶ್ರವಣಸಂಪನ್ನಮಾಕಾಶಂ ವಸುಸಮ್ಮಿತಂ ॥ ೯೦ ॥

ಶತವಿಂಶಾಧಿಕಂ ಚೈವ ದಲಾನಿ ತದನಂತರಂ ।
ಶುಕ್ಲರಕ್ತಂ ಚಾಷ್ಟವರ್ಣೈರ್ಬಿಂಬೋಷ್ಠಂ ಪರಿಪೂರಯೇತ್ ॥ ೯೧ ॥

ಶುಕ್ಲೇನ ಪಂಕಜಂ ತತ್ರ ಪಶ್ಚಾತ್ಕುರ್ಯಾತ್ರಿವೇಷ್ಟನಂ ।
ಶತಪತ್ರಮಥೋ ವಕ್ಷ್ಯೇ ಬಿಂಬರಾಜೇತಿ ಕಥ್ಯತೆ ॥ ೯೨ ॥

ಸ್ಥಂಡಿಲೇ ಕುಶಹಸ್ತೇ ಚ ಪೂರ್ವವದ್ವೇಷ್ಟಯೇತ್ಕ್ರಮಾತ್ ।
ವಸು ಪಂಚಕಲಾ ಪಂಚವಿಂಶಕಂ ತನ್ನಪತ್ರಕಾತ್ ॥ ೯೩ ॥

---

೮೯. ಮುನ್ನೂರು ಹೊರದಳಗಳುಳ್ಳದ್ದಾಗಿ ರಚಿತವಾದ ಮಂಡಲವನ್ನು ಮಹಾಮೇರುಪೃಷ್ಠವೆಂದು ತಿಳಿಯಬೇಕು. ಓ ಬ್ರಾಹ್ಮಣರೇ! ಈಗ ಛಿದ್ರಮಂಡಲಗಳನ್ನು ಅವುಗಳ ಪ್ರಮಾಣಾನುಸಾರವಾಗಿ ಹೇಳುತ್ತೇನೆ ಕೇಳಿ;

೯೦-೯೧. ಪದ್ಮಮಂಡಲಗಳಲ್ಲಿ ನಾಲ್ಕುದಳದಪದ್ಮ, ಹತ್ತುದಳದಪದ್ಮ, ಇಪ್ಪತ್ತುದಳದಪದ್ಮ, ನಲವತ್ತುದಳದಪದ್ಮ, ಐವತ್ತುದಳದಪದ್ಮ, ದಂಡಿಶ್ರವಣ ಎಂದರೆ ಅರವತ್ತುದಳದಪದ್ಮ, ನೂರಿಪ್ಪತ್ತುದಳದಪದ್ಮ ಹೀಗೆ ಅನೇಕ ಭೇದಗಳುಂಟು. ಇವುಗಳನ್ನು ಕೆಂಪು, ಬಿಳುಪು, ತೊಂಡೆಹಣ್ಣಿನಬಣ್ಣ ಮುಂತಾದ ಎಂಟುಬಣ್ಣಗಳಿಂದ ರಚಿಸಬೇಕು.

೯೨. ಅನಂತರ ಚಿತ್ರಿತವಾದ ಆ ಕಮಲದಸುತ್ತಲೂ ಬಿಳಿಯಬಣ್ಣದ ಮೂರುಗೆರೆಗಳನ್ನು ಹಾಕಬೇಕು. ಇನ್ನು ಮುಂದೆ ಶತಪತ್ರಮಂಡಲದ ಲಕ್ಷಣವನ್ನು ಹೇಳುತ್ತೇನೆ. ಇದನ್ನು ಬಿಂಬರಾಜ ಎಂಬದಾಗಿಯೂ ಕರೆಯುತ್ತಾರೆ.

೯೩-೯೪. ನೆಲದಮೇಲೆ ದರ್ಭೆಯಿಂದ ಒಂದು ಮುಷ್ಟಿಹಸ್ತ ಪ್ರಮಾಣದ ವೃತ್ತಮಾಡಿ ಹಿಂದಿನಂತೆ ಕ್ರಮವಾಗಿ ದಳಾದಿಗಳೆಲ್ಲವನ್ನೂ ರಚಿಸಿಕೊಳ್ಳಬೇಕು. ಪ್ರತಿಸುತ್ತುಗಳಲ್ಲಿ ಕ್ರಮವಾಗಿ ಎಂಟುದಳ, ಹದಿನಾರುದಳ, ಇಪ್ಪತ್ತೈದುದಳ, ನಲವತ್ತುದಳ, ನೂರೆಂಟುದಳ ಈ ರೀತಿ ಪತ್ರಗಳಿರುವಂತೆ ರಚಿಸಿ, ಅದನ್ನು ಬಿಳುಪು,

**ಚತ್ವಾರಿಂಶತ್ತತಃ ಪಶ್ಚಾದಷ್ಟೋತ್ತರಶತಂ ಭವೇತ್ ।**
**ಶುಕ್ಲಂ ಶೋಣಂ ತಥಾ ಪೀತಂ ಶ್ಯಾಮಧೂಮ್ರೈರನಂತರಂ ॥ ೯೪ ॥**

**ವಿಲೋಮೇ ದಲಸಂಧೀನಿ ಶಾಕ್ತೇ ಶೈವೇ ತು ಷಟ್ಪುರಂ ।**
**ವೇಷ್ಟಯೇತ್ಪಂಚವರ್ಣೇನ ಶುಕ್ಲಾದೀನಿ ಸಮಂತತಃ ॥ ೯೫ ॥**

**ರಕ್ತಪೀತೈಃ ಸಮಾಸ್ತೀರ್ಯ ಕೋಣಾಂಛುಕ್ಲೇನ ಪೂರಯೇತ್ ।**
**ಸ್ಥಂಡಿಲೇ ತಾರಹಸ್ತೇನ ಅಷ್ಟಹಸ್ತಂ ಪ್ರಕಲ್ಪಯೇತ್ ॥ ೯೬ ॥**

**ಮಂಡಲಂ ಬಿಂಬರಾಜಸ್ಯ ಅಷ್ಟೋತ್ತರದಲೈರ್ವೃತಂ ।**
**ವಸುಪಂಚಶಕ್ತಿವಿಂಶಚ್ಚತ್ವಾರಿಂಶಚ್ಛತಾರ್ಧಕಂ ॥ ೯೭ ॥**

**ತ್ರ್ಯಕ್ಷತು ಪತ್ರಂ ಸುವೃತ್ತಂ ಸ್ಯಾದ್ವೃತ್ತಯುಕ್ತಂ ಸಬಿಲ್ವಕಂ ।**
**ಚತ್ವಾರಿಂಶದ್ದ್ವಯಂ ಚೈವ ಗಗನೇನ ಸಮಾವೃತಂ ॥ ೯೮ ॥**

---

ಕೆಂಪು, ಹಳದಿ, ಕಪ್ಪು, ಧೂಮ್ರ, ಈ ಐದುಬಣ್ಣಗಳಿಂದಲೂ, ಎಸಳುಗಳು ಸಂಧಿಸುವ ಕಡೆ ಇದಕ್ಕೆ ಸ್ವಲ್ಪ ವ್ಯತ್ಯಾಸವಾದ ಬಣ್ಣದಿಂದಲೂ ರಚಿಸಬೇಕು.

೯೫. ಶಕ್ತಿದೇವತಾಪ್ರೀತ್ಯರ್ಥವಾದ ಮತ್ತು ಶಿವದೇವತಾಪ್ರೀತ್ಯರ್ಥವಾದ ಯಾಗಗಳಲ್ಲಿ ಷಡಸ್ರವನ್ನು ರಚಿಸಿ, ಸುತ್ತಲೂ ಬಿಳಿಯದು ಮುಂತಾದ ಐದು ಬಣ್ಣಗಳಿಂದ ವೃತ್ತಗಳನ್ನು ರಚಿಸಬೇಕು.

೯೬. ಮೂಲೆಗಳಿಗೆ ಕೆಂಪು ಮತ್ತು ಹಳದಿಬಣ್ಣಗಳನ್ನು ತುಂಬಿ, ಮಿಕ್ಕ ಭಾಗಕ್ಕೆಲ್ಲಾ ಬಿಳಿಯಬಣ್ಣವನ್ನು ಹಾಕಬೇಕು. ನೆಲದಮೇಲೆ ತಾರಹಸ್ತ ಎಂದರೆ ಪ್ರಣವಾತ್ಮಕವಾದ ಚಿನ್ಮುದ್ರಾಹಸ್ತದಿಂದ ಎಂಟುಹಸ್ತ ಚತುರಸ್ರಮಾಡಿಕೊಂಡು ಅದರಲ್ಲಿ ರಚಿಸಬೇಕು.

೯೭. ಬಿಂಬರಾಜಮಂಡಲವು ನೂರೆಂಟುದಳಗಳಿಂದ ಯುಕ್ತವಾಗಿರುವುದೂ ಉಂಟು. ಇಂಥ ಮಂಡಲಗಳನ್ನು ರಚಿಸುವಾಗ ಮೊದಲು ಐದುದಳ, ಎಂಟುದಳ ಬಳಿಕ ಒಂಭತ್ತುದಳ, ಆಮೇಲೆ ಇಪ್ಪತ್ತುದಳ, ನಲವತ್ತುದಳ, ಐವತ್ತುದಳ.

೯೮. ಈ ಪ್ರಕಾರ ಹೆಚ್ಚಿಸಿದ ದಳಗಳುಳ್ಳದಾಗಿ ದಳದ ಹೊರತುದಿಯು ವೃತ್ತರೇಖೆಗೆ ತಗಲಿರತಕ್ಕದ್ದೂ, ಬಿಲ್ವದಳದ ಆಕಾರವಾದ ಎಂಭತ್ತುದಳವುಳ್ಳದ್ದೂ, ಅದರ ಹೊರಸುತ್ತಿನಲ್ಲಿ ಯಾವ ದಳವೂ ಇಲ್ಲದೆ ಗಗನಾವೃತವಾದುದೂ ಆಗಿರಬೇಕು.

**ಶತಂ ವಿಂಶಾಧಿಕಶತಂ ದ್ವಿಶತಂ ವಿಂಶಮುತ್ತಮಂ ।**
**ವೇಷ್ಟನಾಂಸೇ ಚ ತ್ರಿಶತಂ ಪ್ರಕ್ರಮಾದಥ ವರ್ಧಯೇತ್ ॥ ೯೯ ॥**

**ಲವಲ್ಯಾಭ್ಯಮಥೋ ವಕ್ಷ್ಯೇ ಸಾರ್ಧಹಸ್ತಪ್ರಮಾಣತಃ ।**
**ನವವಿಂಶಂ ಕಲ್ಪಯೇತ್ತು ಚತುಃಸೂತ್ರಾಣಿ ಪಾತಯೇತ್ ॥ ೧೦೦ ॥**

**ದಕ್ಷಿಣೋತ್ತರತಶ್ಚೈವ ತದ್ವದೇವ ವಿಜಾನೀಹಿ ।**
**ಪೀತೇನ ರೇತಃಪುಟಿಕಾ ಮಧ್ಯೇ ಶುಕ್ಲಂ ವಿಭಾವ್ಯತೆ ॥ ೧೦೧ ॥**

**ಗ್ರಹಪಕ್ಷೇsನ್ನ ಪೀತೇನ ಮಧ್ಯೇ ರಕ್ತಂ ಪ್ರತಿಷ್ಠಿತಂ ।**
**ಸರ್ವಾರೇಖಾಶ್ಚ ಶುಕ್ಲೇನ ಪೌಷ್ಟಿಕೇ ಪೀತಮಾದಿಶೇತ್ ॥ ೧೦೨ ॥**

---

೯೯. ಅದರ ಸುತ್ತಲೂ ಒಂದೂವರೆಮೊಳ ಪ್ರಮಾಣದ ಆವರಣಖಂಡವಿರಬೇಕು. ಅದರಲ್ಲಿ ನೂರು, ನೂರಿಪ್ಪತ್ತು, ಇನ್ನೂರಿಪ್ಪತ್ತು, ಮುನ್ನೂರು ಈ ಕ್ರಮದಲ್ಲಿ ದಳಗಳು ಹೆಚ್ಚುವಂತೆ ರಚಿಸಬೇಕು.

೧೦೦-೧೦೧. ಇನ್ನು ಲವಲೀಪುಷ್ಪಸದೃಶವಾದ ಒಂದೂವರೆಹಸ್ತ ಚತುರಸ್ರವುಳ್ಳ ಮತ್ತೊಂದು ಮಂಡಲವನ್ನು ಹೇಳುತ್ತೇನೆ. ಪ್ರತಿಯೊಂದು ಬಾಹುವನ್ನೂ ಇಪ್ಪತ್ತೊಂಭತ್ತು ಭಾಗಮಾಡಿ ಪೂರ್ವಪಶ್ಚಿಮವಾಗಿ ನಾಲ್ಕುಸೂತ್ರಗಳನ್ನು ಜೋಡಿಸಬೇಕು. ದಕ್ಷಿಣೋತ್ತರವಾಗಿಯೂ ಹೀಗೆಯೇ ಮಾಡಬೇಕು. ಹೊರಗಿನ ಆವರಣವು ಹಳದಿಯಬಣ್ಣದಿಂದ ಕೂಡಿರಬೇಕು. ಮಧ್ಯದಲ್ಲಿ ಶುಕ್ಲವರ್ಣವನ್ನು ಹಾಕಿ ಅದನ್ನು 'ರೇತಃ ಪುಟಿಕಾ' ಯೆಂದು ಭಾವಿಸಬೇಕು.

೧೦೨. ಗ್ರಹೋಚ್ಚಾಟನಾರ್ಥವಾದ ಚಿಕಿತ್ಸಾಪಕ್ಷದಲ್ಲಿ, ಸುತ್ತಲೂ ಹಳದಿಯ ಬಣ್ಣದ ಅನ್ನವನ್ನೂ ಮಧ್ಯೆ ಕೆಂಪುಬಣ್ಣದ ಅನ್ನವನ್ನೂ ಹಾಕಬೇಕು. ಸಾಮಾನ್ಯವಾಗಿ ಎಲ್ಲಾ ರೇಖೆಗಳನ್ನೂ ಶುಕ್ಲವರ್ಣದಿಂದ ರಚಿಸಬೇಕು. ಪೌಷ್ಟಿಕಯಾಗಕರ್ಮದಲ್ಲಿ ಮಾತ್ರ ಹಳದಿಯಬಣ್ಣದಿಂದ ಚಿತ್ರಿಸಬೇಕೆಂದು ವಿಧಿಯಿದೆ.

ಸಶಾಂತಿಕೇ ನ ಯೋಕ್ತವ್ಯಂ ಕಾಮ್ಯೇ ರಕ್ತಂ ವಿನಿರ್ದಿಶೇತ್ ।
ಮಧ್ಯೇ ತು ಪಂಕಜಂ ರಕ್ತಮಗ್ನೌ ಸೋಮಸ್ಯ ಪಂಕಜಂ ॥ ೧೦೩ ॥

ರಕ್ತವರ್ಣೇನ ಭೌಮಸ್ಯ ಪೀತವರ್ಣಂ ಬುಧಸ್ಯ ಚ ।
ಐಶಾನ್ಯಾಂ ಚೋತ್ತರೇ ಭಾಗೇ ಗುರೋಃ ಪೀತಂ ತು ಪಂಕಜಂ ॥ ೧೦೪ ॥

ಪೂರ್ವಸ್ಯಾಂ ದಿಶಿ ಶುಕ್ರಸ್ಯ ಪಂಕಜಂ ಶುಭ್ರವರ್ಣಕಂ ।
ವಾರುಣೇ ತು ಶನೇಃ ಕೃಷ್ಣಂ ನೈಋತ್ಯಾಂ ಧೂಮ್ರವರ್ಣಕಂ ॥ ೧೦೫ ॥

ರಾಹೋಃ ಪ್ರಕಲ್ಪಯೇತ್ತಚ್ಚ ಕೇತೋರಪಿ ನಿಯೋಜಯೇತ್ ।
ವಾಯವ್ಯಾಂ ದಿಶಿ ಸಂಯೋಜ್ಯ ವಿಲಿಖೇಚ್ಚಿತ್ರಪಂಕಜಂ ॥ ೧೦೬ ॥

ವಿಲೋಮೇ ದಲಸಂಧೀನಿ ಪೂರಯೇತ್ಸುವಿಚಕ್ಷಣಃ ।
ಬಹಿಃ ಪಂಚರಜ್ಯೈಃ ಕಾರ್ಯಂ ನವದುರ್ಗವಿಭೂಷಿತಂ ॥ ೧೦೭ ॥

---

೧೦೩. ಶಾಂತಿಕರ್ಮದ ಸಂದರ್ಭದಲ್ಲಿ ಹಳದಿಯಬಣ್ಣದಿಂದ ರಚಿಸಬಾರದು. ಕಾಮ್ಯಕರ್ಮಗಳಲ್ಲಿ ಕೆಂಪುಬಣ್ಣವನ್ನೇ ಹಾಕಬೇಕು ಎಂದು ಹೇಳಿದೆ. ಮಧ್ಯದಲ್ಲಿ ಸೂರ್ಯಗ್ರಹದ ಪೀಠದ ಕಮಲವನ್ನು, ಕೆಂಪು ಬಣ್ಣದಿಂದಲೂ ಆಗ್ನೇಯದಿಕ್ಕಿನಲ್ಲಿ ಚಂದ್ರಗ್ರಹದಪೀಠದ ಕಮಲವನ್ನು ಬಣ್ಣದಿಂದಲೂ ಬಿಳಿಯ ಚಿತ್ರಿಸಬೇಕು.

೧೦೪-೧೦೬. ದಕ್ಷಿಣದಲ್ಲಿ ಅಂಗಾರಕನ ಪೀಠವಾದ ಕಮಲವನ್ನು ಕೆಂಪು ವರ್ಣದಿಂದಲೂ, ಈಶಾನ್ಯದಲ್ಲಿ ಬುಧನಪೀಠವಾದ ಕಮಲವನ್ನು ಪೀತವರ್ಣ ವಾಗಿಯೂ, ಉತ್ತರದಲ್ಲಿ ಬೃಹಸ್ಪತಿಯ ಪೀಠವಾದ ಕಮಲವನ್ನು ಸುವರ್ಣದ ಬಣ್ಣ ವಾಗಿಯೂ, ಪೂರ್ವದಿಕ್ಕಿನಲ್ಲಿ ಶುಕ್ರನ ಪೀಠವಾದ ಪದ್ಮವನ್ನು ಶುಕ್ಲವರ್ಣವಾಗಿಯೂ ಪಶ್ಚಿಮದಿಕ್ಕಿನಲ್ಲಿ ಶನಿಯ ಪೀಠವಾದ ನೈದಿಲೆಯನ್ನು ನೀಲವರ್ಣವಾಗಿಯೂ, ನೈಋತ್ಯದಿಕ್ಕಿನಲ್ಲಿ ರಾಹುವಿನ ಪೀಠವಾದ ಕಮಲವನ್ನು ಧೂಮ್ರವರ್ಣವಾಗಿಯೂ, ವಾಯವ್ಯದಿಕ್ಕಿನಲ್ಲಿ ಕೇತುವಿನ ಪೀಠವಾದ ಕಮಲವನ್ನು ಚಿತ್ರವರ್ಣವಾಗಿಯೂ ಬರೆಯಬೇಕು.

೧೦೭. ವಿಚಕ್ಷಣನಾದವನು ಎಸಳುಗಳ ಸಂಧಿಗಳು ಸೇರುವ ಸ್ಥಳವನ್ನು ವಿಲೋಮವಾದ ಬಣ್ಣದಿಂದ ಅನುರೂಪವಾಗುವಂತೆ ಚಿತ್ರಿಸಬೇಕು. ಇವುಗಳ ಹೊರಗೆ ಐದುಬಗೆಯ ಬಣ್ಣದ ರಂಗೋಲಿಗಳಿಂದ ಒಂಭತ್ತು ಪ್ರಾಕಾರಗಳನ್ನು ಅಲಂಕಾರವಾಗಿರುವಂತೆ ನಿರ್ಮಿಸಬೇಕು.

**ಪೂರ್ವಪಶ್ಚಿಮದಿಗ್ಭಾಗೇ ಶುಕ್ಲಂ ಸ್ಯಾದ್ದ್ವಾರದೇಶತಃ ।**
**ದಕ್ಷಿಣೋತ್ತರದಿಗ್ಭಾಗೇ ರಕ್ತಮೇವ ಪ್ರಶಸ್ಯತೇ ॥ ೧೦೮ ॥**

**ತ್ರಿಸ್ಥಾನೇ ಸಮಮಧ್ಯೇ ಚ ದ್ವಾದಶಾಂಗುಲಪ್ರಕ್ರಮಾತ್ ।**
**ದ್ವಿಹಸ್ತಾದಾವಂಗುಲೇನ ವರ್ಧಯೇತ್ತದ್ವಿಭಾಗತಃ ॥ ೧೦೯ ॥**

**ಪಂಚಾಬ್ಜಮಂಡಲಂ ಜ್ಞೇಯಂ ಚತುಃ ಸ್ವಸ್ತಿಕಭೂಷಿತಂ ॥ ೧೧೦ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ ದ್ವಿತೀಯೋऽಧ್ಯಾಯಃ.**



---

೧೦೮. ಪೂರ್ವಪಶ್ಚಿಮದಿಕ್ಕುಗಳ ದ್ವಾರದಹತ್ತಿರ ಬಿಳಿಯಬಣ್ಣವಾಗಿಯೂ, ದಕ್ಷಿಣೋತ್ತರಭಾಗಗಳಲ್ಲಿ ಕೆಂಪುಬಣ್ಣವಾಗಿಯೂ ಇರುವುದು ಶ್ರೇಷ್ಠವೆನಿಸಿದೆ.

೧೦೯. ಎರಡು ಪಾರ್ಶ್ವಗಳ ಆದಿ, ಮಧ್ಯ, ಅಂತ್ಯಗಳೆಂಬ ಮೂರುಸ್ಥಾನಗಳಲ್ಲಿಯೂ, ಹನ್ನೆರಡುಅಂಗುಲ ಸಮದೂರವನ್ನು ಬಿಟ್ಟು, ಮಧ್ಯಭಾಗದಲ್ಲಿ ಎರಡು ಹಸ್ತಕ್ಕೆ ಒಂದಂಗುಲಪ್ರಕಾರ ಅದರದರ ವಿಭಾಗಕ್ಕೆ ತಕ್ಕಂತೆ ಹೆಚ್ಚಿಸಬೇಕು.

೧೧೦. ಇದು ನಾಲ್ಕುಸ್ವಸ್ತಿಕಗಳಿಂದ ಅಲಂಕೃತವಾದ ಪಂಚಾಬ್ಜಮಂಡಲವೆಂದು ಉಕ್ತವಾಗಿದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೆಯ ಭಾಗದಲ್ಲಿ ಎರಡನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ದ್ವಿತೀಯಭಾಗೇ

## ತೃತೀಯೋಽಧ್ಯಾಯಃ

॥ ಸೂತ ಉವಾಚ ॥

ನ ಕುರ್ಯಾದ್ದಕ್ಷಿಣಾಹೀನಂ ಮಾನಹೀನಂ ನ ಕಾರಯೇತ್ ।
ಅಮಾನೇನ ಹತೋ ಯಜ್ಞಸ್ತಸ್ಮಾನ್ಮಾನಂ ಪ್ರಶಸ್ಯತೇ ॥ ೧ ॥

ಯಸ್ಯ ಯಜ್ಞಸ್ಯ ಯನ್ಮಾನಂ ತತ್ತು ತೇನೈವ ಯೋಜಯೇತ್ ।
ಅಮಾನೇನ ಕೃತೇ ಸರ್ವೇ ವ್ರಜೇಯುರ್ನರಕಂ ಪುನಃ ॥ ೨ ॥

---

## ಮೂರನೆಯ ಅಧ್ಯಾಯ

೧. ಸೂತರು ಪುನಃ ಮುಂದುವರಿಸಿ ಹೇಳುತ್ತಾರೆ—ಅಳತೆಯಿಲ್ಲದೆ ಮಂಡಲವನ್ನು ಮಾಡಬಾರದು. ಹಾಗೆಯೇ ದಕ್ಷಿಣಾಹೀನವಾಗಿ ದಾನಮಾಡಬಾರದು. ಯಜ್ಞಾದಿಕರ್ಮಗಳನ್ನೂ ದಕ್ಷಿಣಾಹೀನವಾಗಿ ಮಾಡಬಾರದು. ಪ್ರಮಾಣಾನುಸಾರವಾಗಿಲ್ಲದ ಕುಂಡ, ಕ್ರಮಬದ್ಧತೆಇಲ್ಲದೆ ರಚಿತವಾದ ಮಂಡಲ, ಸಲಕ್ಷಣವಲ್ಲದ ವೇದಿ, ಯಥೋಕ್ತವಾದ ದಕ್ಷಿಣಾದಿಗಳಿಲ್ಲದಿರುವಿಕೆ, ಈ ಪ್ರಕಾರಗಳಿಂದ ಮಾಡಿದ ಯಜ್ಞಕ್ಕೆ ವಿಘಾತಿಯುಂಟಾಗುವುದು. ಆದುದರಿಂದ ಇವು ಉಕ್ತವಾದ ಅಳತೆಯಿಂದ ಕೂಡಿದ್ದರೆ ಪ್ರಶಸ್ತ.

೨–೩. ಯಾವ ಯಜ್ಞಕ್ಕೆ ಯಾವ ಅಳತೆಯ ಕುಂಡ ಮಂಡಲಗಳೆಂದು ಉಕ್ತವಾಗಿವೆಯೋ, ಆ ಯಜ್ಞಕ್ಕೆ ಆ ಅಳತೆಯದನ್ನೇ ಯೋಜನೆಮಾಡಬೇಕು. ಯಜ್ಞಮಾಡುತ್ತಿರುವಾಗ ಆ ಸ್ಥಳಕ್ಕೆ ಪಾಪಿಯೂ, ಜಾತಿಭ್ರಷ್ಟನೂ ಪ್ರವೇಶಿಸಿದರೆ ಆ ಯಜ್ಞದ

**ಆಚಾರ್ಯಹೋತೃಬ್ರಹ್ಮಾಣೋ ವಿಧಿಜ್ಞಃ ಸಹಕರ್ತೃಕಃ ।**
**ಯಸ್ಯ ಯಜ್ಞೇ ಪಾಪಕಶ್ಚ ಜಾತಿಹೀನಃ ಪ್ರವೇಶಯೇತ್ ॥ ೩ ॥**

**ಅಶೀತಿಭಿರ್ವರಾಟೈಶ್ಚ ಪಣ ಇತ್ಯಭಿಧೀಯತೇ ।**
**ತೈಸ್ತು ಷೋಡಶಭಿರ್ಜ್ಞೇಯಂ ಪುರಾಣಂ ಸಪ್ತಭಿಸ್ತು ತೈಃ ॥ ೪ ॥**

**ರಾಜತೈಶ್ಚಾಷ್ಟಭಿಃಸ್ವರ್ಣಂ ಯಜ್ಞಾದೌ ದಕ್ಷಿಣಾ ಸ್ಮೃತಾ ।**
**ಮಹಾರಾಮೇ ದ್ವಿಸೌವರ್ಣಂ ಕೂಪೇ ಸ್ವರ್ಣಾರ್ಧಮೇವ ಚ ॥ ೫ ॥**

**ತುಲಸ್ಯಾಮಲಕೀಯಾಗೇ ಸುವರ್ಣೈಕಂ ಪ್ರಚಕ್ಷತೇ ।**
**ಸಕೃಲ್ಲೋಕೇ ಚ ಸೌವರ್ಣಂ ಲಕ್ಷೇ ಸ್ವರ್ಣಚತುಷ್ಟಯಂ ॥ ೬ ॥**

**ನವಮೇ ಕೋಟಿಹೋಮೇ ಚ ದೇವತಾನಾಂ ಚ ಸ್ಥಾಪನೇ ।**
**ಪ್ರಾಸಾದಸ್ಯ ಸಮುತ್ಸರ್ಗೇ ಅಷ್ಟಾದಶಸುವರ್ಣಕಾಃ ॥ ೭ ॥**

---

ಆಚಾರ್ಯ, ಹೋತೃ, ಬ್ರಹ್ಮ, ವಿಧಿಜ್ಞ ಯಜ್ಞಕರ್ತೃ ಇವರುಗಳೆಲ್ಲರಿಗೂ ನರಕಪ್ರಾಪ್ತಿಯಾಗುವುದು.

೪. ಎಂಭತ್ತು ಕವಡೆಗಳಿಗೆ ಒಂದು ಪಣ ಎನಿಸಿಕೊಳ್ಳುವುದು. ಇಂತಹ ಇಪ್ಪತ್ತಮೂರುಪಣಕ್ಕೆ ಒಂದು ಪುರಾಣ (ನಾಣ್ಯಭೇದ) ವೆಂದು ತಿಳಿಯಬೇಕು.

೫-೬. ಯಜ್ಞಾದಿಗಳಲ್ಲಿ ಸ್ವರ್ಣದಕ್ಷಿಣೆಯನ್ನೇ ಕೊಡಬೇಕೆಂದು ಹೇಳಿದೆ. ಕೊನೆಗೆ ಎಂಟು ಬೆಳ್ಳಿಯ ನಾಣ್ಯಗಳಾದರೂ ದಕ್ಷಿಣೆ ಕೊಡಬೇಕು ಎಂದು ಕ್ಲುಪ್ತವಾಗಿದೆ. ದೊಡ್ಡದಾದ ಉದ್ಯಾನಪ್ರತಿಷ್ಠಾಕಾರ್ಯದಲ್ಲಿ ಎರಡು ಸುವರ್ಣನಾಣ್ಯಗಳನ್ನೂ, ಕೂಪಪ್ರತಿಷ್ಠೆಯಲ್ಲಿ ಅರ್ಧ ಸುವರ್ಣನಾಣ್ಯವನ್ನೂ ದಕ್ಷಿಣೆಕೊಡಬೇಕು. ತುಲಸೀಪ್ರತಿಷ್ಠೆ ನೆಲ್ಲೀಗಿಡ ಪ್ರತಿಷ್ಠೆಗಳಲ್ಲಿ ಒಂದುಸುವರ್ಣ ನಾಣ್ಯದಕ್ಷಿಣೆಯೆಂದು ಹೇಳಲ್ಪಟ್ಟಿದೆ. ಲೋಕದಲ್ಲಿ ಒಂದುಸಣ್ಣ ಯಾಗಪ್ರಕರಣದಲ್ಲಿಯೂ, ಸುವರ್ಣದಕ್ಷಿಣೆಯನ್ನೇ ಕೊಡಬೇಕೆಂದು ಹೇಳಿದೆ. ಲಕ್ಷಹೋಮದಲ್ಲಿ ನಾಲ್ಕುಸುವರ್ಣನಾಣ್ಯಗಳನ್ನು ದಕ್ಷಿಣೆಕೊಡಬೇಕು.

೭. ಒಂಭತ್ತನೆಯದಾದ ಕೋಟಿಹೋಮದಲ್ಲಿಯೂ, ದೇವತಾಪ್ರತಿಷ್ಠಾಪನದಲ್ಲಿಯೂ, ಪ್ರಾಸಾದಪ್ರತಿಷ್ಠಾಕಾರ್ಯದಲ್ಲಿಯೂ ಹದಿನೆಂಟು ಸುವರ್ಣನಾಣ್ಯಗಳ ದಕ್ಷಿಣೆ ಕೊಡಬೇಕು

ತಡಾಗೇ ಪುಷ್ಕರಿಣ್ಯಾಂ ಚ ಅರ್ಧಾರ್ಧಂ ಪರಿಕೀರ್ತಿತಂ ।
ಮಹಾದಾನೇ ಚ ದೀಕ್ಷಾಯಾಂ ವೃಷೋತ್ಸರ್ಗೇ ಚ ಸತ್ತಮಾಃ ॥ ೮ ॥

ಜೀವತಶ್ಚ ವೃಷೋತ್ಸರ್ಗೇ ಗಯಾಶ್ರಾದ್ಧೇ ತಥೈವ ಚ ।
ಸ್ವವಿತ್ತಸಾಧ್ಯಮಾನೇನ ಯಜ್ಞಂ ಕುರ್ಯಾತ್ಕಲೌಯುಗೇ ॥ ೯ ॥

ದಂಪತ್ಯೋಶ್ಚ ವೃಷೋತ್ಸರ್ಗೇ ಮಾನಮೇಕಮುದಾಹೃತಂ ।
ಬಹುಭಿಃ ಕ್ರಿಯಮಾಣೋಽಪಿ ಯಾಗ ಏಕೋ ಮಹೋತ್ತಮೈಃ ॥ ೧೦ ॥

ರಾಜ್ಞಃ ಕರಗ್ರಹೇ ಚೈವ ದೀಕ್ಷಾಯಾಂ ದಾನಕರ್ಮಣಿ ।
ಅಶೀತಿರತ್ತಿಕಂ ಸ್ವರ್ಣಂ ಶ್ರವಣೇ ಭಾರತಸ್ಯ ಚ ॥ ೧೧ ॥

---

೮. ತಟಾಕಪ್ರತಿಷ್ಠೆ, ಪುಷ್ಕರಿಣೀಪ್ರತಿಷ್ಠೆ, ಇವುಗಳಲ್ಲಿ ಹಿಂದೆ ಹೇಳಿದ ಹದಿನೆಂಟರ ಅರ್ಧವೆಂದರೆ ಒಂಬತ್ತು ಸುವರ್ಣನಾಣ್ಯ, ಅದಿಲ್ಲದಿದ್ದರೆ ಅದರಅರ್ಧ ನಾಲ್ಕೂವರೆ ಸ್ವರ್ಣನಾಣ್ಯ ದಕ್ಷಿಣೆ ಎಂದು ಹೇಳಿದೆ. ಅಯ್ಯಾ ವಿಪ್ರರೇ; ಮಹಾದಾನದಲ್ಲಿಯೂ ದೀಕ್ಷೆಯಲ್ಲಿಯೂ, ವೃಷೋತ್ಸರ್ಗದಲ್ಲಿಯೂ

೯. ಜೀವಂತನಾಗಿದ್ದು ಮಾಡಿಕೊಳ್ಳುವ ಕಾಮ್ಯವೃಷೋತ್ಸರ್ಗದಲ್ಲಿಯೂ. ಗಯಾಶ್ರಾದ್ಧಮಾಡುವಾಗಲೂ, ಹಿಂದೆ ಹೇಳಿದಂತೆಯೇ ನಾಲ್ಕೂವರೆ ಸುವರ್ಣನಾಣ್ಯವನ್ನು ದಕ್ಷಿಣೆಕೊಡಬೇಕು. ಕಲಿಯುಗದಲ್ಲಿ ತನಗಿರುವ ದ್ರವ್ಯಾನುಕೂಲದಲ್ಲಿ ಸಾಧ್ಯವಾಗತಕ್ಕ ಯಜ್ಞಮಾಡಬೇಕು.

೧೦. ದಂಪತಿಗಳಿಗೆ ವೃಷೋತ್ಸರ್ಗ ನಡೆಸುವುದಾದರೆ ಎರಡೂ ಒಂದೇಸಮವಾಗಿರಬೇಕು. ಮಹಾಜನಗಳು ಸೇರಿ ಒಂದು ಯಾಗವನ್ನು ಮಾಡುತ್ತಿರುವಾಗಲೂ ರಾಜರ ಕರಗ್ರಹಣ ಸಂದರ್ಭದಲ್ಲಿಯೂ, ಯಾವುದಾದರೂ ಕರ್ಮಾಂಗವಾದ ದೀಕ್ಷೆಯಲ್ಲಿಯೂ, ಮತ್ತು ದಾನಕರ್ಮದಲ್ಲಿಯೂ, ಭಾರತವನ್ನು ಪೂರ್ತಾ ಶ್ರವಣಮಾಡಿ ಮುಗಿಸಿದ ಸಂದರ್ಭದಲ್ಲಿಯೂ, ಎಂಭತ್ತುರತ್ತಿಕ ಪ್ರಮಾಣದ ಸುವರ್ಣವನ್ನು ದಕ್ಷಿಣೆಯಾಗಿ ಕೊಡಬೇಕು.

**ಗ್ರಹಯಾಗೇ ಪ್ರತಿಷ್ಠಾಯಾಂ ಸುವರ್ಣಶತರತ್ತಿಕಃ ।**
**ಲಕ್ಷಹೋಮೇ ಚಾಯುತೇ ಚ ಕೋಟ್ಯಾಮೇವಂ ವಿಧೀಯತೇ ॥ ೧೨ ॥**

**ದೇವಾನಾಂ ಬ್ರಾಹ್ಮಣಾನಾಂ ಚ ದಾನಂ ಯಸ್ಯ ಪ್ರಕಲ್ಪಿತಂ ।**
**ತಸ್ಯೈವ ದೇಯಂ ತದ್ದಾನಂ ಸಾಂಗೋಪಾಂಗಂ ಸದಕ್ಷಿಣಂ ॥ ೧೩ ॥**

**ನಾನ್ಯಸ್ಸ ಕಿಂಚಿದ್ದಾತವ್ಯಂ ಸಂಗಭಂಗೋ ಭವೇದ್ಯತಃ ।**
**ಗೃಹೀ ತು ಕೃತ್ವಾ ಯದ್ದಾನಂ ತದಾ ತಸ್ಯ ಋಣೀ ಭವೇತ್ ॥ ೧೪ ॥**

**ಯಜ್ಞೇಷು ಹೋಮೇ ಯದ್ದ್ರವ್ಯಂ ಕಾಷ್ಠಮಾಜ್ಯಾದಿಕಂ ಚ ಯತ್ ।**
**ತನ್ನಾಯಕಸ್ಯ ಪೂಜಾಯಾಂ ದ್ರವ್ಯಮಾಹುರ್ವಿನಿರ್ಮಿತಂ ॥ ೧೫ ॥**

---

೧೨. ಗ್ರಹಯಜ್ಞದಲ್ಲಿಯೂ, ದೇವತಾಪ್ರತಿಷ್ಠಾಪನದಲ್ಲಿಯೂ ನೂರುರತ್ತಿಕ ಪ್ರಮಾಣ ಸ್ವರ್ಣವನ್ನು ದಕ್ಷಿಣೆಯಾಗಿ ಕೊಡಬೇಕು. ದಶಸಹಸ್ರಹೋಮ, ಲಕ್ಷ ಹೋಮ, ಕೋಟಿಹೋಮಗಳಲ್ಲಿ ಕೂಡ ಇದೇ ರೀತಿ ನೂರುರತ್ತಿಕ ಸ್ವರ್ಣನಾಣ್ಯವು ದಕ್ಷಿಣೆಯೆಂದು ವಿಧಾಯಕವಾಗಿದೆ.

೧೩. ದೇವರಿಗಾಗಲಿ, ಬ್ರಾಹ್ಮಣರಿಗಾಗಲಿ ಯಾವ ದಾನವನ್ನು ಕೊಡಲು ಉದ್ದೇಶಮಾಡಿದೆಯೋ ಆ ದಾನವನ್ನು ಸಾಂಗೋಪಾಂಗವಾಗಿಯೂ, ದಕ್ಷಿಣೆ ಸಹಿತವಾಗಿಯೂ ಅಲ್ಲಿಗೇ ಸಲ್ಲಿಸಬೇಕು. ಅನ್ಯರಿಗೆ ಕೊಡಬಾರದು. ಹಾಗೆ ಮಾಡಿ ದರೆ ಸಂಗಭಂಗದೋಷ ಪ್ರಾಪ್ತವಾಗುವುದು. (ಈ ವಿಚಾರವಾಗಿ ಧರ್ಮಶಾಸ್ತ್ರದಲ್ಲಿ "ಕರ್ತಾಯತ್ಪಾತ್ರಮುದ್ದಿಶ್ಯ ಜಲಮಧ್ಯೇ ಜಲಂಕ್ಷಿಪೇತ್ । ದಾತಾ ತತ್ಫಲಮಾಪ್ನೋತಿ ಗೃಹೀತಾ ಚ ನ ದೋಷಭಾಕ್" ॥ ಎಂದು ಹೇಳಿದೆ.

೧೪. ಗೃಹಸ್ಥನಾದವನು ಒಬ್ಬನಿಗೆ ಕೊಡಬೇಕೆಂದು ಸಂಕಲ್ಪಮಾಡಿದ ದಾನ ವನ್ನು ಅನ್ಯನಿಗೆ ದಾನಮಾಡಿದರೆ, ಮುಂಚೆ ಸಂಕಲ್ಪಿಸಿದ್ದ ಮನುಷ್ಯನಿಗೆ ತಾನು ಋಣಿಯಾಗಿ ನಿಲ್ಲುತ್ತಾನೆ.

೧೫. ಯಜ್ಞಾಂಗವಾದ ಹೋಮದಲ್ಲಿ ಯಾವ ಗ್ರಹಕ್ಕೆ ಯಾವ ಹೋಮ ದ್ರವ್ಯ, ಸಮಿತ್ತು, ಆಜ್ಯ ಇವು ಕ್ಲುಪ್ತವಾಗಿವೆಯೋ ಆ ಸಮಿತ್ತು, ಚರು, ಆಜ್ಯಗಳೇ ಆ ಗ್ರಹದ ಅಧಿದೇವತೆ, ಪ್ರತ್ಯಧಿದೇವತೆಗಳ ಪೂಜೆಹೋಮಾದಿಗಳಿಗೂ ವಿನಿಯೋಗ ವಾಗತಕ್ಕದ್ದೆಂದು ನಿಶ್ಚಿತವಾಗಿದೆ.

ಅನಾದಿದೇವತಾರ್ಚಾಯಾಂ ಪೂಜಾಸ್ನಾನಾದಿ ಕರ್ಮಣಿ ।
ಯಸ್ಯಾರ್ಹಣಾದಿಕಂ ದ್ರವ್ಯಂ ತಸ್ಯ ದೇವಸ್ಯ ತದ್ಭವೇತ್ ॥ ೧೬ ॥

ಪ್ರತ್ಯಕ್ಷಂ ದಕ್ಷಿಣಾಂ ದದ್ಯಾದ್ಯಜ್ಞದಾನವ್ರತಾದಿಕೇ ।
ಅದಕ್ಷಿಣಂ ನೈವ ಕಾರ್ಯಂ ಪ್ರಕುರ್ಯಾದ್ಭೂರಿದಕ್ಷಿಣಂ ॥ ೧೭ ॥

ಅತೋ ದತ್ತಂ ಪುರಾ ದತ್ತಂ ದಾತವ್ಯಂ ನೈವ ಸಂಪ್ರತಿ ।
ಪರಸ್ವೋದಾರಬುದ್ಧೀನಾಂ ಸಾ ಸಾ ಹಿ ದಕ್ಷಿಣಾ ಭವೇತ್ ॥ ೧೮ ॥

ದತ್ತಾನಿ ವಿಧಿವತ್ಪುಂಸಾಂ ದೇವದಾನಾನಿ ಯಾನಿ ಹಿ ।
ದಾಸೀದಾಸಗವಾದೀನಿ ಮನಸಾ ಯಾನಿ ಕರ್ಹಿಚಿತ್ ॥ ೧೯ ॥

ದಾತವ್ಯಾನ್ಯಪಿ ತಾನ್ಯೇವ ಕಾರಯೇತ್ಪರಿವರ್ತನಂ ।
ಏಕಸ್ಯಾನೇಕದಾನಂ ಚ ದದೇದ್ಯದಿ ಪೃಥಕ್ಪೃಥಕ್ ॥ ೨೦ ॥

---

೧೬. ಅನಾದಿಕಾಲದಿಂದ ಬಂದ ಪೂಜಾಕ್ರಮದಲ್ಲಿಯೂ, ಸ್ನಾನ ಮೊದಲಾದ ಕರ್ಮಗಳಲ್ಲಿಯೂ, ಯಾವ ದೇವತೆಗೆ ಯಾವ ಪೂಜಾದ್ರವ್ಯಗಳು ರೂಢಿಯಲ್ಲಿ ನಡೆದು ಬಂದಿವೆಯೋ ಆ ದೇವತೆಗೆ ಅದೇ ಪೂಜಾದ್ರವ್ಯಗಳನ್ನು ಉಪಯೋಗಿಸಬೇಕು.

೧೭. ಯಜ್ಞ, ದಾನ, ವ್ರತ ಮೊದಲಾದುವುಗಳನ್ನು ಮಾಡಿದಾಗ ದಕ್ಷಿಣೆಯನ್ನು ಪ್ರತ್ಯಕ್ಷವಾಗಿ ಇಡಬೇಕು. ದಕ್ಷಿಣೆಯಿಲ್ಲದೆ ದಾನಪೂಜಾದಿ ಕಾರ್ಯಗಳನ್ನು ಮಾಡಲೇಬಾರದು. ಆದಷ್ಟು ಸಮೃದ್ಧಿಯಾಗಿ ದಕ್ಷಿಣೆಯಿಟ್ಟೇ ಕರ್ಮಮಾಡಬೇಕು.

೧೮. ಈ ಮೊದಲು ಒಂದುಸಾರಿ ಕೊಟ್ಟು ಆದ ವಸ್ತುವಾಗಲಿ, ಹಿಂದೆ ಎಂದೋ ಕೊಟ್ಟಿದ್ದ ವಸ್ತುವಾಗಲಿ ಮತ್ತೆ ದಾನಕ್ಕೆ ಯೋಗ್ಯವಲ್ಲ. ಮತ್ತೊಬ್ಬರ ಸ್ವತ್ತುಸಿಕ್ಕಿದಾಗ ಔದಾರ್ಯ ತೋರಿಸಿದರೆ ತಾನು ದಕ್ಷಿಣೆಕೊಟ್ಟಹಾಗಾಗುವುದಿಲ್ಲ.

೧೯. ವಿಧಿಪ್ರಕಾರ ಪುರುಷರಿಗಾಗಲಿ, ದೇವಾಲಯಗಳಿಗಾಗಲಿ, ದಾಸಿಯರು, ಗೋವು ಮುಂತಾದ್ದನ್ನು ದಾನಮಾಡಬೇಕೆಂದು ಯಾವಾಗಲಾದರೂ ಮನಸ್ಸಿನಲ್ಲಿ ಉದ್ದೇಶಿಸಿದ್ದರೆ, ಅದನ್ನೇ ಕೊಡಬೇಕೇ ಹೊರತು ಬದಲಾಯಿಸಬಾರದು.

೨೦. ಒಬ್ಬನಿಗೇ ಅನೇಕ ದಾನಗಳನ್ನು ಬೇರೆಬೇರೆಯಾಗಿ ಕೊಡುವುದಾದರೆ ಬೇರೆಬೇರೆ ದಕ್ಷಿಣೆಗಳನ್ನು ಕೊಡಬೇಕಾದುದಿಲ್ಲ. ಎಲ್ಲ ದಾನಕ್ಕೂ ಒಟ್ಟಿಗೆ ಸೇರಿಸಿ ದಕ್ಷಿಣೆಯನ್ನು ಕೊಡಬೇಕು.

**ವರಣಂ ಚ ತಥಾ ಕುರ್ಯಾತ್ತಂತ್ರೇ ಕುರ್ಯಾಚ್ಚ ದಕ್ಷಿಣಾಂ ।**
**ರತ್ನಸ್ಯ ದಕ್ಷಿಣಾ ದೇಯಾ ಕಾಂಚನಂ ಸಮುದಾಹೃತಂ ॥ ೨೧ ॥**

**ಕಾಂಚನಸ್ಯ ಭವೇದ್ರೌಪ್ಯಂ ರೌಪ್ಯೇ ಕಾಂಚನಮುದ್ದಿಶೇತ್ ।**
**ಭೂಮೇರ್ಭೂಮಿರ್ದಕ್ಷಿಣಾ ಸ್ಯಾದ್ವಸ್ತ್ರಸ್ಯ ವಸ್ತ್ರದಕ್ಷಿಣಾ ॥ ೨೨ ॥**

**ಪಾನೀಯಸ್ಯ ತು ಪಾನೀಯಂ ವ್ರೀಹೀಣಾಂ ವ್ರೀಹಿದಕ್ಷಿಣಾ ।**
**ಗಜಸ್ಯ ದಕ್ಷಿಣಾ ಛಾಗೋ ಹ್ಯಶ್ವಸ್ಯ ಮೇಷ ಈರಿತಃ ॥ ೨೩ ॥**

**ಪಶೂನಾಂ ಚ ಚತುಷ್ಪಾದಾ ದೇವಸ್ಯ ದೇವದಕ್ಷಿಣಾ ।**
**ಯಜ್ಞೋ ಮಾನಸ್ಯ ಷಡ್ಭಾಗೋ ದ್ವಿಗುಣಃ ಪರಿಕೀರ್ತಿತಃ ॥ ೨೪ ॥**

**ಆಚಾರ್ಯಸ್ತೈವ ಭಾಗೈಕಂ ಯಜಮಾನಃ ಪ್ರದಾಸ್ಯತಿ ।**
**ಪಾಪಕೈಸ್ತು ಕಲತ್ರಾಣಾಂ ಭಾಗೈಕಂ ತದನಂತರಂ ॥ ೨೫ ॥**

---

೨೧. ರತ್ನವನ್ನು ದಾನಕೊಡುವಾಗ ಚಿನ್ನವನ್ನು ದಕ್ಷಿಣೆಯಾಗಿ ಕೊಡಬೇಕು. ಸುವರ್ಣದಾನಕ್ಕೆ ರೌಪ್ಯವನ್ನು ದಕ್ಷಿಣೆಯಾಗಿ ಕೊಡಬೇಕು. ರೌಪ್ಯದಾನಕ್ಕೆ ಕಾಂಚನವನ್ನೇ ದಕ್ಷಿಣೆಕೊಡಬೇಕು.

೨೨-೨೩. ಭೂದಾನಕ್ಕೆ ಸ್ವಲ್ಪ ಭೂಮಿಯನ್ನೇ ದಕ್ಷಿಣೆಯನ್ನಾಗಿಯೂ, ವಸ್ತ್ರದಾನಕ್ಕೆ ಜೇರೆ ವಸ್ತ್ರವನ್ನೇ ದಕ್ಷಿಣೆಯನ್ನಾಗಿಯೂ, ಪಾನಕ ಮೊದಲಾದುವುಗಳಿಗೆ ಪಾನೀಯವನ್ನೇ ದಕ್ಷಿಣೆಯನ್ನಾಗಿಯೂ, ಭತ್ತದ (ಧಾನ್ಯ) ದಾನಕ್ಕೆ ಸ್ವಲ್ಪ ಭತ್ತವನ್ನೇ ದಕ್ಷಿಣೆಯನ್ನಾಗಿಯೂ ಕೊಡಹೇಳಿದೆ. ಆನೆಯನ್ನು ದಾನಕೊಡುವಾಗ ಅದಕ್ಕೆ ದಕ್ಷಿಣೆಯಾಗಿ ಹೋತವನ್ನೂ ಕುದುರೆಯ ದಾನಕ್ಕೆ ದಕ್ಷಿಣೆಯಾಗಿ ಟಗರನ್ನೂ ಕೊಡಬೇಕೆಂದು ಹೇಳಿದೆ.

೨೪. ಚತುಷ್ಪಾದಿ ಪಶುಗಳ ದಾನಕ್ಕೆ ಚತುಷ್ಪಾದಿ ಜಂತುವನ್ನೇ ದಕ್ಷಿಣೆಯಾಗಿಯೂ, ದೇವತಾವಿಗ್ರಹದ ದಾನಕ್ಕೆ ದೇವಮೂರ್ತಿಯನ್ನೇ ದಕ್ಷಿಣೆಯಾಗಿಯೂ ಕೊಡಬಹುದು.

೨೫. ಯಜ್ಞದ ಪುಣ್ಯಪರಿಮಾಣವು ಆರುಭಾಗವಾಗಿಯೋ ಅಥವಾ ಅದರ ಎರಡರಷ್ಟು ಎಂದರೆ ಹನ್ನೆರಡುಭಾಗವಾಗಿಯೋ ಹಂಚಿಕೆಯಾಗುತ್ತದೆ. ಆಚಾರ್ಯನಿಗೆ ಒಂದುಭಾಗವು ಸೇರುತ್ತದೆ. ಪಾತಕದ ಪ್ರಮಾಣವು ಅಲ್ಪವಾಗಿ ಉಳ್ಳ ಪತ್ನಿಯರಿಗೆ ಒಂದುಭಾಗವು ಸೇರುತ್ತದೆ

ಪಾತ್ರಾಣಾಮೃತ್ವಿಗಾದೀನಾಂ ಭಾಗತ್ರಯಮುದಾಹೃತಂ ।
ಸರ್ವಸತ್ವಸ್ಯ ಭಾಗೈಕಂ ಸ್ವಲ್ಪಂ ಚೋಚ್ಛಿಷ್ಟಗೌರವಾತ್ ॥ ೨೬ ॥

ಆಚಾರ್ಯಾದ್ಯಂಶತಃ ಕಶ್ಚಿತ್ ಕ್ಷೀಣವಿತ್ತಂ ಸಮಾಹರೇತ್ ।
ಅಮೂಲ್ಯಂ ವರ್ಗಮೂಲ್ಯಂ ಯದ್ಭವೇದ್ವೈ ದಕ್ಷಿಣೋತ್ತಮಾ ॥ ೨೭ ॥

ಮಾನಾಶಕ್ತೌ ತು ಯಜ್ಞಾನಾಂ ಯದ್ದೇಯಂ ಯಜ್ಞಸಿದ್ಧಯೇ ।
ದೇವತಾ ಪುಸ್ತಕಂ ರತ್ನಂ ಗಾವೋ ಧಾನ್ಯಂ ತಿಲಾಸ್ತಥಾ ॥ ೨೮ ॥

ನಮೇರುಫಲಪುಷ್ಪಾಣಿ ದೇಯಾನ್ಯೇತಾನಿ ಸರ್ವತಃ ।
ಚತುಶ್ಚಕ್ರಾಂಕಿತೋ ಯಸ್ತು ಸಾಂದ್ರೋ ವೃತ್ತೋ ಜನಾರ್ದನಃ ॥ ೨೯ ॥

---

೨೬. ಋತ್ವಿಕ್ ಮೊದಲಾದ ಪಾತ್ರರಿಗೆ ಮೂರುಭಾಗವೂ, ಸರ್ವಭೂತಗಳಿಗೆ ಒಂದುಭಾಗವೂ ಸೇರುವುದು. ಹೀಗೆ ಅವರಿಗೆ ಸಮರ್ಪಿಸಿ ಮಿಕ್ಕುದನ್ನು ಗೌರವ ಭಾವದಿಂದ ತಾನು ಸೇವಿಸುವನು.

೨೭. ಈ ಯಜ್ಞಕರ್ಮಕ್ಕೆ ದ್ರವ್ಯವನ್ನೆಲ್ಲಾ ವಿನಿಯೋಗಿಸಿ ಅವನ ವಿತ್ತವು ಕ್ಷೀಣವಾದರೂ, ಆಚಾರ್ಯಾದಿಗಳ ಆಶೀರ್ವಾದ ಬಲದಿಂದ ವಿತ್ತವನ್ನು ಪುನಃ ಶೀಘ್ರದಲ್ಲಿ ಪಡೆಯುವನು. ಸಮೃದ್ಧಿಯಾದ ದಕ್ಷಿಣಾಸಮರ್ಪಣೆಯು ಅಮೂಲ್ಯ ಫಲದಾಯಕ ವಾಗುವುದು. ಎಂದರೆ ಅದರ ವರ್ಗಮಾಡಿದಷ್ಟು ಎಂಧರೆ ಅದೇ ಸಂಖ್ಯೆಯಿಂದ ಗುಣಿಸಿದಷ್ಟು ಫಲವನ್ನು ಕೊಡುತ್ತದೆ.

೨೮. ಯಜ್ಞಫಲ ಸಿದ್ಧಿಸುವುದಕ್ಕಾಗಿ ಯಜ್ಞದ ವಿಸ್ತಾರಕ್ಕೆ ತಕ್ಕಂತೆ ದಕ್ಷಿಣೆ ಯನ್ನು ಕೊಡಲು ಶಕ್ತಿಯಿಲ್ಲದಿದ್ದರೆ, ದೇವತಾಪ್ರತಿಮೆಯರೂಪದಲ್ಲೋ, ಪುಸ್ತಕ ರೂಪವಾಗಿಯೋ ಕೊಡಬಹುದು.

೨೯. ಅಥವಾ ರತ್ನ, ಗೋವು, ಧಾನ್ಯ, ತಿಲ, ನಮೇರುಫಲಪುಷ್ಪಗಳು ಇವು ಗಳ ರೂಪದಲ್ಲಿಯಾಗಲಿ ಕೊಡಬಹುದು. ನಾಲ್ಕು ಚಕ್ರಗಳುಳ್ಳದ್ದೂ, ಪೂರ್ಣ ವರ್ತುಲಾಕಾರವೂ ಆದ ಸಾಲಗ್ರಾಮವು ಅಮೂಲ್ಯ (ಬೆಲೆಕಟ್ಟಲು ಆಗದ) ಧನ.

ದೇವತಾಪ್ರತಿಮಾದ್ಯಂ ಚ ಶಿರೋನಾಭಿಸ್ತಥೈವ ಚ ।
ಶ್ವೇತಲಿಂಗಂ ರತ್ನಲಿಂಗಮಿಂದ್ರನೀಲಾದಿಕಂ ಚ ಯತ್ ॥ ೩೦ ॥

ದಕ್ಷಿಣಾವರ್ತಶಂಖಂ ಚ ಹರಿವಂಶಸ್ತಥಾಖಿಲಃ ।
ಕಪಿಲೋ ನೀಲವೃಷಭಃ ಸೋಮಧಾನ್ಯಂ ತಥೈವ ಚ ॥ ೩೧ ॥

ಅಮೂಲ್ಯಾನ್ಯಾಹುರೇತಾನಿ ದತ್ವಾನಂತಫಲಾನಿ ಚ ।
ಸ್ವರ್ಣಪಾದೋ ಭವೇನ್ಮೂಲ್ಯಂ ಶಾಲಗ್ರಾಮಸ್ಯ ದಕ್ಷಿಣಾ ॥ ೩೨ ॥

ಕ್ಷುದ್ರಲಿಂಗೇ ಸ್ವರ್ಣಮೂಲ್ಯಂ ಪಾದಾರ್ಧಂ ಶ್ರೀಧರೇऽಪಿ ಚ ।
ಅನಂತೋನಂತಮಿತ್ಯುಕ್ತಂ ಪಾದಾರ್ಧಂ ಬಾಣಲಿಂಗಕೇ ॥ ೩೩ ॥

ಯಥಾ ಪುಸ್ತಕಮಾತ್ರೇಣ ಸ್ವರ್ಣಪಾದಾರ್ಧಮಿಷ್ಯತೆ ।
ಜ್ಯೋತಿಷೇऽರ್ಧಂ ಸುವರ್ಣಸ್ಯ ರಜತಾರ್ಧಂ ವೃಷೇ ತಥಾ ॥ ೩೪ ॥

---

೩೦. ಶಿರಸ್ಸು, ನಾಭಿ ಇತ್ಯಾದಿ ಭಾಗಗಳು ವ್ಯಕ್ತವಾಗಿರುವ ದೇವತಾಪ್ರತಿಮೆ, ಸ್ಫಟಿಕಲಿಂಗ, (ಇಂದ್ರನೀಲ) ಪಚ್ಚೆಯಲಿಂಗ ಬಲಮುರಿ ಶಂಖ, ಸಮಗ್ರವಾದ ಹರಿವಂಶಗ್ರಂಥ.

೩೧. ಕಪಿಲಾಗೋವು, ಕೊಂಬು ಇಲ್ಲದ ಕರಿಯ ಹೋರಿ, ಸೋಮಧಾನ್ಯ (ಅಕ್ಕಿ) ಇವೆಲ್ಲಾ ಬೆಲೆ ಕಟ್ಟಲು ಆಗದವುಗಳೆನಿಸಿವೆ.

೩೨. ಇವುಗಳು ನಿಷ್ಕೃಷ್ಟವಾದ ಮೂಲ್ಯವಿಲ್ಲದವುಗಳೆಂದೂ, ಇವನ್ನು ದಕ್ಷಿಣೆಯಾಗಿ ಕೊಟ್ಟರೆ ಅನಂತಫಲದಾಯಕಗಳೆಂದೂ ಹೇಳುತ್ತಾರೆ. ಶಾಲಿಗ್ರಾಮ ದಾನಕ್ಕೆ ಒಂದು ಸುವರ್ಣನಾಣ್ಯದ ಕಾಲುಭಾಗವನ್ನು ದಕ್ಷಿಣೆಕೊಡಬೇಕು.

೩೩. ಸಣ್ಣ ಲಿಂಗವನ್ನು ದಾನಮಾಡುವಾಗ ಒಂದು ಸುವರ್ಣನಾಣ್ಯದ ದಕ್ಷಿಣೆಯನ್ನೂ, ಶ್ರೀಧರ ಪ್ರತಿಮೆಯ ದಾನದಲ್ಲಿ ಆ ಸುವರ್ಣದ ಎಂಟನೇ ಒಂದುಭಾಗ ದಕ್ಷಿಣೆಯನ್ನೂ, ಅನಂತಮೂರ್ತಿ ದಾನದಲ್ಲಿ ಅನಂತವಾದ ದಕ್ಷಿಣೆಯನ್ನೂ, ಬಾಣಲಿಂಗವನ್ನು ದಾನಮಾಡುವಾಗ ಎಂಟನೇಒಂದು ಸುವರ್ಣವನ್ನೂ ದಕ್ಷಿಣೆ ಕೊಡಬೇಕೆಂದು ಹೇಳಿದೆ.

೩೪. ಪುಸ್ತಕದಾನಕ್ಕೆ ಎಂಟನೇಒಂದು ಸುವರ್ಣದ ದಕ್ಷಿಣೆಯೂ, ದೀಪದಾನ ಅರ್ಧ ಸುವರ್ಣದ ದಕ್ಷಿಣೆಯೂ, ವೃಷಭದಾನಕ್ಕೆ ಅರ್ಧ ರಜತನಾಣ್ಯ ದಕ್ಷಿಣೆಯೂ ಉಕ್ತವಾಗಿದೆ.

ಹರಿವಂಶೇ ಶ್ಲೋಕಶತೇ ಸ್ವರ್ಣಮೇಕಂ ಪ್ರಕೀರ್ತಿತಂ ।
ಧರ್ಮಶಾಸ್ತ್ರಸ್ಯ ಸಾಹಸ್ರೇ ರಜತತ್ರಯಮೀರಿತಂ ॥ ೩೫ ॥

ಕಪಿಲಾಯಾಂ ಸುವರ್ಣಾರ್ಧಂ ಧೇನುಮಾತ್ರೇ ಪುರಾಣಕಂ ।
ಪ್ರಾಯಶ್ಚಿತ್ತವಿಧೌ ಜ್ಞೇಯಂ ಧೇನುಮಾತ್ರಂ ಪುರಾಣಕಂ ॥ ೩೬ ॥

ಪುರಾಣತ್ರಿತಯಂ ಚಾನ್ಯೇ ವೀರ್ಯಹೀನೇ ದ್ವಯಂ ಭವೇತ್ ।
ಕೃಷ್ಣೇವೃಷೇ ಷಟ್ಪುರಾಣಂ ಶ್ವೇತೇ ನವಪುರಾಣಕಂ ॥ ೩೭ ॥

ದ್ವಾತ್ರಿಂಶಚ್ಚ ಪುರಾಣಂ ಸ್ಯಾದ್ವೃಷೇ ನೀಲೇ ತಥೈವ ಚ ।
ನಮೇರೋಃ ಪ್ರತಿಚಕ್ರೇ ಚ ದ್ವಾದಶಸ್ವರ್ಣರತ್ತಿಕಾಃ ॥ ೩೮ ॥

---

೩೫. ಹರಿವಂಶದ ನೂರುಶ್ಲೋಕಗಳನ್ನೂ ಬರೆದು ದಾನಮಾಡುವಾಗ ಒಂದುಸ್ವರ್ಣದ ದಕ್ಷಿಣೆಯನ್ನು, ಧರ್ಮಶಾಸ್ತ್ರದ ಸಾವಿರಶ್ಲೋಕ ದಾನಕ್ಕೆ ಮೂರು ರಜತನಾಣ್ಯಗಳ ದಕ್ಷಿಣೆಯನ್ನೂ ಕೊಡಬೇಕೆಂದು ಹೇಳಿದೆ.

೩೬. ಕಪಿಲಾಗೋವನ್ನು ದಾನಮಾಡುವಾಗ ಅರ್ಧ ಸುವರ್ಣನಾಣ್ಯವನ್ನೂ ಸಾಮಾನ್ಯ ಗೋವುಗಳನ್ನು ದಾನಮಾಡುವಾಗ ಪುರಾಣ ಎಂಬ ನಾಣ್ಯವನ್ನೂ, ಕೊಡಬೇಕು. ಪ್ರಾಯಶ್ಚಿತ್ತ ವಿಧಾನದಲ್ಲಿ ಒಂದು ಸಾಮಾನ್ಯ ಹಸು ಮತ್ತು ಒಂದು ಪುರಾಣನಾಣ್ಯ ದಕ್ಷಿಣೆ ಎಂದು ತಿಳಿಯತಕ್ಕದ್ದು.

೩೭. ಬೇರೆ ಯಾವುದಾದರೂ ದಾನಗಳನ್ನು ಮಾಡುವಾಗ ಪುರಾಣ ಎಂಬ ನಾಣ್ಯಗಳಮೂರನ್ನು ದಕ್ಷಿಣೆಕೊಡಬೇಕು. ಅಷ್ಟುಶಕ್ತಿ ಸಾಲದಿದ್ದರೆ ಎರಡು ಪುರಾಣ ನಾಣ್ಯಗಳನ್ನಾದರೂ ದಕ್ಷಿಣೆಕೊಡಬೇಕು. ಕರಿಯ ವೃಷಭವನ್ನು ದಾನಮಾಡುವಾಗ ಆರು ಪುರಾಣ ನಾಣ್ಯಗಳನ್ನೂ, ಬಿಳಿಯ ವೃಷಭವನ್ನು ದಾನಮಾಡುವಾಗ ಒಂಭತ್ತು ಪುರಾಣನಾಣ್ಯಗಳನ್ನೂ, ನೀಲವೃಷಭವನ್ನು ದಾನಮಾಡುವಾಗ ಮೂವತ್ತೆರಡು ಪುರಾಣನಾಣ್ಯಗಳನ್ನೂ ದಕ್ಷಿಣೆಯಾಗಿ ಕೊಡಬೇಕು.

೩೮. ನಮೇರುವಿನ ಪ್ರತಿಯೊಂದು ಚಕ್ರಕ್ಕೂ ಹನ್ನೆರಡು ಚಿನ್ನದ ರತ್ತಿಕಗಳ ದಕ್ಷಿಣೆಯನ್ನೂ, ಬಿಲ್ವಫಲ ದಾನದಲ್ಲಿ ಮೂರು ಪುರಾಣನಾಣ್ಯಗಳ ದಕ್ಷಿಣೆಯನ್ನೂ ಕೊಡಬೇಕು.

ಮೂಲ್ಯಂ ಶ್ರೀಫಲಮಾತ್ರೇಽಪಿ ಪುರಾಣತ್ರಿತಯಂ ಭವೇತ್ ।
ಪಂಕ್ತ್ಯಾಪಿ ತುರ್ಯಕಂ ವಿದ್ಯಾತ್ಕಲೌ ಪಣವ್ಯವಸ್ಥಯಾ ॥ ೩೯ ॥

ಧಾತ್ರೀಫಲಸ್ಯ ಪ್ರತ್ಯೇಕಂ ಭವೇದ್ರಜತಮಾಷಕಂ ।
ಏತಾನ್ಯಾಹುಃ ಪ್ರಶಸ್ತಾನಿ ಮೂಲ್ಯಯೋಗೇ ಪರಂ ವಿದುಃ ॥ ೪೦ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ
ಮೂಲ್ಯಕಥನೇ ತೃತೀಯೋಽಧ್ಯಾಯಃ.



---

೩೯. ನಾಲ್ಕನೆಯದಾದ ಈ ಕಲಿಯುಗದಲ್ಲಿ ದಕ್ಷಿಣಾದ್ರವ್ಯವನ್ನು ತತ್ತತ್ಕಾಲದಲ್ಲಿ ವ್ಯವಹಾರವಿರುವ ನಾಣ್ಯರೂಪದಲ್ಲಿ ಈ ಪರಿಮಾಣಕ್ಕೆ ತಕ್ಕಂತೆ ವ್ಯವಸ್ಥೆ ಮಾಡಿಕೊಂಡು ಕೊಡಬೇಕು.

೪೦. ಒಂದೊಂದು ನೆಲ್ಲಿಯಕಾಯಿಯದಾನದಲ್ಲಿ ಒಂದೊಂದು ಉದ್ದಿನಕಾಳಿನ ಗಾತ್ರದ ಬೆಳ್ಳಿಯನ್ನು ದಕ್ಷಿಣೆ ಕೊಡಬೇಕು. ಹೀಗೆ ಕೊಡುವುದು ಪ್ರಶಸ್ತವೆನಿಸಿದೆ. ಸರಿಯಾದ ದಕ್ಷಿಣೆಯೊಡಗೂಡಿದ ದಾನಗಳೇ ಇನ್ನೂ ಪ್ರಶಸ್ತಗಳೆಂದು ಹೇಳುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ದ್ವಿತೀಯಭಾಗದಲ್ಲಿ
ಮೂಲ್ಯಕಥನವೆಂಬ ಮೂರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮ ಪರ್ವಣಿ ದ್ವಿತೀಯಭಾಗೇ
## ಚತುರ್ಥೋಽಧ್ಯಾಯಃ

॥ ಸೂತ ಉವಾಚ ॥

ಪೂರ್ಣಪಾತ್ರಮಥೋ ವಕ್ಷ್ಯೇ ಯಜ್ಞೇ ಸಾಧಾರಣೇಽಪಿ ಚ ।
ಕಾಮಹೋಮೇ ಭವೇನ್ಮುಷ್ಟಿರ್ಮುಷ್ಟಯೋಽಷ್ಟೌ ತು ಕುಂಚಿಕಾ ॥ ೧ ॥

ಏಕೈಕಕುಂಚಿಮಾನೇನ ಕುರ್ಯಾತ್ಪಾತ್ರಾಣಿ ವೈ ಸದಾ ।
ಪಾತ್ರಾಣಿ ಚ ಪೃಥಕ್ಕೃತ್ವಾ ಸ್ಥಾಪಯೇದ್ದ್ವಾರದೇಶತಃ ॥ ೨ ॥

---

## ನಾಲ್ಕನೆಯ ಅಧ್ಯಾಯ

೧. ಸೂತರು ಹೋಮವಿಧಿಯನ್ನು ಮುಂದುವರಿಸಿ ಹೇಳುತ್ತಾರೆ—ಇನ್ನು ಮುಂದೆ ಸಾಮಾನ್ಯಯಜ್ಞದಲ್ಲಿ ಉಪಯೋಗಿಸಬೇಕಾದ ಪೂರ್ಣಪಾತ್ರೆಯ ಪ್ರಮಾಣ ವನ್ನು ಹೇಳುತ್ತೇನೆ. ಕಾಮ್ಯಸಿಧ್ಯರ್ಥವಾದ ಹೋಮದಲ್ಲಿ ಒಂದು ಮುಷ್ಟಿ ಹಿಡಿಯುವ ಪಾತ್ರೆ ಸಾಕು. ಎಂಟುಮುಷ್ಟಿ ಹಿಡಿಸುವಷ್ಟು ಪ್ರಮಾಣಕ್ಕೆ ಒಂದು ಕುಂಚಿಕಾ ಎಂದು ಹೆಸರು.

೨ ಒಂದೊಂದು ಕುಂಚಿಪ್ರಮಾಣದ ಪಾತ್ರೆಗಳನ್ನೇ ಯಾವಾಗಲೂ ಹೋಮಕ್ಕೆ ಉಪಯೋಗಿಸಬೇಕು. ಪ್ರೋಕ್ಷಣಪಾತ್ರ, ಪೂರ್ಣಪಾತ್ರ, ಆಜ್ಯಸ್ಥಾಲಿ ಈ ಪ್ರತಿಯೊಂದಕ್ಕೂ ಬೇರೆ ಬೇರೆ ಪಾತ್ರೆಗಳನ್ನು ಸಿದ್ಧಮಾಡಿ ದ್ವಾರದೇಶದಲ್ಲಿ ಎಂದರೆ ಮುಂಭಾಗದಲ್ಲಿ ಇಡಬೇಕು.

ಸಿದ್ಧಾನಾಂ ಖಡ್ಗಧಾರಾಣಾಂ ಪ್ರತ್ಯೇಕಸ್ಯ ದಿನಕ್ರಮಾತ್ ।
ತತ್ರೈವ ದದ್ಯಾನ್ನಾನ್ಯತ್ರ ನ ಕುರ್ಯಾದ್ವ್ಯತ್ಯಯಂ ಕ್ವಚಿತ್ ॥ ೩ ॥

ಕುಂಡಾನಾಂ ಕುಡ್ಮಲಾನಾಂ ಚ ವೇತನಂ ಯಾದೃಶಂ ಶೃಣು ।
ಚತುರಸ್ರಪದಸ್ಯಾಪಿ ರೌಪ್ಯಾರ್ಧಂ ಚ ಕಲೌಯುಗೇ ॥ ೪ ॥

ದ್ವೇ ರೌಪ್ಯೇ ಸರ್ವತೋಭದ್ರೇ ಕ್ರೌಂಚಘ್ರಾಣೇ ಚತುರ್ಥಕಂ ।
ಮಹಾಸಿಂಹಾಸನೇ ಪಂಚ ದಶಪಾತ್ರೇ ತದರ್ಧಕಂ ॥ ೫ ॥

ಸಹಸ್ರಾರೇ ಮೇರುಪೃಷ್ಠೇ ತುರ್ಯೇ ರೌಪ್ಯವೃಷಾದಿಕಂ ।
ವಿಷೇ ಗಲೇ ಚ ವೃಷಭಂ ಶೇಷೇ ರೌಪ್ಯಚತುರ್ಥಕಂ ॥ ೬ ॥

---

೩. ಅಸಿಧಾರಾವ್ರತನಿಯಮಿಗಳಾದ ಸಿದ್ಧಪುರುಷರು ಪ್ರತಿದಿನವೂ ಪ್ರತಿಯೊಂದು ಹೋಮದಲ್ಲೂ ಆ ಪಾತ್ರೆಗಳಲ್ಲಿಯೇ ಆಹುತಿಯನ್ನು ಕೊಡಬೇಕೇ ಹೊರತು ಬೇರೆ ಯಾವುದರಲ್ಲಿಯೂ ಕೊಡಬಾರದು. ಇದಕ್ಕೆ ಎಂದೂ ತಪ್ಪಬಾರದು.

೪. ಪದ್ಮಾದಿ ಮಂಡಲರಚನೆಗೂ, ಕುಂಡರಚನೆಗೂ ಎಷ್ಟೆಷ್ಟು ವೇತನಕೊಡಬೇಕು ಎಂಬುದನ್ನು ಹೇಳುತ್ತೇನೆ ಕೇಳಿರಿ. ಕಲಿಯುಗದಲ್ಲಿ ಚತುರಸ್ರ ಪದಮಂಡಲನಿರ್ಮಾಣಕ್ಕೆ ಅರ್ಧರೌಪ್ಯವನ್ನು ಕೊಡಬೇಕು.

೫. ಸರ್ವತೋಭದ್ರಮಂಡಲ ನಿರ್ಮಿಸಿದುದಕ್ಕೆ ಎರಡು ರೌಪ್ಯಗಳನ್ನು ವೇತನ ಕೊಡಬೇಕು. ಕ್ರೌಂಚಘ್ರಾಣ ಮಂಡಲವನ್ನು ರಚಿಸಿದರೆ ನಾಲ್ಕು ಬೆಳ್ಳಿಯ ನಾಣ್ಯಗಳು, ಪಂಚಮಹಾಸಿಂಹಾಸನ ರಚನೆಗೆ ಐದು ರೌಪ್ಯಗಳು ಈ ಪ್ರಕಾರ ವೇತನ ಕೊಡಬೇಕು. ದಶಪಾತ್ರ ಮಂಡಲರಚನೆ ಮಾಡಿದರೆ ಅದರ ಅರ್ಧದಷ್ಟನ್ನು ಕೊಡಬೇಕು.

೬. ಸಹಸ್ರಾರು ಚಕ್ರ ರಚನೆ ಮಾಡಿದುದಕ್ಕೂ ನಾಲ್ಕನೆಯದಾದ ಮೇರುಪೃಷ್ಠ ಮಂಡಲ ರಚನೆಗೂ, ಬೆಳ್ಳಿಯ ವೃಷಭ ಮೊದಲಾದುವುಗಳನ್ನು ವೇತನವಾಗಿ ಕೊಡಬೇಕು. ಲಿಂಗತೋಭದ್ರಮಂಡಲ ರಚಿಸಿದುದಕ್ಕೆ ಒಂದು ಬೆಳ್ಳಿಯ ವೃಷಭವನ್ನೂ ನಾಗಮಂಡಲವನ್ನು ರಚಿಸಿದುದಕ್ಕೆ ನಾಲ್ಕು ಬೆಳ್ಳಿಯ ನಾಣ್ಯಗಳನ್ನೂ ವೇತನವಾಗಿ ಕೊಡಬೇಕು.

ಚತುರಸ್ರಸ್ಯ ನಿರ್ಮಾಣೇ ಸ್ವರ್ಣಪಾದಃ ಕಲೌಯುಗೇ ।
ಮಹಾಕುಂಡೇ ತು ದ್ವಿಗುಣಂ ವೃತ್ತೇ ರೌಪ್ಯಂ ನಿವೇದಯೇತ್ ॥ ೭ ॥

ಪದ್ಮಕುಂಡೇ ತು ವೃಷಭಂ ಅರ್ಧಚಂದ್ರೇ ತು ರೌಪ್ಯಕಂ ।
ಯೋನಿಕುಂಡೇ ದದೇದ್ಧೇನುಮಷ್ಟಾರ್ಧಸ್ವರ್ಣಮಾಷಕಂ ॥ ೮ ॥

ಷಡಸ್ರೇ ತು ತದರ್ಧಂ ಸ್ಯಾದ್ಯಾಗೇ ಮಾಷದ್ವಯಂ ಭವೇತ್ ।
ಶೈವೇ ಚೋದ್ಯಾಪನೇ ಚೈವ ಪ್ರತ್ಯಹ್ನಾ ಸ್ವರ್ಣಮಾಷಕಂ ॥ ೯ ॥

ದಾರಣೇ ಹಸ್ತಮಾತ್ರಂ ಸ್ಯಾತ್ಸ್ವರ್ಣಕೃಷ್ಣಕಲಂ ಭವೇತ್ ।
ಇಷ್ಟಿಕಾಕರಣೇ ಚೈವ ಪ್ರತ್ಯಹ್ನಾ ಸ್ಯಾತ್ಪಣದ್ವಯಂ ॥ ೧೦ ॥

---

೭. ಕಲಿಯುಗದಲ್ಲಿ ಚತುರಸ್ರದ ನಿರ್ಮಾಣಕ್ಕೆ ಸುವರ್ಣನಾಣ್ಯದ ಕಾಲು ಭಾಗವನ್ನು ಕೊಡಬೇಕು. ಮಹಾಕುಂಡವನ್ನು ನಿರ್ಮಿಸಿದರೆ ಅದರ ಎರಡರಷ್ಟನ್ನೂ, ವರ್ತುಲಾಕಾರವಾದ ಕುಂಡರಚನೆಗೆ ಒಂದು ರೌಪ್ಯವನ್ನೂ ವೇತನವಾಗಿ ಕೊಡಬೇಕು.

೮. ಪದ್ಮಾಕೃತಿಯಾದ ಕುಂಡನಿರ್ಮಾಣ ಮಾಡಿದ ಸಂದರ್ಭದಲ್ಲಿ ಒಂದು ವೃಷಭವನ್ನೂ, ಅರ್ಧಚಂದ್ರಾಕೃತಿಯಾದ ಕುಂಡರಚನೆಗೆ ಒಂದು ರೌಪ್ಯವನ್ನೂ ಸಮರ್ಪಿಸಬೇಕು. ಯೋನಿಕುಂಡವನ್ನು ನಿರ್ಮಿಸಿಕೊಟ್ಟವನಿಗೆ ನಾಲ್ಕು ಸುವರ್ಣಮಾಷ ಪ್ರಮಾಣದ ಒಂದು ಹಸುವನ್ನು ಕೊಡಬೇಕು.

೯. ಷಡಸ್ರ (ಷಡ್ಭುಜಾಕೃತಿಯ) ಕುಂಡನಿರ್ಮಾಪಕನಿಗೆ ಮೇಲೆ ಹೇಳಿದ್ದರ ಅರ್ಧದಷ್ಟು ಎಂದರೆ ಮೂರುಮಾಷತೂಕ ಸ್ವರ್ಣವನ್ನು ಕೊಡಬೇಕು. ಸಾಮಾನ್ಯ ಯಾಗಕುಂಡಕ್ಕೆ ಎರಡುಮಾಷ ಸ್ವರ್ಣವನ್ನು ವೇತನಕೊಡತಕ್ಕದ್ದು. ಶಿವಯಾಗದ ಉದ್ಯಾಪನದಲ್ಲಿ ಪ್ರತಿದಿನವೂ ಒಂದೊಂದು ಸ್ವರ್ಣಮಾಷವನ್ನೂ (ಶೈಲೇ ಎಂಬ ಪಾಠವಾದರೆ) ಕಲ್ಲಿನಿಂದ ರಚಿಸುವುದಾದರೆ ಆದಷ್ಟು ದಿನಕ್ಕೂ ದಿನಕ್ಕೆ ಒಂದು ಸ್ವರ್ಣ ಮಾಷದಂತೆ ವೇತನ ಕೊಡಬೇಕು.

೧೦. ಒಂದು ಮೊಳದ ಉದ್ದ ಕಲ್ಲನ್ನು ಒಡೆದುದಕ್ಕೆ ಒಂದು ಕರ್ಷಸ್ವರ್ಣದ ಒಂದು ಕಲೆಯಷ್ಟು ವೇತನ ಕೊಡಬೇಕು. ಇಟ್ಟಿಗೆಯಿಂದ ರಚಿಸಿದರೆ ಪ್ರತಿದಿನಕ್ಕೂ ಎರಡೆರಡು ಪಣ ಕೂಲಿಯನ್ನು ಕೊಡಬೇಕು.

ಖಂಡೇ ದಶವರಾಟಿಂ ಸ್ಯಾದ್ವ್ಯಹಸ್ತಾನೇ ತು ಕಾಕಿಣೀ ।
ತಡಾಗೇ ಪುಷ್ಕರಿಣ್ಯಾಂ ಚ ಖನನೇ ಪ್ರಥಮಾಂಗಕೇ ॥ ೧೧ ॥

ಸಪ್ತಹಸ್ತಮಿತೇ ಕುಂಡೇ ನಿಮ್ನೇ ಆಬದ್ಧಮಾತ್ರಕಂ ।
ಪುರಾಣಸ್ಯ ಚ ಏಕಾಂಶಂ ವೇತನಂ ಪರಿಕೀರ್ತಿತಂ ॥ ೧೨ ॥

ವರ್ಧಯೇತ್ಪಣಮಾತ್ರೇಣ ನಿಮ್ನೇ ಪತ್ರೇ ಚ ಪ್ರಕ್ರಮಾತ್ ।
ಬೃಹತ್ಕೂಪಸ್ಯ ನಿರ್ಮಾಣೇ ಪ್ರತ್ಯಹಂ ಚ ಪಣದ್ವಯಂ ॥ ೧೩ ॥

ಶೈಲೇ ಜ್ಞೇಯಂ ಕಾಂಚನಸ್ಯ ರತ್ತಿಕಾ ಗೃಹಕರ್ಮಣಿ ।
ಕೋಷ್ಠೇ ಜ್ಞೇಯಂ ಸಾರ್ಧಪಣಂ ರಂಗಾದಿರಚಿತೇ ಪಣಂ ॥ ೧೪ ॥

---

೧೧. (ತಾರಶಿ) ಸಣ್ಣ ಇಟ್ಟಿಗೆ ಮಾಡಿದವನಿಗೆ ದಿನಕ್ಕೆ ಹತ್ತು ಕವಡೆಗಳನ್ನೂ, ಅದನ್ನೇ ದೊಡ್ಡ ಆಳತೆಯಲ್ಲಿ ಕುಯ್ದರೆ ಕಾಕಿಣೀ ನಾಣ್ಯವನ್ನೂ ವೇತನವಾಗಿ ಕೊಡಬೇಕು. ಕೆರೆ, ಕೊಳ ಇವುಗಳ ನಿರ್ಮಾಣದಲ್ಲಿ ಮೊದಲನೆಯ ವರಸೆಯನ್ನು ತೋಡಿಸುವಾಗ.

೧೨. ಎಂದರೆ ಏಳುಹಸ್ತ ಪ್ರಮಾಣ ಆಳವಾಗುವವರೆಗೂ ಭೂಮಟ್ಟದ ದರದಂತೆ ಕ್ಲುಪ್ತವಾದ ಕೂಲಿಯನ್ನು ಕೊಡಬೇಕು. ಹಳೆಯದನ್ನು ಸರಿಪಡಿಸುವಾಗ ಇದರಲ್ಲಿ ಒಂದು ಅಂಶವನ್ನು ಮಾತ್ರ ವೇತನ ಕೊಡಬೇಕೆಂದು ಹೇಳಿದೆ.

೧೩. ಒಂದೊಂದು ಪತ್ರದ ಪ್ರಮಾಣದ ಆಳವು ಹೆಚ್ಚುತ್ತಾ ಹೋದಹಾಗೆ ಒಂದೊಂದು ಪಣ ವೇತನವನ್ನು ಕ್ರಮವಾಗಿ ಹೆಚ್ಚಿಸುತ್ತಾ ಬರಬೇಕು. ದೊಡ್ಡ ಭಾವಿಯನ್ನು ತೋಡಿಸುವಾಗ ಪ್ರತಿದಿನವೂ ಎರಡೆರಡು ಪಣಗಳನ್ನು ಕೂಲಿಕೊಡಬೇಕು.

೧೪. ಗಟ್ಟಿಯಾಗಿರುವಂತೆ ಕಲ್ಲಿನಿಂದ ಮನೆಯನ್ನು ಕಟ್ಟಿಸುವಾಗ ದಿನಕ್ಕೆ ಒಂದು ಸ್ವರ್ಣದ ರತ್ತಿಕೆಯನ್ನು ಕೂಲಿಕೊಡಬೇಕು. ಒಂದು ಕೊಠಡಿಯನ್ನು ಕಟ್ಟುವುದಾದರೆ ದಿನಕ್ಕೆ ಒಂದೂವರೆ ಪಣವನ್ನೂ, ಬಣ್ಣ ಮುಂತಾದುವನ್ನೂ ಹಾಕಿದರೆ ಎರಡು ಪಣವನ್ನೂ ವೇತನವಾಗಿ ಕೊಡಬೇಕು.

ವೃಕ್ಷಾಣಾಂ ರೋಪಣೇ ದದ್ಯಾತ್ಪ್ರತ್ಯಹ್ನಾ ಸಾರ್ಧಮಾಷಕಂ ।
ಸೇತುಬಂಧೇ ಪಂಕಿಲೇ ಚ ಪಣದ್ವಯಂ ಚ ಕಾಕಿಣೀ ॥ ೧೫ ॥

ಪಣೇಪಣೇ ತು ತಾಮ್ರಸ್ಯ ದದ್ಯಾತ್ಪಣಚತುಷ್ಟಯಂ ।
ಘಟನೇ ಕಾಂಸ್ಯಸೀಸಾನಾಂ ಪಣತ್ರಯಮುದಾಹೃತಂ ॥ ೧೬ ॥

ಅಥವಾ ದಿನಸಂಖ್ಯಾನಂ ಪಣ್ಯೈಕಂ ಚ ಸಕಾಕಿಣೀ ।
ಸುವರ್ಣಸ್ಯ ಪಣ್ಯೈಕೇ ತು ಪುರಾಣೇ ರತ್ನಕುಟ್ಟಿಮೆ ॥ ೧೭ ॥

ರಜತೇ ತು ತದರ್ಧಂ ಸ್ಯಾತ್ಸ್ಫಟಿಕಸ್ಯ ಚ ದಾರಣೇ ।
ದಿನಸಂಖ್ಯಾಪಣದ್ವಂದ್ವಂ ರತ್ನಾನಾಮಥ ಕುಡ್ಮಲಂ ॥ ೧೮ ॥

ಮಣಿವೇಧೇ ಮಣೌ ಜ್ಞೇಯಂ ಕಾಕಿಣೀ ಪರಿಕೀರ್ತಿತಾ ।
ಚತುರ್ವರಾಟಮಧಿಕಂ ಸ್ಫಟಿಕೇ ಮಣಿವೇಧನೇ ॥ ೧೯ ॥

---

೧೫. ವೃಕ್ಷಗಳನ್ನು ನಾಟುವುದು ಮುಂತಾದ ಉದ್ಯಾನಕಾರ್ಯಕ್ಕೆ ಪ್ರತಿದಿನವೂ ಒಂದೂವರೆ ಮಾಷಪ್ರಮಾಣ ಸ್ವರ್ಣ ಅಥವಾ ರೌಪ್ಯದ ವೇತನವನ್ನೂ, ಕೆಸರಾದ ಪ್ರದೇಶದಲ್ಲಿ ಕಟ್ಟುವ ಸೇತುವೆ ಮುಂತಾದುವುಗಳ ಕಟ್ಟಡದ ಕೆಲಸಕ್ಕೆ ದಿನಕ್ಕೆ ಎರಡು ಪಣ ಮತ್ತು ಒಂದು ಕಾಕಿಣೀ ನಾಣ್ಯ ಕೂಲಿಯನ್ನೂ ಕೊಡಬೇಕು.

೧೬. ತಾಮ್ರದಲ್ಲಿ ಕೆಲಸಮಾಡುವ ಪಕ್ಷದಲ್ಲಿ ನಾಲ್ಕು ಪಣಗಳನ್ನು ಕೂಲಿ ಕೊಡಬೇಕು. ಸೀಸ, ಕಂಚು ಇವುಗಳನ್ನು ಜೋಡಿಸಿ ರಚಿಸುವುದಾದರೆ ಮೂರುಪಣ ಕೂಲಿಯಾಗುವುದು.

೧೭. ಹಾಗಲ್ಲದಿದ್ದರೆ ಕೆಲಸಮಾಡಿದಷ್ಟು ದಿವಸಕ್ಕೂ ಸರಾಸರಿ ಒಂದುಪಣ ಒಂದು ಕಾಕಿಣಿಯಂತೆ ಲೆಕ್ಕಹಾಕಿ ಕೂಲಿ ಕೊಡಬಹುದು. ಸುವರ್ಣರಚಿತವಾದ ಹಳೆಯ ರತ್ನಕುಟ್ಟಿಮವನ್ನು ಸರಿಪಡಿಸಿದರೆ ದಿನಕ್ಕೆ ಒಂದು ಪಣವನ್ನೂ ಬೆಳ್ಳಿಯ ಕೆಲಸವಾದರೆ ಅದರ ಅರ್ಧದಷ್ಟನ್ನೂ ಕೂಲಿ ಕೊಡಬೇಕು. ಸ್ಫಟಿಕಶಿಲೆಯನ್ನು ಸೀಳಿ ಕೆಲಸಮಾಡುವುದಾದರೆ ದಿನಕ್ಕೆ ಎರಡು ಪಣದಂತೆ ಕೂಲಿಕೊಡಬೇಕು.

೧೯. ರತ್ನಗಳನ್ನು ಜೋಡಿಸಿ ಕುಡ್ಮಲರಚನೆಮಾಡುವುದಕ್ಕೂ, ಮಣಿಗಳಿಗೆ ರಂಧ್ರಮಾಡುವುದಕ್ಕೂ ಒಂದೊಂದು ಮಣಿಗೂ ಒಂದೊಂದು ಕಾಕಿಣೀ ನಾಣ್ಯವು ಕೂಲಿಯೆಂದು ಹೇಳಿದೆ. ಸ್ಫಟಿಕಮಣಿಯಲ್ಲಿ ರಂಧ್ರಮಾಡುವುದಕ್ಕೆ ಮಿಕ್ಕವುಗಳಿಗಿಂತ ನಾಲ್ಕುಕವಡೆ ಹೆಚ್ಚುಕೂಲಿ ಕೊಡಬೇಕು.

**ಕಾಂಸ್ಯತಾಲಸ್ಯ ನಿರ್ಮಾಣೇ ಧಮನೇ ತು ಪಣತ್ರಯಂ ।**
**ಲಾಕ್ಷಾನಿರ್ಮಾಣಕೇ ಕಾರ್ಯೇ ತದರ್ಧಮಪಿ ಕೀರ್ತಿತಂ ॥ ೨೦ ॥**

**ಗವಾಂ ಚ ದೋಹನೇ ಚೈವ ವರಾಟೇ ತುರ್ಯವೇತನಂ ।**
**ವೇತನೇ ವಸ್ತ್ರನಿರ್ಮಾಣೇ ಪತ್ರೇ ಹಸ್ತಪಣತ್ರಯಂ ॥ ೨೧ ॥**

**ಅವಿವಸ್ತ್ರಸ್ಯ ನಿರ್ಮಾಣೇ ಸ್ಯಂದನಂ ದಶಕಾಕಿಣೀ ।**
**ಪಿಧಾನವಸ್ತ್ರನಿರ್ಮಾಣೇ ತ್ರಿಪಣಂ ಪರಿಕೀರ್ತಿತಂ ॥ ೨೨ ॥**

**ದಶಕಾಕೀ ಣಿಊರ್ಧ್ವಾರ್ಧಸ್ತದ್ವ್ಯಯೇ ಪಣ್ಯವೇತನಂ ।**
**ವಂಶಾಜೀವಸ್ಯ ಪ್ರತ್ಯಹ್ನಾ ಪಣಸ್ಯಾರ್ಧೇ ಸಕಾಕಿಣೀ ॥ ೨೩ ॥**

---

೨೦. ಕಂಚಿನ ತಾಳವನ್ನು ಮಾಡುವ ಸಂದರ್ಭದಲ್ಲಿ ಕುಲುಮೆಯನ್ನೂದಿದರೆ ಮೂರುಪಣಗಳು, ಅರಗಿನ ಬಳೆ ಮುಂತಾದುವನ್ನು ನಿರ್ಮಿಸುವ ಕೆಲಸಕ್ಕೆ ಅದರಲ್ಲಿ ಅರ್ಧ ಕೂಲಿ ಕೊಡಬೇಕು.

೨೧. ಹಸುವಿನ ಹಾಲುಕರೆಯುವ ಕೆಲಸಕ್ಕೆ ದಿನಕ್ಕೆ ಕವಡೆಯಲ್ಲಿ ಕಾಲುಭಾಗ ವೇತನ ಕೊಡಬೇಕು. ಹತ್ತಿಯುಬಟ್ಟೆ ನೇಯುವುದಕ್ಕೆ ಹಸ್ತಪತ್ರ ಪ್ರಮಾಣಕ್ಕೆ ಮೂರುಪಣ ಕೂಲಿಯನ್ನೂ, ಉಣ್ಣೆಯುಬಟ್ಟೆಯನ್ನು ನೇಯುವುದಕ್ಕೆ ಪಟ್ಟೆಒಂದಕ್ಕೆ ಹತ್ತುಕಾಕಿಣಿಗಳನ್ನೂ ಕೊಡಬೇಕು.

೨೨. ಬಹಿರ್ವಾಸ (ಧೋತ್ರ) ನಿರ್ಮಾಣಕ್ಕೆ ಮೂರುಪಣ ಕೂಲಿಯನ್ನು ಕೊಡಬೇಕು ಎಂದು ಹೇಳುತ್ತಾರೆ.

೨೩. ಹತ್ತುಕಾಕಿಣಿಗಿಂತ ಹೆಚ್ಚಾಗಿ ಖರ್ಚಾದರೂ, ಕಮ್ಮಿಯಾಗಿ ಖರ್ಚಾದರೂ, ಸರತಿಗೆ ತಕ್ಕಹಾಗೆ ವೇತನವನ್ನು ಗೊತ್ತುಮಾಡಬೇಕು. ಮೇದರವನಿಗೆ (ಬಿದಿರಿನ ಕೆಲಸಮಾಡುವವನಿಗೆ) ದಿನಕ್ಕೆ ಅರ್ಧಪಣದ ಮೇಲೆ ಒಂದು ಕಾಕಿಣಿಯನ್ನು ಕೂಲಿ ಕೊಡಬೇಕು.

**ಲೋಹಕಾರಸ್ಯ ಚ ತಥಾ ನಾಪಿತಸ್ಯ ಚ ವೇತನಂ ।**
**ಶಿರಸಾ ತಸ್ಯ ವಪನೇ ವಿಜ್ಞೇಯಾ ದಶಕಾಕಿಣೀ ॥ ೨೪ ॥**

**ಸಶ್ಮಶ್ರುನಖಮಾನೇ ತು ಪ್ರದದ್ಯಾತ್ಕಾಕಿಣೀದ್ವಯಂ ।**
**ನಾರೀಣಾಮಥ ಸಂಸ್ಕಾರೇ ನಖಚಿತ್ರಾದಿರಂಜನೇ ॥ ೨೫ ॥**

**ಸಕಾಕಿಣಿ ಪಣಂ ತಚ್ಚ ಸವಿತ್ರೇ ಚ ಪಯೋಧರೇ ।**
**ಪಣಾನಾಂ ತುರ್ಯಕಂ ದದ್ಯಾತ್ಸೀಮಂತಸ್ಯಾಲಕೇ ತಥಾ ॥ ೨೬ ॥**

**ಪದಚಿತ್ರೇ ತು ಸಾರ್ಧಂ ಸ್ಯಾದ್ಗ್ರೀವಾಣಾಂ ಗುಹ್ಯಧಾರಣೇ ।**
**ಧಾನ್ಯಾನಾಂ ರೋಪಣೇ ಚೈವ ದಿನೈಕೇ ಪಣವೇತನಂ ॥ ೨೭ ॥**

**ಲವಣೇ ತು ತಥಾ ದೇಯಾಂ ಗುವಾಕಾನಾಂ ಚ ರೋಪಣೇ ।**
**ದಂಡಪತ್ರಸ್ಯ ಸಂಸ್ಕಾರೇ ಮರಿಚಾನಾಂ ತಥೈವ ಚ ॥ ೨೮ ॥**

---

೨೪. ಕಂಚುಗಾರನಿಗೂ ಮತ್ತು ನಾಪಿತನಿಗೂ ಇದೇ ರೀತಿ ವೇತನಕೊಡಬೇಕು. ತಲೆ ಕ್ಷೌರಮಾಡಿದರೆ ಹತ್ತುಕಾಕಿಣಿ ಕೊಡಬೇಕು.

೨೫. ಮೀಸೆಗಡ್ಡ ಕ್ಷೌರಮಾಡಿ ಉಗುರು ತೆಗೆದರೆ (ಮುಖಕ್ಷೌರ ಮಾಡಿದರೆ) ಎರಡು ಕಾಕಿಣಿಯನ್ನು ಕೊಡಬೇಕು. ಹೆಂಗಸರಿಗೆ ಕಾಲುಗುರನ್ನು ತೆಗೆದು ರಂಜಿಸುವಂತೆ ಚಿತ್ರಸಂಸ್ಕಾರ ಮಾಡಿದರೆ ಒಂದು ಪಣದಮೇಲೆ ಒಂದುಕಾಕಿಣಿಯನ್ನು ಕೊಡಬೇಕು.

೨೬. ಮೋಡದ ಮಧ್ಯದಲ್ಲಿ ಸೂರ್ಯನಿರುವಾಗ ಎಂದರೆ ಮಳೆಗಾಲದಲ್ಲಿ ಅಲಕದಲ್ಲಿ ಸೀಮಂತವನ್ನು ತಿದ್ದಿ ಸರಿಮಾಡುವುದಕ್ಕೆ ನಾಲ್ಕು ಪಣಗಳನ್ನು ಕೊಡಬೇಕು.

೨೭ ಕುತ್ತಿಗೆಯಲ್ಲಿ ಗೋಪ್ಯವಾದ ಚಿತ್ರಗಳನ್ನು ರಚಿಸುವುದಕ್ಕೂ, ಪಾದಗಳಲ್ಲಿ ಚಿತ್ರಗಳನ್ನು ರಚಿಸುವುದಕ್ಕೂ ದಿನಕ್ಕೆ ಒಂದುವರೆ ಪಣ ಕೊಡಬೇಕು ಧಾನ್ಯಗಳನ್ನು ಬಿತ್ತುವ ಕೆಲಸದಲ್ಲಿ ದಿನಕ್ಕೆ ಒಂದು ಪಣದಂತೆ ವೇತನಕೊಡಬೇಕು.

೨೮. ಉಪ್ಪನ್ನು ಅಗೆಯುವುದಕ್ಕೂ, ಅಡಕೆಯ ಸೊಸಿಯನ್ನು ನೆಡುವ ಸಂದರ್ಭದಲ್ಲಿಯೂ ಸಹ ಹಿಂದೆ ಹೇಳಿದಂತೆಯೇ ವೇತನವನ್ನು ಕೊಡಬೇಕು. ದಂಡಪತ್ರವನ್ನು ಸಂಸ್ಕರಿಸುವುದಕ್ಕೂ, ಮತ್ತು ಮೆಣಸನ್ನು ವಿಂಗಡಿಸುವುದಕ್ಕೂ ಎರಡು ಪಣದ ಮೇಲೆ ಹತ್ತುಕವಡೆಯನ್ನು ವೇತನಕೊಡಬೇಕು.

ಪಣದ್ವಯಂ ವರಾಟಾನಾಮಧಿಕಂ ದಶಮೇವ ತು ।
ಹಲೇಹಲೇ ಪಣೈಕಂ ಸ್ಯಾತ್ಕಾಕಿಣ್ಯಧಿಕಮೇವ ಚ ॥ ೨೯ ॥

ಪಣತ್ರಯಂ ಚಕ್ರಪಣೇ ಮಹಿಷಾಣಾಂ ಪಣಾಧಿಕಂ ।
ನರಾಣಾಂ ವಾಹನೇ ಚೈವ ಪಣೈಕಂ ದಶಕಾಕಿಣೀ ॥ ೩೦ ॥

ದಾಸೀನಾಂ ಗರ್ದಭಾನಾಂ ಚ ಅಧಿಕಂ ಕಾಕಿಣೀದ್ವಯಾತ್ ।
ಕ್ಷಾಲನೇ ಚಾಪಿ ವಸ್ತ್ರಸ್ಯ ತೈಲಕ್ಷಾರವಿವರ್ಜಿತೇ ॥ ೩೧ ॥

ವಸ್ತ್ರೇ ಪ್ರತಿಪಣಂ ದದ್ಯಾದ್ದೀರ್ಘೇ ಪ್ರಸ್ಥೇಽಪಿ ವರ್ಧಯೇತ್ ।
ಸದ್ಯಃ ಪ್ರಕ್ಷಾಲನೇಽಪ್ಯರ್ಧಂ ದಿನಾದಾವಧಿಕಂ ಭವೇತ್ ॥ ೩೨ ॥

ಶ್ವೇತವಸ್ತ್ರೇ ಭವೇನ್ನ್ಯೂನಂ ಪಟೇ ಸೂಕ್ಷ್ಮೇ ಚ ವರ್ಧಯೇತ್ ।
ಮೃತ್ತಿಕಾನಾಂ ಸಮುದ್ಧಾರೇ ಕುದ್ದಾಲೇ ಚೇಕ್ಷುಪೀಡನೇ ॥ ೩೩ ॥

---

೨೯-೩೦. ಉಳುಮೆಗಾಗಿ ಬರುವ ಪ್ರತಿಯೊಂದು ನೇಗಿಲಿಗೂ ಒಂದುಪಣ ಮತ್ತು ಒಂದುಕಾಕಿಣಿಯನ್ನು ಕೊಡಬೇಕು. ಗಾರೆ ಅರೆಯುವ ಚಕ್ರವನ್ನು ಎಳೆಯುವ ಕೆಲಸಮಾಡುವುದಕ್ಕೆ ಮೂರುಪಣ ಕೂಲಿಯನ್ನು ಕೊಡಬೇಕು. ಅವುಗಳಿಗೆ ಕೋಣಗಳನ್ನು ಕಟ್ಟಿದರೆ ಇನ್ನೂ ಒಂದುಪಣ ಹೆಚ್ಚಾಗಿ ಕೂಲಿಕೊಡಬೇಕು. ಮನುಷ್ಯರೇ ಅದನ್ನು ಎಳೆಯುವುದಾದರೆ ಒಂದುಪಣ ಹತ್ತುಕಾಕಿಣಿಯನ್ನು ಕೊಡಬೇಕು

೩೧. ಹೆಣ್ಣಾಳುಗಳಿಂದ ಕೆಲಸಮಾಡಿಸುವಾಗಲೂ, ಕತ್ತೆಗಳಿಂದ ಕೆಲಸ ಮಾಡಿಸುವಾಗಲೂ ಅದಕ್ಕಿಂತ ಎರಡು ಕಾಕಿಣಿಯನ್ನು ಹೆಚ್ಚಾಗಿ ಕೂಲಿಕೊಡಬೇಕು. ಬಟ್ಟೆಗೆ ಹತ್ತಿರುವ ತೈಲಕ್ಷಾರಾದಿಗಳು ಹೋಗುವಂತೆ ವಸ್ತ್ರವನ್ನು ಒಗೆಯುವುದು ಶ್ರಮಸಾಧ್ಯ.

೩೨. ಹೀಗೆ ಒಗೆದ ಪ್ರತಿಯೊಂದು ವಸ್ತ್ರಕ್ಕೂ ಒಂದೊಂದು ಪಣವನ್ನು ಕೂಲಿ ಕೊಡಬೇಕು. ವಸ್ತ್ರವು ಉದ್ದವಾಗಿದ್ದರೆ ಪ್ರಸ್ಥವನ್ನು ಎಂದರೆ ಅವನಿಗೆ ಕೊಡುವ ಕೂಲಿಯ ಧಾನ್ಯಪರಿಮಾಣವನ್ನು ಹೆಚ್ಚಿಸಬೇಕು.

೩೩. ತತ್ಕ್ಷಣ ಒಗೆದು ಕೊಡುವುದಕ್ಕಾದರೆ ಅರ್ಧಕೂಲಿಯನ್ನು, ಹೆಚ್ಚಾಗಿಯೂ ಬಿಳಿಯ ಬಟ್ಟೆಯನ್ನು ಒಗೆಯುವುವಕ್ಕೆ ಸ್ವಲ್ಪಕಡಿಮೆಯಾಗಿಯೂ, ದಿನದ ಆದಿಭಾಗದಲ್ಲಿ ಒಗೆದರೆ ಇನ್ನೂ ಅಧಿಕವಾಗಿಯೂ ಕೂಲಿಕೊಡಬೇಕು. ಸೂಕ್ಷ್ಮವಸ್ತ್ರಗಳನ್ನು ಒಗೆಯುವುದಕ್ಕೆ ಹೆಚ್ಚು ಕೂಲಿಯನ್ನು ಕೊಡಬೇಕು.

ವೇತನಂ ಪುಷ್ಪಸಂಸ್ಕಾರೇ ಸಹಸ್ರೇ ದಶಕಾಕಿಣೀ ।
ಕಾಕಿಣೀ ಸ್ರಜ್ಞಿಬದ್ಧೇ ಚ ದ್ವಿಗುಣಂ ಕಂಠಮಾಲಿಕಾ ॥ ೩೪ ॥

ಆಬದ್ಧೇ ದ್ವ್ಯಂಗುಲಂ ಯಾವನ್ಮುಂಡಮಾಲಾ ಪ್ರಕೀರ್ತಿತಾ ।
ಹಸ್ತತ್ರಯೇ ಕಂಠಮಾಲಾ ಆನಾಭಿಕಮಲಾವಧಿ ॥ ೩೫ ॥

ಕಾಕಿಣೀಕತ್ರಯಂ ಚೈವ ನಿರ್ಮಾಣೇ ದ್ವಿಜಸತ್ತಮಾಃ ।
ಮಾಲತ್ಯಾಶ್ಚ ತುಲಸ್ಯಾಶ್ಚ ಜಾತೀಯೂಥ್ಯೋಶ್ಚ ಸತ್ತಮಾಃ ॥ ೩೬ ॥

ತದರ್ಧಾರ್ಧಂ ಮಾರುತೇನ ದಮನೇ ಬಕುಲಸ್ಯ ಚ ।
ವೇತನಂ ದೀಪತೈಲೇ ಚ ಆಜ್ಯಸ್ಯ ಪರಿವರ್ಧಯೇತ್ ॥ ೩೭ ॥

---

೩೪. ಗುದ್ದಲಿಯಿಂದ ಅಗೆದು ಮಣ್ಣನ್ನು ತೆಗೆಯುವುದಕ್ಕೂ, ಮತ್ತು ಕಬ್ಬನ್ನು ಗಾಣಕ್ಕೆ ಕೊಟ್ಟು ರಸಹಿಂಡುವುದಕ್ಕೂ, ಹೂವುಗಳನ್ನು ಶೋಧಿಸಿ ಸಂಸ್ಕರಿಸುವುದಕ್ಕೂ, ಸಾವಿರಕ್ಕೆ ಹತ್ತುಕಾಕಿಣಿಯಂತೆ ವೇತನಕೊಡಬೇಕು. ಉದ್ದವಾದ ಹೂವಿನ ದಂಡೆಯನ್ನು ಕಟ್ಟುವುದಕ್ಕೆ ಮೊಳಕ್ಕೆ ಒಂದು ಕಾಕಿಣಿಯಂತೆಯೂ, ಕಂಠಹಾರವನ್ನು ಕಟ್ಟುವುದಕ್ಕೆ ಮೊಳಕ್ಕೆ ಎರಡು ಕಾಕಿಣಿಯಂತೆಯೂ ಕೂಲಿಕೊಡಬೇಕು.

೩೫. ಮಾಲಾಬಂಧನ ರೀತಿಯಿಂದ ಎರಡು ಅಂಗುಲ ಉದ್ದದವರೆಗೆ ಕಟ್ಟದೆ ಬಿಟ್ಟರೆ ಮುಂಡಮಾಲೆ ಎನಿಸುವುದು. ನಾಭಿಕಮಲದವರೆಗೆ ಜೋಲುತ್ತಾ ಮೂರು ಮೊಳ ಇರುವುದು ಕಂಠಮಾಲಾ ಎನ್ನಿಸಿಕೊಳ್ಳುವುದು.

೩೬. ಅಯ್ಯಾ ಬ್ರಾಹ್ಮಣರೇ ! ಇಂತಹ ಮಾಲೆಯನ್ನು ನಿರ್ಮಿಸುವುದಕ್ಕೆ ಮೂರುಕಾಕಿಣಿ ಕೂಲಿಕೊಡಬೇಕು. ಎಲೈ ಸತ್ಪುರುಷರೇ ! ಜಾಜಿಹೂವಿನ ಮಾಲೆ ತುಲಸಿಯಮಾಲೆ, ಜಾಜಿ ಸೇವಂತಿಗೆ ಮಿಶ್ರವಾದ ದಂಡೆ, ಇವುಗಳ ಹಾರಕಟ್ಟುವುದಕ್ಕೂ

೩೭. ಮತ್ತು ಗಾಳಿಯಿಂದ ಉದುರಿದ ಪಗಡೆಯ ಹೂವುಗಳನ್ನು ಜೋಡಿಸಿ ಕಟ್ಟುವುದಕ್ಕೂ, ಹಿಂದಿನದರ ಕಾಲುಭಾಗವನ್ನು ಕೊಡಬೇಕು. ನಂದಾದೀಪವನ್ನು ನೋಡಿಕೊಳ್ಳುವ ವಿಚಾರದಲ್ಲಿ ತೈಲದೀಪವನ್ನು ಪ್ರಜ್ವಲಿಸುವುದಕ್ಕಿಂತ ಆಜ್ಯದೀಪ ಪ್ರಜ್ವಲಿಸುವುದಕ್ಕೆ ಕೂಲಿ ಹೆಚ್ಚು.

**ಯಾಮೇಯಾಮೇ ರೌಪ್ಯಮಾಷಂ ಸ್ನೇಹೇ ಚೈವ ತು ಕಾಕಿಣೀ ।**
**ಸಾರ್ಧಾಂಗುಲಪ್ರಮಾಣೇನ ವಸ್ತ್ರವರ್ತಿಂ ವಿದುರ್ಬುಧಾಃ ॥ ೩೮ ॥**

**ಷಡಂಗುಲೇನ ಧೈರ್ಯಂ ಚ ನ ನ್ಯೂನಂ ನಾಧಿಕಂ ಭವೇತ್ ।**
**ಪಂಚವಿಂಶತಿಭಿಸ್ಸಂಖ್ಯಾ ತಂತುಭಿರ್ದ್ವಿಜಸತ್ತಮಾಃ ॥ ೩೯ ॥**

**ಪಂಚಾಂಗುಲೇನ ಮಾನೇನ ಕರ್ತವ್ಯಃ ಸುಸಮಾಹಿತಃ ।**
**ಹಸ್ತೋಚ್ಛ್ರಯೇ ಪ್ರದದ್ಯಾತ್ತು ಮುಷ್ಟಿಹಸ್ತೇ ತು ಮಧ್ಯಮಂ ॥ ೪೦ ॥**

**ತ್ರಿಹಸ್ತೇ ಚತುರ್ಹಸ್ತೇ ವಾ ಉತ್ತಮಂ ಮಾನಮೀರಿತಂ ।**
**ಸ್ವರ್ಣಧಾರೇ ಹತೋ ರಾಜಾ ರಜತೇ ಸರ್ವಕಾಮದಃ ॥ ೪೧ ॥**

---

೩೮. ಒಂದು ಯಾಮಕಾಲ ಆಜ್ಯದೀಪ ಉರಿಯುವಂತೆ ನೋಡಿಕೊಂಡರೆ ಒಂದುಮಾಷ ಪ್ರಮಾಣದ ರೌಪ್ಯವನ್ನೂ, ಒಂದು ಯಾಮಕಾಲ ತೈಲದೀಪ ಉರಿಯುವಂತೆ ನೋಡಿಕೊಂಡರೆ ಒಂದು ಕಾಕಿಣಿಯನ್ನೂ ಕೂಲಿಕೊಡಬೇಕು. ಬಟ್ಟೆಯಲ್ಲಿ ಬತ್ತಿಮಾಡಿ ದೀಪಉರಿಸುವುದಕ್ಕೆ ಹಾಕುವುದಾದರೆ ಬತ್ತಿಯು ಒಂದೂವರೆ ಅಂಗುಲ ಪ್ರಮಾಣವಿರಬೇಕೆಂದು ಪ್ರಾಜ್ಞರು ತಿಳಿಸಿದ್ದಾರೆ.

೩೯. ನೂಲಿನ ಬತ್ತಿಯಾದರೆ ಆರು ಅಂಗುಲವಿದ್ದರೆ ಧೈರ್ಯವಾಗಿರಬಹುದು. ಅದಕ್ಕಿಂತ ಹೆಚ್ಚಾಗಲೂಬಾರದು ಕಮ್ಮಿಯಾಗಲೂಬಾರದು. ಅಯ್ಯಾ ಬ್ರಾಹ್ಮಣ ಶ್ರೇಷ್ಠರೇ! ಇಪ್ಪತ್ತೈದು ಎಳೆಗಳನ್ನು ಸೇರಿಸಿ ಬತ್ತಿಯನ್ನು ಮಾಡಿ ಹಾಕಬೇಕು.

೪೦. ಸಮಾಹಿತಮನಸ್ಕನಾಗಿ ನೋಡಿಕೊಳ್ಳುವವನು ಐದು ಅಂಗುಲ ಅಳತೆಯ ಬತ್ತಿಯನ್ನೇ ಮಾಡಬಹುದು. ಒಂದುಮೊಳ ಎತ್ತರದಲ್ಲಿಯೋ ಅಥವಾ ಒಂದು ಗುದ್ದುಮೊಳ ಎತ್ತರದಲ್ಲಿಯೋ ದೀಪವನ್ನಿಡುವುದು ಮಧ್ಯಮ.

೪೧. ಮೂರುಮೊಳ ಎತ್ತರದಲ್ಲಾಗಲೀ, ನಾಲ್ಕುಮೊಳ ಎತ್ತರದಲ್ಲಾಗಲಿ ದೀಪವನ್ನಿಡುವುದು ಉತ್ತಮವಾದ ಅಳತೆಯ ಎತ್ತರವೆಂದು ಹೇಳುತ್ತಾರೆ. ದೀಪದ ಜ್ವಾಲೆಯು ಸ್ವರ್ಣವರ್ಣವಾಗಿದ್ದರೆ ರಾಜನಿಗೆ ಕೆಟ್ಟದ್ದು ಬೆಳ್ಳಿಯಂತೆ ಬೆಳ್ಳಗೆ ಉರಿದರೆ ಇಷ್ಟಾರ್ಥಗಳನ್ನು ಕೊಡುವುದು.

ತಾಮ್ರೇ ಚಾಯುಃಕ್ಷಯಮಾಯಸೇ ದುರ್ಗತಿಪ್ರದಃ ।
ಶಸ್ತ್ರಸ್ಯ ಕರಮರ್ದಸ್ಯ ಪ್ರಶಸ್ತೋತ್ತರ ಉಚ್ಯತೇ ॥ ೪೨ ॥

ದೀಪಾದರಂ ಕಾಂಸ್ಯಮಯಂ ತಥಾ ರೀತಿಮಯಸ್ಯ ಚ ।
ಅಭಾವೇ ಮೃಣ್ಮಯಸ್ಯೈವ ಮೃಣ್ಮಯೇ ಮಾನವರ್ಜಿತಂ ॥ ೪೩ ॥

ದಶಾಂಗಧೂಪಕೇ ಮೂಲ್ಯಂ ವಿಂಶಕೇ ತು ಪಣತ್ರಯಂ ।
ದ್ವಾದಶಕಾಂಗುಲೇಽಪ್ಯರ್ಧವರ್ತಿಂ ಧೂಪಾಯ ವರ್ತಯೇತ್ ॥ ೪೪ ॥

ಹಸ್ತೇ ಪಂಚಪ್ರಮಾಣಂ ಚ ವಸ್ತ್ರೈಃ ಕುರ್ಯಾಚ್ಚ ವರ್ತಿಕಾಂ ।
ಪಂಚವಿಂಶತಿಭಿರ್ವಾ ಯಃ ಸ ಮಹಾವರ್ತಿರುಚ್ಯತೇ ॥ ೪೫ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ
ದ್ವಿತೀಯಭಾಗೇ ಚತುರ್ಥೋಽಧ್ಯಾಯಃ.

---

೪೨. ಜ್ವಾಲೆಯು ಕೆಂಪಗಿದ್ದರೆ ಆಯುಸ್ಸುಕ್ಷೀಣ, ಜ್ವಾಲೆಯು ಕಬ್ಬಿಣದ ವರ್ಣವಾಗಿದ್ದರೆ ದುರ್ಗತಿಯುಂಟಾಗುವುದು. ಬತ್ತಿಯ ಕುಡಿಯನ್ನು ಬೆರಳಿನಿಂದ ಹೊಸಗಿ ಮೊನೆಮಾಡಿ ಹಚ್ಚಿದರೆ ಪ್ರಶಸ್ತವಾಗಿ ಉರಿಯುವುದು.

೪೩. ದೀಪದಕಂಭ ಅಥವಾ ಹಣತೆಯು ಕಂಚಿನದೋ, ಹಿತ್ತಾಳೆಯದೋ ಆಗಿರಬಹುದು. ಅದಕ್ಕೂ ಸಾಧ್ಯವಿಲ್ಲದಿದ್ದರೆ ಮಣ್ಣಿನ ಕಂಬವನ್ನೇ ಇಡಬಹುದು, ಆದರೆ ಆ ಮಣ್ಣಿನ ದೀಪಕ್ಕೆ ಅಳತೆ ಇಷ್ಟೇ ಇರಬೇಕೆಂಬ ನಿರ್ಣಯವಿಲ್ಲ.

೪೪. ಒಂದುಸಾರಿ ದಶಾಂಗಧೂಪ ಸಮರ್ಪಣೆ ಮಾಡುವುದಕ್ಕೆ ಒಂದುಪಣವು ಮೂಲ್ಯವಾಗಿರುವುದು. ವಿಂಶಾಂಗ ಧೂಪಸಮರ್ಪಣೆಗೆ ಮೂರುಪಣೆಗಳ ಮೂಲ್ಯ ಕೊಡಬೇಕು.

೪೫. ಹನ್ನೆರಡು ಅಂಗುಲ ಪ್ರಮಾಣದ ಧೂಪದ ಕುಂಡದಲ್ಲಿ ಅರ್ಧಭಾಗ ವನ್ನು ಧೂಪಹಾಕುವುದಕ್ಕೂ ಐದು ಅಂಗುಲದಷ್ಟು ಭಾಗ ಹಿಡಿದುಕೊಳ್ಳುವುದಕ್ಕೂ ಅನುಕೂಲವಾಗಿ ವಸ್ತ್ರದಲ್ಲಿ ಬತ್ತಿಯನ್ನು ಏರ್ಪಡಿಸುವಾಗ ಇಪ್ಪತ್ತೈದುಹಸ್ತ ಉದ್ದ ವುಳ್ಳ ಬಟ್ಟೆಯಿಂದ ಮಾಡಿದ ಬತ್ತಿಯು ಮಹಾವರ್ತಿಯೆನಿಸುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ದ್ವಿತೀಯ ಭಾಗದಲ್ಲಿ
ನಾಲ್ಕನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ಪ್ರಥಮಭಾಗೇ

## ಪಂಚಮೋಽಧ್ಯಾಯಃ

॥ ಸೂತ ಉವಾಚ ॥

**ಅತಃಪರಂ ಪ್ರವಕ್ಷ್ಯಾಮಿ ಕಲಶಾನಾಂ ವಿನಿರ್ಣಯಂ ।**
**ಯಸ್ಯಾರ್ಪಿತೇ ಚ ಮಾಂಗಲ್ಯೇ ಯಾತ್ರಾಸಿದ್ಧಿಶ್ಚ ಜಾಯತೇ ॥ ೧ ॥**

**ಸಪ್ತಾಂಗಂ ಕಲಶೇ ಜ್ಞೇಯಂ ಪಂಚಾಂಗಮಥ ವಾ ಪುನಃ ।**
**ವಾರಿಮಾತ್ರೇಣ ಸಂಪೂರ್ಣೇ ನ ಸಾ ಸಿದ್ಧಿಃ ಪ್ರಜಾಯತೇ ॥ ೨ ॥**

**ಅಥ ವಾಕ್ಷತಪುಷ್ಪೇಷು ದೇವಮಾವಾಹ್ಯ ಪೂಜಯೇತ್ ।**
**ನ ಚಾನ್ಯತ್ರ ಯಜೇದ್ದೇವಾನ್ನಿಃಫಲಂ ಪರಿಕೀರ್ತಿತಂ ॥ ೩ ॥**

---

### ಐದನೆಯ ಅಧ್ಯಾಯ

೧. ಸೂತರು ಹೇಳುತ್ತಾರೆ—ಕಲಶಗಳಿಗೆ ಮಂಗಳದ್ರವ್ಯ ಸಮರ್ಪಣೆಮಾಡುವುದರಿಂದ ಮಹಾಯಾತ್ರೆಯನ್ನು ಮಾಡಿದಷ್ಟು ಫಲ ಸಿದ್ಧಿಸುವುದು. ಇನ್ನು ಆ ಕಲಶಗಳ ವಿಚಾರದಲ್ಲಿರುವ ನಿರ್ಣಯವನ್ನು ಹೇಳುತ್ತೇನೆ.

೨. ಕಲಶಕ್ಕೆ ಏಳು ಅಂಗಗಳು ಇರಬೇಕು. ಅಥವಾ ಐದು ಅಂಗಗಳಾದರೂ ಇರತಕ್ಕದ್ದು. ಈ ಅಂಗದ್ರವ್ಯಗಳನ್ನು ಕಲಶದಲ್ಲಿ ಸೇರಿಸದೆ ಬರಿಯ ನೀರನ್ನು ತುಂಬಿದರೆ ಕಲಶಸ್ಥಾಪನದಿಂದ ಯಾವ ಸಿದ್ಧಿಯಾಗಬೇಕೋ ಆ ಸಿದ್ಧಿಯು ಆಗುವುದಿಲ್ಲ.

೩. ಅದನ್ನೆಲ್ಲಾ ಸಂಪಾದಿಸಲು ಅನುಕೂಲವಿಲ್ಲದಿದ್ದರೆ ಗಂಧ, ಅಕ್ಷತೆ ಇವುಗಳಿಂದಲಾದರೂ ಉದ್ದಿಷ್ಟದೇವನನ್ನು ಕಲಶದಲ್ಲಿ ಆವಾಹಿಸಿ ಪೂಜಿಸಬೇಕು. ಹೀಗೆ ಕಲಶಸ್ಥಾಪನೆ ಮಾಡದೆ ದೇವರನ್ನು ಪೂಜಿಸಿದರೆ ಆ ಪೂಜೆ ನಿಷ್ಫಲವೆಂದು ತಿಳಿಯಬೇಕು.

ವಟಸ್ಯಾಶ್ವತ್ಥಪ್ಲಕ್ಷಸ್ಯ ಧಾತಕೀಬಿಲ್ವಕಸ್ಯ ಚ ।
ಪಂಚಪಲ್ಲವಮುದ್ದಿಷ್ಟಂ ವಿನ್ಯಸೇತ್ಕಲಶೋಪರಿ ॥ ೪ ॥

ಸೌವರ್ಣಾ ರಾಜತಾ ವಾsಪಿ ತಾಮ್ರಾದ್ಯಾ ಮೃಣ್ಮಯಾಸ್ತಥಾ ।
ಕಲಶಾಃ ಕ್ರಮಶಃ ಪ್ರೋಕ್ತಾ ಯಥಾವಿತ್ತಾನುಸಾರತಃ ॥ ೫ ॥

ಅಭೇದ್ಯಾಃ ಸುಷುಮಾಃ ಶ್ಲಕ್ಷ್ಣಾಃ ಸರ್ವೇ ಆದ್ಯಾಃ ಸುಪೂರಿತಾಃ ।
ನಿಶ್ಛಿದ್ರಾ ಋಜವಶ್ಚೈವ ಸೇಚನಾನ್ಯೇಕಕರ್ಷಕೈಃ ॥ ೬ ॥

ಏಕತ್ರಿಂಶಾಂಗುಲಂ ಕುರ್ಯಾತ್ಕಾಲಾಹೇ ದ್ವಿಗುಣಂ ಶತಂ ।
ಮುಖಂ ಚಾಷ್ಟಾಂಗುಲಂ ತಸ್ಯ ದ್ವ್ಯಂಗುಲೇ ಚ ವರಾರ್ಥಿತೇ ॥ ೭ ॥

ತೈಜಸೈಃ ಕಾರಯೇನ್ಮಾನಂ ಮೃನ್ಮಯೇ ಮಾನಮುಚ್ಯತೆ ।
ಕಲಶೋದಕನಿರ್ಮಾಣೇ ಅಮಾನಂ ನೈವ ಯೋಜಯೇತ್ ॥ ೮ ॥

---

೪. ಆಲ, ಅರಳಿ, ಧಾತಕೀ, ಬಿಲ್ವ, ಬಸರಿ ಎಂಬ ಇವು ಕಲಶದಲ್ಲಿ ಹಾಕಲು ಉದ್ದಿಷ್ಟವಾದ ಪಂಚಪಲ್ಲವಗಳಾಗಿವೆ.

೫. ತನ್ನ ದ್ರವ್ಯಾನುಕೂಲಕ್ಕೆ ತಕ್ಕಂತೆ ಸುವರ್ಣದ್ದು, ಅಥವಾ ರಜತದ್ದು, ಇಲ್ಲವೇ ತಾಮ್ರದ್ದು, ಕೊನೆಗೆ ಮಣ್ಣಿನದು ಈ ಕಲಶಗಳನ್ನು ಏರ್ಪಡಿಸಿಕೊಳ್ಳಬಹುದು.

೬. ಅಭೇದ್ಯಗಳಾಗಿ ಹುಳುಕಿಲ್ಲದೆ ನೇರವಾಗಿಯೂ, ಅಂದವಾಗಿಯೂ ಇರುವ ಪರಮಶೋಭಾಕರವಾದ ಪ್ಲಕ್ಷ, ಬಸರಿ, ಮೊದಲಾದ ಪಂಚಪಲ್ಲವಗಳನ್ನು ಕಲಶದಲ್ಲಿ ಮೊದಲೇ ಹಾಕಿರಬೇಕು. ಬಳಿಕ ಕಲಶದಲ್ಲಿ ಒಂದುಕರ್ಷ ಪ್ರಮಾಣ ಜಲ ನಿಲ್ಲುವಂತೆ ಸೇಚನಮಾಡಬೇಕು.

೭. (?) ಈ ಶ್ಲೋಕದಲ್ಲಿ ಅಳತೆಯ ವಿಚಾರವನ್ನು ಹೇಳುತ್ತಾರೆ. ಯಾವುದರ ಅಳತೆಯೆಂಬುದು ವ್ಯಕ್ತವಾಗುವುದಿಲ್ಲ. ಮೂವತ್ತೊಂದು ಅಂಗುಲದಿಂದ ನೂರು, ಇನ್ನೂರುವರೆಗೆ ಮುಖ ಎಂಟು ಅಂಗುಲ, ಇದು ಪ್ರತಿಮಾ ಪ್ರಮಾಣವಿರಬಹುದು. ಪ್ರಕೃತಕ್ಕೆ ಹೊಂದಿಕೆಯಾಗುವುದಿಲ್ಲ.

೮. ಹಿಂದೆ ಹೇಳಿದ ಮಾನ(ಅಳತೆ) ಲೋಹದಿಂದ ನಿರ್ಮಿತವಾಗುವ ಪ್ರತಿಮಾದಿಗಳಿಗೆ ಅನ್ವಯಿಸುವುದು. ಮೃತ್ತಿಕೆಯಿಂದ ರಚಿತವಾಗುವುದಕ್ಕೆ ಬೇರೆ ಪ್ರಮಾಣ ಉಕ್ತವಾಗಿದೆ. ಕಲಶಕ್ಕೆ ಉದಕವನ್ನು ಹಾಕುವುದರಲ್ಲಿ ಅಳತೆ ಇಲ್ಲದೆ ಹಾಕಬಾರದು

ಕಲಶಸ್ಥಾಪನಂ ವಕ್ಷ್ಯೆ ಯತ್ರ ಸನ್ನಿಹಿತಾಃ ಸುರಾಃ ।
ವ್ಯುತ್ಕ್ರಮೇಣ ಪ್ರವಿನ್ಯಾಸೇ ಯಾತುಧಾನೋ ಹರೇತ್ಕಿಲ ॥ ೯ ॥

ಯಜ್ಞೇ ಸಾಧಾರಣಂ ವಕ್ಷ್ಯೇ ಯದ್ವಿಧಾನಂ ಯಥಾಮತಂ ।
ಸ್ವಸ್ತಿಕೋಪರಿ ವಿನ್ಯಾಸೇ ಸಂಪೂರ್ಣಸ್ಯಾರ್ಧಮಾನಕೇ ॥ ೧೦ ॥

ಚತುರಸ್ರೋತ್ತರಂ ಭಿತ್ವಾ ಚೋರ್ಧ್ವಾಧೋ ಮಾನತಃ ಸಮಂ
ತುರ್ಯಸೂತ್ರಾಣಿ ಮತಿಮಾನ್ಪಂಚಪೂರ್ವಾಯತನಾನಿ ಚ ॥ ೧೧ ॥

ಮಾರ್ಜಯೇತ್ಸ್ವಸ್ತಿಕಾಕಾರಂ ತುರ್ಯಮಾತ್ರಂ ಯಥಾ ಭವೇತ್ ।
ಸ್ವಸ್ತಿಕಂ ಜಾಯತೇ ತತ್ರ ಕಲಶಾನಾಂ ತಥಾಸನಂ ॥ ೧೨ ॥

---

೯. ದೇವತಾಸಾನ್ನಿಧ್ಯವುಂಟಾಗುವುದಕ್ಕೆ ಅರ್ಹವಾದ ಕಲಶಸ್ಥಾಪನ ಕ್ರಮ ವನ್ನು ಹೇಳುತ್ತೇನೆ. ಸ್ಥಾಪನಕ್ರಮುದಲ್ಲಿಯೂ ಅಳತೆಯಲ್ಲಿಯೂ ಕ್ರಮವ್ಯತ್ಯಾಸ ವಾದರೆ ಪೂಜಾಫಲವನ್ನು ರಾಕ್ಷಸರು ಅಪಹರಿಸುವರು.

೧೦. ಯಜ್ಞದಲ್ಲಿ ಅನುಸರಿಸಬೇಕಾದ ವಿಧಾನ ಯಾವುದೆಂಬುದನ್ನು ದೊಡ್ಡ ವರು ಹೇಗೆ ನಿಶ್ಚಯಿಸಿದಾರೆಯೋ ಆ ಸಾಮಾನ್ಯ ಕ್ರಮವನ್ನು ಹೇಳುತ್ತೇನೆ.

೧೧. ಬುದ್ಧಿಶಾಲಿಯಾದವನು ಚತುರಸ್ರದ ಬಾಹುವಿನ ಅರ್ಧಪ್ರಮಾಣವ ನ್ನುಪಯೋಗಿಸಿಕೊಂಡು ಚತುರಸ್ರದ ಮೇಲೆಯೇ ಸ್ವಸ್ತಿಕವನ್ನು ರಚಿಸುವುದಕ್ಕಾಗಿ ಚತುರಸ್ರವನ್ನು ಎಡ, ಬಲ, ಮೇಲು, ಕೆಳಗು ಎಂಬ ಭಾಗಗಳು ಎರಡು ಸಮಭಾಗ ವಾಗುವಂತೆ ಛೇದಿಸಿ ಚತುರಸ್ರಗಳು ಎರಡೂ ಒಂದರ ಮೇಗಡೆ ಒಂದು ಇರುವಂತೆ ನಾಲ್ಕು ಸೂತ್ರವಿನ್ಯಾಸಮಾಡಿ ಪೂರ್ವವೇ ಮೊದಲಾದ ಸ್ಥಾನಗಳಲ್ಲಿ ಸಣ್ಣಚತುರಸ್ರ ಗಳೇರ್ಪಡುವಂತೆ ಮಾಡಬೇಕು.

೧೨. ಆ ಸಣ್ಣಚತುರಸ್ರದ ನಾಲ್ಕನೆಯ ಬಾಹುವು ಮಾತ್ರ ಅಳಿಸುವಂತೆ ಮಾರ್ಜನಮಾಡಬೇಕು. ಹೀಗೆ ಮಾಡಿದರೆ ಸ್ವಸ್ತಿಕವೇರ್ಪಡುವುದು. ಅದು ಕಲಶ ಗಳ ಆಸನಕ್ಕೆ ಅರ್ಹವಾಗುವುದು.

**ಸ್ಯೋನಾಪೃಥಿವೀತಿಮಂತ್ರೇಣ ಕುರ್ಯಾದ್ಭೂಮಿಪರಿಗ್ರಹಂ ।**
**ಮಧ್ಯಮಾನಾಮಿಕಾಭ್ಯಾಂ ಚ ನ್ಯಸೇತ್ಪಾತಾಲಸಂಮುಖಂ ॥**
**ಋಷಿರ್ನಾರಾಯಣೋಽಸ್ಯ ಸ್ಯಾದ್ಗಾಯತ್ರೀ ದೇವತಾ ರವಿಃ ॥ ೧೩ ॥**

**ವಿನಿಯೋಗಃ ಸ್ಥಾಪನೇ ಚ ತಥಾ ಭೂಮಿಪರಿಗ್ರಹಃ ।**
**ಧಾನ್ಯಮಸೀತಿ ಮಂತ್ರೇಣ ಧಾನ್ಯಸೂಕ್ತಂ ಪರಿಸ್ತವೇತ್ ॥ ೧೪ ॥**

**ಅಸ್ಯ ಮಂತ್ರಸ್ಯ ಚ ಋಷಿ ಗೌತಮಃ ಪರಿಕೀರ್ತಿತಃ ।**
**ಅನುಷ್ಟುಪ್ಚ ಭವೇಚ್ಛಂದೋ ದೇವತಾಸ್ಯ ಗುರುಃ ಸ್ಮೃತಃ ॥ ೧೫ ॥**

**ಆಜಿಘ್ರಂ ಕಲಶಂ ಮಹ್ಯಾಂ ಸ್ಥಾಪಯೇತ್ಕಲಶಂ ತತಃ ।**
**ಕನಿಷ್ಠಾಂಗುಷ್ಠಕಂ ತ್ಯಕ್ತ್ವಾ ಕುಂಭಾಗ್ರೇ ಉದರೇಽಪಿ ಚ ॥ ೧೬ ॥**

---

೧೩. " ಸ್ಯೋನಾ ಪೃಥಿವೀಭವಾ " ಎಂಬ ಮಂತ್ರದಿಂದ ಮಧ್ಯಮ ಮತ್ತು ಅನಾಮಿಕಾ ಈ ಬೆರಳುಗಳನ್ನು ಪಾತಾಳಾಭಿಮುಖವಾಗಿ ಊರಿಕೊಂಡು ಭೂಮಿಯನ್ನು ಪ್ರಾರ್ಥಿಸಿ ಆಸನ ಪರಿಗ್ರಹಮಾಡಬೇಕು.

೧೪. ಈ ಮಂತ್ರಕ್ಕೆ ನಾರಾಯಣನೇ ಋಷಿ, ಸೂರ್ಯನೇ ದೇವತೆ, ಗಾಯತ್ರಿಯು ಛನ್ದಸ್ಸು, ಕಲಶಸ್ಥಾಪನದಲ್ಲಿಯೂ, ಭೂಮಿಪರಿಗ್ರಹದಲ್ಲಿಯೂ ಈ ಮಂತ್ರವನ್ನು ಹೇಳಬೇಕು.

೧೫. " ಧಾನ್ಯಮಸಿ " ಎಂಬ ಮಂತ್ರದಿಂದ ಧಾನ್ಯಸೂಕ್ತವನ್ನು ಸ್ತುತಿಸಬೇಕು. ಈ ಮಂತ್ರಕ್ಕೆ ಗೌತಮನು ಋಷಿ, ಗುರುವು ದೇವತೆ, ಅನುಷ್ಟುಪ್ಪೇ ಛಂದಸ್ಸೆಂದು ತಿಳಿಯಬೇಕು.

೧೬. " ಆಜಿಘ್ರ " ಎಂಬ ಮಂತ್ರದಿಂದ ಕಲಶವನ್ನು ಭೂಮಿಯಲ್ಲಿ ಸ್ಥಾಪನೆ ಮಾಡಬೇಕು. ಅಂಗುಷ್ಠ, ಕನಿಷ್ಠಿಕ ಈ ಬೆರಳುಗಳನ್ನು ಬಿಟ್ಟು ಮಿಕ್ಕ ಮೂರು ಬೆರಳುಗಳನ್ನೂ ಕೂಡಿಸಿ ಬ್ರಹ್ಮಮುದ್ರೆಯಿಂದ ಕಲಶದ ಮೇಲುಭಾಗವಲ್ಲಿಯೂ, ಉದರ ಭಾಗದಲ್ಲಿಯೂ ನ್ಯಾಸಮಾಡಬೇಕು.

ವಿನ್ಯಾಸಶ್ಚೈವ ಕರ್ತವ್ಯಸ್ತ್ರಂಗುಲೇ ಬ್ರಹ್ಮಮುದ್ರಯಾ ।
ಆಜಿಘ್ರಸ್ಯ ಚ ಮಂತ್ರಸ್ಯ ಋಷಿರ್ಭರ್ಗ ಉದಾಹೃತಃ ॥
ಪಂಕ್ತಿಶ್ಛಂದಶ್ಚ ಉದ್ದಿಷ್ಟೋ ದೇವತಾ ವಿಷ್ಣುರವ್ಯಯಃ ॥ ೧೭ ॥

ಕಲಶಸ್ಥಾಪನೇ ಚೈವ ಸೋಮಯಾಗೇ ಚ ಯೋಜಯೇತ್ ।
ಪಂಚನದ್ಯೇತಿಮಂತ್ರೇಣ ಕ್ಷಿಪೇದ್ಗಂಗಾಜಲಂ ತತಃ ॥ ೧೮ ॥

ಋಷಿಶ್ಚ ಪರಮಾ ತ್ರಿಷ್ಟುಬ್ದೇವತಾ ಸೋಮಭಾವಿನಃ ।
ವಿನಿಯೋಗಃ ಪಲ್ಲವೇ ಚ ವಿನ್ಯಸೇತ್ಪರಿಕೀರ್ತಿತಃ ॥ ೧೯ ॥

ಯಾಃ ಫಲಿನೀತಿ ಮಂತ್ರೇಣ ಪ್ರದದ್ಯಾತ್ಸಫಲಾಕ್ಷತಂ ।
ಯಾಃ ಫಲಿನೀತಿ ಮಂತ್ರಸ್ಯ ಋಷಿಃ ಕಮಲಸಂಜ್ಞಕಃ ॥
ತ್ರಿಷ್ಟುಪ್ಛಂದೋ ಗಣಪತಿರ್ದೇವತಾ ಪರಿಕೀರ್ತಿತಾ ॥ ೨೦ ॥

ಬದರಂ ನಾಗರಂ ಚೈವ ಧಾತ್ರೀ ಚ ಪಿಚುಮರ್ದಕಂ ।
ಜೀವಂತೀ ಪೀವರಂ ಚೈವ ಫಲಾನ್ಯೇತಾನಿ ವರ್ಜಯೇತ್ ॥ ೨೧ ॥

---

೧೭. ಈ ಆಜಿಘ್ರ ಎಂಬ ಮಂತ್ರಕ್ಕೆ ಭರ್ಗನೇ ಋಷಿ, ಪಂಕ್ತಿ ಎಂಬುದು ಛಂದಸ್ಸು, ನಾಶರಹಿತನಾದ ವಿಷ್ಣುವೇ ದೇವತೆ, ಕಲಶಸ್ಥಾಪನದಲ್ಲಿಯೂ, ಸೋಮಯಾಗದಲ್ಲಿಯೂ ಇದನ್ನು ವಿನಿಯೋಗಿಸಬೇಕು ಎಂದು ಉದ್ದಿಷ್ಟವಾಗಿದೆ.

೧೮. ಅನಂತರ "ಪಂಚನದ್ಯಃ" ಎಂಬ ಮಂತ್ರದಿಂದ ಕಲಶದೊಳಕ್ಕೆ ಗಂಗಾಜಲವನ್ನು ಹಾಕಬೇಕು. ಈ ಮಂತ್ರಕ್ಕೆ ಪರಮನೇ ಋಷಿ,

೧೯. ತ್ರಿಷ್ಟುಪ್ ಎಂಬುದು ಛಂದಸ್ಸು, ಸೋಮಭಾವಿಗಳೇ ದೇವತೆಗಳು, ಈ ಮಂತ್ರವನ್ನು ಪಲ್ಲವವಿನ್ಯಾಸದಲ್ಲಿ ವಿನಿಯೋಗಿಸಬೇಕೆಂದು ಹೇಳಿದೆ.

೨೦. "ಯಾಃ ಫಲಿನೀರ್ಯಾ" ಎಂಬ ಮಂತ್ರದಿಂದ ಪಂಚಫಲಗಳನ್ನು ಅಕ್ಷತೆಯೊಡನೆ ಹಾಕಬೇಕು. ಈ ಮಂತ್ರಕ್ಕೆ ಕಮಲಸಂಜ್ಞಕನೇ ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ಗಣಪತಿಯೇ ದೇವತೆಯೆಂದು ಹೇಳಿದೆ

೨೧, ಫಲ ಎಂದರೆ ಸಿಕ್ಕಿದ ಹಣ್ಣುಗಳೆಲ್ಲಾ ಅರ್ಹವಲ್ಲ. ಎಗಚಿ, ನಾಗರ, ನೆಲ್ಲಿ, ಬೇವು, ಜೀವಂತಿ ಈ ಪಂಚಫಲಗಳನ್ನು ಕಲಶಕ್ಕೆ ಹಾಕಬಾರದು. ಕಲಶದ ಬಾಯಿ ಹಿಡಿಯದಷ್ಟು ದಪ್ಪವಾದುವುಗಳನ್ನೂ ಹಾಕಬಾರದು.

ಹಿರಣ್ಯಗರ್ಭೇತಿ ಋಚಾ ಪಂಚರತ್ನಾನಿ ನಿಕ್ಷಿಪೇತ್ ।
ಋಷಿರ್ಹಿರಣ್ಯಗರ್ಭೋಽಸ್ಯ ಛನ್ದಸ್ತ್ರಿಷ್ಟುಬುದಾಹೃತಂ ॥
ಸವಿತಾ ದೇವತಾ ಚಾಸ್ಯ ರತ್ನನ್ಯಾಸೇ ನಿಯೋಜಯೇತ್ ॥ ೨೨ ॥

ಅವ್ಯೃತೀಕರಣಂ ಕುರ್ಯಾದ್ದೈವಶುಲ್ಬನಮೇವ ಚ ।
ವರುಣಸ್ಯ ತ್ವೇತಿ ಋಷಿರ್ವರುಣಾನ್ತರೇ ಯೋಜಯೇತ್ ॥ ೨೩ ॥

ಶ್ರೀಶ್ಚ ತೇ ಇತಿ ಮಂತ್ರೇಣ ದದ್ಯಾತ್ಪುಷ್ಪಂ ಸಚಂದನಂ ।
ಗಂಧದ್ವಾರೇತಿ ಮಂತ್ರೇಣ ದದ್ಯಾದ್ಗಂಧಂ ವಿಲೋಡಿತಂ ॥ ೨೪ ॥

ಕಾಂಡಾದಿತಿ ಚ ಮಂತ್ರೇಣ ದದ್ಯಾದ್ದೂರ್ವಾಕ್ಷತಂ ಪುನಃ ।
ವ್ರೀಹಯಶ್ಚೇತಿ ಮಂತ್ರೇಣ ಪಂಚ ವ್ರೀಹೀಂಶ್ಚ ನಿಕ್ಷಿಪೇತ್ ॥ ೨೫ ॥

---

೨೨. " ಹಿರಣ್ಯಗರ್ಭಸ್ಸಮವರ್ತತ " ಎಂಬ ಮಂತ್ರದಿಂದ ಕಲಶಕ್ಕೆ ಪಂಚ ರತ್ನಗಳನ್ನು ಹಾಕಬೇಕು. ಈ ಮಂತ್ರಕ್ಕೆ ಹಿರಣ್ಯಗರ್ಭನೇ ಋಷಿ. ಸೂರ್ಯನು ದೇವತೆ, ತ್ರಿಷ್ಟುಪ್ ಎಂಬುದು ಛಂದಸ್ಸು, ಪಂಚರತ್ನಗಳನ್ನು ನ್ಯಾಸಮಾಡುವುದರಲ್ಲಿ ಇದರ ವಿನಿಯೋಗಮಾಡಬೇಕು.

೨೩. " ವರುಣಸ್ಯತ್ವಾ" ಎಂಬ ಮಂತ್ರದಿಂದ ದೈವಶುಲ್ಬನ, ಅವ್ಯೃತೀಕರಣ ಗಳನ್ನು ಮಾಡಬೇಕು. ಈ ಮಂತ್ರಕ್ಕೆ ವರುಣನೇ ಋಷಿ, ಇದನ್ನು ವರುಣಾಂತರ (ಅವ್ಯೃತೀಕರಣ) ದಲ್ಲಿ ವಿನಿಯೋಗಿಸಬೇಕು.

೨೪. " ಶ್ರೀಶ್ಚತೇ ಲಕ್ಷ್ಮೀಶ್ಚ " ಎಂಬ ಮಂತ್ರದಿಂದ ಪುಷ್ಪವನ್ನು ಚಂದನ ಸಹಿತವಾಗಿ ಸಮರ್ಪಿಸಬೇಕು. " ಗಂಧದ್ವಾರಾಂ ದುರಾಧರ್ಷಾಂ " ಎಂಬ ಮಂತ್ರ ಪೂರ್ವಕವಾಗಿ ತೆಯ್ದು ಗಂಧವನ್ನು ಉದ್ಧರಣೆಯಲ್ಲಿ ಕದರಿ ಕಲಶದೊಳಕ್ಕೆ ಹಾಕ ಬೇಕು.

೨೫. "ಕಾಂಡಾತ್ಕಾಂಡಾ" ಎಂಬ ಮಂತ್ರದಿಂದ ದೂರ್ವೆ (ದರ್ಭೆ) ಯನ್ನೂ ಅಕ್ಷತೆಯನ್ನೂ ಸಮರ್ಪಿಸಬೇಕು " ವ್ರೀಹಯಶ್ಚ " ಎಂಬ ಮಂತ್ರದಿಂದ ಪಂಚ ವ್ರೀಹಿಗಳನ್ನು ಹಾಕಬೇಕು.

**ತಿಲಾಶ್ಚ ಮಾಷಾ ಮುದ್ಗಾಶ್ಚ ಶ್ಯಾಮಾಕಾಃ ಶಾಲಯಃ ಸ್ಮೃತಾಃ ।
ಪಂಚ ಧಾನ್ಯಗಣಃ ಪ್ರೋಕ್ತಃ ಸರ್ವಾರಿಷ್ಟನಿಷೂದನಃ ॥ ೨೬ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ
ದ್ವಿತೀಯಭಾಗೇ ಪಂಚಮೋಽಧ್ಯಾಯಃ.**



---

೨೬. ಎಳ್ಳು, ಉದ್ದು, ಹೆಸರು, ನವಣೆ ಮತ್ತು ಭತ್ತ ಇವು ಐದೂ ಸಮಸ್ತ ಅರಿಷ್ಟಗಳನ್ನೂ ನಾಶಮಾಡತಕ್ಕ ಪಂಚಧಾನ್ಯಗಳು ಎಂದು ಉಕ್ತವಾಗಿದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ದ್ವಿತೀಯಭಾಗದಲ್ಲಿ
ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ದ್ವಿತೀಯಭಾಗೇ
## ಷಷ್ಠೋಽಧ್ಯಾಯಃ

॥ ಸೂತ ಉವಾಚ ॥

ಅಥ ಮಾಸಾಶ್ರಯಂ ಕರ್ಮ ಕರ್ತುಂ ಮಾಸನಿರೂಪಣಂ ।
ಕ್ರಿಯತೇ ತದ್ವಿಧಂ ಸಂಖ್ಯೇ ಭವೇನ್ಮಾಸಶ್ಚತುರ್ವಿಧಃ ॥ ೧ ॥

ಚಾಂದ್ರಃ ಸೌರಃ ಸಾವನಶ್ಚ ನಾಕ್ಷತ್ರಶ್ಚ ತಥಾಪರಃ ।
ಶುಕ್ಲಪ್ರತಿಪದಂ ಪ್ರಾಪ್ಯ ಯಾವದ್ದರ್ಶಂ ಚ ಐನ್ದವಃ ॥ ೨ ॥

ಏಕರಾಶೌ ರವಿರ್ಯಾವತ್ಸ ಮಾಸಃ ಸೌರ ಉಚ್ಯತೇ ।
ತ್ರಿಂಶತಾ ದಿವಸೈರ್ಮಾಸಃ ಸಾವನಃ ಪರಿಕೀರ್ತಿತಃ ॥ ೩ ॥

---

## ಆರನೆಯ ಅಧ್ಯಾಯ

೧. ಸೂತರು ಹೇಳುತ್ತಾರೆ—ಈಗ ವರ್ಷದ ಹನ್ನೆರಡು ತಿಂಗಳುಗಳಲ್ಲಿ ಯಾವ ತಿಂಗಳು ಯಾವ ಕರ್ಮಕ್ಕೆ ಯೋಗ್ಯವೆಂದು ನಿರ್ಧರಿಸುವುದಕ್ಕಾಗಿ ಮಾಸದ ವೈವಿಧ್ಯವನ್ನು ನಿರೂಪಣ ಮಾಡುತ್ತೇನೆ.

೨. ಈ ಮಾಸಗಳು (೧) ಚಾಂದ್ರಮಾಸ, (೨) ಸೌರಮಾಸ, (೩) ಸಾವನ ಮಾಸ, (೪) ನಾಕ್ಷತ್ರಮಾಸ ಎಂಬ ನಾಲ್ಕು ಬಗೆಗಳಾಗಿವೆ ಎಂದು ಹೇಳಬೇಕು. ಶುದ್ಧಪಾಡ್ಯಮಿ ಮೊದಲುಗೊಂಡು ಬಹುಳ ಅಮಾವಾಸ್ಯೆಯವರೆಗಿರುವುದು ಚಾಂದ್ರ ಮಾಸವು.

೩. ಸೂರ್ಯನು ಒಂದು ರಾಶಿಯಲ್ಲಿ ಸಂಚರಿಸುವಷ್ಟು ಕಾಲವು ಸೌರಮಾಸ ವೆನಿಸುವುದು. ಮುವ್ವತ್ತುದಿವಸಗಳಿಗೆ ಒಂದು ಸಾವನಮಾಸವಾಗುವುದು.

ನಾಕ್ಷತ್ರಮಾಸೋಽಶ್ವಿನ್ಯಾದಿ ರೇವತ್ಯಂತೋ ಹಿ ವಿಶ್ರುತಃ ।
ಉದಯಾದುದಯಂ ಯಸ್ತು ಸಾವನೋ ದಿವಸೋ ರವೇಃ ॥ ೪ ॥

ತಂತ್ರೇಣೈಕತಿಥೇರ್ಭಾಗಕಾಲೋ ದಿವಸ ಐನ್ದವಃ ।
ರಾಶೇಸ್ತ್ರಿಂಶದ್ಭಾಗಕಾಲಃ ಕಾಲಸ್ತ್ವೇಕಸ್ಯ ಭಾಸ್ವತಃ ॥ ೫ ॥

ಅಹೋರಾತ್ರಂ ತು ತಜ್ಜ್ಞೇಯಂ ಸೌರೇಽಪಿ ಭಾಗಮಾನತಃ ।
ಅಹೋರಾತ್ರಂ ಸಾವನಸ್ಯ ಮುಖ್ಯವೃತ್ತ್ಯೈವ ಲಭ್ಯತೇ ॥ ೬ ॥

ಸೌರೇ ಚಾಂದ್ರೇ ತೂಪಗಣೌ ತ್ರಿಂಶದ್ಭಾಗೇ ತ್ವದರ್ಶನಾತ್ ।
ಸಾವನಾ ದಿವಸಾ ಗ್ರಾಹ್ಯಾ ಋಷೀಣಾಂ ಸಮಯೇ ಗೃಹೇ ॥ ೭ ॥

---

೪. ಅಶ್ವಿನೀ ಮೊದಲು ರೇವತಿಯವರೆಗಿನ ಇಪ್ಪತ್ತೇಳು ನಕ್ಷತ್ರಗಳಷ್ಟು ದಿನಗಳಿಗೆ ಒಂದು ನಾಕ್ಷತ್ರಮಾಸವಾಗುವುದು. ಒಂದು ಸೂರ್ಯೋದಯದಿಂದ ಮುಂದಿನ ಸೂರ್ಯೋದಯದವರೆಗಿನ ಕಾಲವನ್ನು ಸಾವನದಿನವೆನ್ನುವರು.

೫. ಸಂಕ್ಷೇಪವಾದ ಒಂದು ತಿಥಿಯಷ್ಟು ಭಾಗವು ಚಾಂದ್ರದಿನವೆನ್ನುವರು. ಮೇಷ ಮೊದಲಾದ ರಾಶಿಯ ಮೂವತ್ತರಲ್ಲೊಂದು ಭಾಗದಷ್ಟು ಕಾಲವು ಒಂದು ಸೌರದಿನವಾಗುವುದು.

೬. ಸೌರದಿವಸದಲ್ಲಿಯೂ ಚಾಂದ್ರದಿನದಂತೆ ಭಾಗಪ್ರಮಾಣಾನುಸಾರ ಅಹೋರಾತ್ರಿಗಳಿವೆ ಎಂದು ತಿಳಿಯಬೇಕು ಸಾವನದ ಅಹೋರಾತ್ರಪ್ರಮಾಣವು ಮುಖ್ಯವೃತ್ತಿಯಿಂದಲೇ ಎಂದರೆ ಸ್ಪಷ್ಟವಾಗಿ ಕಾಣುವ ಪ್ರಕಾರವೇ ಆಗುವುದು.

೭. ಸೌರಚಾಂದ್ರಮಾಸಗಳಲ್ಲಿ ಉಪಗಣ ಎಂದರೆ ಸಮಾನವಾದ ಒಳಭಾಗಗಳನ್ನು ತಿಳಿಯಲು ಆಗದುದರಿಂದ ಋಷಿಗಳಿಗಾವಶ್ಯಕವಾದ ಕಾಲನಿರ್ಣಯದಲ್ಲಿಯೂ, ಅವರ ಗೃಹಕರ್ಮಾಚರಣೆಯಲ್ಲಿಯೂ ಸಾವನದಿನಗಳನ್ನೇ ಗ್ರಹಣಮಾಡಬೇಕು.

ಅತಿಭಾಗವ್ಯವಸ್ಥಾಯಾಂ ಪ್ರಾಯಶ್ಚಿತ್ತಕ್ರಿಯಾಸು ಚ ।
ಮಂತ್ರೋಪಾಸನಕಾರ್ಯೇ ಚ ಅನ್ನಸ್ಯ ಪ್ರಾಶನೇ ಶಿಶೋಃ ॥ ೮ ॥

ಕರಸ್ಯ ಗ್ರಹಣೇ ರಾಜ್ಞೋ ವ್ಯವಹಾರೇಷು ಮಾಃಸು ಚ ।
ಯಜ್ಞೇಷು ದಿನಸಂಖ್ಯಾಯಾಂ ಗ್ರಾಹ್ಯೋ ಮಾಸಸ್ತು ಸಾವನಃ ॥ ೯ ॥

ಸೌರಮಾಸೋ ವಿವಾಹಾದೌ ಯದಾದ್ವೈ ಸುಪ್ರಗೃಹ್ಯತೇ ।
ಯಜ್ಞೇಷ್ವಪಿ ವ್ರತೇ ವಾಽಪಿ ವಿಹಿತೇ ಸ್ನಾನಕರ್ಮಣಿ ॥ ೧೦ ॥

ಚಾನ್ದ್ರಸ್ತು ಪಾರ್ವಣೇ ಗ್ರಾಹ್ಯೋ ವಾರ್ಷಿಕೇಷ್ವಷ್ಟಕಾಸು ಚ ।
ಶ್ರಾದ್ಧೇಷು ತಿಥಿಕಾರ್ಯೇಷು ತಿಥ್ಯುಕ್ತೇಷು ವ್ರತೇಷು ಚ ॥ ೧೧ ॥

---

೮. ಭಾಗಕ್ಲುಪ್ತವಿಲ್ಲದೆ ಭಾಗಪ್ರಮಾಣವನ್ನು ವ್ಯವಸ್ಥೆಮಾಡುವುದರಲ್ಲಿಯೂ ಪ್ರಾಯಶ್ಚಿತ್ತಾರ್ಥವಾಗಿ ಮಾಡುವ ಕಾರ್ಯಗಳು, ಮಂತ್ರೋಪಾಸನೆಮಾಡುವುದು, ಮಗುವಿಗೆ ಅನ್ನಪ್ರಾಶನಮಾಡುವುದು, ಇವುಗಳಲ್ಲಿಯೂ.

೯. ರಾಜನು ಕಂದಾಯವನ್ನು ತೆಗೆದುಕೊಳ್ಳುವುದು ಇವೇ ಮುಂತಾದ ವ್ಯವಹಾರಗಳಲ್ಲಿಯೂ, ತಿಂಗಳುಗಟ್ಟಲೆ ಲೆಕ್ಕಮಾಡುವುದೇ ಹೊರತು ಉಪಭಾಗದ ವಿಮರ್ಶೆಯು ಬೇಕಿಲ್ಲ. ಯಜ್ಞಮಾಡುವುದರಲ್ಲಿ ಮಾತ್ರ ಮುವ್ವತ್ತು ದಿನಗಳಿಗೆ ಒಂದು ತಿಂಗಳೆಂದು ಸಾವನಮಾಸವನ್ನೇ ಗ್ರಹಿಸಬೇಕು.

೧೦. ವಿವಾಹ ಮುಂತಾದ ಶುಭಕರ್ಮಗಳಲ್ಲಿ ಪೂರ್ವಿಕರು ಸೌರಮಾಸವನ್ನೇ ಗಣಿಸುತ್ತಾರೆ. ಮತ್ತು ಯಜ್ಞಗಳಲ್ಲಿಯೂ, ವ್ರತಗಳಲ್ಲಿಯೂ, ಸ್ನಾನಕರ್ಮಗಳಲ್ಲಿಯೂ ಇದೇ ಲೆಕ್ಕವನ್ನು ಅನುಸರಿಸುವರು.

೧೧. ತ್ರಿಪುರುಷೋಚ್ಚಾರಣ ವಿಧಾನದಿಂದ ಮಾಡುವ ಪಾರ್ವಣಶ್ರಾದ್ಧ, ಪ್ರತಿಸಾಂವತ್ಸರಿಕಶ್ರಾದ್ಧ, ಅಷ್ಟಕಾಶ್ರಾದ್ಧ, ಈ ಶ್ರಾದ್ಧಗಳನ್ನು ಕ್ಲುಪ್ತವಾದ ತಿಥಿಯಲ್ಲಿ ಮಾಡಬೇಕಾಗಿರುವಾಗಲೂ, ಗೊತ್ತಾದ ತಿಥಿಗಳಲ್ಲಿ ಆಚರಿಸಬೇಕಾದ ವ್ರತಗಳಿಗೆ ಕಾಲ ನಿರ್ಣಯಮಾಡುವಾಗಲೂ, ಚಾಂದ್ರಮಾಸದ ಪಕ್ಷ, ತಿಥಿ ಇವುಗಳನ್ನೇ ಗ್ರಹಿಸಬೇಕು.

ನಾಕ್ಷತ್ರಃ ಸೋಮಪಾದೀನಾಮಾರ್ಯಭಾಗವಿಚಾರಣೇ ।
ಕರಗ್ರಹವಿಧೌ ರಾಜ್ಞಾಂ ನಾಯಂ ಸರ್ವಜನಾಕೃತಿಃ ॥ ೧೨ ॥

ತದ್ವಚ್ಚೈತ್ರಾದಿಮಾಸೋಕ್ತಂ ತಿಥ್ಯುಕ್ತಂ ಕರ್ಮ ದೃಶ್ಯತೆ ।
ತತ್ತು ಚಾನ್ದ್ರೇಣ ಕರ್ತವ್ಯಂ ಸಾ ಹಿ ಚೈತ್ರಾದಿನೋಚ್ಯತೆ ॥ ೧೩ ॥

ರಾಜೋಕ್ತೌ ಸಾವನಃ ಪ್ರೋಕ್ತೋ ತಿಥಸಂಭಾಗಕರ್ಮಣಿ ।
ತತ್ರ ಸೌರೋ ಭವೇದ್ವಾಚ್ಯಃ ಸೌರಶಬ್ದಪ್ರವರ್ತನಾತ್ ॥ ೧೪ ॥

ಚಿತ್ರಾನಕ್ಷತ್ರಯೋಗೇನ ಚೈತ್ರೀ ಸಾ ಪೂರ್ಣಿಮಾ ಸ್ಮೃತಾ ।
ತಯೋಪಲಕ್ಷಿತೋ ಮಾಸಶ್ಚೈತ್ರ ಇತ್ಯಭಿಧೀಯತೆ ॥ ೧೫ ॥

---

೧೨. ಸೋಮಯಾಜಿಗಳಿಗೆ ಸೋಮಪಾನ ಮಾಡಬೇಕಾದಾಗ ಆರ್ಯಭಾಗವನ್ನು, ವಿಚಾರ ಮಾಡುವಾಗ ನಾಕ್ಷತ್ರಮಾಸವನ್ನೂ ಲೆಕ್ಕಿಸಬೇಕು. ರಾಜರು ಕಂದಾಯ ಸ್ವೀಕಾರಮಾಡುವ ಸಂದರ್ಭದಲ್ಲಿ ಈ ವ್ಯವಸ್ಥೆಯನ್ನು ನೋಡಬೇಕಾಗಿಲ್ಲ. ಇದು ಸರ್ವರಿಗೂ ಸಮವಾಗಿ ಸಮ್ಮತವಾಗುವ ವಿಚಾರವಲ್ಲ.

೧೩. ಅದರಂತೆ ಚೈತ್ರ ಮೊದಲಾದ ತಿಂಗಳಲ್ಲಿ ಇಂತಹ ತಿಥಿಯಲ್ಲಿ ಆಚರಿಸತಕ್ಕದ್ದು ಎಂಬ ಕರ್ಮಗಳು ಎಷ್ಟೋ ಕಾಣುತ್ತವೆ. ಅಂತಹವುಗಳಲ್ಲಿ ಚೈತ್ರಾದಿಮಾಸಗಳನ್ನು ಹೇಳದೆಹೋದರೂ ಚಾಂದ್ರಾನುಸಾರ ಪಕ್ಷ, ತಿಥಿಗಳ ವ್ಯವಸ್ಥೆಯನ್ನಾದರೂ ಅನುಸರಿಸಿ ನಡೆಸಬೇಕಾಗಿರುತ್ತದೆ.

೧೪. ರಾಜಾಜ್ಞೆಯನ್ನು ಹೇಳುವ ಸಂದರ್ಭದಲ್ಲೂ, ತಿಥಿಗೆ ವಿಧಾಯಕವಾಗಿರುವ ಕರ್ಮದಲ್ಲಿಯೂ, ಸಾವನಮಾಸಾನುಸಾರವಾಗಿಯೇ ವ್ಯವಹರಿಸಿದರೂ, ಅಲ್ಲಿ ಸೌರಶಬ್ದಕ್ಕೆ ಪ್ರವೃತ್ತಿಯಿರುವುದರಿಂದ ಮಾಸದ ಲೆಕ್ಕವನ್ನು ಹೇಳುವಾಗ ಸೌರಮಾಸವನ್ನೇ ವಾಚ್ಯವಾಗಿ ಹೇಳಬೇಕು.

೧೫ ಚಿತ್ರಾನಕ್ಷತ್ರದ ಸಂಬಂಧವಿರುವ ಪೂರ್ಣಿಮೆಯ ತಿಥಿ ಇದ್ದರೆ, ಆ ಮಾಸವು ಚೈತ್ರಮಾಸವೆಂದೂ, ಆ ಪೂರ್ಣಿಮೆಯು ಚೈತ್ರಪೂರ್ಣಿಮಾ ಎಂದೂ ಹೇಳಲ್ಪಡುತ್ತದೆ.

ಸಚ ತಿಥ್ಯಾತ್ಮಕೋ ಮಾಸಶ್ಚಾಂದ್ರಃ ಶ್ರವಣಭಾಸ್ಕರಃ ।
ಚಾನ್ದ್ರಶ್ಚೈತ್ರ್ಯಂತಿಕೋ ಮಾಸೋ ಮುಖ್ಯಶ್ಚೈತ್ರಾದಿಸಂಜ್ಞಕಃ ॥ ೧೬ ॥

ಗೌಣೋऽಪ್ಯಸೌ ಯುಗಾದ್ಯಾದೇರನುರೋಧೇನ ವರ್ಧನಾತ್ ।
ಮುಖ್ಯಃ ಶುಕ್ಲಾದಿದರ್ಶಾನ್ತೋ ಮಾಸೋ ಲಾಕ್ಷಣಿಕೋ ಮತಃ ॥ ೧೭ ॥

ಚೈತ್ರಾದ್ಯಾಶ್ಚಾಂದ್ರಮಾಸಾ ಯೇ ದ್ವಾದಶಾಪಿ ತು ಯೋಗತಃ ।
ಪೌರ್ಣಮಾಸೀಯುತಾಭಿಸ್ತು ನ ಚರ್ಕ್ಷತ್ವಂ ನ ರೇಭಿರೇ ॥ ೧೮ ॥

ವಿಶಾಖಯಾದ್ಯೇಷು ಯಾ ವಾ ತಥಾ ಭಾದ್ರಪದೇನ ವಾ ।
ಯತ್ರ ನ ಪೂರ್ಣಿಮಾಯೋಗೋ ಮಾಸಃ ಸ ಸ್ಯಾದ್ವಿನಾಶಕಃ ॥ ೧೯ ॥

---

೧೬. ಈ ರೀತಿ ತಿಥಿಗಳ ನಾಮಗ್ರಹಣಮಾತ್ರದಿಂದಲೇ ಚಾಂದ್ರಮಾಸದ ಹೆಸರು ನಮಗೆ ಪ್ರಕಾಶವಾಗಿ ಗೋಚರವಾಗುವುದು. ಚಿತ್ರಾನಕ್ಷತ್ರಯುಕ್ತವಾದ ಪೂರ್ಣಿಮೆಯು ಅಥವಾ ಸಮೀಪಸ್ಥನಕ್ಷತ್ರಯುತವಾದ ಪೂರ್ಣಿಮೆಯುಳ್ಳ ಮಾಸವು ಚೈತ್ರ ಮೊದಲಾದ ಹೆಸರುಗಳುಳ್ಳದ್ದಾಗುವುದು.

೧೭. ಈ ಚೈತ್ರಾದಿವ್ಯವಹಾರವು ಮುಖ್ಯಸ್ಥಿತಿ ಲಕ್ಷಣಕ್ಕೆ ಸ್ವಲ್ಪ ವ್ಯತ್ಯಾಸವಿದ್ದರೂ ಗೌಣವಾಗಿ ಚೈತ್ರಮಾಸ ಎಂದೇ ವ್ಯವಹಾರವುಂಟು. ಯುಗಾದಿ ಮೊದಲುಗೊಂಡು ಈ ತಿಥಿಯನ್ನು ಮುಂದುವರಿಸುವರು. ಶುಕ್ಲಪ್ರತಿಪತ್ತಿನಿಂದ ಮೊದಲಾಗಿ ಅಮಾವಾಸ್ಯಾ ಪೂರ್ತಿಯಾಗುವವರೆಗಿನ ದಿನಗಳು ಮುಖ್ಯಮಾಸದವೋ ಅಥವಾ ಲಾಕ್ಷಣಿಕ ಮಾಸದವೋ ಆಗಿರುವುವು.

೧೮. ಚಾಂದ್ರಮಾಸದ ಪೂರ್ಣಿಮೆಗಳಲ್ಲಿ ಬರಬೇಕೆಂದು ಉಕ್ತವಾದ ನಕ್ಷತ್ರಯುಕ್ತವಾಗಿದ್ದರೆ ಮುಖ್ಯಮಾಸ; ಚೈತ್ರ ಮೊದಲಾದ ಹನ್ನೆರಡು ಚಾಂದ್ರಮಾಸಗಳಲ್ಲಿ ಪೂರ್ಣಿಮಾದಿನ ಚಿತ್ತಾನಕ್ಷತ್ರವಿಲ್ಲದೆ ಸ್ವಲ್ಪ ಹಿಂದುಮುಂದಾದರೆ ಅದು ವಿನಾಶಕ ಚೈತ್ರ; ಆ ಉಕ್ತನಕ್ಷತ್ರಸಂಬಂಧ ಒದಗದೆ ಸ್ವಲ್ಪ ಹಿಂದೋ ಮುಂದೋ ವ್ಯತ್ಯಾಸವಾಗಿ ಸಂಬಂಧಿಸಿದ್ದರೆ ಆ ನಕ್ಷತ್ರ ಸಂಬಂಧಹೊಂದಿದಂತಾಗುವುದಿಲ್ಲ.

೧೯. ನಿದರ್ಶನವಾಗಿ ವೈಶಾಖಪೂರ್ಣಿಮೆಯು ವಿಶಾಖಾನಕ್ಷತ್ರದಿಂದ ಯುಕ್ತವಾಗದೆ ಇದ್ದರೂ, ಭಾದ್ರಪದಪೂರ್ಣಿಮೆಯು ಪೂವಾಭಾದ್ರ ನಕ್ಷತ್ರಯುಕ್ತವಾಗದೆ ಇದ್ದರೂ, ಆ ಮಾಸಗಳಿಗೆ ವೈಶಾಖ, ಭಾದ್ರಪದ, ಎಂಬದಾಗಿ ಬರಿಯ ಹೆಸರುಮಾತ್ರ.

**ಯೋಽಸೌ ಯದ್ಯಪಿ ಚೈತ್ರಾದೌ ನೈಷ್ಠಿಕೋಽಪಿ ಪ್ರಲಭ್ಯತೇ ।**
**ಯಥಾ ಸೌರೇಽಪಿ ಯಾತೋಽಸೌ ಯೋಗೋಽಯಮತಿದುರ್ಘಟಃ ॥ ೨೦ ॥**

**ತಥಾ ಚ ಮಾಸಸಾಮಾನ್ಯೇ ಯೋಗೇನಾಯಂ ಭವೇತ್ಕ್ವಚಿತ್ ।**
**ಯದಿ ವರ್ಷಸಹಸ್ರಾಂತೇ ತದಕ್ಷೇಣೈವ ಪೂರ್ಣಿಮಾ ॥ ೨೧ ॥**

**ಸಂಯುಕ್ತಾ ಲಭ್ಯತೇ ಯತ್ರ ಭವೇದ್ರಾಜ್ಯವಿನಾಶನಂ ।**
**ಸೂರ್ಯಾಚಂದ್ರಮಸೌ ನಿತ್ಯಂ ಕುರ್ವಾತೇ ತಿಥಿಭೋಜನಂ ॥ ೨೨ ॥**

**ದಂಡದ್ವಯೋ ಭುಕ್ತಶೇಷೇ ನ ಭುಂಜೀತ ಕದಾಚನ ।**
**ಅತಿಕ್ರಮ್ಯಾಪರಾಂ ಭೋಕ್ತುಂ ತಿಥಿಂ ಯತ್ರ ಉಭಾವಪಿ ॥ ೨೩ ॥**

---

ಬಂದುಬಿಡುವುದೇಹೊರತು ಅವು ನ್ಯಾಯವಾದ ವೈಶಾಖಾದಿಮಾಸವಲ್ಲ. ಅದು ವಿನಾಶಕವೈಶಾಖ, ವಿನಾಶಕಭಾದ್ರಪದಮಾಸ ಎನಿಸಿಕೊಳ್ಳುತ್ತದೆ.

೨೦. ಚಾಂದ್ರಮಾಸದಲ್ಲಿ ಹೀಗೆ ಪೂರ್ಣಿಮಾತಿಥಿಗೆ ಉಕ್ತನಕ್ಷತ್ರದ ಯೋಗವು ನೇರವಾಗಿ ಸಂಧಿಸದೆ ಸ್ವಲ್ಪ ಹಿಂದೋ ಸ್ವಲ್ಪ ಮುಂದೋ ಆಗಿ ಸಂಧಿಸಿ ಗೌಣವಾಗಿ ಹೆಸರು ಹೇಳುವ ಸಂಭವ ಬರುವುದು. ಆದರೆ ಸೌರಮಾಸದಲ್ಲಿ ಸಂಕ್ರಮಣಗಳು ಹೀಗೆ ಸ್ವಲ್ಪ ಹಿಂದುಮುಂದಾಗುವ ಸಂಭವಗಳು ಬಹಳ ದುರ್ಲಭ.

೨೧. ಆದುದರಿಂದ ಚಾಂದ್ರ, ಸೌರ ಈ ಎಲ್ಲ ಮಾಸಗಳಲ್ಲಿಯೂ ಹೀಗೆ ಮುಖ್ಯ ಗೌಣ ಎಂಬ ವ್ಯವಸ್ಥೆಯು ಸಾಮಾನ್ಯವಾಗಿ ಸಂಭವಿಸುವುದೆಂದು ಹೇಳಲು ಆಗುವುದಿಲ್ಲ. ಸಾವಿರವರ್ಷಕ್ಕೊಮ್ಮೆ ಹೀಗೆ ಸಂಭವಿಸಬಹುದು.

೨೨. ಹೀಗೆ ಬಂದರೆ ಅದು ಅಕ್ಷೇಣಪೂರ್ಣಿಮಾ ಎನಿಸುವುದು. ಹೀಗೆ ಅಕ್ಷಾಕ್ಷೇಪೂರ್ಣಿಮಾಯುತವಾದ ಗೌಣ ಸೌರಮಾಸವು ಪ್ರಾಪ್ತವಾದಾಗ ರಾಜ್ಯಕ್ಕೆ ಹಾನಿ ಸಂಭವಿಸುವುದು. ಸೂರ್ಯ, ಚಂದ್ರ ಇವರಿಬ್ಬರೂ ನಿತ್ಯವೂ ತಿಥಿಗಳನ್ನು ಸಂಪೂರ್ಣವಾಗಿ ಅನುಭವಿಸುತ್ತಾರೆ.

೨೩. ಒಂದು ಗ್ರಹದಿಂದ ಭುಕ್ತವಾದ ಶೇಷವನ್ನು ಮತ್ತೊಂದು ಗ್ರಹವು ಅನುಭವಿಸುವುದಿಲ್ಲ. ಯಾವುದೋ ವಿಶೇಷ ಸಂದರ್ಭದಲ್ಲಿ ಈ ನಿಯಮವನ್ನು ಅತಿಕ್ರಮಿಸಿ ಇವರಿಬ್ಬರೂ ಒಂದೇ ತಿಥಿಯನ್ನು ಅನುಭವಿಸುವರು.

**ಯತ್ರ ವಿಂಶತ್ತಿಥಿಸ್ತಸ್ಮಾಂತ್ಸಂಚಿತ್ಯೈಕಾ ಭವೇದಿತಿ ।**
**ತ್ರಿಂಶತಾ ಚಾಂದ್ರಮಾಸೌ ತು ಚಂದ್ರೇಣೈಕೋ ಹಿ ವರ್ಧತೇ ॥ ೨೪ ॥**

**ಸ ಚಾಧಿಕೋ ಯತೋ ಮಾಸಸ್ತತಃ ಸ್ಯಾದಧಿಮಾಸಕಃ ।**
**ಸಮರಾತ್ರಿಂ ದಿವಂ ಕೃತ್ವಾ ವೈವಸ್ವತಪುರೀಂಗತಿಂ ॥ ೨೫ ॥**

**ರಾಶೇ ರಾಶ್ಯಂತರೇ ಸೂರ್ಯೋ ಯಾವದ್ಗಚ್ಛತಿ ಭಾನುಮಾನ್ ।**
**ಗಚ್ಛನ್ವರ್ಧಯತೇ ಪೂರ್ವಂ ತಿಥಯಸ್ತಾಸ್ತು ಸಂಚಿತಾಃ ॥ ೨೬ ॥**

**ವರ್ಧಂತೇ ತಿಥಯೋ ಯಾವತ್ತುಲಾಂ ಯಾತಿ ದಿವಾಕರಃ ।**
**ತುಲಾದಿರಾಶಿಷಟ್ಕೇ ತು ನ ವರ್ಧಂತೇ ಕದಾಚನ ॥ ೨೭ ॥**

---

೨೪. ಒಂದು ತಿಥಿಯಲ್ಲಿ ಇಪ್ಪತ್ತು ಗಳಿಗೆ ಮಾತ್ರ ಚಂದ್ರನಿಂದ ಅನುಭವಿಸಲ್ಪಟ್ಟಿತ್ತೆಂದು ಗೊತ್ತಾದರೆ, ಆ ತಿಥಿಯ ಹಿಂದಿನ ಮಿಕ್ಕ ಭಾಗವನ್ನು (ಇನ್ನೊಬ್ಬನು) ಸೂರ್ಯನು ಅನುಭವಿಸಿದನೆಂದು ಭಾವಿಸಬೇಕು. ಹೀಗೆ ಒಂದು ಚಾಂದ್ರಮಾಸವು ಪೂರ್ಣವಾಗಲು ಮೂವತ್ತುದಿವಸಗಳಾಗಬೇಕು. ಹೀಗೆ ಬಿಟ್ಟ ತಿಥಿಗಳು ಮೂವತ್ತು ಸೇರಿ ಚಂದ್ರನಿಂದ ವೃದ್ಧಿಯಾಗತಕ್ಕ ಮಾಸವಾಗುವುದು.

೨೫. ಇದು ಸಂಕ್ರಮಣ ಸಂಖ್ಯೆಗಿಂತ ಅಧಿಕವಾಗಿ ಏರ್ಪಡುವ ಮಾಸವಾದುದರಿಂದ ಅದನ್ನು ಅಧಿಕಮಾಸವೆಂಬ ಹೆಸರಿನಿಂದ ಕರೆದರು. (ಯಾವ ಒಂದು ಚಾಂದ್ರಮಾಸದಲ್ಲಿ ಎರಡು ಸಂಕ್ರಮಣ ಬಂದು ಆದರ ಮುಂದಿನಮಾಸದಲ್ಲಿ ಸಂಕ್ರಮಣವೇ ಬಾರದಿದ್ದರೆ ಅದು ಅಧಿಕಮಾಸ.)

೨೬. ರಾತ್ರಿ ಹಗಲು ಎರಡರ ಒಟ್ಟು ಪ್ರಮಾಣವನ್ನು ಸಮಭಾಗಮಾಡಿ, ಆಮೇಲೆ ಸೂರ್ಯನ ಯಮನ ಪಟ್ಟಣವಿರುವ ದಿಕ್ಕಿಗೆ ಹೋಗುವ ಕಾಲದಲ್ಲಿ (ದಕ್ಷಿಣಾಯನದಲ್ಲಿ) ಒಂದು ರಾಶಿಯನ್ನು ಬಿಟ್ಟು ಮತ್ತೊಂದು ರಾಶಿಯನ್ನು ಪ್ರವೇಶಮಾಡುವುದರೊಳಗೆ ಮೊದಲು ಹೋಗುತ್ತಾ ಹೊಗುತ್ತಾ ಹಗಲನ್ನು ವೃದ್ಧಿಮಾಡುತ್ತಾನೆ ಹೀಗೆ ವೃದ್ಧಿಮಾಡಲ್ಪಟ್ಟ ಕಾಲವು ವೃದ್ಧಿತಿಥಿ ಎನಿಸಿಕೊಳ್ಳುವುದು.

೨೭. ಸೂರ್ಯನು ಕರ್ಕಾಟಕದಿಂದ ತುಲಾರಾಶಿಗೆ ಹೋಗುವವರೆಗೂ ಈರೀತಿ ತಿಥಿಗಳು ವೃದ್ಧಿಹೊಂದುವುವು. ಎಂದರೆ ಅಹಸ್ಸಿನ ಪ್ರಮಾಣ ಹೆಚ್ಚುತ್ತಿರುತ್ತದೆ.

**ಸ್ವಭಾವಾತ್ಸಮಗತ್ಯಾ ತು ಯತಃ ಸಂಕ್ರಮತೇ ರವಿಃ ।**
**ಸಂಚಯಮಾನಾ ತ್ವೇಕೈಕಾ ಪ್ರತಿಮಾಸಂ ವಿವರ್ಧತೆ ॥**
**ನಿಶಾಸ್ವಪಿ ತು ಸೌರೇ ತಾ ಏಕಸ್ಮಿಂಸ್ತಿಸ್ರ ಇತ್ಯಪಿ ॥ ೨೮ ॥**

**ಸಂಪೂರ್ಣತ್ರಿಂಶತ್ತಿಥಿಭಿಃ ಮಾಸ್ಯೇಕಸ್ಮಿನ್ ಯದಾ ಭವೇತ್ ।**
**ಸ ಚಾಂದ್ರೋ ಮಲಿನೋ ಮಾಸಃ ಕೋಣಪಾದ್ಯೈಃ ಸಮಾಹಿತಃ ॥ ೨೯ ॥**

**ಭುಕ್ತೋಚ್ಛಿಷ್ಟಾ ತು ಕಸ್ಮಾತ್ಸಾದಸಂಸ್ಪೃಷ್ಟದಿವಾಕರಃ ।**
**ಯದಾ ಸಂಕ್ರಮತೇ ಲಂಘ್ಯ ತದಾ ಜ್ಞೇಯೋ ಮಲಿಮ್ಲುಚಃ ॥ ೩೦ ॥**

**ಸಾರ್ಧವರ್ಷದ್ವಯೇ ಪೂರ್ಣೇ ಪತತ್ಯೇವಂ ನಿಶಾಕರಃ ।**
**ಪರಿತ್ಯಕ್ತಾಶ್ಚ ಯಾವಂತ್ಯೋ ವ್ಯುತ್ಕ್ರಮಿಣ್ಯಶ್ಚ ಯಾಃ ಪುನಃ ॥**
**ತಿಥಯಸ್ತೇ ನಿಯೋಕ್ತವ್ಯಾ ನರೋ ನ ಸ್ಯಾತ್ಸ ಪೂರಣಃ ॥ ೩೧ ॥**

---

ತುಲಾ ಮೊದಲುಗೊಂಡು ಮುಂದಿನ ಆರು ರಾಶಿಗಳಲ್ಲಿ ಯಾವಾಗಲೂ ತಿಥಿಗಳು ವೃದ್ಧಿಯಾಗುವುದಿಲ್ಲ.

೨೮. ಏಕೆಂದರೆ ಆಗ ಸೂರ್ಯನು ಸ್ವಭಾವವಾಗಿ ಹಗಲು ರಾತ್ರಿಗಳಲ್ಲಿ ಸಮ ಪ್ರಮಾಣದಲ್ಲಿ ನಡೆಯುತ್ತಾನೆ. ಉತ್ತರಾಯಣದ ಪ್ರತಿತಿಂಗಳ ಒಂದೊಂದು ತಿಥಿಯಲ್ಲೂ ರಾತ್ರಿಯು ಸ್ವಲ್ಪಸ್ವಲ್ಪ ಹೆಚ್ಚುತ್ತಾ ಬರುತ್ತದೆ. ಒಂದು ಸೌರಮಾಸದ ರಾತ್ರಿಗಳಲ್ಲಿ ಮೂರುದಿನಕ್ಕೆ ಸ್ವಲ್ಪದಂತೆ ಪ್ರಮಾಣ ಹೆಚ್ಚುತ್ತದೆ.

೨೯. ಒಂದು ತಿಂಗಳಲ್ಲಿ ಇರುವ ಮೂವತ್ತು ಸಂಪೂರ್ಣ ತಿಥಿಗಳ ಸಂಕ್ರಮಣ ರಹಿತವಾಗಿ ಬಂದರೆ ಆ ತಿಂಗಳನ್ನು ರಾಕ್ಷಸಾದಿಗಳಿಗೆ ಇಷ್ಟವಾದ ಚಾಂದ್ರಮಲಮಾಸವೆಂದು ತಿಳಿಯತಕ್ಕದ್ದು.

೩೦. ಸೂರ್ಯನು ತಾನು ಅನುಭವಿಸದೆ ತ್ಯಾಜ್ಯಮಾಡಿ ಆ ಮಾಸದ ಸ್ಪೃಕ್ ಇಲ್ಲದಯೇ ತಾನಿದ್ದ ರಾಶಿಯನ್ನು ಲಂಘಿಸಿ (ದಾಟಿ) ಮುಂದಿನ ರಾಶಿಗೆ ಹೋಗುವ ಕಾರಣ ಅದಕ್ಕೆ ಮಲಿಮ್ಲುಚ (ಮಲಿನ) ಮಾಸವೆಂದು ಹೆಸರಾಯಿತು.

೩೧. ಎರಡೂವರೆ ವರ್ಷಗಳು ಪೂರ್ಣವಾಗುವುದರೊಳಗೆ ಚಾಂದ್ರಮಾನದಲ್ಲಿ ಈ ರೀತಿ ಮುವ್ವತ್ತು ತಿಥಿಗಳು ಹೆಚ್ಚಾಗಿ ಬರುತ್ತವೆ. ಹೀಗೆ ಪರಿತ್ಯಾಗಮಾಡಿದ ತಿಥಿಗಳು ಎಷ್ಟಾಗುವುವೋ ಮತ್ತು ಯಾವುವು ಮತ್ತೆ ವ್ಯುತ್ಕ್ರಮಣ ಹೊಂದುವುವೋ ಅವೇ ಮಲಮಾಸ ತಿಥಿಗಳು. ಇವು ಚಾಂದ್ರವತ್ಸರಕ್ಕೆ ಪೂರಕವಾಗುವುವು

ನೈಋತ್ಯಾನ್ತಂ ಹಿತಾರ್ಥಾಯ ಜಲಕೇತುರ್ನಿಗಚ್ಛತಿ ।
ನಿರ್ಮಮಂ ಮಲಿನಂ ಮಾಸಂ ಪ್ರೇತಾನಾಂ ಚ ಹಿತಾಯ ಚ ॥ ೩೨ ॥

ಅತಃ ಪ್ರೇತಕ್ರಿಯಾಃ ಸರ್ವಾಃ ಕಾರ್ಯಾ ಮಲಿಮ್ಲುಚೇऽಪಿ ಚ ।
ಯತ್ಕರ್ತವ್ಯಂ ನ ಕರ್ತವ್ಯಂ ಮಲಮಾಸೇ ದ್ವಿಜೋತ್ತಮಾಃ ॥ ೩೩ ॥

ತದಿದಾನೀಂ ಪ್ರವಕ್ಷ್ಯಾಮಿ ಕಥಿತಂ ಚ ಪ್ರಸಂಗತಃ ।
ಯಚ್ಛ್ರಾದ್ಧಂ ಪ್ರೇತಸಂಬಂಧಿ ಸಪಿಂಡೀಕರಣಾವಧಿ ॥
ಮಲಮಾಸೇऽಪಿ ತತ್ಕಾರ್ಯಂ ವಿಶಿನಷ್ಟಿ ಸಪಿಂಡನಂ ॥ ೩೪ ॥

ಯದಾ ತು ದ್ವಾದಶೋ ಮಾಸೋ ದೈವಾನ್ಮಲಿಮ್ಲುಚೋ ಭವೇತ್ ।
ತತ್ರೈವ ಯತ್ನಾತ್ಕರ್ತವ್ಯಾ ಕ್ರಿಯಾ ಪ್ರೇತಸ್ಯ ವಾರ್ಷಿಕೀ ॥ ೩೫ ॥

---

೩೨. ಯಾವ ಗ್ರಹಣಾದಿಗಳಿಗೂ ಸಾಕ್ಷಾತ್ತಾಗಿ ಸಂಬಂಧವಿಲ್ಲದ ಈ ಮಲಮಾಸವು, ರಾಕ್ಷಸರ ಹಿತಕ್ಕೂ, ಪ್ರೇತಗಳ ಪ್ರೀತಿಗೂ ವಿಹಿತವಾದುದೆಂದು ವರುಣನು ವಿಧಿಸಿರುವನು.

೩೩. ಆದುದರಿಂದ ಮಲಮಾಸವಾಗಿದ್ದರೂ ವರ್ಷಶ್ರಾದ್ಧ, ಮಾಸಿಕಶ್ರಾದ್ಧ ಮುಂತಾದ ಪ್ರೇತಕಾರ್ಯಗಳನ್ನು ಮಾಡಲೇಬೇಕು. ಎಲೈ ಬ್ರಾಹ್ಮಣೋತ್ತಮರಿರಾ! ನಿಜಮಾಸದಲ್ಲಿ ಅವಶ್ಯವಾಗಿ ಮಾಡಬೇಕಾದ ಹಬ್ಬದ ಅಂಗವಾದ ಕರ್ಮಗಳನ್ನು ಅಧಿಕಮಾಸದಲ್ಲಿ ಮಾಡಬೇಕಾದುದಿಲ್ಲ.

೩೪. ಪ್ರಸಂಗವಶದಿಂದ ಸಂಕ್ಷೇಪವಾಗಿ ಹೇಳಿದ್ದುದನ್ನೇ ಈಗ ವಿಶದವಾಗಿ ಹೇಳುತ್ತೇನೆ ಕೇಳಿರಿ! ಸಪಿಂಡೀಕರಣದವರೆಗೆ ನಡೆಯಬೇಕಾದ ಪ್ರೇತಶ್ರಾದ್ಧಗಳನ್ನು ಮಲಮಾಸದೆಂಬ ಕಾರಣದಿಂದ ನಿಲ್ಲಿಸದೆ ನಡೆಯಿಸಿ, ಸಪಿಂಡೀಕರಣಶ್ರಾದ್ಧ ಮಾಡುವುದು ವಿಶೇಷಗುಣ.

೩೫. ಪ್ರೇತಕರ್ಮ ಮಾಡುವಾಗ ದೈವವಶದಿಂದ ಹನ್ನೆರಡನೆಯ ತಿಂಗಳು ಮಲಮಾಸ ಒದಗಿದರೆ, ಆ ಪ್ರಥಮಾಬ್ದಿಕ ಶ್ರಾದ್ಧವನ್ನು ಯತ್ನಪೂರ್ವಕವಾಗಿ ಆ ಮಲಮಾಸದಲ್ಲಿಯೇ ಮಾಡಬೇಕು.

ಮಾಸಾನ್ತರೇ ತು ಪತಿತೇ ತಸ್ಮಿನ್ನೇವ ಮಲಿಮ್ಲುಚೇ ।
ತದಾ ತ್ರಯೋದಶೇ ಮಾಸಿ ಕರ್ತವ್ಯಂ ತತ್ಸಪಿಂಡನಂ ॥ ೩೬ ॥

ವರ್ಜ್ಯಂ ಮಾಸಿಕಯಾ ಶ್ರಾದ್ಧಮೇಕಂ ತಸ್ಮಿಂಸ್ತ್ರಯೋದಶೇ ।
ತ್ರಿಂಶತಾ ಘಟಿಕೈಃ ಶ್ರಾದ್ಧಂ ವರ್ತಂತೇಽದ್ಯಾಪಿ ಸಂಮಿತಂ ॥ ೩೭ ॥

ಕುರ್ಯಾತ್ಪ್ರತ್ಯಾಬ್ದಿಕಂ ಕರ್ಮ ಪ್ರಯತ್ನೇನ ಮಲಿಮ್ಲುಚೇ ।
ನೈಮಿತ್ತಿಕಂ ಚ ಕುರ್ವೀತ ನಾಧಿಕಾರಸ್ತಯೋರ್ಭವೇತ್ ॥ ೩೮ ॥

ತೀರ್ಥಸ್ನಾನಮಲಭ್ಯಂ ತತ್ತದಾದ್ಯಂ ದೇವದರ್ಶನಂ ।
ಉಪವಾಸಾದಿಕಂ ಕರ್ಮ ಸೀಮಂತೋನ್ನಯನಂ ತಥಾ ॥ ೩೯ ॥

ಆರ್ತವಜಂ ಪುಂಸವನಂ ಪುತ್ರಾದಿಮುಖದರ್ಶನಂ ।
ಮಲಮಾಸೇಽಪಿ ಕುರ್ವೀತ ಶುಕ್ರೇ ಚಾಸ್ತಮುಪಾಗತೇ ॥ ೪೦ ॥

---

೩೬. ಅದೇ ಮಲಮಾಸವು ಮೃತಮಾಸವಲ್ಲದೆ ಬೇರೆ ಮಾಸದಲ್ಲಿ ಸಂಘಟಿಸಿದರೆ, ಆಗ ಮೃತಮಾಸಾರಭ್ಯ ಹದಿಮೂರನೆಯ ತಿಂಗಳಲ್ಲಿ ಆ (ಸಪಿಂಡೀಕರಣ) ಶ್ರಾದ್ಧವನ್ನು ಮಾಡಬೇಕು.

೩೭. ಆ ಹದಿಮೂರನೆಯ ತಿಂಗಳಿನ ಒಂದು ಮಾಸಿಕಶ್ರಾದ್ಧವನ್ನು ಬಿಡಬಹುದು. ಶ್ರಾದ್ಧಕ್ಕಿರಬೇಕಾದ ತಿಥಿಪ್ರಮಾಣವು ಅಳತೆಮಾಡಲ್ಪಟ್ಟು ಮುವ್ವತ್ತು ಗಳಿಗೆಗಳೆಂದು ಸಿದ್ಧಾಂತವಾಗಿದೆ.

೩೮. ಮಲಮಾಸದಲ್ಲಿ ಪ್ರತಿಸಾಂವತ್ಸರಿಕ ಶ್ರಾದ್ಧವನ್ನು ಪ್ರಯತ್ನದಿಂದ ಮಾಡಬೇಕು. ನೈಮಿತ್ತಿಕಶ್ರಾದ್ಧವನ್ನೂ ಮಲಮಾಸದಲ್ಲಿ ಮಾಡಬೇಕು. ಆದರೆ ಎರಡನ್ನೂ ಮಾಡುವುದಕ್ಕೆ ಅಧಿಕಾರವಿಲ್ಲ.

೩೯. ನಮ್ಮ ಪಾಪ ಪರಿಹಾರರೂಪವಾದ ಶುದ್ಧ್ಯರ್ಥವಾಗಿ ತೀರ್ಥಸ್ನಾನವು ಸಂಘಟಿಸುವುದು ದುರ್ಲಭವಾದರೆ, ಮೊದಲು ದೇವತಾದರ್ಶನವನ್ನಾದರೂ ಮಾಡುವಂತೆ ಉಪವಾಸ, ಮೊದಲಾದ ನಿಯಮಗಳು, ಸೀಮಂತೋನ್ನಯನ ಮುಂತಾದ ಕರ್ಮಗಳು ಇವನ್ನೂ,

೪೦. ಋತುಶಾಂತಿ, ಪುಂಸವನ, ಪುತ್ರಮುಖಾವಲೋಕನ (ಜಾತಕರ್ಮ) ಈ ಕಾರ್ಯಗಳನ್ನೂ, ಆಗ ಶುಕ್ರಾಸ್ತವಾಗಿರಲಿ, ಮಲಮಾಸ ಸಂಭವಿಸಿರಲಿ, ಅದನ್ನು ಗಣಿಸದೆ ಆ ಕಾರ್ಯಗಳನ್ನು ಮಾಡಲೇಬೇಕು.

ಮಲಮಾಸೇऽಪಿ ಕುರ್ವೀತ ನೃಪಾಣಾಮಭಿಷೇಚನಂ ।
ವ್ರತಾರಂಭಂ ಪ್ರತಿಷ್ಠಾಂ ಚ ಚೂಡಾಕರ್ಮ ಚ ಮೇಖಲಾಂ ॥ ೪೧ ॥

ಮಂತ್ರೋಪಾಸಾಂ ರಹಸ್ಯಂ ಚ ಮಹಾದಾನಂ ಸುಮಂಗಲಂ ।
ವಿವಾಹಂ ಚ ಗೃಹಾರಂಭಂ ಪ್ರವೇಶಂ ನವವೇಶ್ಮನಃ ॥ ೪೨ ॥

ಉಪಗ್ರಹಂ ಗವಾದೀನಾಮಾಶ್ರಮಾಸ್ತರಸಂಕ್ರಮಂ ।
ದೀರ್ಘಯಾತ್ರಾಸು ನೇಜ್ಯಂ ವೈ ತೀರ್ಥಯಾತ್ರಾವಸೇಚನಂ ॥ ೪೩ ॥

ವರ್ಷವೃದ್ಧಿವೃಷೋತ್ಸರ್ಗಕನ್ಯಾದ್ವಿರ್ನಯನಾದಿ ಚ ।
ಯಜ್ಞಂ ಚ ಕಾಮಿಕಂ ವಿದ್ವಾನ್ ಮಲಮಾಸೇ ವಿವರ್ಜಯೇತ್ ॥ ೪೪ ॥

ಏವಮಸ್ತಂ ಗತೇ ಶುಕ್ರೇ ವೃದ್ಧಬಾಲ್ಯೇ ಚ ಸಂತ್ಯಜೇತ್ ।
ಪಾದಾಸ್ತಂ ಚ ಮಹಾಸ್ತಂ ಚ ದ್ವಿವಿಧಂ ಚಾಸ್ತಮಸ್ಯ ತು ॥ ೪೫ ॥

---

೪೧-೪೨. ರಾಜರ ಪಟ್ಟಾಭಿಷೇಕಕಾರ್ಯವನ್ನು ಮಲಮಾಸದಲ್ಲಿಯಾದರೂ ನೆರವೇರಿಸಬಹುದು. ವ್ರತಾರಂಭ, ಪ್ರತಿಮಾಪ್ರತಿಷ್ಠೆ, ಚೌಲ, ಉಪನಯನ ಇವುಗಳನ್ನೂ ರಹಸ್ಯಮಂತ್ರ ಜಪ, ಶುಭಕರವಾದ ಮಹಾದಾನ, ವಿವಾಹ, ಮನೆಕಟ್ಟಿಸಲು ಆರಂಭಿಸುವುದು. ನೂತನ ಗೃಹಪ್ರವೇಶ ಇವುಗಳನ್ನು ಮಲಮಾಸದಲ್ಲಿ ಮಾಡಬಾರದು.

೪೩. ಗೋದಾನಾದಿಗಳನ್ನು ಸ್ವೀಕರಿಸುವುದು, ಆಶ್ರಮಸ್ವೀಕಾರ ಮಾಡುವುದು, ದೀರ್ಘಯಾತ್ರೆ ಮಾಡಿ ತೀರ್ಥಾಭಿಷೇಕ ಮಾಡಿಕೊಳ್ಳುವುದು, ಇವುಗಳನ್ನೂ,

೪೪. ವರ್ಷದಲ್ಲಿ ನಡೆಯಿಸುವ ವೃದ್ಧಿಕಾರ್ಯಗಳು, ವೃಷೋತ್ಸರ್ಗ, ಕನ್ಯೆಯನ್ನು ಎರಡನೇ ಸಾರಿ ಮನೆಗೆ ಕರೆತರುವುದು, ಕಾಮ್ಯವಾದ ಯಜ್ಞಗಳು ಇವನ್ನೂ ಮಲಮಾಸದಲ್ಲಿ ಮಾಡಬಾರದು.

೪೫. ಹೀಗೆಯೇ ಶುಕ್ರನಿಗೆ ಬಾಲತ್ವ, ವೃದ್ಧತ್ವ, ಅಸ್ತಕಾಲ ಇವು ಪ್ರಾಪ್ತವಾಗಿದ್ದಾಗಲೂ ಶುಭಕರ್ಮಗಳನ್ನು ಮಾಡಬಾರದು.

**ದ್ವಿಸಪ್ತತಿರ್ದಿನಾನ್ಯಸ್ಯ ಮಹಾಸ್ತಂ ಪೂರ್ವತೋ ಭವೇತ್ ।**
**ಪೃಥಿವ್ಯಾಮೇವ ಪಾದಾಸ್ತಂ ಭವೇದ್ದ್ವಾದಶವತ್ಸರಾನ್ ॥ ೪೬ ॥**

**ಊನಪಂಚಾಶದಧಿಕಂ ದಿವಸಾನಾಂ ಶತದ್ವಯಂ ।**
**ಪ್ರತೀಚ್ಯಾಮುದಿತಃ ಕಾವ್ಯೋ ದೃಶ್ಯೋ ಭವತಿ ಸರ್ವದಾ ॥ ೪೭ ॥**

**ಏಕರ್ಕ್ಷೇ ಗುರುಣಾ ಯುಕ್ತೋ ಯಾವತ್ತಿಷ್ಠತಿ ಭಾರ್ಗವಃ ।**
**ಮಲಮಾಸವತ್ಕರ್ಮಾಣಿ ಪ್ರಾಹುಸ್ತ್ಯಾಜ್ಯಾನಿ ಸರ್ವಶಃ ॥ ೪೮ ॥**

**ಋಕ್ಷಭೇದೇ ತ್ವೇಕರಾಶೌ ಸಂಪರ್ಕೇ ಯದಿ ವಾಽನಯೋಃ ।**
**ಗುರೋ ರಾಹೋರಪಿ ತಥಾ ತ್ಯಜೇದ್ವಿದ್ವಾನ್ನ ಸಂಶಯಃ ॥ ೪೯ ॥**

**ಸಿಂಹೇ ರಾಶೌ ಸ್ಥಿತೇ ಸೂರ್ಯೇ ಜೀವೇ ಚಾಸ್ತಮುಪಾಗತೇ ।**
**ಹೇಯಾನಿ ಯಾನಿ ಕರ್ಮಾಣಿ ನಿಷಿದ್ಧಾನಿ ಮಲಿಮ್ಲುಚೇ ॥ ೫೦ ॥**

---

೪೬. ಈ ಶುಕ್ರಾಸ್ತದಲ್ಲಿ ಪಾದಾಸ್ತವೆಂದೂ, ಗಾಢಾಸ್ತವೆಂದೂ ಎರಡು ಭೇದಗಳುಂಟು. ಮಹಾಸ್ತದ ಪ್ರಮಾಣವು ಅಸ್ತದಿನ ಮೊದಲುಗೊಂಡು ಎಪ್ಪತ್ತೆರಡು ದಿನಗಳಾಗಿರುತ್ತವೆ. ಪಾದಾಸ್ತವು ಪೃಥಿವಿಯಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ಬರುವುದು.

೪೭. ಪಶ್ಚಿಮದಿಕ್ಕಿನಲ್ಲಿ ಉದಿತನಾದ ಶುಕ್ರನು ಇನ್ನೂರೈವತ್ತೊಂಭತ್ತು ದಿನಗಳು ಸರ್ವದಾ ಕಾಣುತ್ತಿರುತ್ತಾನೆ.

೪೮. ಗುರು ಶುಕ್ರರು ಒಂದೇ ನಕ್ಷತ್ರದಲ್ಲಿ ಎಷ್ಟು ಕಾಲದವರೆಗೆ ಇರುವರೋ ಅಷ್ಟುಕಾಲಪರ್ಯಂತ ಮಲಮಾಸದಂತೆ ಸಮಸ್ತ ಶುಭಕಾರ್ಯಗಳಿಗೂ ತ್ಯಾಜ್ಯವೇ ಆಗಿದೆ.

೪೯. ಇವರಿಬ್ಬರೂ ಬೇರೆಬೇರೆ ನಕ್ಷತ್ರಗಳಲ್ಲಿದ್ದು ಒಂದೇ ರಾಶಿಯಲ್ಲಿ ಸಂಪರ್ಕ ಉಳ್ಳವರಾಗಿದ್ದರೂ ಆ ಕಾಲವು ಶುಭಕಾರ್ಯಗಳಿಗೆ ವರ್ಜ್ಯವು. ಇದೇ ಪ್ರಕಾರ ಗುರು, ರಾಹು ಇವರಿಬ್ಬರೂ ಏಕರಾಶಿಯಲ್ಲಿದ್ದಾಗಲೂ ತಿಳಿದವರು ಶುಭಕಾರ್ಯ ಮಾಡುವುದನ್ನು ವರ್ಜ್ಯಮಾಡಬೇಕು. ಇದರಲ್ಲಿ ಸಂದೇಹಪಡಬೇಕಾಗಿಲ್ಲ.

೫೦. ಸೂರ್ಯನು ಸಿಂಹರಾಶಿಯಲ್ಲಿರುವಾಗ ಗುರುವೂ ಅಲ್ಲಿಯೇ ಬಂದರೆ (ಅಸ್ತನಾದರೆ) ಮಲಮಾಸದಲ್ಲಿನಂತೆ ಈ ಗುರ್ವಸ್ತಕಾಲವೂ ಶುಭಕಾರ್ಯಗಳಿಗೆ ನಿಷಿದ್ಧವೆನಿಸುವುದು.

ಮಿಥುನಸ್ಥೇ ಯದಾ ಭಾನೌ ಮಲಮಾಸಃ ಪತತ್ಯಸೌ ।
ದ್ವಿರಾಷಾಢ ಇತಿ ಖ್ಯಾತೋ ಗೌಣೇ ಶಬ್ದವಿವರ್ತನಾತ್ ॥ ೫೧ ॥

ಫಲಂ ಚಾತ್ರ ಮೃತಸ್ಯೌರ್ಧ್ವದೇಹಿಕಂ ಕರ್ಮ ಕುರ್ವತಾ ।
ಆಷಾಢಕೀರ್ತನಂ ಕಾರ್ಯಮೇವಂ ವರ್ಷಾಂತರೇऽಪಿ ಚ ॥ ೫೨ ॥

ಆಷಾಢದ್ವಯಸಂಯುಕ್ತಪೂರ್ಣಮಾಸೀದ್ವಯಂ ತಥಾ ।
ಯುಗ್ಮಕರ್ಕಟಯೋಃ ರಾಶ್ಯೋರ್ದ್ವಿರಾಷಾಢಸ್ತದಾ ಭವೇತ್ ॥ ೫೩ ॥

ಭವೇದ್ಗೌಣೋ ದ್ವಿರಾಷಾಢೋ ರಾಶಿಸ್ತತ್ರೈವ ಸಂಯುತೇ ।
ಪೂರ್ವತ್ರಿಕೇ ತು ಪತಿತೇ ತದೇವ ಭಗವಾನ್ ಹರಿಃ ॥ ೫೪ ॥

---

೫೧. ಸೂರ್ಯನು ಮಿಥುನ ರಾಶಿಯಲ್ಲಿರುವಾಗ ಮಲಮಾಸ ಪ್ರಾಪ್ತವಾಗಲಾಗಿ, ಅದನ್ನು ಮಿಥುನಾಷಾಢ ಎಂದು ಪ್ರಕಾರಾಂತರ ಹೇಳುವುದು ಶಬ್ದವನ್ನು ಬದಲಾಯಿಸಿದ ಹಾಗಾಯಿತೇ ಹೊರತು ಬೇರೆಯಲ್ಲ.

೫೨. ಇಂತಹ ಮಾಸದಲ್ಲಿ ಮೃತನಿಗೆ ಕರ್ಮಾಂತರ ಮಾಡುವಾಗ ಕರ್ತೃವು ಆಷಾಢಮಾಸವೆಂದೇ ಸಂಕಲ್ಪ ಹೇಳಬೇಕು. ವರ್ಷಮಧ್ಯದಲ್ಲಿ ಬರುವ ಮಲಮಾಸಗಳಲ್ಲೂ ಮಾಸನಾಮವನ್ನು ಈ ಪ್ರಕಾರವೇ ಹೇಳಬೇಕು.

೫೩. ಮಿಥುನ, ಕರ್ಕಾಟಕ ಈ ಸೌರಮಾಸಗಳಿಂದ ಕೂಡಿದ ಯಾವ ಆಷಾಢಮಾಸದ ಪೂರ್ಣಿಮೆಯಲ್ಲಿ ಪೂರ್ವಾಷಾಢ, ಉತ್ತರಾಷಾಢ ಎರಡೂ ಇರುತ್ತವೆಯೋ ಅದನ್ನು ಮಿಥುನಾಷಾಢ, ಕಟಕಾಷಾಢ ಎಂದು ಎರಡು ಪ್ರಕಾರವಾಗಿಯೂ ಹೇಳಬೇಕು.

೫೪. ಆ ದಿನದಲ್ಲೇ ಸೌರಸಂಕ್ರಮಣವೂ ಕೂಡುವುದಾದರೆ, ಎರಡು ರಾಶಿಗಳಿಗೂ ಆಷಾಢನಾಮವನ್ನು ಸೇರಿಸಿ ಹೇಳಿದಾಗ್ಯೂ, ಒಂದು ಕೇವಲ ಗೌಣಮಾತ್ರವಾಗುವುದು. ಆ ಪೂರ್ಣಿಮೆಯು ಪೂರ್ವಾಷಾಢಯುಕ್ತವಾಗಿ ಬಂದರೆ ಆ ಮಾಸಕ್ಕೆ ಹರಿ ಎಂದು ಸಂಜ್ಞೆ.

**ಕರ್ಕಟೇ ಶಯನಂ ಕುರ್ಯಾದಾಗಮಿಷ್ಯಂ ಪರತ್ರಕೇ ।**
**ಕರ್ಕಿಣ್ಯರ್ಕೇ ಸುಪ್ತಹರೌ ಶಕ್ರಪೂಜಾಶ್ವಿನೇ ಭವೇತ್ ॥ ೫೫ ॥**

**ದುರ್ಗೋತ್ಥಾನಂ ತುಲಾಯಾಂ ತು ವಿಷ್ಣುರ್ನಿದ್ರಾಂ ಜಹಾತ್ಯಸೌ ॥ ೫೬ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ**
**ದ್ವಿತೀಯಭಾಗೇ ಷಷ್ಠೋಽಧ್ಯಾಯಃ.**



---

೫೫. ಈ ಆಷಾಢಮಾಸದಲ್ಲಿ ಮಹಾವಿಷ್ಣುವು ಶಯನಮಾಡುತ್ತಾನೆ. ಸೂರ್ಯನು ಕರ್ಕಾಟಕ ರಾಶಿಯಲ್ಲಿ ಬಂದು ಹರಿಯು ಶಯನ ಮಾಡಿರಲು ಅಲ್ಲಿಂದ ಮುಂದೆ ಇಂದ್ರಧ್ವಜಪೂಜೆಯನ್ನೂ ಆಶ್ವಯುಜಮಾಸದಲ್ಲಿ ದುರ್ಗಾಪೂಜೆಯನ್ನೂ ಮಾಡುತ್ತಾರೆ.

೫೬. ತುಲಾಮಾಸದಲ್ಲಿ ವಿಷ್ಣುವು ನಿದ್ರೆಯಿಂದೆಚ್ಚೆತ್ತು ಏಳುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ದ್ವಿತೀಯಭಾಗದಲ್ಲಿ
ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ದ್ವಿತೀಯಭಾಗೇ

## ಸಪ್ತಮೋಽಧ್ಯಾಯಃ

---

॥ ಸೂತ ಉವಾಚ ॥

ದೈವಂ ವಾ ಪೈತೃಕಂ ಕರ್ಮ ಕಾಲಮಾಶ್ರಿತ್ಯ ವರ್ತತೆ ।
ಕಾಲೇ ತಾನ್ಯೇವ ಕರ್ಮಾಣಿ ಫಲಂ ಯಚ್ಛನ್ತಿ ಕುರ್ವತಾಂ ॥ ೧ ॥

ಮುಹುರ್ಬಾಲ್ಯೇ ಕರ್ಮಫಲಂ ತ್ರಿಕಾಲೇಽಪಿ ನ ವಿದ್ಯತೆ ।
ವ್ಯಯೋ ವಾ ಮುಖ್ಯಭಾವೇನ ಫಲದಃ ಕರ್ಮಶಾಲಿನಾಂ ॥ ೨ ॥

ಕಾಲಸ್ತು ಗುಣಭಾವೇನ ಸರ್ವಕಾಲಾಶ್ರಿತಾ ಕ್ರಿಯಾ ।
ನ ಕಾಲೇನ ವಿನಾ ಕಿಂಚಿತ್ತ್ರಿಷು ಲೋಕೇಷು ಜಾಯತೆ ॥ ೩ ॥

---

### ಏಳನೆಯ ಅಧ್ಯಾಯ

೧ ಸೂತರು ಶೌನಕಾದಿಮುನಿಗಳಿಗೆ ಹೇಳುತ್ತಾರೆ—ದೇವತಾಕಾರ್ಯಗಳನ್ನೇ ಆಗಲಿ, ಪಿತೃಕಾರ್ಯಗಳನ್ನೇ ಆಗಲಿ, ಕಾಲವನ್ನು ಅನುಸರಿಸಿ ನಡೆಸಬೇಕು ಹೀಗೆ ಆ ಕರ್ಮಗಳನ್ನು ಕಾಲಕ್ಕೆ ಸರಿಯಾಗಿ ಮಾಡಿದರೆ ಆ ಕರ್ಮಗಳೇ ತಕ್ಕ ಫಲವನ್ನು ಕೊಡುತ್ತವೆ.

೨. ಬಾಲ್ಯದಲ್ಲಿ ಮಾಡಿದ ಕರ್ಮಫಲವು ಭೂತ, ಭವಿಷ್ಯತ್, ವರ್ತಮಾನ ಎಂಬ ತ್ರಿವಿಧವಾದ ಕಾಲಗಳಲ್ಲಿಯೂ ಮತ್ತೆ ಮತ್ತೆ ಫಲವನ್ನು ಕೊಡುವುದಿಲ್ಲ. ಕರ್ಮ ನಿರತರಾದವರಿಗೆ ಆ ಉದ್ದೇಶದಿಂದ ಮಾಡಿದ ವೆಚ್ಚವೇ ಮುಖ್ಯವಾಗಿ ಫಲವನ್ನು ಕೊಡುತ್ತದೆ.

೩. ಕಾಲವೆಂಬುದು ಗೌಣವಾಗಿ ಭೂತ, ಭವಿಷ್ಯತ್, ವರ್ತಮಾನಗಳೆಂಬ ಸರ್ವಸಮಯಗಳಿಗೂ ಅನ್ವಯಿಸಿ ನಡೆದ ಕಾರ್ಯವೇ ಆಗಿದೆ. ಕಾಲವಿಲ್ಲದೆ ಮೂರು ಲೋಕದಲ್ಲಿ ಯಾವ ಸ್ವಲ್ಪ ವ್ಯವಹಾರವೂ ನಡೆಯುವುದಿಲ್ಲ.

**ಅತಃ ಕಾಲಂ ಪ್ರವಕ್ಷ್ಯಾಮಿ ನಿಮಿತ್ತಂ ಕರ್ಮಣಾಮಿಹ ।**
**ಕಾಲೋ ಹ್ಯಮೂರ್ತಿರ್ಭಗವಾನೇಕ ಏವ ತು ಯದ್ಯಪಿ ॥**
**ತಥಾಪ್ಯುಪಾಧಿಭೇದೇನ ಭಿದ್ಯತೇ ಕಾಲಭೇದಿಭಿಃ** ॥ ೪ ॥

**ತಿಥಿನಕ್ಷತ್ರವಾರಾದೌ ರಾತ್ರಿಯೋಗಾದಯೋಽಪಿ ಯೇ ।**
**ತೇಽಪಿ ಕಾಲಾಃ ಪಕ್ಷಮಾಸರಾಶಿವರ್ಷಾನ್ತರೇಽಪಿ ಚ ॥**
**ಸಾಧನಾನಿ ಭವನ್ತ್ಯೇತೇ ಸ್ವಾತಂತ್ರ್ಯೇಣ ನ ಕಸ್ಯಚಿತ್** ॥ ೫ ॥

**ಧರ್ಮಸ್ಯ ವಾಪ್ಯಧರ್ಮಸ್ಯ ಮುಖ್ಯೋ ವ್ಯಾಪಾರ ಏವ ಸಃ ।**
**ತಿಥ್ಯಾದಿಕಾಲಭಾವೇಷು ನಿಷಿದ್ಧಂ ವಿಹಿತಂ ಹಿ ತತ್** ॥ ೬ ॥

**ಪಾಲಯನ್ಸ್ವರ್ಗಮಾಪ್ನೋತಿ ಹಿತ್ವಾ ಪ್ರಾಪ್ನೋತ್ಯಧೋಗತಿಂ ।**
**ಸಾಧಯನ್ತ್ಯಪಿ ಕರ್ಮಾಣಿ ಪರಸ್ಪರಮಪೇಕ್ಷ್ಯತೇ** ॥ ೭ ॥

---

೪. ಆದುದರಿಂದ ಕರ್ಮಗಳಿಗೆ ನಿಮಿತ್ತ (ಕಾರಣ) ವಾಗಿರುವ ಕಾಲಸ್ವರೂಪವನ್ನು ಹೇಳುತ್ತೇನೆ. ವಾಸ್ತವವಾಗಿ ಕಾಲವೆಂಬುದು ಶರೀರರಹಿತನಾಗಿರುವ ಏಕರೂಪನಾದ ಭಗವಂತನೇ ಆಗಿದ್ದಾನೆ.

೫. ತಿಥಿ, ವಾರ, ನಕ್ಷತ್ರ ಮೊದಲಾದುವುಗಳಲ್ಲಿ ರಾತ್ರಿಯೋಗ ಮೊದಲಾದುವು ಕೂಡಿರುತ್ತವೆ. ಪಕ್ಷ, ಮಾಸ, ರಾಶಿ, ವರ್ಷ ಮೊದಲಾದ ಹೆಸರಿನಿಂದ ವ್ಯವಹರಿಸುವುದೆಲ್ಲವೂ ಕಾಲವೇ ಆಗಿದೆ.

೬. ಇದು ಸ್ವತಂತ್ರವಾಗಿ ಯಾವ ಕಾರ್ಯಕ್ಕೂ ಕಾರಣವಾಗುವುದಿಲ್ಲ. ಧರ್ಮ, ಅಧರ್ಮಗಳಿಗೆ ಸಂಬಂಧಪಟ್ಟ ಮುಖ್ಯವ್ಯಾಪಾರವೇ ಕಾಲಸ್ವರೂಪವು.

೭. ತಿಥಿ ಮುಂತಾದ ಶಬ್ದವಾಚಕವಸ್ತುವಿನಲ್ಲಿ ಕರ್ಮಕ್ಕೆ ನಿಷಿದ್ಧ, ಕರ್ಮಕ್ಕೆ ವಿಹಿತ ಎಂಬ ಭೇದಗಳು ಇವೆ. ಈ ಉಕ್ತಕಾಲದಲ್ಲಿ ವಿಹಿತವಾದ ಕರ್ಮಮಾಡಬೇಕೆಂಬ ನಿಯಮವನ್ನೂ, ನಿಷಿದ್ಧವಾದ ಕರ್ಮವನ್ನು ಬಿಡಬೇಕೆಂಬ ನಿಯಮವನ್ನೂ ತಪ್ಪದೆ ಪಾಲಿಸುವವನು ಸ್ವರ್ಗವನ್ನು ಪಡೆಯುತ್ತಾನೆ. ಇದನ್ನು ಅಲಕ್ಷಿಸಿದವನು ಅಧೋಗತಿಯನ್ನು ಹೊಂದುತ್ತಾನೆ. ಸತ್ಫಲವನ್ನೂ ದುಷ್ಫಲವನ್ನೂ ಸಾಧನಮಾಡುವ ಕರ್ಮಗಳು, "ನೀನು ಫಲಕೊಡಲು ಸಿದ್ಧವಾಗಿದ್ದೀಯೋ?" ನಾನು ಫಲ ಕೊಡಲೋ? ಎಂದು ಒಂದನ್ನೊಂದು ನೋಡುತ್ತವೆ.

ಕಾಲಭಾಗೋ ನಿಃಸಹಾಯೋ ಯೋऽಪಿ ಸ್ಯಾತ್ಕರ್ಮಸಾಧನಂ ।
ತಿಥೌ ಪೂರ್ವಾಹ್ಣವ್ಯಾಪಿನ್ಯಾಂ ಕುರ್ವೀತ ಕರ್ಮ ವೈದಿಕಂ ॥ ೮ ॥

ಏಕೋದ್ದಿಷ್ಟಂ ತು ಮಧ್ಯಾಹ್ನವ್ಯಾಪಿನ್ಯಾಂ ಹಿ ಸಮಾಚರೇತ್ ।
ಪರಾಹ್ಣವ್ಯಾಪಿನೀಂ ಪ್ರಾಪ್ಯ ತಿಥಿಂ ಕುರ್ಯಾತ್ತು ಪಾರ್ವಣಂ ॥ ೯ ॥

ನ ತು ಪೂರ್ವಾಹ್ಣಮಧ್ಯಾಹ್ನಾ ಪರಾಹ್ಣೇಷು ಯಥೋಚಿತಂ ।
ಅಪ್ರಧಾನೇ ತು ಕುರ್ವೀತ ಕರ್ಮ ದೈವಾದಿಕಂ ಚ ಯತ್ ॥ ೧೦ ॥

ಏಕೋ ಹಿ ಕಾಲಃ ಪ್ರಾತಸ್ತು ವೃದ್ಧಿಶ್ರಾದ್ಧಾದಿಸಾಧನೇ ।
ನಾಪೇಕ್ಷತೇ ಸಾಹಾಯ್ಯಂ ತತ್ತಿಥ್ಯಾದಿವಿಷುವಾದಿಷು ॥ ೧೧ ॥

ದೇವೇಭ್ಯೋ ಬ್ರಹ್ಮಣಾ ದತ್ತಃ ಪೂರ್ವಾಹ್ಣಸ್ತಿಥಿಭಿಃ ಸಹ ।
ಪಿತೃಭ್ಯೋ ಹ್ಯಪರಾಹ್ಣಸ್ತು ಪಾರ್ವಣಂ ತು ಪರಂ ವಿನಾ ॥ ೧೨ ॥

---

೮. ಕಾಲವೆಂಬ ಭಾಗವು ಸಹಾಯಾಂತರಾಪೇಕ್ಷೆಯಿಲ್ಲದೆ ಕರ್ಮಕ್ಕೆ ಸಾಧನವಾಗಿರುತ್ತದೆ. ಸಾಮಾನ್ಯವಾಗಿ ಪೂರ್ವಾಹ್ಣದಲ್ಲಿ ವ್ಯಾಪನೆಯಾಗಿರುವ ತಿಥಿಯಲ್ಲಿಯೇ ವೇದೋಕ್ತಕರ್ಮಗಳನ್ನು ಮಾಡಬೇಕು.

೯. ತಿಥಿಯು ಮಧ್ಯಾಹ್ನ ವ್ಯಾಪಿನಿಯಾಗಿರುವಾಗ ಏಕೋದ್ದಿಷ್ಟಶ್ರಾದ್ಧವನ್ನು ಮಾಡಬೇಕು. ತಿಥಿಯು ಅಪರಾಹ್ಣ ವ್ಯಾಪಿನಿಯಾಗಿರುವಾಗ ಪಾರ್ವಣಶ್ರಾದ್ಧವನ್ನು ಮಾಡಬೇಕು.

೧೦. ಇವುಗಳನ್ನು ಪೂರ್ವಾಹ್ಣ, ಮಧ್ಯಾಹ್ನ, ಅಪರಾಹ್ಣಗಳಲ್ಲಿ ತನಗೆ ಔಚಿತ್ಯ ತೋರಿದಂತೆ ಮಾಡಬಾರದು. ದೈವಕರ್ಮ ಮೊದಲಾದುದನ್ನು ಅಪ್ರಧಾನ (ಗೌಣ) ಕಾಲದಲ್ಲಿಯಾದರೂ ಮಾಡಬಹುದು.

೧೧. ವೃದ್ಧಿಶ್ರಾದ್ಧ ಮೊದಲಾದುವನ್ನು ಮಾಡುವುದಕ್ಕೆ ಪ್ರಾತಃಕಾಲವೊಂದೇ ಪ್ರಶಸ್ತವಾದುದು. ತಿಥ್ಯಾದಿಗಳಲ್ಲಿಯೂ ವಿಷುವ ಮೊದಲಾದ ಪುಣ್ಯಕಾಲಗಳಲ್ಲಿಯೂ ಅದು ಸಹಾಯವನ್ನಪೇಕ್ಷಿಸುವುದಿಲ್ಲ.

೧೨. ತಿಥಿಯು ಪೂರ್ವಾಹ್ಣ ವ್ಯಾಪಿನಿಯಾಗಿರುವಾಗ ದೇವಪೂಜಾ ವ್ರತಾದಿಗಳನ್ನು ಮಾಡಬೇಕೆಂದೂ, ತಿಥಿಯು ಅಪರಾಹ್ಣ ವ್ಯಾಪಿನಿಯಾಗಿದ್ದಾಗ ಪಿತೃಪೂಜಾ ಪಾರ್ವಣಶ್ರಾದ್ಧಾದಿಗಳನ್ನು ಮಾಡಬೇಕೆಂದೂ ಬ್ರಹ್ಮನು ಕ್ಲುಪ್ತಮಾಡಿ ಕೊಟ್ಟಿದ್ದಾನೆ.

**ಪೂರ್ವಾಹ್ನಮಾತ್ರಸಂಪ್ರಾಪ್ತೌ ತತೋ ದೇವಾನ್ ಪ್ರಪೂಜಯೇತ್ ।**
**ಪೂರ್ವಾಹ್ಣಸ್ಪರ್ಶಮಾತ್ರೇಽಪಿ ತಿಥಿಖಂಡೇನ ಚಾರ್ಪಯೇತ್ ॥ ೧೩ ॥**

**ಖರ್ವಾ ದರ್ಪಾ ತಥಾ ಹಿಂಸ್ರಾ ತಿಥಿಶ್ಚ ತ್ರಿವಿಧಾ ಭವೇತ್ ।**
**ಖರ್ವಾದಿ ಲಂಘಯೇತ್ತುಲ್ಯಾ ದರ್ಪಾ ಭವತಿ ವರ್ಧಿತಾ ॥ ೧೪ ॥**

**ಹಿಂಸ್ರಾ ತು ಕ್ಷಯಜಾ ಜ್ಞೇಯಾ ಕಾಲಭೇದೇನ ಗೃಹ್ಯತೆ ॥ ೧೫ ॥**

**ಖರ್ವಾ ದರ್ಪಾ ಪರೇ ಗ್ರಾಹ್ಯಾ ಹಿಂಸ್ರಾ ಗೃಹ್ಯಾ ತು ಪೂರ್ವತಃ ॥ ೧೬ ॥**

**ಶುಕ್ಲಪಕ್ಷೇ ಪರಾ ಗ್ರಾಹ್ಯಾ ಕೃಷ್ಣೇ ಪೂರ್ವಾ ಪ್ರಶಸ್ಯತೆ ।**
**ಸ್ನಾನದಾನವ್ರತೇ ಚೈವ ವಿಷಯೋಗೋ ನಿದರ್ಶಿತಃ ॥ ೧೭ ॥**

---

೧೩. ತಿಥಿಯು ಪೂರ್ವಾಹ್ಣ ಮಾತ್ರ ಪ್ರಾಪ್ತವಾಗಿದ್ದರೆ ಆಗ ದೇವಪೂಜಾ ವ್ರತಾದಿಗಳನ್ನು ಮಾಡಬಹುದು. ಪೂರ್ವಾಹ್ಣದಲ್ಲಿನ ತಿಥಿಯು ಅಪರಾಹ್ಣಕ್ಕೆ ಸ್ವಲ್ಪ ಸ್ಪರ್ಶವಾಗಿದ್ದರೂ ಆ ಖಂಡತಿಥಿಯಲ್ಲಿಯೇ ಪಿತೃಕರ್ಮವನ್ನು ಮಾಡಬೇಕು.

೧೪. ತಿಥಿಗಳಲ್ಲಿ ಅವುಗಳ ವರ್ತಮಾನ ಸ್ಥಿತಿಗನುಸಾರವಾಗಿ ಖರ್ವಾತಿಥಿ, ದರ್ಪಾತಿಥಿ, ಹಿಂಸ್ರಾತಿಥಿ ಎಂಬದಾಗಿ ಮೂರು ಪ್ರಕಾರಗಳಿವೆ.

೧೫. ಪರಿಮಾಣದಲ್ಲಿ ಹೆಚ್ಚುಕಡಿಮೆಯಾಗದೆ ತಿಥಿಯು ಒಂದೇ ಸಮವಾಗಿ ಸಾಗುತ್ತಿದ್ದರೆ ಖರ್ವಾತಿಥಿ ಎನಿಸಿಕೊಳ್ಳುವುದು. ದಿನದಿನಕ್ಕೆ ವೃದ್ಧಿಯಾಗುತ್ತಾ ಸಾಗುವುದಕ್ಕೆ ದರ್ಪಾತಿಥಿ ಎಂದು ಹೆಸರು. ದಿನದಿನಕ್ಕೆ ಕ್ಷೀಣವಾಗುತ್ತಾ ಸಾಗುವುದು ಹಿಂಸ್ರಾತಿಥಿ.

೧೬. ಈ ರೀತಿ ಆಯಾ ತಿಥಿಯ ಕಾಲಪರಿಮಾಣಭೇದದಿಂದ ಈ ಹೆಸರನ್ನು ಗ್ರಹಿಸಬೇಕು. ಖರ್ವಾತಿಥಿಯಲ್ಲಿಯೂ ದರ್ಪಾತಿಥಿಯಲ್ಲಿಯೂ ಉತ್ತರಭಾಗವನ್ನು ಕರ್ಮಾದಿಗಳಿಗೆ ಮುಖ್ಯಕಾಲವೆಂದು ಗ್ರಹಿಸಬೇಕು. ಹಿಂಸ್ರಾತಿಥಿಯಲ್ಲಿ ಪೂರ್ವ ಭಾಗವನ್ನು ಮುಖ್ಯಕಾಲವೆಂದು ಗ್ರಾಹ್ಯಮಾಡಬೇಕು.

೧೭. ಶುಕ್ಲಪಕ್ಷದಲ್ಲಿ ಉತ್ತರಭಾಗ(ಅಪರಭಾಗ)ವನ್ನು ಗ್ರಹಣಮಾಡಬೇಕು. ಕೃಷ್ಣಪಕ್ಷದಲ್ಲಿ ಆದಿಭಾಗವನ್ನು ಗ್ರಹಿಸುವುದು ಪ್ರಶಸ್ತ. ಸ್ನಾನ, ದಾನ ವ್ರತಾಚರಣ ಮೊದಲಾದುವುಗಳಲ್ಲಿ ವಿಷಸ್ವರೂಪವಾದ ತ್ಯಾಜ್ಯಕಾಲವನ್ನು ಹೇಳಿದುದಾಯಿತು.

ತಿಥೌ ಚೋದೇತಿ ಸವಿತಾ ಕಲಾಮಾತ್ರಂ ಚ ವಾ ಯದಿ ।
ಅನ್ಯಾಽಪಿ ಸೈವ ವಿಜ್ಞೇಯಾ ತಿಥಿಸ್ತಸ್ಮಿನ್ನಹರ್ನಿಶಂ ॥ ೧೮ ॥

ಯಥಾಽಸ್ತೇ ರವಿರ್ಭಾತಿ ಘಟಿಕಾದಶ ವಾಪಿ ವಾ ।
ಸಾ ತಿಥಿಸ್ತದಹೋರಾತ್ರಂ ವ್ಯಪದೇಶ್ಯಾ ನ ಚೇತರಾ ॥ ೧೯ ॥

ಶುಕ್ಲೇ ವಾ ಯದಿ ವಾ ಕೃಷ್ಣೇ ಖರ್ವಾ ದರ್ಪಾ ತಿಥಿಶ್ಚ ಯಾ ।
ಯಯಾಽಸ್ತಂ ಸವಿತಾ ಯಾತಿ ಪಿತೃಕಾರ್ಯೇ ಚ ಸಾ ತಿಥಿಃ ॥ ೨೦ ॥

ದಿನದ್ವಯೇಽಪಿ ಕುತುಪೇ ಅಸ್ತಗಾಂ ತಿಥಿಮಾಶ್ರಯೇತ್ ।
ಶ್ರಾದ್ಧಕಾಲಾದಿಕಂ ಯತ್ರ ತತ್ರ ಶ್ರಾದ್ಧಂ ವಿಧೀಯತೆ ॥
ವ್ರತೇ ಚ ವೃದ್ಧಿಗಾಮಿನ್ಯಾಂ ಯತ್ರೋದಯೋ ರವೇರ್ಭವೇತ್ ॥ ೨೧ ॥

---

೧೮. ಸೂರ್ಯನು ಉದಯಿಸುವ ವೇಳೆಗೆ ತಿಥಿಯು ಒಂದು ಕಲೆಯಷ್ಟಾದರೂ ವ್ಯಾಪಿಸಿದ್ದರೆ ಆ ದಿನ ಮಾಡುವ ಕರ್ಮಗಳಿಗೆ ಆ ತಿಥಿಯನ್ನೇ ಸಂಕಲ್ಪಕಾಲದಲ್ಲಿ ಉಚ್ಚಾರಣಮಾಡಬೇಕು. ಆ ದಿನ ಹಗಲು ರಾತ್ರಿಗಳ ಪೂರ್ತಾ ಬೇರೆ ತಿಥಿಯ ವ್ಯಾಪನೆ ಇದ್ದರೂ ಸೂರ್ಯೋದಯಕಾಲದಲ್ಲಿದ್ದ ಕಲಾಮಾತ್ರ ಇರುವ ತಿಥಿಯನ್ನೇ ಆ ದಿನ ಮಾಡುವ ಕರ್ಮಗಳಲ್ಲೆಲ್ಲಾ ಹೇಳಬೇಕು.

೧೯. ಸೂರ್ಯನು ಅಸ್ತವಾಗುವುದಕ್ಕೆ ಹತ್ತು ಗಳಿಗೆ ಮುಂಚಿನವರೆಗೆ ಯಾವ ತಿಥಿ ಇರುವುದೋ, ಆ ತಿಥಿಯನ್ನು ಆ ದಿನ ಹಗಲೂ ರಾತ್ರಿ ಕೂಡ ಇದ್ದ ಹಾಗೆ ತಿಳಿಯಬೇಕು.

೨೦. ಶುಕ್ಲಪಕ್ಷದಲ್ಲಿಯೋ, ಕೃಷ್ಣಪಕ್ಷದಲ್ಲಿಯೋ, ಖರ್ವತಿಥಿಯಾಗಲಿ, ದರ್ಪತಿಥಿಯಾಗಲಿ, ಸೂರ್ಯಾಸ್ತಕಾಲದಲ್ಲಿ ಇರುತ್ತಿದ್ದರೆ, ಆ ತಿಥಿಯನ್ನು ಪಿತೃಕಾರ್ಯಕ್ಕೆ ಮುಖ್ಯವೆಂದು ಭಾವಿಸಬೇಕು. ಒಂದುವೇಳೆ ಎರಡು ದಿನಗಳಲ್ಲೂ ಕುತುಪಕಾಲದ ವೇಳೆಯಲ್ಲಿ ಆ ತಿಥಿ ಇರುವುದಾದರೆ ಯಾವ ದಿನದ ಅಸ್ತಕಾಲಕ್ಕೆ ಆ ತಿಥಿಯು ವ್ಯಾಪನೆಯು ಇದೆಯೋ ಆ ತಿಥಿಯನ್ನೇ ಪಿತೃಕಾರ್ಯಕ್ಕೆ ಗ್ರಹಿಸಬೇಕು.

೨೧. ಶ್ರಾದ್ಧಕ್ಕೆ ಉಕ್ತವಾದ ಕುತುಪಕಾಲವು ತಿಥಿಯ ಯಾವಭಾಗದಲ್ಲಿರುವುದೋ ಆ ಭಾಗದಲ್ಲಿಯೇ ಶ್ರಾದ್ಧಮಾಡಬೇಕು. ವೃದ್ಧಿಶ್ರಾದ್ಧದಲ್ಲೂ ವ್ರತಾಚರಣ ಮಾಡಬೇಕಾಗಿರುವಾಗಲೂ ಸೂರ್ಯೋದಯಕಾಲಕ್ಕೆ ಯಾವ ತಿಥಿ ಇದೆಯೋ ಅದನ್ನೇ ಗ್ರಹಿಸಬೇಕು.

**ಅಮಾವಾಸ್ಯೆಪಾರ್ವಣೇ ಚ ಸಾ ತಿಥಿಃ ಪಿತೃಪೂಜನೇ ।**
**ಅಮಾವಾಸ್ಯಾಮೃತಸ್ಯೈವ ಪಾರ್ವಣಂ ಯತ್ರ ಕುತ್ರಚಿತ್ ॥ ೨೨ ॥**

**ಅಸ್ತಗಾಮಿತಿಥಿರ್ಯತ್ರ ಸಾ ತಿಥಿಃ ಪಿತೃಮಂದಿರಂ ।**
**ಏಕೋದ್ದಿಷ್ಟಂ ಚರೇತ್ತತ್ರ ನೋದಯೇ ಚ ಕದಾಚನ ॥ ೨೩ ॥**

**ಶುಕ್ಲಪಕ್ಷೇ ಚ ಕೃಷ್ಣೇ ಚ ಯೋ ಯೋಗಃ ಪರಪೂರ್ವಯೋಃ ।**
**ಪೂರ್ವೇದ್ಯುರ್ವಾ ಪರೇದ್ಯುರ್ವಾ ತ್ರಿಸಂಧ್ಯವ್ಯಾಪಿನೀ ತಿಥಿಃ ॥**
**ಸಾ ಪೂಜ್ಯಾ ಚ ಸ್ವಕೃತ್ಯೇಷು ಪಕ್ಷಯೋರುಭಯೋರಪಿ ॥ ೨೪ ॥**

**ಪೂಜ್ಯಾ ಹಿ ವ್ಯಸ್ತಂ ಸಂತ್ಯಜ್ಯ ಪೂರ್ವಂ ಚೈಕಾದಶೀಯುಗಂ ।**
**ದ್ವಿತೀಯಾ ವಹ್ನಿನಾ ಯುಕ್ತಾ ಚತುರ್ಥೀ ಪಂಚಮೀಯುತಾ ॥ ೨೫ ॥**

---

೨೨. ಅಮಾವಾಸ್ಯೆ, ಪೂರ್ಣಿಮಾ ಇವುಗಳು ಪಿತ್ರಾರಾಧನೆಗೆ ಯೋಗ್ಯವಾದ ತಿಥಿಗಳು. ಅಮಾವಾಸ್ಯೆಯಲ್ಲಿ ಮೃತನಾದವನಿಗೆ ಅಮಾವಾಸ್ಯಾಶ್ರಾದ್ಧವನ್ನು ಅಮಾವಾಸ್ಯೆಯಲ್ಲೇ ಮಾಡತಕ್ಕದ್ದು. ಯಾವ ತಿಥಿಯು ಸೂರ್ಯಾಸ್ತಕಾಲಕ್ಕೆ ವ್ಯಾಪ್ತಿಹೊಂದಿರುವುದೋ ಆ ತಿಥಿಯು ಪಿತೃಕರ್ಮಗಳಿಗೆ ಅರ್ಹವಾದುದು.

೨೩. ಆದುದರಿಂದ ಏಕೋದ್ದಿಷ್ಟಶ್ರಾದ್ಧವನ್ನು ಅಂತಹ ತಿಥಿಯಲ್ಲಿಯೇ ಮಾಡಬೇಕು. ಉದಯಕಾಲಕ್ಕೆ ಮಾತ್ರ ಇರುವ ತಿಥಿಯಲ್ಲಿ ಎಂದರೆ ಪೂರ್ವಾಹ್ಣದಲ್ಲಿ ಏಕೋದ್ದಿಷ್ಟಶ್ರಾದ್ಧವನ್ನು ಮಾಡಬಾರದು.

೨೪. ಶುಕ್ಲಪಕ್ಷದಲ್ಲಾಗಲಿ ಕೃಷ್ಣಪಕ್ಷದಲ್ಲಿಯಾಗಲಿ ಯಾವ ದಿವಸ ಪರತಿಥಿಗೂ ಪೂರ್ವತಿಥಿಗೂ ಯೋಗವಿರುವುದೋ ಆ ಹಿಂದಿನ ದಿನ ಅಂದರೆ ಮಾರನೇ ದಿನ, ಅದರ ಮಾರನೇ ದಿನ, ಈ ರೀತಿ ಎರಡು ಪಕ್ಷದಲ್ಲೂ ಆ ತಿಥಿಯಲ್ಲಿ ಮಾಡಬೇಕಾದ ಕೆಲಸಕ್ಕೆ ತ್ರಿಸಂಧ್ಯವ್ಯಾಪಿನೀತಿಥಿಯನ್ನೇ ಗ್ರಹಣಮಾಡಬೇಕು.

೨೫ ಪೂಜ್ಯರು ಇತರ ತಿಥಿಗಳೊಡನೆ ಸಂಬಂಧವಾಗದ ಶುಕ್ಲಪಕ್ಷದ ಏಕಾದಶಿ, ಕೃಷ್ಣಪಕ್ಷದ ಏಕಾದಶಿ, ಎರಡನ್ನೂ ಬಿಟ್ಟು ಮಿಕ್ಕ ತಿಥಿಗಳಲ್ಲಿ ಮಿಶ್ರವನ್ನು ಗಮನಿಸುವರು. ಪಾಡ್ಯಮೀವಿದ್ಧವಾದ ಬಿದಿಗೆ, ಪಂಚಮೀವಿದ್ಧವಾದ ಚತುರ್ಥೀ, ಈ ತಿಥಿಗಳು ಉಪೋಷಣಮಾಡುವುದಕ್ಕೆ ಅರ್ಹವಾದುವು ಆಗಿದೆ.

ಏತಾ ಉಪೋಷ್ಯಾಸ್ತಿಥಯಃ ಪುಣ್ಯಾಃ ಸ್ಮೃರ್ಧರ್ಮವೇದಿಭಿಃ ।
ಏತದ್ವ್ಯಸ್ತಾಸ್ತು ಪುಣ್ಯಾನಿ ಘ್ನಂತಿ ಪೂರ್ವಕೃತಾನ್ಯಪಿ ॥ ೨೬ ॥

ಬಾಣೇನ ವಿದ್ಧಾ ಯಾ ಷಷ್ಠೀ ಮುನಿವಿದ್ಧಾ ತಥಾಷ್ಟಮೀ ।
ದಶಮ್ಯೇಕಾದಶೀವಿದ್ಧಾ ತ್ರಯೋದಶ್ಯಾ ಚತುರ್ದಶೀ ॥ ೨೭ ॥

ಅಮಾವಾಸ್ಯಾ ಭೂತವಿದ್ಧಾ ನೋಪೋಷ್ಯಾ ಮುನಿನಾಪಿ ಚ ।
ಘಂತಿ ಪುತ್ರಕಲತ್ರಾಣಿ ಧನಾನಿ ಸಮುಪೋಷಿತಾ ॥ ೨೮ ॥

ವಿದ್ಧಾ ಯೇ ನಾಭಿನಿಂದ್ಯಾಃ ಸ್ಯುರ್ಯುಕ್ತಾಸ್ತೇ ನಾಭಿನಂದಿತಾಃ ।
ವ್ಯಸ್ತಸ್ಯ ಸಂಭವೇ ಯುಗ್ಮಂ ವಿದ್ಧಾ ಭವತಿ ಸರ್ವಶಃ ॥ ೨೯ ॥

ತಾಮಸ್ತಾಂ ತು ತಿಥಿಂ ಪ್ರಾಪ್ಯ ಯುಗ್ಮಾನ್ಯಪೂಜ್ಯತಾಮಿಯುಃ ।
ಯುಗ್ಮಾನಿ ಚ ದಿವಾಯೋಗೇ ಗ್ರಾಹ್ಯಾಣಿ ವ್ಯಸ್ತನಿಂದನಂ ॥ ೩೦ ॥

---

೨೬. ಧರ್ಮಜ್ಞರ ಮತದ ಪ್ರಕಾರ ಈ ತಿಥಿಗಳು ಪುಣ್ಯಕರಗಳೂ, ಪೂಜಾರ್ಹಗಳೂ ಆಗಿರುತ್ತವೆ. ಹೀಗೆ ವಿದ್ಧತ್ವವಿಲ್ಲದೆ ಬಿಂಗಡವಾಗಿರುವ ತಿಥಿಗಳಲ್ಲಿ ಆಚರಿಸಿದ ಉಪೋಷಣವು ಪೂರ್ವಾರ್ಜಿತ ಪುಣ್ಯವನ್ನು ನಾಶಮಾಡುತ್ತದೆ.

೧೭–೨೮. ಪಂಚಮೀವಿದ್ಧವಾದ ಷಷ್ಠಿ, ಸಪ್ತಮೀವಿದ್ಧವಾದ ಅಷ್ಟಮಿ, ದಶಮೀವಿದ್ಧವಾದ ಏಕಾದಶಿ, ತ್ರಯೋದಶೀವಿದ್ಧವಾದ ಚತುರ್ದಶಿ, ಚತುರ್ದಶೀವಿದ್ಧವಾದ ಅಮಾವಾಸ್ಯೆ ಈ ತಿಥಿಗಳು ಮುನಿಗಳು ಕೂಡ ಉಪೋಷಣಮಾಡಲು ಯೋಗ್ಯಗಳಲ್ಲ. ಗೃಹಸ್ಥರು ಇಂತಹ ದಿನಗಳಲ್ಲಿ ಉಪವಾಸ ಮಾಡಬಾರದು. ಹಾಗೆ ಮಾಡಿದರೆ ಅವರ ಧನ ಪುತ್ರ ಕಳತ್ರಾದಿಗಳ ನಾಶ ಸಂಭವಿಸುವುದು.

೨೯. ವಿದ್ಧತಿಥಿಗಳು ದೂಷ್ಯಗಳಾಗಿರುವ ಕಾರಣ ವಿದ್ಧತಿಥಿಯ ಸಂಬಂಧವಿರತಕ್ಕ ಇತರ ತಿಥಿಗಳೂ ಸಹ ಶ್ಲಾಘ್ಯಗಳಲ್ಲ. ಎರಡು ತಿಥಿಗಳೂ ಬೇರೆಬೇರೆಯಾದ ದಿನಗಳಲ್ಲಿ ಸಂಭವಿಸಿದ್ದರೆ ಅವು ಎಲ್ಲಾ ಕಡೆಯೂ ಅವಿದ್ಧಾ ಎನ್ನಿಸಿಕೊಳ್ಳುವುವು.

೩೦. ಸೂರ್ಯಾಸ್ತವಾದಮೇಲೆ ಪ್ರಾಪ್ತವಾಗುವ ಯುಗ್ಮತಿಥಿಗಳು ಪ್ರಶಸ್ತಗಳಲ್ಲ. ಹಗಲಿನಲ್ಲಿ ಯುಗ್ಮತಿಥಿಗಳು ಸಂಭವಿಸಿದರೆ ಅವು ಗ್ರಾಹ್ಯಗಳು. ವ್ಯಸ್ತತಿಥಿಗಳು ಅಗ್ರಾಹ್ಯಗಳು.

ನಕ್ತಾದಿವ್ರತಯೋಗೇ ತು ದಿವಾಸಂವೃದ್ಧಿರರ್ಹಿಕಾ ।
ರಾತ್ರಿಯೋಗಶ್ಚತುರ್ಥ್ಯೋರ್ಸ್ತು ವಿಶಿಷ್ಯ ಪರಿಗೃಹ್ಯತೇ　　॥ ೩೧ ॥

ರಾತ್ರಿಯೋಗಂ ವಿನಾಪಿ ಸ್ಯಾದೇಕಾದಶ್ಯಾದಿಕಂ ವ್ರತಂ ।
ನಕ್ತಂ ಜಾಗರಣಂ ಚೈವ ವಿನಾಯೋಗೇಽಪಿ ಶಸ್ಯತೇ　　॥ ೩೨ ॥

ಏಕಾದಶ್ಯುಪವಾಸಂ ತು ದ್ವಾದಶೀಯೋಗತಶ್ಚರೇತ್ ।
ದಿವಾಯೋಗೇ ತು ಸಂಪೂರ್ಣಾಂ ತ್ಯಜೇದುಭಯಯೋಗತಃ　　॥ ೩೩ ॥

ರಾತ್ರಿಯೋಗೇ ತು ಸಂಪೂರ್ಣಾ ಸೋಽಪಾಸ್ಯೈಕಾದಶೀ ಸದಾ ।
ಸಪ್ತಮೀ ಶುಕ್ಲಪಕ್ಷೇಽಪಿ ಪೂಜ್ಯಾ ಷಷ್ಠ್ಯಾ ಸಮನ್ವಿತಾ　　॥ ೩೪ ॥

---

೩೧. ನಕ್ತಭೋಜನ ಮುಂತಾದ ವ್ರತಮಾಡಬೇಕಾಗಿರುವ ಸಂದರ್ಭದಲ್ಲಿ, ಹಗಲಿನಲ್ಲಿ ಆ ತಿಥಿಯ ಪ್ರಮಾಣವು ಹೆಚ್ಚಾಗಿರಬೇಕಾದುದು ಆವಶ್ಯಕ. ಶುಕ್ಲಪಕ್ಷ ಕೃಷ್ಣಪಕ್ಷ ಈ ಎರಡರ ಚತುರ್ಥಿಗಳು ರಾತ್ರಿಯಲ್ಲಿ ಯೋಗವಿರುವಾಗಲೇ ವಿಶೇಷವಾಗಿ ಗ್ರಾಹ್ಯವೆನಿಸಿವೆ.

೩೨. ಏಕಾದಶಿ ಮೊದಲಾದ ವ್ರತಾಚರಣೆಯಲ್ಲಿ ರಾತ್ರಿಗೆ ಆ ತಿಥಿಯ ಯೋಗ ವಿಲ್ಲದಿದ್ದರೂ ರಾತ್ರಿ ಜಾಗರಣಾದಿಗಳನ್ನು ಮಾಡುವುದಕ್ಕೂ, ನಕ್ತವ್ರತ ಮಾಡುವು ದಕ್ಕೂ ಪ್ರಶಸ್ತವಾಗಿರುವುದು.

೩೩. ಪರದಿನದಲ್ಲಿ ದ್ವಾದಶೀಸಂಬಂಧವಿರುವ ಸಂಭವದಲ್ಲಿ ಏಕಾದಶಿ ಉಪ ವಾಸವನ್ನು ಆಚರಿಸಬೇಕು. ಹಗಲಿನಲ್ಲಿಯೇ ಹಾಗೆ ಸಂಪೂರ್ಣವಾಗಿ ಬಂದರೆ ಆ ಎರಡರ ಪೂರ್ವಭಾಗವನ್ನೂ ಬಿಡಬೇಕು.

೩೪. ರಾತ್ರಿ ಪೂರ್ಣವ್ಯಾಪನೆಯಿರುವ ಏಕಾದಶಿಯು ಯಾವಾಗಲೂ ಉಪ ವಾಸಾರ್ಹವಾದುದು. ಶುಕ್ಲಪಕ್ಷದಲ್ಲಿ ಷಷ್ಠಿಯ ಸಂಬಂಧವುಳ್ಳ ಸಪ್ತಮಿಯು ಪೂಜ್ಯ ವಾದುದು. ಹೀಗೆ ಪೂಜ್ಯವೆನಿಸಬೇಕಾದರೆ ಷಷ್ಠೀ ತಿಥಿಯೊಡನೆ ಸಪ್ತಮಿಗೆ ರಾತ್ರಿ ವ್ಯಾಪನೆಯು ಅವಶ್ಯಕ.

**ನಿಶಿ ತು ಸ್ಯಾದ್ಯದಾ ಷಷ್ಠೀ ಸಪ್ತಮೀ ನವಮೀ ದಿವಾ ।**
**ಉಪೋಷ್ಯ ಕೇವಲಾಂ ಷಷ್ಠೀಂ ತೋಷಯೇದ್ಭಾಸ್ಕರಂ ನರಃ ॥ ೩೫ ॥**

**ಏವಂ ತ್ರಯೋದಶೀಂ ಕೃಷ್ಣಾಂ ವಿಧಿಪ್ರಾಪ್ತಾಂ ಸದಾ ದ್ವಿಜಾಃ ।**
**ಉಪೋಷ್ಯ ಪಾರ್ವತೀನಾಥಂ ತೋಷಯೇದ್ಯಶ್ಚ ಕೇವಲಂ ॥ ೩೬ ॥**

**ದಿವಾ ತ್ರಯೋದಶೀಯುಕ್ತಾ ಕೃಷ್ಣೋಪೋಷ್ಯಾ ಚತುರ್ದಶೀ ।**
**ಪರೇಣಾಪಿ ಚತುರ್ದಶ್ಯಾ ನ ತು ಕುರ್ಯಾದಮಾತಿಥೌ ॥ ೩೭ ॥**

**ತ್ರಿಸಂಧ್ಯವ್ಯಾಪಿನೀಂ ಪ್ರಾಪ್ಯ ಯದಿ ಕುರ್ಯಾದುಪೋಷಣಂ ।**
**ಪಾರಣಂ ತು ಸಿನೀವಾಲ್ಯಾಂ ಚತುರ್ದಶ್ಯಾಮುಪೋಷಯೇತ್ ॥ ೩೮ ॥**

**ಚತುರ್ದಶೀಮತಿಕ್ರಮ್ಯ ಸಿನೀವಾಲ್ಯಾಂ ತು ಪಾರಣಾತ್ ।**
**ವ್ರತಾನಿ ತಸ್ಯ ನಶ್ಯನ್ತಿ ಪ್ರಾಕ್ಕೃತಾಪಿ ಚತುರ್ದಶೀಂ ॥ ೩೯ ॥**

---

೩೫. ನವಮಿ ಅಷ್ಟಮಿಗಳ ಸಂಬಂಧವು ಹಗಲಿನಲ್ಲಿ ಒದಗುವುದು ಪ್ರಶಸ್ತ. ಇನ್ನೊಂದು ತಿಥಿಯಿಂದ ವಿದ್ಧವಲ್ಲದೆ ಶುದ್ಧವಾದ ಷಷ್ಠಿಯಲ್ಲಿ ಉಪವಾಸಮಾಡಿದರೆ ಸೂರ್ಯನು ಸಂತುಷ್ಟನಾಗುತ್ತಾನೆ.

೩೬. ಬ್ರಾಹ್ಮಣೋತ್ತಮರೇ ! ಕೇಳಿರಿ ; ಹೀಗೆ ವಿಧಿಯಂತೆ ಪ್ರಾಪ್ತವಾದ ಕೃಷ್ಣತ್ರಯೋದಶಿಯಲ್ಲಿ ಉಪವಾಸಮಾಡಿದವನು ಪರಮೇಶ್ವರನನ್ನು ತೃಪ್ತಿಪಡಿಸುವನು.

೩೭. ಕೃಷ್ಣಚತುರ್ದಶೀ ಉಪವಾಸ ಮಾಡಬೇಕಾದರೆ ಹಗಲಿನಲ್ಲಿ ತ್ರಯೋದಶೀ ಚತುರ್ದಶಿಗಳ ಯೋಗವಿರಬೇಕು. ಚತುರ್ದಶೀ ಕಳೆದು ಅಮಾವಾಸ್ಯೆಯ ಯೋಗ ಬರುವ ದಿನ ಉಪವಾಸ ಮಾಡಬಾರದು.

೩೮. ತಿಥಿಯು ತ್ರಿಸಂಧ್ಯವ್ಯಾಪಿನಿಯಾದ ಯೋಗವನ್ನು ನೋಡಿಕೊಂಡು ಉಪೋಷಣ ಮಾಡುವುದಾದರೆ ಚತುರ್ದಶಿಯಲ್ಲಿ ಉಪೋಷಣ ಮಾಡಿ ಸ್ವಲ್ಪ ಚಂದ್ರ ಕಲಾ ವಿಶಿಷ್ಟವಾದ ಅಮಾವಾಸ್ಯೆಯಲ್ಲಿ ಪಾರಣಮಾಡಬೇಕು

೩೯. ಸ್ವಲ್ಪವೂ ಚತುರ್ದಶಿ ಸಂಬಂಧವಿಲ್ಲದ ಅಮಾವಾಸ್ಯೆಯಲ್ಲಿ ಪಾರಣ ಮಾಡಿದರೆ ಅವನು ಪೂರ್ವದಲ್ಲಿ ಮಾಡಿದ ಚತುರ್ದಶೀ ವ್ರತಗಳ ಫಲವೆಲ್ಲಾ ನಾಶವಾಗುವುದು.

**ಸಪ್ತಮೀ ಲಲಿತಾ ಭಾದ್ರೇ ಶಕ್ರೋತ್ಥಾನಂ ಚ ವಾರುಣೇ ।**
**ಪೂಜ್ಯಾಶ್ಚೈತಾಃ ಪರಾಃ ಕುರ್ಯಾತ್ತ್ರಿಸಂಧ್ಯವ್ಯಾಪಿನೀಷ್ವಪಿ ॥ ೪೦ ॥**

**ತ್ರಿಸಂಧ್ಯವ್ಯಾಪಿನೀ ಪೂರ್ವೇ ಪರತೋ ವರ್ಧತೇ ಯದಿ ।**
**ಸ ಋಕ್ಷಾ ಋಕ್ಷಯೋಗೇತು ಋಕ್ಷಾಭಾವೇ ಪರಾ ಯುತಾ ॥ ೪೧ ॥**

**ಋಕ್ಷಾಭಾವೇ ಪರಾ ಗ್ರಾಹ್ಯಾ ತ್ರಿಸಂಧ್ಯವ್ಯಾಪಿನೀಷ್ವಪಿ ।**
**ಶ್ರಾವಣೇ ಚಾದ್ಯಪಾದೇ ತು ಪ್ರಶಸ್ತಾ ಶಕ್ರಪೂಜನೇ ॥ ೪೨ ॥**

**ಅಭಾವೇ ಚೋತ್ತರಾಷಾಢಾ ಧನಿಷ್ಠಾ ಚ ವಿಶಿಷ್ಯತೇ ।**
**ದಂಡಾರ್ಧಂ ದಂಡಮೇಕಂ ವಾ ತದರ್ಧಂ ಪಲಮೇವ ವಾ ॥ ೪೩ ॥**

---

೪೦. ಭಾದ್ರಪದಮಾಸದ ಶುಕ್ಲ ಸಪ್ತಮಿಯು ಲಲಿತಾ ಸಪ್ತಮಿ ಎನಿಸುವುದು, ದುರ್ಗಾದೇವತೆಯನ್ನು ಉತ್ಥಾನಮಾಡುವುದು, ವಾರುಣೀಪೂಜೆ, ಇವುಗಳನ್ನು ಮಾಡುವುದಕ್ಕೆ ಆವಶ್ಯಕವಾದ ತ್ರಿಸಂಧ್ಯವ್ಯಾಪನವುಳ್ಳ ಉತ್ತರಭಾಗವನ್ನೇ ಗ್ರಹಿಸಬೇಕು.

೪೧. ತಿಥಿಯು ತ್ರಿಸಂಧ್ಯವ್ಯಾಪಿನಿಯಾಗುವಾಗ ಪೂರ್ವಭಾಗವು ಪರಭಾಗಕ್ಕಿಂತ ಹೆಚ್ಚು ಪರಿಮಾಣದಲ್ಲಿ ವೃದ್ಧಿಯಾಗಿದ್ದರೆ ಉಕ್ತನಕ್ಷತ್ರಯುಕ್ತವಾಗಿರುವ ಪೂರ್ವಭಾಗದಲ್ಲಿಯೇ ಮಾಡಬೇಕು. ಅದು ಹಾಗೆ ಹೆಚ್ಚು ಪರಿಮಾಣ ನಕ್ಷತ್ರ ವ್ಯಾಪನ ಯುಕ್ತವಾಗದಿದ್ದರೆ ಹೆಚ್ಚಾಗಿ ನಕ್ಷತ್ರವ್ಯಾಪನೆಯಿರುವ ಉತ್ತರಭಾಗದಲ್ಲಿಯೇ ಮಾಡಬೇಕು.

೪೨. ತಿಥಿಯೇನೋ ತ್ರಿಸಂಧ್ಯವ್ಯಾಪಿನಿಯಾಗಿದ್ದು ಉಕ್ತನಕ್ಷತ್ರದ ವ್ಯಾಪನೆಯು ಅಭಾವವಾಗಿದ್ದರೆ, ಅದರ ಮುಂದಿನ ನಕ್ಷತ್ರವಿರುವಾಗ ಮಾಡಬೇಕು. ಶ್ರಾವಣಮಾಸದಲ್ಲಿ ಮಾಡುವ ಶಕ್ರಪೂಜೆಗೆ ಮೊದಲ ಪಾದ ಯುಕ್ತವಾಗಿರುವುದು ಪ್ರಶಸ್ತ.

೪೩. ಹಾಗಿರುವುದು ಅಭಾವವಾಗಲಾಗಿ ಉತ್ತರಾಷಾಢ, ಧನಿಷ್ಠಾ, ಈ ನಕ್ಷತ್ರಗಳು ಆ ಪೂಜೆಗೆ ವಿಶೇಷ ಫಲಯುಕ್ತವಾದುವು. ಒಂದು ದಂಡಪ್ರಮಾಣ, ಅರ್ಧ ದಂಡಪ್ರಮಾಣ, ಕಾಲುದಂಡ ಪ್ರಮಾಣ, ಅಥವಾ ಒಂದು ಪಲಪ್ರಮಾಣವಾದರೂ ಉಭಯಕಾಲಕ್ಕೆ ಸೇರಿದ್ದರೆ ಆ ತಿಥಿಯು ಪೂಜೆಗೆ ಉತ್ತಮತಿಥಿ ಎಂದು ಗ್ರಹಿಸಬೇಕು.

ಉದಯೇ ಸಂಯುತಾ ಗ್ರಾಹ್ಯಾ ಸಾ ತಿಥಿಶ್ಚೋತ್ತಮಾ ಭವೇತ್ ।
ತ್ರಿಸಂಧ್ಯವ್ಯಾಪಿನೀಂ ಹಿತ್ವಾ ಪೂಜ್ಯಾ ಶುಕ್ಲಾಷ್ಟಮೀ ಪರಾ ॥ ೪೪ ॥

ರವಿಚಕ್ರವಿತಾ ಗ್ರಾಹ್ಯಾ ರಥೇ ತಿಥ್ಯಾದೇರಪಿ ಚ ।
ತ್ರಿಸಂಧ್ಯವ್ಯಾಪಿನೀ ಯಾ ತು ಪಲಮೇಕಂ ಪರೇ ದಿನೇ ॥ ೪೫ ॥

ಅಪರೇಽಪಿ ಚ ಸರ್ವತ್ರ ಹಲಾನಾಂ ವಾಹನಂ ತ್ಯಜೇತ್ ।
ಶುಕ್ಲೈಕಾದಶ್ಯಮಾವಾಸ್ಯಾಸಂಕ್ರಾಂತ್ಯಾಂ ಶ್ರಾದ್ಧವಾಸರೇ ॥ ೪೬ ॥

ನರಾಶ್ವಗೋಗಜಾದೀನಾಂ ವಾಹನಾತ್ಪಾತಕೀ ಭವೇತ್ ॥ ೪೭ ॥

ಕರ್ತುರ್ಗೋರ್ಮಹಿಷಾದೀನಾಂ ಗರ್ದಭೋಷ್ಟ್ರಖರಸ್ಯ ಚ ।
ನ ವಾಹಯೇದ್ದಾಸದಾಸೀಂ ವಾಹನೇನಾಸ್ತಿ ದೂಷಣಂ ॥ ೪೮ ॥

---

೪೪. ಶುಕ್ಲಾಷ್ಟಮೀ ತಿಥಿಯು ತ್ರಿಸಂಧ್ಯವ್ಯಾಪಿನಿಯಾಗಿದ್ದರೂ ಅದರ ಆದಿ ಭಾಗವನ್ನು ಬಿಟ್ಟವು ವರ್ಜ್ಯವು. ಪರಭಾಗವೇ ಪೂಜಾದಿಗಳಿಗೆ ಪ್ರಶಸ್ತವಾದುದು ಎಂದು ತಿಳಿಯಬೇಕು.

೪೫. ಮಾರನೆಯದಿನ ಒಂದುಪಲ ಪ್ರಮಾಣದಷ್ಟು ತಿಥಿ ವ್ಯಾಪನೆಯಿದ್ದರೆ ಅದು ತ್ರಿಸಂಧ್ಯವ್ಯಾಪಿನಿ ಹೌದೇ ಅಲ್ಲವೇ ಎಂಬುದನ್ನು ಸೂರ್ಯಚಕ್ರಸ್ವರೂಪವನ್ನು ತಿಳಿದವರು ನಿಷ್ಕರ್ಷೆಯಾಗಿ ಹೇಳಬಲ್ಲರು. ಈ ತ್ರಿಸಂಧ್ಯವ್ಯಾಪಿನಿಯಾದ ತಿಥಿ ಮೊದಲಾದುವುಗಳಲ್ಲಿ ಯಾವ ಭಾಗ ಗ್ರಾಹ್ಯ; ಯಾವುದು ಅಗ್ರಾಹ್ಯ; ಎಂಬ ವಿಚಾರ ಗಳನ್ನು ಗ್ರಹಿಸಲು ಅವರೇ ಸಮರ್ಥರು.

೪೬. ಎಲ್ಲಾ ತಿಥಿಗಳ ಉತ್ತರಭಾಗಗಳಲ್ಲಿ ನೇಗಿಲು ಹೂಡಬಾರದು. ಶುಕ್ಲ ಪಕ್ಷದ ಏಕಾದಶಿ, ಅಮಾವಾಸ್ಯೆ, ಸಂಕ್ರಮಣ, ಈ ದಿನಗಳಲ್ಲಿಯೂ,

೪೭. ತಮ್ಮ ಪಿತ್ರಾದಿಗಳ ಶ್ರಾದ್ಧದಿನಗಳಲ್ಲಿಯೂ ನರವಾಹನವಾದ ಪಲ್ಲಕ್ಕಿ, ಎತ್ತು ಆನೆ ಇವುಗಳ ಮೇಲೆ ಏರುವುದರಿಂದ ಪಾಪಸಂಘಟನೆಯಾಗುತ್ತದೆ.

೪೮. ಯಜಮಾನನಿಗೆ ಸಂಬಂಧಿಸಿದ ಎತ್ತು, ಎಮ್ಮೆ, ಕತ್ತೆ, ಒಂಟೆ ಮುಂತಾ ದುವುಗಳನ್ನು ಏರಬಾರದು. ಆದರೆ ದಾಸ ದಾಸಿ ಇವರುಗಳಿಂದ ಎಳೆಯಲ್ಪಡುವ ವಾಹನಗಳನ್ನು ಏರುವುದು ದೂಷ್ಯವಲ್ಲ.

**ಬಹುಕಾಲಿಕಯಜ್ಞೇ ಚ ಯಜ್ಞಶ್ರಾದ್ಧೇ ತಥೈವ ಚ ।**
**ಗ್ರಾಮಾನ್ತರೇ ನ ದೋಷಃ ಸ್ಯಾದ್ದಿವಿ ನದ್ಯನ್ತರೇಪಿ ಚ ॥ ೪೯ ॥**

**ನಿತ್ಯಶ್ರಾದ್ಧೇಽಪ್ಯಂಬುಘಟೇ ಯಚ್ಛ್ರಾದ್ಧಂ ಮಾಸಿಕಂ ಭವೇತ್ ।**
**ತತ್ರ ಗೋಮಹಿಷಾದೀನಾಂ ವಾಹನೇ ನಾಸ್ತಿ ದೂಷಣಂ ॥ ೫೦ ॥**

**ಕುರ್ಯಾದಂಬುಘಟಶ್ರಾದ್ಧಂ ನ ಕಾಲನಿಯಮಂ ಕ್ವಚಿತ್ ।**
**ನ ಚಾನ್ನನಿಯಮಂ ಕುರ್ಯಾದಶ್ಮಪಾತ್ರಂ ಚ ವರ್ಜಯೇತ್ ॥ ೫೧ ॥**

**ತೈಜಸೈರ್ನಿರ್ಮಿತಂ ಕುಂಭಮಥ ವಾ ವೃಕ್ಷಪತ್ರಜಂ ।**
**ನ ಯೋಜಯೇನ್ಮೃಣ್ಮಯಂ ಚ ಶೂದ್ರಾಣಾಂ ಮೃಣ್ಮಯೇ ವಿಧಿಃ ॥ ೫೨ ॥**

---

೪೯. ತುಂಬಾದಿನ ನಡೆಯಬೇಕಾದ ಯಜ್ಞದಲ್ಲಿಯೂ, ಯಜ್ಞಕ್ಕೆ ಅಂಗವಾದ ಶ್ರಾದ್ಧದಲ್ಲಿಯೂ, ಗ್ರಾಮಾಂತರಕ್ಕೆ ಹೋಗುವ ಕಾಲದಲ್ಲಿಯೂ ಮತ್ತು ಅಂತರಿಕ್ಷಗಮನದಲ್ಲಿಯೂ, ನದೀದಾಟುವ ಕಾಲದಲ್ಲಿಯೂ ವಾಹನಾರೋಹಣವು ದೋಷವಲ್ಲ.

೫೦. ನಿತ್ಯಶ್ರಾದ್ಧ, ಸೋದಕುಂಭಶ್ರಾದ್ಧ, ಮಾಸಿಕಶ್ರಾದ್ಧ ಇವುಗಳಿಗೆ ಆಹೂತನಾಗಿ ಹೋಗುವಾಗ ಎತ್ತು ಕೋಣಗಳನ್ನು ಕಟ್ಟಿದ ವಾಹನಗಳಮೇಲೆ ಹತ್ತಿಕೊಂಡು ಹೋಗುವುದು ದೂಷ್ಯವಲ್ಲ.

೫೧. ಸೋದಕುಂಭಶ್ರಾದ್ಧವನ್ನು ಸದಾ ಮಾಡಬಹುದು. ಇದಕ್ಕೆ ಕಾಲನಿಯಮವು ಎಲ್ಲಿಯೂ ಇಲ್ಲ. ಈ ಶ್ರಾದ್ಧಕ್ಕಾಗಿ ನಿಮಂತ್ರಿತನಾದ ವಿಪ್ರನು ರಾತ್ರಿ ಊಟಮಾಡಬಾರದೆಂಬ ನಿಯಮವೂ ಸಹ ಇರುವುದಿಲ್ಲ. ಈ ಶ್ರಾದ್ಧದಿನಗಳಲ್ಲಿ ಅಡಿಗೆಗೆ ಕಲ್ಲುಗಡಿಗೆಗಳನ್ನು ಬಳಸಬಾರದು.

೫೨. ತೇಜಸ್ಸಿನಿಂದ (ಬೆಂಕಿಯಿಂದ) ಸಂಸ್ಕರಿಸಿದ (ಸುಟ್ಟ) ಜಾಡಿ ಮೊದಲಾದ ಪಾತ್ರೆಗಳನ್ನೂ, ಗಿಡದ ಎಲೆಗಳಿಂದ ಕಟ್ಟಿದ ದೊನ್ನೆಯನ್ನೂ ಉಪಯೋಗಿಸಬಾರದು. ಮಣ್ಣಿನಪಾತ್ರೆಯನ್ನು ಉಪಯೋಗಿಸುವುದು ಶೂದ್ರರಲ್ಲಿ ರೂಢಿಯಾಗಿದೆ

ನಿವೇದಯೇಚ್ಚ ಮಾಸಾನ್ತೇ ಮೃನ್ಮಯಂ ವೃಕ್ಷಮೂಲಕೇ ।
ಆಸ್ಫಾಲಯೇತ್ಪರೇಣ್ಯೈವ ನ ವಸ್ತ್ರಂ ತು ಕಥಂಚನ ॥
ಪರ್ವಶ್ರಾದ್ಧೇ ದೈವಲಕಂ ತಥಾ ರಂಡಾಶ್ರಮಂ ತ್ಯಜೇತ್ ॥ ೫೩ ॥

ಮಾತಾಪಿತೃಪರಿತ್ಯಾಗೀ ತೈಲಹವ್ಯಾದಿ ವಿಕ್ರಯೀ ।
ಚತ್ವಾರಿಂಶದುತ್ಸವಾನಾಂ ಸಾಷ್ಟಾನಾಂ ಚ ಚರೇದ್ಯದಿ ॥ ೫೪ ॥

ಸ್ತ್ರಿಯಾ ವಿಮುಚ್ಯತೇ ಕಶ್ಚಿತ್ಸ ತು ರಂಡಾಶ್ರಮೀ ಮತಃ ।
ಅಷ್ಟ ಚತ್ವಾರಿಂಶದಬ್ದಂ ವಯೋ ಯಾವನ್ನ ಪೂರ್ಯತೇ ॥ ೫೫ ॥

ಪುತ್ರಭಾರ್ಯಾವಿಯುಕ್ತಸ್ಯ ನಾಸ್ತಿ ಯಜ್ಞಾಧಿಕಾರಿತಾ ॥ ೫೬ ॥

ಯಾಂ ತಿಥಿಂ ಸಮನುಪ್ರಾಪ್ಯ ಸಮುದೇತಿ ದಿವಾಕರಃ ।
ಸ್ನಾನಾಧ್ಯಯನದಾನೇಷು ಸಾ ತಿಥಿಃ ಸಕಲಾ ಸ್ಮೃತಾ ॥ ೫೭ ॥

---

೫೩. ಒಂದು ವೇಳೆ ಬ್ರಾಹ್ಮಣನು ಮಣ್ಣಿನ ಪಾತ್ರೆಗಳನ್ನು ಉಪಯೋಗಿಸುವುದಾದರೆ ಒಂದು ತಿಂಗಳು ಉಪಯೋಗಿಸಿದ ಮೇಲೆ ಅದನ್ನು ಮರದ ಬುಡದಲ್ಲಿ ಎಸೆದುಬಿಡಬೇಕು. ಹೀಗೆ ವೃಕ್ಷಮೂಲದಲ್ಲಿ ವಿಸರ್ಜಿಸುವುವಾಗ ಬಳಸದೇ ಇರುವ ಇನ್ನೊಂದು ಪಾತ್ರೆಯನ್ನು ಇದಕ್ಕೆ ಸೋಕಿಸಿ ವಿಸರ್ಜಿಸಬೇಕು. ಆದರೆ ಬಟ್ಟೆಗಳ ವಿಷಯದಲ್ಲಿ ಈ ಕ್ರಮವನ್ನು ಅನುಸರಿಸಲಾಗುವುದಿಲ್ಲ. ದ್ರವ್ಯಾರ್ಥವಾಗಿ ದೇವರನ್ನು ಪೂಜಿಸುವ ದೇವಲಕನನ್ನೂ, ಮತ್ತು ರಂಡಾಶ್ರಮಿಯನ್ನೂ(ತನ್ನ ಸ್ತ್ರೀಯಿಂದ ತಿರಸ್ಕೃತನಾದವನು ರಂಡಾಶ್ರಮಿ) ಶ್ರಾದ್ಧ ಭೋಜನಾದಿಗಳಲ್ಲಿ ವರ್ಜ್ಯಮಾಡಬೇಕು.

೫೪-೫೬. ತಾಯಿತಂದೆಗಳನ್ನು ದೂರಮಾಡಿರುವವನು; ಎಣ್ಣೆ, ತುಪ್ಪ ಇವುಗಳನ್ನು ಮಾರಾಟಮಾಡುವವನು ; ತನಗೆ ನಲವತ್ತೆಂಟು ವರ್ಷ ತುಂಬುವುದರೊಳಗೆ ನಲವತ್ತೆಂಟು ಉತ್ಸವಾದಿಗಳನ್ನು (ಯಜ್ಞಾದಿಗಳನ್ನು) ಮಾಡಿದವನು ಎಂದರೆ ಉಕ್ತಕಾಲ ನಿಚ್ಛಿತ್ತಿಯಿಲ್ಲದೆ ಸಿಕ್ಕಿದ ಕಡೆಯೆಲ್ಲಾ ಅತಿಭಾಗಿಯಾಗಿ ವರ್ತಿಸುವವನು, ಮಗನನ್ನು ಕಳೆದುಕೊಂಡವನು, ಪತ್ನಿಯನ್ನು ಪರಿತ್ಯಾಗಮಾಡಿದವನು, ಇವರುಗಳಿಗೆ ಯಜ್ಞಮಾಡಲು ಅಧಿಕಾರವಿಲ್ಲ. ತನ್ನ ಸ್ತ್ರೀಯಿಂದ ತಿರಸ್ಕೃತನಾದವನನ್ನು ರಂಡಾಶ್ರಮಿ ಎಂದು ಹೇಳುವರು.

೫೭. ಸೂರ್ಯನು ಯಾವ ತಿಥಿಯಲ್ಲಿ ಉದಯವಾಗುವನೋ ಆ ದಿನ ಅದು ಪೂರ್ಣವಾಗಿಲ್ಲದಿದ್ದರೂ ಸ್ನಾನ, ದಾನ, ಅಧ್ಯಯನ, ವ್ರತ ಮುಂತಾದುವುಗಳಿಗೆ ಸಂಕಲ್ಪಮಾಡುವಾಗ ಆ ತಿಥಿಯನ್ನೇ ಹೇಳಬೇಕು.

**ಯಯಾಸ್ತಂ ಸವಿತಾ·ಯಾತಿ ಕೃಷ್ಣಪಕ್ಷೇ ತು ಸಾ ತಿಥಿಃ ।**
**ಪಿತೄಣಾಂ ಸಕಲಾ ಜ್ಞೇಯಾ ಸ್ನಾನದಾನಾದಿಕರ್ಮಸು ॥ ೫೮ ॥**

**ಸಪ್ತಮೀ ಶುಕ್ಲಪಕ್ಷೇ ಯಾ ಯಾವದಿಚ್ಛೇಚ್ಚ ಖಂಡಿತಾ ।**
**ಆದ್ಯಭಾಗೇ ರವೇಃ ಷಷ್ಠ್ಯಾಂ ಪರಾದೌ ಯಾಷ್ಟಮೀಯುತಾ ।**
**ಯದ್ಯಖಂಡಾ ಭವೇತ್ಸೈವ ತದಾ ಜ್ಞೇಯಾ ಭವಾತ್ಮಿಕಾ ॥ ೫೯ ॥**

**ಮಾಘಮಾಸೇನ ಸಾಪ್ಯೇವಂ ಪೂರ್ವೇಣ ರವಿತೋಷಿಣೀ ।**
**ಮನ್ವಂತರಾ ಪರೇಣೈವ ಸ್ನಾನದಾನಾದಿಕರ್ಮಸು ॥ ೬೦ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ ಸಪ್ತಮೋಽಧ್ಯಾಯಃ.**

---

೫೮. ಕೃಷ್ಣಪಕ್ಷದಲ್ಲಿ ಸೂರ್ಯಾಸ್ತಮಯ ಸಮಯಕ್ಕೆ ಯಾವ ತಿಥಿ ಇರುವುದೋ ಅದೇ ಪಿತೃದ್ದೇಶದಿಂದ ಮಾಡುವ ಸ್ನಾನ ದಾನಾದಿಕರ್ಮಗಳಿಗೆ ಅಖಂಡ ತಿಥಿಯೆಂದು ಭಾವಿಸಬೇಕು.

೫೯. ಶುಕ್ಲಪಕ್ಷದ ಸಪ್ತಮಿಯು ಅಷ್ಟಮೀಸಂಪರ್ಕವಿಲ್ಲದೆ ಪ್ರತ್ಯೇಕವಾಗಿದ್ದರೆ, ಅದು ಸೂರ್ಯನಿಗೆ ಪ್ರಿಯವಾದುದು. ಪೂರ್ವತಿಥಿಯಾದ ಷಷ್ಠಿಯೊಡನೆ ಆದಿ ಭಾಗದಲ್ಲಿ ಸಂಬಂಧವುಳ್ಳದಾಗಿಯೂ ಪರತಿಥಿಯಾದ ಅಷ್ಟಮಿಯೊಡನೆ ಅಂತ್ಯಭಾಗದಲ್ಲಿ ಸಂಬಂಧವುಳ್ಳದಾಗಿಯೂ ಇದ್ದರೆ ಅದು ಖಂಡಿತಾ ಸಪ್ತಮಿ ಎನಿಸುವುದು. ಹೀಗಲ್ಲದೆ ಅಖಂಡವಾದ ಸಪ್ತಮಿಯಿದ್ದರೆ ಅದು ಭವಾತ್ಮಿಕಾ ಸಪ್ತಮಿ ಎಂದು ತಿಳಿಯಬೇಕು.

೬೦. ಮಾಘಮಾಸದಲ್ಲಿ ಬರುವ ಸೂರ್ಯಪ್ರಿಯಕರವಾದ ಸಪ್ತಮಿಯು ಷಷ್ಠಿಯುಕ್ತವಾಗಿದ್ದರೆ ಮನ್ವಂತರಾ ಎನಿಸುವುದು. ಸ್ನಾನ, ದಾನ ಮುಂತಾದ ಕರ್ಮಾಚರಣೆಗೆ ಪರತಿಥಿಯಾದ ಅಷ್ಟಮಿಯ ಸಂಬಂಧ ಇರಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ದ್ವಿತೀಯಭಾಗದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ದ್ವಿತೀಯಭಾಗೇ

## ಅಷ್ಟಮೋಽಧ್ಯಾಯಃ

---

॥ ಸೂತ ಉವಾಚ ॥

ತಿಥೀನಾಂ ಪ್ರವರಾ ಯಸ್ಮಾದ್ಬ್ರಹ್ಮಣಾ ಸಮುದಾಹೃತಾ ।
ಪ್ರತಿಪಾದಿತಾ ಪರೇ ಪೂರ್ವೇ ಪ್ರತಿಪಾದ್ಯ ನವೋದ್ಯತೇ ॥ ೧ ॥

ಕಾರ್ತಿಕಾಶ್ವಯುಜೋಶ್ಚೈತ್ರೇ ಮಾಘೇ ಚಾಪಿ ವಿಶೇಷತಃ ।
ಸ್ನಾನಂ ದಾನಂ ದಶಗುಣಂ ಶಿವವಿಷ್ಣ್ವೋಶ್ಚ ಪೂಜನಂ ॥ ೨ ॥

---

## ಎಂಟನೆಯ ಅಧ್ಯಾಯ

೧. ಸೂತರು ಮುಂದುವರಿಸಿ ಹೇಳುತ್ತಾರೆ—ತಿಥಿಗಳ ಶ್ರೇಷ್ಠತೆಯನ್ನು ಬ್ರಹ್ಮನೇ ಹೇಳಿರುವ ಕಾರಣ ಅದರ ಪೂರ್ವದಲ್ಲಿಯೂ, ಪರದಲ್ಲಿಯೂ ವಿದ್ಧವಾಗುವ ತಿಥಿಯ ಗುಣದೋಷ ವಿಷಯವನ್ನು ಸ್ವಲ್ಪಮಟ್ಟಿಗೆ ಪ್ರತಿಪಾದನೆ ಮಾಡಲಾಯಿತು. ತಿಥಿಗಳು ಯಾವ ಮಾಸದಲ್ಲಿ ಯಾವ ಕಾರ್ಯಕ್ಕೆ ಶ್ರೇಷ್ಠತೆಯನ್ನು ಪಡೆದಿವೆ ಎಂಬ ಹೊಸ ವಿಷಯವನ್ನು ಹೇಳುತ್ತೇನೆ.

೨. ಆಶ್ವಯುಜ, ಕಾರ್ತಿಕ, ಚೈತ್ರ, ಮಾಘ ಈ ಮಾಸಗಳಲ್ಲಿ ಸ್ನಾನದಾನಾದಿಗಳನ್ನು ಮಾಡಿದರೂ, ಶಿವ ವಿಷ್ಣುಗಳನ್ನು ಪೂಜೆಮಾಡಿದರೂ ಅವುಗಳ ಫಲಗಳು ಹತ್ತರಷ್ಟು ಹೆಚ್ಚಾಗುತ್ತವೆ.

ಅಗ್ನಿಮಿಷ್ಟ್ವಾ ಚ ಕೃತ್ವಾ ಚ ಪ್ರತಿಪದ್ಯಾಮಿತಿ ಸ್ಮೃತಂ ।
ಹವಿಷಾ ಸರ್ವಧಾನ್ಯಾನಿ ಪ್ರಾಪ್ನುಯಾದೀಪ್ಸಿತಂ ಧನಂ ॥ ೩ ॥

ಬೃಹಸ್ಪತೌ ದ್ವಿತೀಯಾಯಾಂ ಶುಕ್ಲಾಯಾಂ ವಿಧಿಪೂಜನಂ ।
ಕೃತ್ವಾ ನಕ್ತಂ ಸಮಶ್ನೀಯಾಲ್ಲಭತೇ ಭೂತಿಮೀಪ್ಸಿತಾಂ ॥ ೪ ॥

ಮಿಥುನೇ ಕರ್ಕಟೇ ಚೈವ ಗೋವಿಪ್ರದಮನಾಂತರಂ ।
ಯಾಮುಪೋಷ್ಯ ನ ವೈಧವ್ಯಂ ಪ್ರಯಾತಿ ಸ್ತ್ರೀ ನ ಸಂಶಯಃ ॥ ೫ ॥

ಅಮೂಲ್ಯಶಯನಂ ಮಾಸಂ ದಂಪತೀ ಪ್ರತಿಪೂಜಯೇತ್ ।
ವಾಸೋಭಿರ್ಗಂಧಪುಷ್ಪೈಶ್ಚ ನಾನಾಭಕ್ಷ್ಯೈಃ ಪೃಥಗ್ವಿಧೈಃ ॥ ೬ ॥

---

೩. ಶುಕ್ಲಪ್ರತಿಪತ್ತಿಥಿಯಲ್ಲಿ ಅಗ್ನಿಯಲ್ಲಿ ಹವಿಸ್ಸನ್ನು ಹೋಮಮಾಡಿ ಪೂಜಿಸಬೇಕು. ಹೀಗೆ ಆಚರಿಸಿದಾತನು ತನಗೆ ಇಷ್ಟವಾದ ಸಕಲೈಶ್ವರ್ಯವನ್ನೂ, ಸಕಲ ಧಾನ್ಯವನೂ ಪಡೆಯುತ್ತಾನೆಂದು ತಿಳಿಯಬೇಕು.

೪. ಶುಕ್ಲಪಕ್ಷ ದ್ವಿತೀಯೆಯು ಗುರುವಾರ ಯುಕ್ತವಾಗಿದ್ದರೆ ಆ ದಿನ ಬ್ರಹ್ಮನನ್ನು ಪೂಜಿಸಿ ನಕ್ತಭೋಜನ ಮಾಡಬೇಕು. ಹೀಗೆ ಮಾಡಿದವನು ಇಷ್ಟವಾದ ಸಂಪತ್ತನ್ನು ಪಡೆಯುತ್ತಾನೆ.

೫: ಓ ವಿಪ್ರಶ್ರೇಷ್ಠರೇ! ಕೇಳಿ; ಮಿಥುನಮಾಸ ಕರ್ಕಾಟಕಮಾಸದ ದ್ವಿತೀಯೆಗಳಲ್ಲಿ ಗೋವುಗಳು ಮನೆಗೆ ಬರುವ ಪರ್ಯಂತ ಉಪವಾಸ ನಿಯಮವುಳ್ಳವನಾಗಿ ಅವುಗಳನ್ನು ಯಥಾಸ್ಥಾನಕ್ಕೆ ಕಟ್ಟಿದ ಮೇಲೆ, ಸಂಜೆ ವಿಪ್ರರನ್ನು ಮನೆಗೆ ಕರೆದು, ಸರಿಯಾಗಿ ಸತ್ಕರಿಸುವುದಲ್ಲದೆ ವಿಷ್ಣುವನ್ನು ಪೂಜಿಸಬೇಕು. ಸ್ತ್ರೀಯು ಈ ರೀತಿ ವ್ರತೋಪವಾಸ ಮಾಡಿದರೆ ಯಾವಾಗಲೂ ವೈಧವ್ಯವನ್ನು ಹೊಂದದೆ ಸುಮಂಗಲಿಯಾಗಿಯೇ ಇರುವಳು.

೬. ಈ ಮಿಥುನ ಕರ್ಕಾಟಕ ಮಾಸಗಳ ದ್ವಿತೀಯಾತಿಥಿಗಳಲ್ಲಿ ದಂಪತಿಗಳು ಸತ್ಪಾತ್ರರಾದ ತರುಣದಂಪತಿಗಳನ್ನು ಗಂಧ ಪುಷ್ಪಗಳಿಂದಲೂ ಬಗೆಬಗೆಯಾದ ಅನೇಕ ಭಕ್ಷ್ಯಗಳಿಂದಲೂ ಸತ್ಕರಿಸಿ ಅವರಿಗೆ ಅಮೂಲ್ಯವಾದ ಶಯ್ಯೆಯನ್ನು (ಹಾಸಿಗೆಯನ್ನು) ದಾನಮಾಡಬೇಕು.

ವೈಶಾಖೇ ಶುಕ್ಲಪಕ್ಷೇ ತು ತೃತೀಯಾಯಾಂ ತಥೈವ ಚ ।
ಗಂಗಾತೋಯೇ ನರಃ ಸ್ನಾತ್ವಾ ಮುಚ್ಯತೆ ಸರ್ವಕಿಲ್ಬಿಷೈಃ ॥ ೭ ॥

ಸ್ವಾತೀಯುಕ್ತ್ರತೃತೀಯಾಯಾಂ ವೈಶಾಖೇ ತು ವಿಶೇಷತಃ ।
ಮಾಘೇ ತು ರೋಹಿಣೀಯುಕ್ತಾ ವೃಷೇ ಚಾಶ್ವಯುಜೇ ತಥಾ ॥ ೮ ॥

ತಸ್ಯಾಂ ಯದ್ದೀಯತೇ ಕಿಂಚಿತ್ತದಕ್ಷಯಮುದಾಹೃತಂ ।
ವಿಶೇಷತೋ ಹವಿಷ್ಯಾನ್ನಂ ಮೋದಕಾದಿಸಮಾಯುತಂ ॥ ೯ ॥

ತೋಯದಾನಂ ವಿಶೇಷೇಣ ಪ್ರಶಂಸಂತಿ ಮನೀಷಿಣಃ ।
ಗುಡಕರ್ಪೂರಸಂಯುಕ್ತಂ ಬ್ರಹ್ಮಲೋಕೇ ಮಹೀಯತೇ ॥ ೧೦ ॥

ಬುಧಶ್ರವಣಸಂಯುಕ್ತಾ ತೃತೀಯಾ ಯದಿ ಲಭ್ಯತೆ ।
ತಸ್ಯಾಂ ಸ್ನಾನೋಪವಾಸಾದ್ಯಮಕ್ಷಯಂ ಪರಿಕೀರ್ತಿತಂ ॥ ೧೧ ॥

---

೭. ವೈಶಾಖಶುಕ್ಲ ತೃತೀಯಾದಿವಸ ಗಂಗೆಯಲ್ಲಿ (ಗಂಗಾನದಿಯಲ್ಲಿ) ಸ್ನಾನ ಮಾಡಿದ ಮನುಷ್ಯನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡು ಪವಿತ್ರನಾಗುವನು.

೮–೯. ವಿಶೇಷತಃ ವೈಶಾಖಶುದ್ಧ ತದಿಗೆಯು ಸ್ವಾತೀನಕ್ಷತ್ರಯುತವಾಗಿದ್ದರೂ, ಮಾಘಶುದ್ಧ ತದಿಗೆಯು ರೋಹಿಣೀನಕ್ಷತ್ರದಿಂದ ಯುಕ್ತವಾಗಿದ್ದರೂ, ಆಶ್ವಯುಜ ಶುದ್ಧತದಿಗೆಯು ವೃಷನಕ್ಷತ್ರಯುಕ್ತವಾಗಿದ್ದರೂ ಅಂತಹ ತಿಥಿಗಳಲ್ಲಿ ಏನಾದರೂ ಕೊಂಚ ದಾನಮಾಡಿದರೆ ಅದು ಅಕ್ಷಯವಾಗುತ್ತದೆ. ಮೋದಕ ಮೊದಲಾದುವುಗಳಿಂದ ಕೂಡಿದ ಹವಿಷ್ಯಾನ್ನದಾನವು ವಿಶೇಷ ಫಲದಾಯಕವಾದುದು.

೧೦ ಆ ತಿಥಿಯಲ್ಲಿ ಉದಕುಂಭದಾನವು ಶ್ರೇಷ್ಠವಾದುದೆಂದು ತಿಳಿದವರು ಪ್ರಶಂಸೆಮಾಡುತ್ತಾರೆ. ಅದರಲ್ಲಿಯೂ ಬೆಲ್ಲ, ಪಚ್ಚಕರ್ಪೂರ, ಇವುಗಳಿಂದ ಯುಕ್ತವಾದ ಉದಕವನ್ನು ದಾನಮಾಡಿದವನು ಬ್ರಹ್ಮಲೋಕದಲ್ಲಿ ಪೂಜಿತನಾಗುತ್ತಾನೆ.

೧೧. ಯಾವ ಮಾಸದ ಶುಕ್ಲತೃತೀಯೆಯ ದಿವಸ, ಬುಧವಾರ ಮತ್ತು ಶ್ರವಣ ನಕ್ಷತ್ರ ಇವೆರಡೂ ಸೇರಿಬರುತ್ತದೆಯೋ, ಆ ದಿನ ಮಾಡಿದ ಸ್ನಾನ, ಉಪವಾಸ, ಮೊದಲಾದುವುಗಳು ಅಕ್ಷಯಫಲದಾಯಕಗಳೆಂದು ಹೇಳಿದೆ.

ಚತುರ್ಥೀ ಭರಣೀಯೋಗೇ ಭವೇಚ್ಚರದಿನಂ ಯದಾ ।
ತದಾಭ್ಯರ್ಚ್ಯ ಯಮಂ ದೇವಂ ಮುಚ್ಯತೇ ಸರ್ವಕಿಲ್ಬಿಷೈಃ ॥ ೧೨ ॥

ಶಿವಾ ಶಾಂತಾ ಸುಖಾ ಚೈವ ಚತುರ್ಥೀ ತ್ರಿವಿಧಾ ಸ್ಮೃತಾ ।
ಸಾಪಿ ಭಾದ್ರಪದೇ ಶುಕ್ಲಾ ಶಿವಾ ಲೋಕೇ ಸುಪೂಜಿತಾ ॥ ೧೩ ॥

ಕಾರ್ತಿಕೇ ತು ಭವೇಚ್ಛಾಂತಾ ಸುಖಾ ಮಾಘೇ ತು ಕೀರ್ತ್ಯತೇ ।
ತಸ್ಯಾಂ ಸ್ನಾನಂ ತಪೋ ದಾನಮುಪವಾಸೋ ಜಪಸ್ತಥಾ ॥
ಭವೇತ್ಸಹಸ್ರಗುಣಿತಂ ಶ್ರಾದ್ಧಂ ಭವತಿ ಚಾಕ್ಷಯಂ ॥ ೧೪ ॥

ಗಣೇಶೇ ಕಾರಯೇತ್ಪೂಜಾಂ ಮೋದಕಾದಿಭಿರಾದರಾತ್ ।
ಚತುರ್ಥ್ಯಾಂ ವಿಘ್ನನಾಶಾಯ ಸರ್ವಕಾಮ್ಯಾರ್ಥಸಿದ್ಧಯೇ ॥ ೧೫ ॥

---

೧೨. ಶುಕ್ಲಚತುರ್ಥಿಯು ಭರಣೀನಕ್ಷತ್ರದಿಂದ ಯುಕ್ತವಾಗಿ ಚರದಿನವಾಗಿದ್ದರೆ ಆ ದಿನ ಯಮನನ್ನು ಪೂಜಿಸಬೇಕು. ಹೀಗೆ ಪೂಜೆಮಾಡಿದವನು ಸಮಸ್ತ ಪಾಪಗಳಿಂದಲೂ ಬಿಡುಗಡೆಹೊಂದುವನು.

೧೩. ಚತುರ್ಥಿಯಲ್ಲಿ ಶಿವಾ, ಶಾಂತಾ, ಸುಖಾ ಎಂಬದಾಗಿ ಮೂರು ಬಗೆಗಳೆಂದು ಹೇಳುತ್ತಾರೆ. ಭಾದ್ರಪದ ಶುಕ್ಲಚತುರ್ಥಿಯು ಶಿವಾಚತುರ್ಥಿಯೆನಿಸಿಕೊಂಡು ಲೋಕಪೂಜ್ಯವಾಗಿದೆ.

೧೪. ಕಾರ್ತಿಕಶುದ್ಧ ಚತುರ್ಥಿಯು ಶಾಂತಾಚತುರ್ಥಿಯೆಂದೂ, ಮಾಘ ಶುಕ್ಲಚತುರ್ಥಿಯು ಸುಖಾಚತುರ್ಥಿಯೆಂದೂ ಕರೆಯಲ್ಪಡುವುವು. ಆ ತಿಥಿಗಳಲ್ಲಿ ಸ್ನಾನ, ದಾನ, ಜಪ, ಉಪವಾಸ, ತಪಸ್ಸು ಇವುಗಳನ್ನು ಮಾಡಿದರೆ ಇತರ ಚತುರ್ಥಿಯಲ್ಲಿ ಮಾಡಿದುದರ ಹತ್ತರಷ್ಟು ಫಲವುಂಟಾಗುವುದು. ಆ ದಿನ ಶ್ರಾದ್ಧಮಾಡಿದರೆ ಅಕ್ಷಯವಾದ ಫಲವುಂಟಾಗುವುದು.

೧೫. ಭಕ್ತರು ತಮ್ಮ ವಿಘ್ನನಾಶವಾಗುವುದಕ್ಕೂ, ಸಮಸ್ತಇಷ್ಟಗಳು ಸಿದ್ಧಿಸುವುದಕ್ಕೂ ಆ ಶುಕ್ಲಚತುರ್ಥಿಯಲ್ಲಿ ಆದರದಿಂದ ಗಣೇಶನನ್ನು ಪ್ರಾರ್ಥಿಸಿ ಮೋದಕ ಮೊದಲಾದುವುಗಳನ್ನು ನಿವೇದನಮಾಡಿ ಪೂಜಿಸಬೇಕು.

**ಶ್ರಾವಣೇ ಮಾಸಿ ಪಂಚಮ್ಯಾಂ ಶುಕ್ಲಪಕ್ಷೇ ವಿಶೇಷತಃ ।**
**ಸ್ನಾಪಯೇನ್ನವನಾಗಾಂಶ್ಚ ಗಂಧತೋಯೈಃ ಸುಗಂಧಿಭಿಃ ॥ ೧೬ ॥**

**ತೇಷಾಂ ಕುಲೇ ಪ್ರಯಚ್ಛಂತಿ ಅಭಯಂ ಪ್ರಾಣರಕ್ಷಣಂ ॥ ೧೭ ॥**

**ದ್ವಾರಸ್ಯೋಭಯಲೇಖೇ ಚ ಗೋಮಯೇನ ವಿಶೇಷತಃ ।**
**ಪೂಜಯೇದ್ದಧಿದುಗ್ಧಾದ್ಯೈಃ ಸಿಂಧೂರೈರಪಿ ಭಕ್ತಿತಃ ॥ ೧೮ ॥**

**ಸುಪ್ತೇ ಜನಾರ್ದನೇ ಕೃಷ್ಣಪಂಚಮ್ಯಾಂ ಭವನಾಂಗಣೇ ।**
**ಪೂಜಯೇನ್ಮನಸಾ ದೇವೀಂ ವಾಮಾಂ ಸ್ನುಹೀತಿ ಸಂಶ್ರಯಾಂ ॥ ೧೯ ॥**

**ಪಿಚುಮಂದಸ್ಯ ಪತ್ರಾಣಿ ಸ್ಥಾಪಯೇದ್ಭವನೋದರೇ ।**
**ಪೂಜಯಿತ್ವಾ ನರೋ ದೇವೀಂ ನ ಸರ್ಪಭಯಮಾಪ್ನುಯಾತ್ ॥ ೨೦ ॥**

---

೧೬-೧೭. ಹಾಗೆಯೇ ಶ್ರಾವಣಶುದ್ಧ ಪಂಚಮಿಯಲ್ಲಿ ಒಂಭತ್ತುಮಂದಿ ಮಹಾನಾಗರನ್ನುದ್ದೇಶಿಸಿ ನಾಗಪ್ರತಿಮೆಗೆ ಸುಗಂಧೋದಕದಿಂದ ಅಭಿಷೇಕಮಾಡಬೇಕು. ಹೀಗೆ ಪೂಜಿಸಿದವರಿಗೂ ಆ ವಂಶೀಯರಿಗೂ ಆ ನಾಗಾಧಿಪರು ಸರ್ಪಗಳಿಂದ ಭಯವಿಲ್ಲದಂತೆ ಮಾಡಿ ಪ್ರಾಣರಕ್ಷಣೆ ಮಾಡುತ್ತಾರೆ.

೧೮. ಆ ದಿನ ಮನೆಯ ಬಾಗಿಲಿನ ಉಭಯಪಾರ್ಶ್ವಗಳಲ್ಲಿಯೂ ಗೋಮಯದಿಂದ ಸಾರಿಸಿ, ರಂಗವಲ್ಲಿಯಿಂದ ಸರ್ಪಾಕೃತಿಯನ್ನು ರಚಿಸಿ ಅದಕ್ಕೆ ಹಾಲು, ಮೊಸರು, ಸಿಂಧೂರ ಇವುಗಳನ್ನು ಭಕ್ತಿಯಿಂದ ಸಮರ್ಪಣೆಮಾಡಿ ಪೂಜಿಸಬೇಕು.

೧೯. ಆಷಾಢಶುಕ್ಲ ಏಕಾದಶಿಯಲ್ಲಿ ವಿಷ್ಣುವು ಶಯನಮಾಡಿದ ಅನಂತರ ಮುಂದೆ ಬರುವ ಕೃಷ್ಣಪಕ್ಷದ ಪಂಚಮಿಯಲ್ಲಿ "ಸ್ನುಹೀ" ಎಂಬ ಹೆಸರಿನಿಂದ ಸ್ವಾಮಿಯ ವಾಮಭಾಗದಲ್ಲಿ ಸೇರಿರುವ ದೇವಿಯನ್ನು ಮನಸ್ಸಿನಲ್ಲಿಯೇ ಪೂಜಿಸಬೇಕು.

೨೦. ಮತ್ತು ಮನೆಯ ಒಳಗಡೆ ಬೇವಿನಸೊಪ್ಪನ್ನು ಕಟ್ಟಬೇಕು. ಈ ರೀತಿ ಸ್ನುಹೀದೇವಿಯನ್ನು ಪೂಜಿಸಿದವನಿಗೆ ಸರ್ಪಭಯವಿರುವುದಿಲ್ಲ.

**ಯೇಯಂ ಭಾದ್ರಪದೇ ಷಷ್ಠೀ ಷಷ್ಠೀ ಚ ದ್ವಿಜಸತ್ತಮಾಃ ।**
**ಸ್ನಾನದಾನಾದಿಕಂ ತಸ್ಯಾಂ ಸರ್ವಮಕ್ಷಯಮುಚ್ಯತೇ ॥ ೨೧ ॥**

**ಷಷ್ಠ್ಯಾಂ ಫಲಾಶನೋ ವಿಪ್ರಾ ವಿಶೇಷಾನ್ಮಾಘಕಾರ್ತಿಕೇ ।**
**ಇಹ ಚಾಮುತ್ರ ಮುಖ್ಯಾಂ ಚ ಲಭತೆ ಖ್ಯಾತಿಮುತ್ತಮಾಂ ॥ ೨೨ ॥**

**ಶುಕ್ಲಪಕ್ಷೇ ಚ ಸಪ್ತಮ್ಯಾಂ ಯದಾ ಸಂಕ್ರಮತೆ ರವಿಃ ।**
**ಮಹಾಜಯಂ ತದಾ ಸ್ಯಾದ್ವೈ ಸಪ್ತಮೀ ಭಾಸ್ಕರಪ್ರಿಯಾ ॥ ೨೩ ॥**

**ಅಪರಾಜಿತಾ ತು ಭಾದ್ರಸ್ಯ ಮಹಾಪಾತಕನಾಶಿನೀ ।**
**ಲಲಿತಾ ಕೇವಲಾ ಜ್ಞೇಯಾ ಪುತ್ರಪೌತ್ರವಿವರ್ಧಿನೀ ॥ ೨೪ ॥**

**ಶುಕ್ಲಾ ವಾ ಯದಿ ವಾ ಕೃಷ್ಣಾ ಷಷ್ಠೀ ವಾ ಸಪ್ತಮೀ ತು ವಾ ।**
**ರವಿವಾರೇಣ ಸಂಯುಕ್ತಾ ತಿಥಿಃ ಪುಣ್ಯತಮಾ ಸ್ಮೃತಾ ॥ ೨೫ ॥**

---

೨೧. ಓ ಬ್ರಾಹ್ಮಣರೇ! ಕೇಳಿರಿ; ಭಾದ್ರಪದಶುದ್ಧ ಷಷ್ಠಿಯಲ್ಲಾಗಲಿ ಅಥವಾ ಮತ್ತೆ ಯಾವ ಷಷ್ಠಿಯಲ್ಲಿಯಾಗಲಿ ಮಾಡಿದ ಸ್ನಾನ, ದಾನ ಮುಂತಾದುವು ಅಕ್ಷಯಫಲದಾಯಕಗಳಾಗುತ್ತವೆ.

೨೨. ಓ ವಿಪ್ರೋತ್ತಮರೇ! ಕಾರ್ತಿಕಮಾಸ, ಮಾಘಮಾಸದ ಷಷ್ಠಿಗಳಲ್ಲಿ ಕೇವಲ ಹಣ್ಣುಗಳನ್ನು ಆಹಾರವಾಗಿ ಸೇವಿಸಿದರೆ, ಇಹಪರಲೋಕಗಳಲ್ಲಿ ಉತ್ತಮವಾದ ಯಶಸ್ಸನ್ನು ಹೊಂದುವನು.

೨೩. ಮಾಘಶುಕ್ಲಸಪ್ತಮಿಯ ದಿನಕ್ಕೆ ಸರಿಯಾಗಿ ಸಂಕ್ರಮಣವು ಸೇರುವುದಾದರೆ, ಅದು ಸೂರ್ಯನಿಗೆ ಬಹುಪ್ರಿಯವಾದ ಮಹಾಜಯಾ ಸಪ್ತಮೀ ಎನಿಸುವುದು.

೨೪–೨೫. ಭಾದ್ರಪದ ಶುಕ್ಲಸಪ್ತಮಿಯು ಮಹಾಪಾಪಗಳನ್ನು ನಾಶಮಾಡಬಲ್ಲ ಅಪರಾಜಿತ ಸಪ್ತಮಿಯೆನಿಸುವುದು. ಈ ಭಾದ್ರಪದಮಾಸ ಸಂಬಂಧಮಾತ್ರವಲ್ಲದೆ ಶುಕ್ಲಷಷ್ಠಿ ಕೃಷ್ಣಷಷ್ಠಿ ಇವುಗಳಲ್ಲಾಗಲಿ, ಶುಕ್ಲಸಪ್ತಮಿ ಕೃಷ್ಣಸಪ್ತಮಿ ಇವುಗಳಲ್ಲಿಯಾಗಲೀ ಭಾನುವಾರ ಯುಕ್ತವಾಗಿ ಬಂದರೆ ಆ ತಿಥಿಯು ಅತಿಪುಣ್ಯಕರವೂ ಪುತ್ರಪೌತ್ರರನ್ನು ವೃದ್ಧಿಮಾಡುವ ಮಹಿಮೆಯುಳ್ಳದೂ ಆದ "ಲಲಿತಾ" ಸಪ್ತಮಿಯೆಂದು ತಿಳಿಯಬೇಕು.

ಆಶ್ವಿನಸ್ಯ ಸಿತಾಷ್ಟಮ್ಯಾಮಷ್ಟಾದಶಭುಜಾಂ ಯಜೇತ್ ।
ಕಾರ್ತಿಕೇ ಶುಕ್ಲಪಕ್ಷೇ ವಾ ಮಹಾವಿಭವವಿಸ್ತರೈಃ ॥ ೨೬ ॥

ಆಷಾಢೇ ಶ್ರಾವಣೇ ಮಾಸಿ ಶುಕ್ಲಾಷ್ಟಮ್ಯಾಂ ಚ ಚಂಡಿಕಾಂ ।
ಪ್ರಾತಃ ಸ್ನಾತ್ವಾರ್ಚಯೇದ್ಭಕ್ತ್ಯಾ ರಾತ್ರೌ ಸಂಸ್ಥಾಪಯೇದ್ದ್ವಿಜಾಃ ॥೨೭॥

ಚೈತ್ರಮಾಸಿ ಸಿತಾಷ್ಟಮ್ಯಾಮಶೋಕಕುಸುಮೈರ್ದ್ವಿಜಾಃ ।
ಅರ್ಚಯೇನ್ಮೃಣ್ಮಯೀಂ ದೇವೀಮಶೋಕಾರ್ಥಂ ಚ ಸರ್ವದಾ ॥ ೨೮ ॥

ಸತ್ಯಷ್ಟಮಮುಹೂರ್ತೇ ವಾ ರೋಹಿಣೀಸಹಿತಾಷ್ಟಮೀ ।
ಶ್ರಾವಣೇ ಮಾಸಿ ಸಿಂಹಾರ್ಕೇ ಕ್ವಚಿತ್ಸಾಪಿ ಚ ಶಸ್ಯತೇ ॥ ೨೯ ॥

ಏಕಾದಶೀನಾಂ ಕೋಟೀನಾಂ ವ್ರತೈಶ್ಚ ಲಭತೇ ಫಲಂ ।
ಅತೋ ದಶಗುಣಂ ಪ್ರೋಕ್ತಂ ಕೃತ್ವೈತತ್ಫಲಮಾಪ್ನುಯಾತ್ ॥ ೩೦ ॥

---

೨೬. ಆಶ್ವಯುಜಶುದ್ಧ ಅಷ್ಟಮಿಯದಿನ, ಅಥವಾ ಕಾರ್ತಿಕಶುದ್ಧ ಅಷ್ಟಮಿಯ ದಿನ ಹದಿನೆಂಟು ಭುಜಗಳಿಂದೊಪ್ಪುವ ದುರ್ಗಿಯನ್ನು ಮಹಾವೈಭವದಿಂದ ಪೂಜಿಸಬೇಕು.

೨೭. ಆಷಾಢ ಮತ್ತು ಶ್ರಾವಣಮಾಸದ ಶುಕ್ಲಾಷ್ಟಮಿಗಳಲ್ಲಿ ಚಂಡಿಕಾಪೂಜೆಯನ್ನು ಮಾಡಬೇಕು. ಓ ಬ್ರಾಹ್ಮಣರೇ! ಬೆಳಿಗ್ಗೆ ಸ್ನಾನಮಾಡಿ ಭಕ್ತಿಯಿಂದ ಪೂಜೆಯನ್ನು ನೆರವೇರಿಸಿ, ಆ ರಾತ್ರಿಯಲ್ಲಿ ದೇವಿಗೆ ಕ್ರಮವಾಗಿ ಅಭಿಷೇಕವನ್ನು ಮಾಡಿ ಪೂಜಿಸಬೇಕು.

೨೮. ಸರ್ವದಾ ಯಾವ ದುಃಖವೂ ಪ್ರಾಪ್ತಿಯಾಗದಂತಿರಬೇಕಾದರೆ ಚೈತ್ರ ಶುಕ್ಲ ಅಷ್ಟಮಿಯಲ್ಲಿ ದೇವಿಯ ಮೃಣ್ಮಯ ಪ್ರತಿಮೆಯನ್ನು ರಚಿಸಿ ಅಶೋಕಪುಷ್ಪಗಳಿಂದ ಪೂಜಿಸಬೇಕು.

೨೯. ಸೂರ್ಯನು ಸಿಂಹರಾಶಿಯಲ್ಲಿರುವಾಗ ಶ್ರಾವಣಮಾಸದಲ್ಲಿ ರೋಹಿಣೀ ನಕ್ಷತ್ರಯುತವಾದ ಅಷ್ಟಮೀ ತಿಥಿಯಲ್ಲಿ ಎಂಟನೆಯ ಮುಹೂರ್ತದಲ್ಲಿ ಕೃಷ್ಣಾಷ್ಟಮಿಯ ವ್ರತ ಮಾಡುವುದು ಪ್ರಶಸ್ತವಾದುದೆಂದು ತಿಳಿಯಬೇಕು.

೩೦. ಅನೇಕ ಕೋಟಿಏಕಾದಶೀ ವ್ರತಗಳನ್ನು ಮಾಡಿದರೆ ಯಾವ ಫಲವುಂಟೋ, ಅದರ ಹತ್ತರಷ್ಟು ಫಲವು ಈ ಕೃಷ್ಣಾಷ್ಟಮೀ ವ್ರತವನ್ನು ಆಚರಿಸಿದವರಿಗೆ ಲಭ್ಯವಾಗುವುದು.

ಅಶಕ್ತ್ಯೋಽನ್ಯಕ್ರಿಯಾಂ ಕರ್ತುಮುಪವಾಸಂ ತು ಕೇವಲಂ ।
ಕೃತ್ವಾ ವಿಮುಚ್ಯತೇ ಪಾಪಾತ್ಸಪ್ತಕೃತ್ಯಕೃತಾಂ ವರಃ　　॥ ೩೧ ॥

ನ ಕಾಲನಿಯಮಸ್ತತ್ರ ನ ವಾರನಿಯಮಃ ಕ್ವಚಿತ್ ।
ನಾಪಿ ನಕ್ಷತ್ರದೋಷೋಽಸ್ತಿ ವಾರದೋಷೋ ನ ಗಣ್ಯತೇ　　॥ ೩೨ ॥

ತ್ರಿಕಾಲಂ ಪೂಜಯೇದ್ದೇವಂ ದಿವಾರಾತ್ರೌ ವಿಶೇಷತಃ ।
ಅರ್ಧರಾತ್ರೇ ವಿಶೇಷೇಣ ಪುಷ್ಪೈರ್ನಾನಾವಿಧೈರಪಿ　　॥ ೩೩ ॥

ದಿವಾ ತಿಥೇರಲಾಭೇ ತು ನ ಕುರ್ಯಾದ್ವಿಧಿವದ್ವ್ರತಂ ।
ರಾತ್ರಿಸ್ಪರ್ಶೇ ಯದಿ ಪರಂ ರಜನ್ಯಾಮಪಿ ಚಾಷ್ಟಮೀ　　॥ ೩೪ ॥

ಸಪ್ತಮೀ ಸಾರ್ಧಯಾಮಂ ಚ ರೋಹಿಣೀ ವಾ ನ ಸಂಸ್ಪೃಶೇತ್ ।
ವ್ರತೀ ಸಂಕಲ್ಪಯೇತ್ತತ್ರ ನ ಚ ರಾತ್ರೌ ಕದಾಚನ　　॥ ೩೫ ॥

---

೩೧. ಉಪವಾಸ ಹೊರತು ಇನ್ನು ಯಾವ ಪೂಜಾದಿಕ್ರಿಯೆಗಳನ್ನೂ ಮಾಡಲು ಶಕ್ತಿಯಿಲ್ಲದಿರುವಾಗ, ಕೇವಲ ಉಪವಾಸವನ್ನೇ ಮಾಡಿದರೂ ತಾನು ಏಳುಜನ್ಮಗಳಲ್ಲಿ ಮಾಡಿದ ಪಾಪಗಳಿಂದ ವಿಮೋಚನೆ ಹೊಂದುವನು.

೩೨. ಈ ವ್ರತಾಚರಣೆ ಮಾಡುವುದಕ್ಕೆ ಇಂತಹ ಕಾಲವೇ ಆಗಬೇಕೆಂಬ ನಿಯಮವಿಲ್ಲ. ಅಲ್ಲದೆ ಇದಕ್ಕೆ ವಾರದೋಷವಾಗಲಿ, ನಕ್ಷತ್ರದೋಷವಾಗಲಿ ನೋಡ ಬೇಕಾದ ಅವಶ್ಯಕತೆಯಿಲ್ಲ.

೩೩. ಸಾಮಾನ್ಯವಾಗಿ ದೇವರನ್ನು ಪ್ರತಿದಿನದ ಪ್ರಾತಃಕಾಲ ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ನಾನಾವಿಧಗಳಾದ ಹೂಗಳಿಂದ ಪೂಜಿಸಬೇಕು. ವಿಶೇ ಷೋತ್ಸವಕಾಲದಲ್ಲಿ ಅರ್ಧರಾತ್ರಿಯಲ್ಲಿಯೂ ಪೂಜಿಸಬಹುದು.

೩೪. ಹಗಲಿನಲ್ಲಿ ಆ ತಿಥಿಯ ವ್ಯಾಪನೆಯಿಲ್ಲದಿದ್ದರೆ ವಿಧಿಪ್ರಕಾರ ವ್ರತವನ್ನು ಕ್ರಮವಾಗಿ ಮಾಡಬೇಕಾದುದಿಲ್ಲ. ರಾತ್ರಿಯ ಉತ್ತರಭಾಗದಲ್ಲಿ ಅಷ್ಟಮೀವಿದ್ಧವಾ ಗಿದ್ದರೆ ರಾತ್ರಿಯಲ್ಲಾದರೂ ಪೂಜೆಮಾಡಬಹುದು.

೩೫. ರಾತ್ರಿಯಲ್ಲಿ ಒಂದೂವರೆ ಯಾಮದವರೆಗೂ ಸಪ್ತಮಿಯು ಇರುತ್ತಿ ದ್ದರೂ, ರೋಹಿಣೀಯುತವಾಗಿಲ್ಲದಿದ್ದರೆ, ವ್ರತಾಚರಣೆ ಮಾಡುವವನು ಆ ರಾತ್ರಿ ಯಲ್ಲಿ ವ್ರತ ಮಾಡಬೇಕಾದುದಿಲ್ಲ.

ಪ್ರಾಗಾರಂಭಂ ಪ್ರಕುರ್ವೀತ ಅಧಿಮಾತ್ರಾಧಿಕೇ ವ್ರತೀ ।
ವಿಶ್ವನಾಥಾದಿದೇವಾನಾಂ ದರ್ಶನಂ ಪ್ರಾಗ್ವಿವರ್ಜಯೇತ್ ॥ ೩೬ ॥

ಯತ್ರ ತತ್ರೋಪವಾಸೀ ಸ್ಯಾದ್ಯಾಮಾಷ್ಟಕವ್ರತಂ ಚರೇತ್ ।
ಯಾಮಾರ್ಧಂ ತತ್ಪರಂ ಯಾಮೇ ಪಾರಣಂ ವಿಚರೇದ್ವ್ರತೀ ॥ ೩೭ ॥

ತತ್ಪರೇ ಚ್ಯಾನ್ನಜನ್ಯಂ ವಾ ನ ಕುರ್ಯಾತ್ಪಾರಣಾಂ ಗೃಹೀ ॥ ೩೮ ॥

ನಕ್ಷತ್ರಯೋಗೇ ಗ್ರಹಣೇ ಪೂಜಯೇತ್ಪರಮೇಶ್ವರಂ ।
ಜಪಹೋಮಾದಿಕಂ ಕುರ್ಯಾದ್ಗೃಹೀ ನೋಪವಸೇತ್ಕ್ವಚಿತ್ ॥ ೩೯ ॥

ದಿವಾಷ್ಟಮ್ಯಾಂ ಮುಹೂರ್ತೇ ವಾ ಪ್ರಾಜಾಪತ್ಯೇನ ಸಂಯುತಂ ।
ತಥಾಪಿ ಚ ದಿವಾಕೃತ್ಯಂ ಸಮಾಪ್ಯ ಚ ವ್ರತಂ ಚರೇತ್ ॥ ೪೦ ॥

---

೩೬. ಆ ರೋಹಿಣೀನಕ್ಷತ್ರ ವ್ಯಾಪನೆಯೇ ಅಧಿಕವಾಗಿದ್ದು ತಿಥಿಯು, ಸ್ವಲ್ಪ ಕಡಿಮೆಯಾಗಿದ್ದರೆ ಸ್ವಲ್ಪಮುಂಚೆಯೇ ಆರಂಭಮಾಡಬೇಕು. ನೈಮಿತ್ತಿಕವಾದ ಆ ವ್ರತಕ್ಕೆ ಮುಂಚೆ ಶಿವದರ್ಶನಾದಿಗಳನ್ನು ಮಾಡತಕ್ಕದ್ದಲ್ಲ.

೩೭. ಏನಾದಗೂ ಉಪವಾಸ ಮಾಡುವುದಾದರೆ, ಎಂಟು ಯಾಮದಷ್ಟು ಕಾಲ ಎಂದರೆ (ಒಂದು ದಿವಸ) ಉಪವಾಸಮಾಡಬೇಕು. ಅದು ಮುಗಿದ ಅರ್ಧ ಯಾಮದೊಳಗೋ ಅಥವಾ ಒಂದು ಯಾಮದೊಳಗೋ ಪಾರಣಮಾಡಬೇಕು.

೩೮. ಅದಕ್ಕೆ ವೇಳೆ ಮೀರಿದರೆ ಗೃಹಸ್ಥನು ಅನ್ನಸೇವನಾರೂಪವಾದ ಪಾರಣೆಯನ್ನು ಮಾಡಬಾರದು.

೩೯. ಉಕ್ತವಾದ ನಕ್ಷತ್ರಸಂಬಂಧವಿರುವಾಗಲೂ, ಗ್ರಹಣಕಾಲದಲ್ಲಿಯೂ ಈಶ್ವರನನ್ನು ಆರಾಧಿಸಬೇಕು. ಗೃಹಸ್ಥನು ಆ ಕಾಲಗಳಲ್ಲಿ ಜಪ, ಹೋಮ, ಮೊದಲಾದುವುಗಳನ್ನು ಮಾಡಬೇಕು. ಸ್ವಲ್ಪವೂ ಉಪೋಷಣಮಾಡಬಾರದು.

೪೦. ಅಷ್ಟಮೀ ತಿಥಿಯದಿನ ಹಗಲಿನಲ್ಲಿ ರೋಹಿಣೀನಕ್ಷತ್ರಯುಕ್ತವಾಗಿದ್ದರೆ, ಹಗಲಿನ ನಿತ್ಯಕರ್ಮಗಳನ್ನು ನೆರವೇರಿಸಿಕೊಂಡು ವ್ರತಮಾಡಬೇಕು.

**ಮುಹೂರ್ತಾಂತೇ ಚ ಮಾಸಾಂತೇ ಅಷ್ಟಮ್ಯಾಮಪಿ ರೋಹಿಣೀ ।**
**ಉಪವಾಸೇ ಚ ಯೋ ದೋಷಃ ಪೂಜಾಹೋಮಃ ಪ್ರಶಸ್ಯತೇ ॥ ೪೧ ॥**

**ನವಮ್ಯಾಂ ಚ ಸದಾ ಪೂಜ್ಯಾಃ ಪ್ರತಿಮಾಸೇಽಯುತಂ ದ್ವಿಜಾಃ ।**
**ಗೃಹ್ಣೀಯಾನ್ನಿಯಮಂ ಚೈವ ಯಥಾಕರ್ಮಫಲಪ್ರದಂ ॥ ೪೨ ॥**

**ಕಾರ್ತಿಕಸ್ಯ ತು ಮಾಸಸ್ಯ ದಶಮೀ ಶುಕ್ಲಪಕ್ಷಿಕಾ ।**
**ತಸ್ಯಾಂ ಮುಕ್ತಾಶನಾ ವಿಪ್ರಾ ಬ್ರಹ್ಮಲೋಕಮವಾಪ್ನುಯುಃ ॥ ೪೩ ॥**

**ದಶಮೀ ಜ್ಯೇಷ್ಠಮಾಸಸ್ಯ ಸಾ ಚೇದ್ದಶಹರಾ ಸ್ಮೃತಾ ।**
**ಆಶ್ವಿನಸ್ಯ ಮಹಾಪುಣ್ಯಾ ಕಾರ್ತಿಕೇ ವಿಜಯಾ ಸ್ಮೃತಾ ॥ ೪೪ ॥**

**ಏಕಾದಶೀವ್ರತಪರಾಃ ಸರ್ವಪಾಪಪ್ರಣಾಶಿನೀ ।**
**ಸರ್ವಪಾಪವಿನಿರ್ಮುಕ್ತಾ ಯಥಾ ಕುರ್ವಂತಿ ಮಾನವಾಃ ॥ ೪೫ ॥**

---

೪೧. ತಿಂಗಳ ಕೊನೆಯ ಅಷ್ಟಮಿಯಲ್ಲಿ ಎಂಟನೆಯ ಮುಹೂರ್ತದ ಕೊನೆಯು ರೋಹಿಣೀಯುಕ್ತವಾಗಿದ್ದರೆ ಉಪವಾಸ ಮಾಡುವುದು ಸೂಕ್ತವಲ್ಲ. ಆದರೂ ಪೂಜೆ ಹೋಮ ಇವುಗಳನ್ನು ಮಾಡುವುದು ಪ್ರಶಸ್ತವಾದುದು.

೪೨ ಅಯ್ಯಾ ದ್ವಿಜರೇ! ಕೇಳಿ; ಪ್ರತಿ ತಿಂಗಳಿನ ನವಮಿಯಲ್ಲಿ ಯಾವಾಗಲೂ ಹತ್ತು ಸಹಸ್ರ ಬ್ರಾಹ್ಮಣರನ್ನು ಪೂಜಿಸಬೇಕು. ಈ ನಿಯಮವನ್ನು ಅನುಸರಿಸಿ ಮಾಡಿದರೆ ಮಾಡಿದ ಕರ್ಮವು ಫಲಪ್ರದವಾಗುವುದು.

೪೩–೪೪. ಕಾರ್ತಿಕ ಶುದ್ಧ ದಶಮಿಯ ದಿವಸ ಉಪವಾಸ ಮಾಡಿದ ಬ್ರಾಹ್ಮಣನಿಗೆ ಬ್ರಹ್ಮಲೋಕ ಪ್ರಾಪ್ತಿಯಾಗುವುದು, ಜ್ಯೇಷ್ಠಶುದ್ಧ ದಶಮಿಗೆ "ದಶಹರ ದಶಮಿ" ಯೆಂದು ಹೆಸರು. ಆಶ್ವಯುಜ ಶುದ್ಧ ದಶಮಿಯು "ಮಹಾಪುಣ್ಯ ದಶಮಿ" ಯೆಂದೂ, ಕಾರ್ತಿಕ ಶುದ್ಧ ದಶಮಿಯು "ವಿಜಯದಶಮಿ" ಯೆಂದೂ ತಿಳಿಯಬೇಕು.

೪೫. ಸರ್ವ ಪಾಪಗಳನ್ನೂ ನಾಶಮಾಡತಕ್ಕ ಮಹಿಮೆಯುಳ್ಳ ಏಕಾದಶಿಯಲ್ಲಿ ವ್ರತವನ್ನು ಆಚರಿಸುವ ಮೂಲಕ ಪಾಪಮುಕ್ತವಾಗುವ ಹಾಗೆ ಆಚರಿಸಿದವರೇ ಮನುಷ್ಯರು; ಎಂದರೆ ತಮ್ಮ ಸಕಲ ಪಾಪಗಳೂ ನಾಶವಾಗುವುದಕ್ಕೋಸ್ಕರ ಏಕಾದಶೀ ವ್ರತವನ್ನು ನಿಯಮದಿಂದ ಆಚರಿಸಬೇಕು.

ದಶಮ್ಯಾಮೇಕಭುಕ್ತಸ್ತು ಸಂಯತಃ ಸ್ಯಾಜ್ಜಿತೇಂದ್ರಿಯಃ ।
ಏಕಾದಶ್ಯಾಮುಪೋಷ್ಯಾಥ ದ್ವಾದಶ್ಯಾಂ ಪಾರಣಂ ಚರೇತ್ ॥ ೪೬ ॥

ದ್ವಾದಶ ದ್ವಾದಶೀರ್ಹಂತಿ ತಸ್ಮಾತ್ತತ್ಥಾಚರೇದ್ಬುಧಃ ।
ಪೂರ್ವೇದ್ಯುರ್ದ್ವಾದಶೀ ಪೂರ್ಣಾ ಪರೇऽಹನಿ ಚ ವರ್ಧತೆ ॥ ೪೭ ॥

ನ ವರ್ತತೇ ದ್ವಾದಶೀ ತು ತದಾ ತ್ವೇವಂ ವ್ಯವಸ್ಥಿತಿಃ ।
ವನವಾಸೀ ಪರಾಂ ಕುರ್ಯಾತ್ಪೂರ್ವಾಂ ಕುರ್ಯಾದ್ಗೃಹಾಶ್ರಮೀ ॥ ೪೮ ॥

ಪೂರ್ವೇನ್ವೈಕಾದಶೀ ತ್ಯಾಜ್ಯಾ ವರ್ಧತೇ ಚೇತ್ತಿಥಿದ್ವಯಂ ।
ಏಕಾದಶೀ ದ್ವಾದಶೀ ತು ತದೋಪೋಷ್ಯಾ ಪರಾ ತಿಥಿಃ ॥ ೪೯ ॥

---

೪೬. ಈ ವ್ರತ ಮಾಡುವ ಕ್ರಮವನ್ನು ಹೇಳುತ್ತಾರೆ—ದಶಮಿಯ ದಿವಸ ಒಪ್ಪೊತ್ತು ಭೋಜನಮಾಡಿ ಇಂದ್ರಿಯ ನಿಗ್ರಹ ಮಾಡಿಕೊಂಡಿದ್ದು ಅನಂತರ ಏಕಾದಶಿಯಲ್ಲಿ ಉಪವಾಸ ಮಾಡಿ ದ್ವಾದಶಿಯ ದಿವಸ ಪಾರಣೆ ಮಾಡಬೇಕು.

೪೭. ಹನ್ನೆರಡು ದ್ವಾದಶಿಗಳಲ್ಲಿಯೂ ಕ್ರಮವಾಗಿ ಪಾರಣೆಯನ್ನು ಮಾಡಿದರೆ ಸಮಸ್ತ ಪಾಪಗಳು ಪರಿಹಾರವಾಗುವುವು. ಆದುದರಿಂದ ವಿದ್ವಾಂಸನಾದವನು ತಪ್ಪದೆ ಹಾಗೆ ಮಾಡಬೇಕು.

೪೮. ಪೂರ್ವದಿನದಲ್ಲಿ ದ್ವಾದಶಿಯು ಪೂರ್ಣವಾಗಿದ್ದು ಪರದಿನದಲ್ಲಿ ಅದೇ ತಿಥಿಯು ಸ್ವಲ್ಪ ಶೇಷವಿದ್ದರೆ ಆಗ ಪೂರ್ವ ದ್ವಾದಶಿಯಲ್ಲಿ ಉಪವಾಸ ಮಾಡಿ ಶೇಷ ದ್ವಾದಶಿಯಲ್ಲಿ ಪಾರಣೆ ಮಾಡಬೇಕು. ಅಂತಹ ಸಂದರ್ಭವು ಒದಗದೆ ಇದ್ದರೆ ಈ ಮುಂದೆ ಹೇಳುವಂತೆ ವ್ಯವಸ್ಥೆಮಾಡತಕ್ಕದ್ದು. ವಾನಪ್ರಸ್ಥನು ಶೇಷದ್ವಾದಶಿಯಲ್ಲಿ ಪಾರಣೆ ಮಾಡಬೇಕು. ಗೃಹಸ್ಥನು ಪೂರ್ವದ್ವಾದಶಿಯಲ್ಲೇ ಪಾರಣೆಮಾಡಬೇಕು.

೪೯. ಏಕಾದಶೀ ದ್ವಾದಶೀ ಈ ಎರಡು ತಿಥಿಗಳೂ ವೃದ್ಧಿ ತಿಥಿಗಳಾಗಿದ್ದ ಸಂದರ್ಭದಲ್ಲಿ, ಪೂರ್ವದಿನದ ಏಕಾದಶಿಯನ್ನು ತ್ಯಾಗಮಾಡಿ ಪರದಿನದ ಏಕಾದಶಿಯಲ್ಲಿಯೇ ಉಪವಾಸ ಮಾಡಬೇಕು.

ಯದಾ ತು ಪಾರಣಾ ಯೋಗ್ಯಾ ದ್ವಾದಶೀ ನೋಪತಿಷ್ಠತೇ ।
ತದಾ ಪೂರ್ವೈವ ಸಂಗ್ರಾಹ್ಯಾ ತ್ಯಾಜ್ಯಾ ವೃದ್ಧಾ ಪರೇಽಹನಿ ॥ ೫೦ ॥

ಏಕಾದಶೀ ಕಲಾಯುಕ್ತಾ ಸಕಲಾ ದ್ವಾದಶೀ ಯದಿ ।
ತತ್ರ ಕ್ರತುಸಮಂ ಪುಣ್ಯಂ ತ್ರಯೋದಶ್ಯಾಂ ತು ಪಾರಣಂ ॥ ೫೧ ॥

ಏಕಾದಶೀ ದ್ವಾದಶೀ ಚ ಪರೇಽಹನಿ ನ ಲಭ್ಯತೇ ।
ನೋಪೋಷ್ಯಾ ಸಾ ಮಹಾದೋಷಾ ಪುತ್ರಪೌತ್ರಧನಕ್ಷಯಾತ್ ॥ ೫೨ ॥

ಏಕಾದಶೀ ದಶಾವಿದ್ಧಾ ದ್ವಾದಶ್ಯಾಂ ಲಿಪ್ತಿಕಾ ಯದಾ ।
ದ್ವಾದಶೀ ಪಾರಣಾಯೋಗ್ಯಾ ವರ್ಧತೇ ಚಾಪರೇಽಹನಿ ॥
ತದಾ ದಿನದ್ವಯೇ ತ್ಯಾಜ್ಯಾ ಪಾರಣಂ ಚ ನಿಯೋಗತಃ ॥ ೫೩ ॥

---

೫೦. ಪಾರಣೆಗೆ ಯೋಗ್ಯವಾದ ದ್ವಾದಶಿಯು ಒದಗದೆ ಹೋದರೆ ಆಗ ಪೂರ್ವ ದ್ವಾದಶಿಯನ್ನು ಪಾರಣೆಯ ಆಚರಣೆಗೆ ಇಟ್ಟುಕೊಳ್ಳಬೇಕು. ಪರದಿನದಲ್ಲಿ ದ್ವಾದಶೀ ತಿಥಿಯು ಹೆಚ್ಚಾಗಿದ್ದರೆ. ಆ ದಿವಸ ಪಾರಣೆಯನ್ನು ಮಾಡಬಾರದು.

೫೧. ಏಕಾದಶಿಯು ಕಲಾಮಾತ್ರವಿದ್ದು ದ್ವಾದಶಿಯು ಪೂರ್ಣವಾಗಿದ್ದರೆ ಅಂತಹ ದ್ವಾದಶಿಯಲ್ಲಿ ಉಪವಾಸವನ್ನೂ, ತ್ರಯೋದಶಿಯಲ್ಲಿ ಪಾರಣೆಯನ್ನೂ ಮಾಡಿದವನಿಗೆ ಯಜ್ಞಮಾಡಿದಷ್ಟು ಪುಣ್ಯವು ಲಭಿಸುವುದು.

೫೨. ಪರದಿನದಲ್ಲಿ ಏಕಾದಶಿಯ ಮೇಲೆ ದ್ವಾದಶಿಯು ಸ್ವಲ್ಪ ಶೇಷವಿರುವಂತೆ ಪ್ರಾಪ್ತವಾಗದೇ ಹೋದರೆ, ಅಂತಹ ದ್ವಾದಶಿಯಲ್ಲಿ ಉಪವಾಸಮಾಡಬಾರದು. ಹೀಗೆ ಮಾಡಿದರೆ ಪುತ್ರಕ್ಷಯ ಮತ್ತು ಧನಕ್ಷಯ ರೂಪವಾದ ಮಹಾ ದೋಷವು ಉಂಟಾಗುವುದು.

೫೩. ಏಕಾದಶಿಯು ದಶಮೀ ತಿಥಿಯಿಂದ ವಿದ್ಧವಾಗಿದ್ದು ದ್ವಾದಶಿಯು ಕಲಾಮಾತ್ರ ಇದ್ದರೆ, ಆಗ ದ್ವಾದಶಿಯು ಹೆಚ್ಚಾಗಿರುವ ಪರದಿನವೇ ಪಾರಣೆ ಮಾಡಲು ಯೋಗ್ಯವಾದುದೆಂದು ತಿಳಿಯಬೇಕು. ಅಂತಹ ಸಂದರ್ಭದಲ್ಲಿ ಶಾಸ್ತ್ರದಲ್ಲಿ ಹೇಳಿರುವಂತೆ ಎರಡು ದಿನದಲ್ಲಿಯೂ ಪಾರಣೆಯನ್ನು ಮಾಡಬಾರದು.

ಷೋಡಶೀಗ್ರಹಣಂ ದೃಷ್ಟ್ವಾ ದ್ವಾದಶೀ ಲುಪ್ತಪಾರಣಾ ।
ಚಂಡಾತಿಥೌ ವ್ರತಂ ಚೈವ ಹಂತಿ ಪುಣ್ಯಂ ಪುರಾಕೃತಂ ॥ ೫೪ ॥

ತ್ರಯೋದಶ್ಯಾಂ ಯದ್ವಿಹಿತಂ ಪಾರಣಂ ನ ತು ಪುಣ್ಯದಂ ।
ಗೃಹಾಶ್ರಮೀ ನ ಕುರ್ಯಾದ್ವಾ ದಶಮೀದ್ವಾದಶೀಕ್ಷಯಾತ್ ॥ ೫೫ ॥

ಯದಿರುದ್ರಾ ದಶಮಿತ್ರಾ ಪರೇಽಹ್ನಿ ರವಿಸಂಕ್ರಮಃ ।
ತಥಾಪಿ ಸಂಪರಿತ್ಯಜ್ಯ ದ್ವಾದಶ್ಯಾಂ ಸಮುಪಾವಸೇತ್ ॥ ೫೬ ॥

ವಜ್ರಾಲೋಕನಮಾತ್ರಂ ತು ದಶಮೀ ಸಂವಿಶೇದ್ಯದಿ ।
ಏಕಾದಶೀ ನ ಭೋಕ್ತವ್ಯಾ ಪರಾ ಹ್ಯೇಕಾದಶೀ ತದಾ ॥ ೫೭ ॥

ತಥಾ ಚೇದ್ದ್ವಾದಶೀವಿದ್ಧಾ ಸಮುಪೋಷ್ಯಾ ನ ದೂಷಣಂ ॥ ೫೮ ॥

---

೫೪. ಪ್ರತಿಪತ್ತು ಮತ್ತು ಪರ್ವ ಇವುಗಳ ಸಂಧಿಯಾಗುವ ಕಾಲದ ಹದಿನಾರನೆಯ ತಿಥಿಯಲ್ಲಿ ಬರುವ ಗ್ರಹಣವನ್ನು ನೋಡಿದರೂ, ದ್ವಾದಶೀ ಪಾರಣೆ ಮಾಡುವುದನ್ನು ಲೋಪ ಮಾಡಿದರೂ, ಚಂಡ ತಿಥಿಯಲ್ಲಿ ವ್ರತವನ್ನು ಹಿಡಿದರೂ, ಅವನ ಪೂರ್ವಾರ್ಜಿತ ಪುಣ್ಯವೆಲ್ಲಾ ಧ್ವಂಸವಾಗುವುದು.

೫೫. ತ್ರಯೋದಶಿಯಲ್ಲಿ ಮಾಡಿದ ಪಾರಣೆಯು ಪುಣ್ಯಪ್ರದವಾಗುವುದಿಲ್ಲ. ದಶಮೀ ದ್ವಾದಶೀ ಇವೆರಡೂ ಕ್ಷಯ ತಿಥಿಗಳಾಗಿರುವಾಗ ಗೃಹಸ್ಥಾಶ್ರಮಿಯು ಈ ಪಾರಣೆಯನ್ನು ಮಾಡಬಾರದು.

೫೬. ಏಕಾದಶಿಯು ದಶಮೀ ಯುಕ್ತವಾಗಿ ಇರುವಾಗ ಪರದಿನದಲ್ಲಿ ಸಂಕ್ರಮಣವೊದಗಿದ್ದರೆ ಆ ಏಕಾದಶಿ ಉಪವಾಸ ಮಾಡದೆ ದ್ವಾದಶಿಯ ದಿನವೇ ಉಪವಾಸ ಮಾಡಬೇಕು.

೫೭. ವಜ್ರಸಂಜ್ಞಾಕವಾದಷ್ಟು ಕಾಲ, ದಶಮೀ ವೇಧೆಯಿದ್ದರೆ ಆ ಏಕಾದಶಿಯಲ್ಲಿ ಭೋಜನ ಮಾಡಬಾರದು.

೫೮. ಆ ಏಕಾದಶಿಯ ಉತ್ತರಭಾಗವು ದ್ವಾದಶಿಯಿಂದ ವಿದ್ಧವಾಗಿದ್ದರೂ ಉಪವಾಸ ಮಾಡುವುದು ದೂಷಣವಲ್ಲವೆಂದು ತಿಳಿಯಬೇಕು.

**ದ್ವಾದಶ್ಯಾಮುಪವಾಸಂ ತು ಯಃ ಕರೋತಿ ನರೋತ್ತಮಃ।**
**ಸ ಯಾತಿ ಪರಮಂ ಸ್ಥಾನಂ ಯತ್ರ ವಿಷ್ಣುರನಾಮಯಃ ॥ ೫೯ ॥**

**ಉಪೋಷ್ಯ ದಶಮೀಮಿಶ್ರಾಂ ಮೋಹಾದೇಕಾದಶೀಂ ನರಃ ।**
**ನಿರಯಂ ಯಾತಿ ಸ ಪ್ರೇತ್ಯ ಧರ್ಮಸಂತತಿಸಂಕ್ಷಯಾತ್ ॥ ೬೦ ॥**

**ರವಿವಾರೇ ಶುಕ್ರವಾರೇ ಸಂಕ್ರಾಂತ್ಯಾಂ ತು ದಿನಕ್ಷಯೇ ।**
**ಉಪವಾಸಂ ಪ್ರಕುರ್ವೀತ ಪಾರಣಂ ತು ವಿವರ್ಜಯೇತ್ ॥ ೬೧ ॥**

**ಶುಕ್ಲಾಂ ವಾ ಯದಿ ವಾ ಕೃಷ್ಣಾಂ ಪೂರ್ವಸಂಕಲ್ಪಿತಾಮಪಿ ।**
**ಏಕಾದಶೀಂ ಸದಾ ಕುರ್ಯಾನ್ನ ವೈ ಕೃಷ್ಣೇತರಾಂ ಕ್ವಚಿತ್ ॥ ೬೨ ॥**

---

೫೯. ದ್ವಾದಶಿಯಲ್ಲಿ ಉಪವಾಸ ಮಾಡುವ ಮಾನವನು ಪಾಪಮುಕ್ತನಾಗಿ ವಿಷ್ಣುವು ವಾಸಮಾಡುವ ಲೋಕಕ್ಕೆ ಹೋಗುತ್ತಾನೆ.

೬೦. ಅಜ್ಞಾನವಶದಿಂದ ದಶಮೀವಿದ್ಧವಾದ ಏಕಾದಶಿಯಲ್ಲಿ ಉಪವಾಸ ಮಾಡಿದರೆ, ಅವನು ತನ್ನ ಪೂರ್ವಾರ್ಜಿತ ಧರ್ಮವನ್ನೆಲ್ಲಾ ಹಾಳುಮಾಡಿಕೊಂಡು ನರಕಕ್ಕೆ ಹೋಗುತ್ತಾನೆ.

೬೧. ಭಾನುವಾರ, ಶುಕ್ರವಾರ, ಸಂಕ್ರಮಣ, ಇವುಗಳಲ್ಲಿ ಸಂಜೆಯವರೆಗೆ ಉಪವಾಸ ಮಾಡಬೇಕೇ ಹೊರತು ಪಾರಣೆಯನ್ನು ಮಾಡಬಾರದು.

೬೨. ಯಾವಾಗಲೂ ಮೊದಲೇ ಉದ್ದೇಶ ಮಾಡಿಕೊಂಡು ಶುಕ್ಲೈಕಾದಶಿಯನ್ನೋ ಅಥವಾ ಕೃಷ್ಣೈಕಾದಶಿಯನ್ನೋ ಕ್ಲಪ್ತವಾಗಿ ಆಚರಿಸಬೇಕು. ಒಂದು ಸಲ ಶುಕ್ಲಪಕ್ಷದ ಏಕಾದಶೀ, ಮತ್ತೊಂದು ಸಲ ಕೃಷ್ಣೈಕಾದಶೀ ಹೀಗೆ ಬದಲಾಯಿಸಿ ಆಚರಿಸಬಾರದು. ಏಕಾದಶಿಯ ವ್ರತವನ್ನು ಸದಾ ಅನುಷ್ಠಾನ ಮಾಡಬೇಕು. ತಿಂಗಳಿಗೆ ಒಂದೇ ಏಕಾದಶಿಯನ್ನು ಅನುಷ್ಠಾನ ಮಾಡುವುದಾದರೆ ಯಾವಾಗಲೂ ಶುಕ್ಲಪಕ್ಷದ ಏಕಾದಶಿಯನ್ನು ಆಚರಿಸಬೇಕೇ ಹೊರತು ಕೃಷ್ಣಪಕ್ಷದ ಏಕಾದಶಿಯನ್ನು ಆಚರಿಸಬಾರದು.

ನಕ್ತೇನ ವರ್ತಯೇತ್ಕೃಷ್ಣಾಮಿತಿ ಶಾಸ್ತ್ರವಿನಿಶ್ಚಯಃ ।
ಮಾಸೇ ಚೈಕಾದಶೀ ಯತ್ರ ಲಭ್ಯತೇ ಶುಕ್ಲಪಕ್ಷಕೇ ॥
ತತ್ರ ಕುರ್ಯಾತ್ಕೃಷ್ಣಪಕ್ಷೇ ಗೃಹ್ಯತೇ ನ ತಿಥಿಃ ಪರಾ ॥ ೬೩ ॥

ಶ್ರಾವಣೇ ದ್ವಾದಶೀ ಶುಕ್ಲಾ ಚಾಂದ್ರಭದ್ರೇ ಯದಾ ಹರೌ ।
ತತ್ರೋಪೋಷ್ಯ ಹೃಷೀಕೇಶಂ ಪೂಜಯೇದ್ವಿಧಿವನ್ನರಃ ॥ ೬೪ ॥

ಶ್ರಾವಣೇ ಚಾಶ್ವಿನೇ ಚೈವ ಲಭ್ಯತೇ ದ್ವಾದಶೀದಿನೇ ।
ಶ್ರವಣೇನ ಸಮಾಯುಕ್ತಾ ಮಹತೀ ಸಾ ಪ್ರಕೀರ್ತಿತಾ ॥ ೬೫ ॥

ಪುಷ್ಯೇಣ ದ್ವಾದಶೀಯುಕ್ತಾ ಫಾಲ್ಗುನೇ ವಿಜಯಾ ಸ್ಮೃತಾ ।
ಕಾರ್ತಿಕೇ ಚೇತ್ಪರಿತ್ಯಾಜ್ಯಾ ಮಾಘೇ ತು ನಾರಕೀ ಭವೇತ್ ॥ ೬೬ ॥

---

೬೩. ಕೃಷ್ಣೈಕಾದಶಿಯಲ್ಲಿ ನಕ್ತವ್ರತ ಮಾಡಬೇಕೆಂದು ಶಾಸ್ತ್ರದಲ್ಲಿ ನಿಶ್ಚಿತವಾಗಿದೆ. ತಿಂಗಳಲ್ಲಿ ಶುಕ್ಲಪಕ್ಷದಲ್ಲಿ ಉಕ್ತರೀತಿ ಏಕಾದಶೀ ಲಭ್ಯವಾದರೆ ಅದರಲ್ಲೇ ಉಪವಾಸ ಮಾಡಬೇಕು. ಕೃಷ್ಣಪಕ್ಷದಲ್ಲಿ ಪರತಿಥಿಯನ್ನು ಗ್ರಹಣ ಮಾಡುವುದಿಲ್ಲ.

೬೪. ಶ್ರಾವಣ ಶುದ್ಧ ದ್ವಾದಶಿಯಲ್ಲಿ ವಿಷ್ಣುವು ಚಾಂದ್ರಭದ್ರ ನಾಮಕ ಯೋಗದಲ್ಲಿರಲು ಆಗ ಉಪವಾಸ ಮಾಡಿ ಹೃಷೀಕೇಶನನ್ನು ವಿಧಿಪ್ರಕಾರವಾಗಿ ಪೂಜೆ ಮಾಡಬೇಕು.

೬೫. ಶ್ರಾವಣ ಮತ್ತು ಆಶ್ವಯುಜ ಮಾಸಗಳ ದ್ವಾದಶಿಯ ದಿನ ಶ್ರವಣ ನಕ್ಷತ್ರವು ಕೂಡಿ ಬಂದರೆ ಅದು ಮಹಾಪುಣ್ಯದ್ವಾದಶೀ ಎನಿಸುವುದು.

೬೬. ಫಾಲ್ಗುಣ ಮಾಸದಲ್ಲಿ ದ್ವಾದಶಿಯು ಪುಷ್ಯ ನಕ್ಷತ್ರಯುತವಾಗಿ ಬಂದರೆ, ಅದು "ವಿಜಯಾ" ಎನಿಸುವುದು. ಕಾರ್ತಿಕ ಮಾಸದಲ್ಲಿ ಪುಷ್ಯ ನಕ್ಷತ್ರ ಯುತವಾದ ದ್ವಾದಶಿಯು ಬಂದರೆ ಅದನ್ನು ಪರಿತ್ಯಾಗ ಮಾಡಬೇಕು. ಮಾಘದಲ್ಲಿ ಒದಗಿಬರುವ ಪುಷ್ಯ ನಕ್ಷತ್ರಯುತವಾದ ದ್ವಾದಶಿಯಲ್ಲಿ ಪಾರಣೆ ಮಾಡಿದರೆ ಅಂತಹವನು ನರಕವನ್ನು ಹೊಂದುವನು.

ಯಾ ಭಾದ್ರೇ ವಿಜಯಾ ಪ್ರೋಕ್ತಾ ಶ್ರವಣೇನ ಸಮಾಯುತಾ ।
ವಿಶೇಷಃ ಕಥ್ಯತೆ ತತ್ರ ಯಥಾವದ್ವ್ರತಮಾಚರೇತ್ ॥ ೬೭ ॥

ಏಕಾದಶ್ಯಾಮುತ್ತರತೋ ದ್ವಾದಶೀ ಚ ದಿವಾನ್ವಿತಾ ।
ನಿಶಿ ಪೂರ್ಣಾ ದ್ವಾದಶೀ ಚ ಶ್ರವಣೇನಾಪಿ ಸಂಯುತಾ ॥ ೬೮ ॥

ಸಫಲಾ ದ್ವಾದಶೀ ಜ್ಞೇಯಾ ಉಪೋಷ್ಯೈಷಾ ಮಹಾಫಲಾ ॥ ೬೯ ॥

ದ್ವಾದಶ್ಯಾ ವಿಷ್ಣುವಿದ್ಧಾಯಾಂ ವಾಸುದೇವಂ ಪ್ರಪೂಜಯೇತ್ ।
ಕೃಷ್ಣಾಯಾಂ ತು ವ್ರತಂ ಕುರ್ಯಾದ್ಬಹುದುಃಖಂ ಸಮಾಚರೇತ್ ॥ ೭೦ ॥

ದ್ವಾದಶೀ ಕಾಮವಿದ್ಧಾ ಚೇನ್ಮನ್ಯತೇ ನಾಪ್ಯುಪೋಷಣಂ ।
ಹನ್ಯಾತ್ಪುರಾಕೃತಂ ಪುಣ್ಯಂ ತ್ರಯೋದಶ್ಯಾಮುಪೋಷಣಂ ॥ ೭೧ ॥

---

೬೭. ಭಾದ್ರಪದ ಶುಕ್ಲ ಏಕಾದಶಿಯು ಶ್ರವಣ ನಕ್ಷತ್ರಯುಕ್ತವಾಗಿದ್ದರೆ ವಿಜಯೈಕಾದಶಿ ಯೆನಿಸಿಕೊಳ್ಳುವುದು. ವ್ರತದ ಸಾಮಾನ್ಯ ನಿಯಮಗಳು ಯಥಾ ಪ್ರಕಾರವೇ ಇರುತ್ತವೆ. ವಿಶೇಷ ವಿಧಿಯನ್ನು ಹೇಳುತ್ತೇನೆ.

೬೮-೬೯. ಏಕಾದಶಿಯ ಸಂಪರ್ಕವುಳ್ಳ ದ್ವಾದಶಿಯು ಹಗಲಿನಲ್ಲಿ ಕೂಡಿದ್ದರೂ, ರಾತ್ರಿಯಲ್ಲಿ ದ್ವಾದಶಿಯು ಪೂರ್ಣವಾಗಿದ್ದು ಶ್ರವಣನಕ್ಷತ್ರದಿಂದ ಕೂಡಿದ್ದರೂ, ಅದು ಸಫಲ ದ್ವಾದಶಿಯೆಂದು ತಿಳಿಯಬೇಕು. ಇದರಲ್ಲಿ ಉಪವಾಸ ಮಾಡುವುದರಿಂದ ತುಂಬ ಫಲವುಂಟು.

೭೦. ಆ ಶುಕ್ಲೈಕಾದಶೀವಿದ್ಧವಾದ ದ್ವಾದಶಿಯಲ್ಲಿ, ವಾಸುದೇವರೂಪಿಯಾದ ವಾಮನನನ್ನು ಪೂಜಿಸಬೇಕು. ಕೃಷ್ಣಪಕ್ಷದ ದ್ವಾದಶಿಯಲ್ಲಿ ಈ ವ್ರತ ಮಾಡಿದರೆ ದುಃಖವು ಪ್ರಾಪ್ತಿಯಾಗುವುದು.

೭೧ ದ್ವಾದಶಿಯು ತ್ರಯೋದಶಿಯಿಂದ ವಿದ್ಧವಾಗಿದ್ದರೆ ಉಪವಾಸ ಮಾಡಬೇಕಾಗಿಲ್ಲ. ತ್ರಯೋದಶಿಯ ದಿನ ಉಪವಾಸ ಮಾಡಿದರೆ ಅವನ ಪೂರ್ವಾರ್ಜಿತ ಪುಣ್ಯವು ನಾಶವಾಗುವುದು.

ಪ್ರಹರೇ ಪ್ರಹರೇ ಸ್ನಾನಂ ಶರ್ವರ್ಯಾಂ ಚ ವಿಧೀಯತೇ ।
ಪೂಜನಂ ಚಾಗ್ನಿಕಾರ್ಯಂ ಚ ಷಟ್ಸು ಕಾರ್ಯಂ ವ್ರತೀ ಚರೇತ್ ॥ ೭೨ ॥

ಏಕಾದಶೀಂ ದ್ವಾದಶೀಂ ಚ ಪ್ರಾಪ್ನೋತಿ ಶ್ರವಣೇ ಯದಿ ।
ಏಕಾದಶ್ಯಾಮುಪೋಷ್ಯಾಥ ದ್ವಾದಶ್ಯಾಮುಪ್ಯುಪಾವಸೇತ್ ॥ ೭೩ ॥

ಪಾರಣಂ ತು ತ್ರಯೋದಶ್ಯಾಂ ದ್ವಾದಶೀ ಚೇನ್ನ ಲಭ್ಯತೇ ।
ಆಮಿಷಾನ್ನಂ ನ ಭುಂಜೀತ ಹವಿಷ್ಯಾನ್ನೇನ ಪಾರಣಂ ॥ ೭೪ ॥

ಯದಾ ತು ಪಾರಣಯೋಗ್ಯಾ ಲಭ್ಯತೇ ದ್ವಾದಶೀ ತಥಾ ।
ತಸ್ಯಾಂ ನಾತಿಕ್ರಮೋ ಯುಕ್ತಸ್ತದಭಾವೇ ತ್ರಯೋದಶೀ ॥ ೭೫ ॥

---

೭೨. ಈ ವ್ರತ ಮಾಡುವಾತನು ರಾತ್ರಿಯಲ್ಲಿ ಪ್ರತಿಯೊಂದು ಯಾಮದಲ್ಲಿಯೂ ಸ್ನಾನ ಮಾಡಬೇಕೆಂದು ವಿಧಿಯಿದೆ. ಆರು ಯಾಮಗಳಲ್ಲಿ ಈ ರೀತಿ ಸ್ನಾನವನ್ನು ಮಾಡಿ ಯಾಮದ ಪೂಜೆಯನ್ನೂ ಅಗ್ನಿಕಾರ್ಯ ಮೊದಲಾದುವನ್ನೂ ಮಾಡಬೇಕು.

೭೩. ಏಕಾದಶೀಯುಕ್ತವಾದ ದ್ವಾದಶಿಯಲ್ಲಿ ಶ್ರವಣ ನಕ್ಷತ್ರ ಬಂದರೆ ಆ ಏಕಾದಶಿಯಲ್ಲಿ ಮಾಡಿದ ಉಪವಾಸದ ಜತೆಗೆ ದ್ವಾದಶಿಯಲ್ಲಿಯೂ ಉಪವಾಸ ಮಾಡಬೇಕು.

೭೪. ಒಂದುವೇಳೆ ದ್ವಾದಶಿಯು ಇರುವಾಗಲೇ ಪಾರಣಾವಕಾಶ ಪ್ರಾಪ್ತವಾಗದಿದ್ದರೆ ತ್ರಯೋದಶಿಯಲ್ಲಿ ಪಾರಣೆ ಮಾಡಬೇಕು. ಪಾರಣೆಯದಿನ ಮಾಂಸಯುಕ್ತವಾದ ಆಹಾರವನ್ನು ಸೇವಿಸದೆ ಹವಿಷ್ಯಾನ್ನವನ್ನು ಸೇವನ ಮಾಡಬೇಕು.

೭೫. ಪಾರಣೆಗೆ ಅನುಕೂಲವಾದ ವೇಳೆಗೆ ದ್ವಾದಶಿಯು ಒದಗಿದರೆ ಆ ದ್ವಾದಶಿಯಲ್ಲೇ ಪಾರಣೆ ಮಾಡಬೇಕು. ಹಾಗೆ ಒದಗುವಂತಿದ್ದಾಗ ಅದನ್ನು ಅತಿಕ್ರಮಿಸುವುದು ಯುಕ್ತವಲ್ಲ. ಹಾಗೆ ಲಭಿಸದೇ ಹೋದರೆ ತ್ರಯೋದಶಿಯಲ್ಲಿಯೇ ಪಾರಣೆ ಮಾಡಬೇಕು.

ಏಕಾದಶೀ ದ್ವಾದಶೀ ಚ ಶ್ರವಣರ್ಕ್ಷೇಣ ಸಂಯುತಾ ।
ವಿಷ್ಣುಶೃಂಖಲಕೋ ನಾಮ ಬುಧವಾರೇ ವಿಶಿಷ್ಯತೆ ॥ ೭೬ ॥

ದಶಮ್ಯಾಂ ಸಂಯುತೋ ಭೂತ್ವಾ ಪ್ರಾತರೇಕಾದಶೀದಿನೇ ।
ಕೃತ್ವಾ ತು ಸಂಗಮೇ ಸ್ನಾನಂ ಪ್ರಹರೇ ಪ್ರಹರೇ ದ್ವಿಜಾಃ ॥ ೭೭ ॥

ಅನೇನ ವಿಧಿನಾ ಕೃತ್ವಾ ವಿಜಯಾಯಾಂ ವ್ರತೋತ್ತಮಂ ।
ಸರ್ವಪಾಪಂ ಕ್ಷಯಂ ನೀತ್ವಾ ವಿಷ್ಣುಲೋಕೇ ವಸೇನ್ನರಃ ॥ ೭೮ ॥

ಚತುರ್ಯುಗಾನಾಂ ದಿವ್ಯಾನಾಂ ಯಾವತ್ಸ್ಯಾದ್ವಿಷ್ಣುರೂಪಧೃಕ್ ।
ತಾವದೇವ ಹಿ ಸರ್ವತ್ರ ಸಾರ್ವಭೌಮೋ ಭವೇನ್ನರಃ ॥ ೭೯ ॥

ತ್ರೇತಾಯಾಂ ದಶಜನ್ಮಾನಿ ಮಧ್ಯದೇಶೇಷು ಭೋ ದ್ವಿಜಾಃ ।
ತತಶ್ಚ ಭಾರತೇ ವರ್ಷೇ ವೇದವೇದಾಂತಸಾರವಿತ್ ॥
ಪುತ್ರಪೌತ್ರಧನೈರ್ಯುಕ್ತೋ ಲಕ್ಷದೋ ನೃಪಸನ್ನಿಭಃ ॥ ೮೦ ॥

---

೭೬. ಏಕಾದಶೀ ದ್ವಾದಶೀ ಎರಡೂ ಶ್ರವಣನಕ್ಷತ್ರ ಯುಕ್ತವಾಗಿದ್ದರೆ ವಿಷ್ಣುಶೃಂಖಲಯೋಗ ಎನಿಸುವುದು. ಅದರ ಜೊತೆಗೆ ಬುಧವಾರವೂ ಒದಗಿಬಂದರೆ ಮಹಾ ವಿಶೇಷವೆನಿಸುವುದು.

೭೭-೭೯. ದಶಮಿಯಲ್ಲಿ ನಿಯಮಪರನಾಗಿದ್ದು ಏಕಾದಶಿಯ ಪ್ರಾತಃಕಾಲ ನದೀ ಸಂಗಮ ಸ್ನಾನ ಮಾಡುವುದಲ್ಲದೆ, ಯಾಮಯಾಮಕ್ಕೂ ಸ್ನಾನಪೂಜಾದಿಗಳನ್ನು ಮಾಡಬೇಕು. ಓ ಬ್ರಾಹ್ಮಣ ಶ್ರೇಷ್ಠರೇ! ಉತ್ತಮವಾದ ಈ ವಿಜಯೈಕಾದಶೀ ವ್ರತವನ್ನು ವಿಧಿ ಪ್ರಕಾರ ಆಚರಿಸಿದವನಿಗೆ ಸರ್ವ ಪಾಪಗಳೂ ನಾಶವಾಗಿ ವಿಷ್ಣು ಲೋಕವು ಲಭಿಸುವುದು. ಅಲ್ಲಿ ನಾಲ್ಕು ದಿವ್ಯಯುಗಗಳು ಮುಗಿಯುವ ವರೆಗೆ ವಿಷ್ಣುಸಾರೂಪ್ಯದಿಂದ ಇರುತ್ತಿದ್ದು ಉತ್ತರತ್ರ ಮಾನವ ಜನ್ಮವನ್ನು ಪಡೆದು ಸಾರ್ವಭೌಮನೆನಿಸುತ್ತಾನೆ.

೮೦. ಓ ಬ್ರಾಹ್ಮಣೋತ್ತಮರೇ? ಕೇಳಿ; ಅನಂತರ ತ್ರೇತಾಯುಗದಲ್ಲಿ ಮಧ್ಯ ದೇಶಗಳಲ್ಲಿ ಹತ್ತು ಜನ್ಮಗಳನ್ನು ಪಡೆದು ಆಮೇಲೆ ಭರತ ವರ್ಷದಲ್ಲಿ ವೇದ ವೇದಾಂತ ಸಾರವನ್ನು ತಿಳಿದವನೂ ಪುತ್ರಪೌತ್ರ ಧನ ಸಂಪತ್ತಿಯುಳ್ಳವನೂ ಆಗಿ ಜನಿಸಿ ರಾಜನಂತೆ ಲಕ್ಷಾಂತರ ದ್ರವ್ಯಗಳನ್ನು ದಾನ ಮಾಡುತ್ತಾನೆ.

**ಜಾಯತೆ ದಶಜನ್ಮಾನಿ ತ್ರೇತಾಯಾಂ ಬ್ರಾಹ್ಮಣೋತ್ತಮಃ ।**
**ಸಪತ್ನೀಕಶ್ಚ ದೀರ್ಘಾಯುರ್ಧರ್ಮಕರ್ಮಸು ಪೂಜಿತಃ ॥ ೮೧ ॥**

**ಭಾದ್ರೇ ಮಾಸಿ ಸಿತೇಪಕ್ಷೇ ದ್ವಾದಶ್ಯಾಂ ಪೃಥಿವೀಪತಿಂ ।**
**ಶತ್ರುಮುತ್ಥಾಪಯೇತ್ಪ್ರಾಹ್ಣೇ ಶುಭಲಗ್ನೇ ಶುಭಕ್ಷಣೇ ॥ ೮೨ ॥**

**ಶಲ್ಯಶಾಲ್ಮಲಿಕಸ್ಯಾಪಿ ಸಪ್ತಪರ್ಣೀಯಕಸ್ಯ ಚ ।**
**ಏಷಾಮನ್ಯತಮಂ ವೃಕ್ಷಂ ಚಂಪಕಸ್ಯಾರ್ಜುನಸ್ಯ ವಾ ॥ ೮೩ ॥**

**ಬೃಹತ್ಕದಂಬವೃಕ್ಷಸ್ಯ ದ್ವಿಚತ್ವಾರಿಂಶದಂಗುಲೈಃ ।**
**ದ್ವಾತ್ರಿಂಶದಂಗುಲೈರ್ವಾಪಿ ಮಾನದ್ವಯಮಥಾಪಿ ವಾ ॥**
**ತ್ರಿವ್ಯಾಯಾಮಂ ಚ ಪ್ರಥಮಂ ದ್ವಾವಿಂಶಂ ಹಸ್ತಮೇವ ವಾ ॥ ೮೪ ॥**

**ಹಸ್ತಾಃ ಷೋಡಶ ವಾ ತಸ್ಯ ಗೃಹಸ್ಥಸ್ಯ ವಿಶಿಷ್ಯತೆ ।**
**ಹಸ್ತತ್ರಯೇಣ ವಿಪ್ರಸ್ಯ ದ್ವಾದಶ ಕ್ಷತ್ರಿಯಸ್ಯ ತು ॥ ೮೫ ॥**

---

೮೧. ಹೀಗೆ ತ್ರೇತಾಯುಗದಲ್ಲಿ ಹತ್ತು ಜನ್ಮಗಳ ವರೆಗೆ ಬ್ರಾಹ್ಮಣೋತ್ತಮನಾಗಿ ಹುಟ್ಟುತ್ತಾನೆ. ಆಗ ಇವನು ಪತ್ನಿ ಸಮೇತನೂ ದೀರ್ಘಾಯುಷ್ಮಂತನೂ ಆಗಿ ಶ್ರೇಷ್ಠವಾದ ಧರ್ಮ ಕಾರ್ಯಚರಣೆಯಿಂದಲೂ ವಿಧಿವಿಹಿತ ಕರ್ಮಾಚರಣೆಯಿಂದಲೂ ಪೂಜಿತನಾಗುತ್ತಾನೆ.

೮೨. ಭಾದ್ರಪದ ಮಾಸದ ಶುಕ್ಲಪಕ್ಷದ ದ್ವಾದಶಿಯ ದಿವಸ ಪ್ರಾತಃಕಾಲದ ಶುಭ ಲಗ್ನದ ಶುಭ ಸಮಯದಲ್ಲಿ ಶತ್ರುರಾಜನೊಬ್ಬನನ್ನು ಹೊಡೆದೆಬ್ಬಿಸಬೇಕು.

೮೩. ಶಲ್ಯವೃಕ್ಷ, ಶಾಲ್ಮಲೀ (ಬೂರಗ), ಏಳೆಲೆಯ ಬಾಳೆ, ಮತ್ತಿಯಮರ, ಸಂಪಿಗೆಯ ಮರ, ಕದಂಬ ವೃಕ್ಷ ಇವುಗಳಲ್ಲಿ ಯಾವುದಾದರೂ ಒಂದು ಮರವನ್ನು ಆರಿಸಿಕೊಳ್ಳಬೇಕು.

೮೪-೮೭. ಅದನ್ನು ನಲವತ್ತೆರಡು ಅಂಗುಲದ ಪ್ರಮಾಣದಲ್ಲೋ ಅಸಾಧ್ಯವಾದರೆ ಮೂವತ್ತೆರಡು ಅಂಗುಲದ ಪ್ರಮಾಣದಲ್ಲೋ ಅಥವಾ, ಎರಡು ಅಳತೆಗಳ ಸಮಭಾಗದಲ್ಲೋ, ಸುತ್ತಳತೆಯೂ ; ಮೂರು ಮಾರುಗಳು, ಅಥವಾ ಇಪ್ಪತ್ತೆರಡು ಮೊಳ, ಅಥವಾ ಹದಿನಾರು ಮೊಳ ಉದ್ದವೂ ಉಳ್ಳಂತೆ ಸ್ತಂಭವನ್ನು ಸ್ಥಾಪಿಸಿ, ಪೂಜಿಸ

**ಅಷ್ಟಹಸ್ತಂ ತು ವೈಶ್ಯಸ್ಯ ಶೂದ್ರಸ್ಯ ಪಂಚಹಸ್ತಕಂ ।**
**ಅಭ್ರತಃ ಶ್ವೇತಚ್ಛತ್ರಂ ಸ್ಯಾತ್ಪತಾಕಾ ಚ ಪುರೇ ಪುರೇ ॥ ೮೬ ॥**

**ಘನಸಾರಸಮಾಯುಕ್ತಾಂ ಕರ್ಪೂರಮಂಡನಾನ್ವಿತಾಂ ।**
**ರಕ್ತವಸ್ತ್ರಪರಿಚ್ಛನ್ನಾಂ ಪುಷ್ಪಮಾಲ್ಯೈರಲಂಕೃತಾಂ ॥ ೮೭ ॥**

**ಮಂಚಸ್ಥಾಂ ಕಾರಯೇತ್ಪೂಜಾಂ ಭಕ್ತ್ಯಾ ಚ ಸುದೃಢೋ ನರಃ ।**
**ಸಪ್ತರಾತ್ರಂ ಚರೇತ್ಪೂಜಾಮೈಂದ್ರಮಂತ್ರೇಣ ಮಂತ್ರವಿತ್ ॥ ೮೮ ॥**

**ಕಾಕಾದೀನ್ನ ಸ್ಪೃಶೇಜ್ಜಾತು ವೈರಪಕ್ಷೇ ವಿಶೇಷತಃ ।**
**ಪತಾಕಾಯಾ ನಿಪಾತೇ ತು ರಾಷ್ಟ್ರಹಾನಿಂ ಸಮಾದಿಶೇತ್ ॥ ೮೯ ॥**

---

ಬೇಕು. ಗೃಹಸ್ಥರಾದವರು ತಮ್ಮ ಕಾರ್ಯಸಿದ್ಧಿಯಾಗುವುದಕ್ಕಾಗಿ ಮಾಡುವ ವಿಶೇಷ ಸಂದರ್ಭದಲ್ಲಿ ಬ್ರಾಹ್ಮಣನಾದರೆ ಮೂರು ಮೊಳ ಪ್ರಮಾಣ, ಕ್ಷತ್ರಿಯನಾದರೆ ಹನ್ನೆರಡು ಮೊಳ, ವೈಶ್ಯನು ಎಂಟು ಮೊಳ, ಶೂದ್ರನು ಐದು ಮೊಳ, ಇಷ್ಟಾದರೂ ಪ್ರಮಾಣವಿರುವ ಹಾಗೆ ಸ್ತಂಭವನ್ನು ಮಾಡಿ ಆಕಾಶದಲ್ಲೇ ಅದರ ಮೇಲೆ ಶ್ವೇತ್ರಚ್ಛತ್ರಿ ಶೋಭಿಸುತ್ತಿರುವಂತೆ ಮಾಡಬೇಕು. ಪ್ರತಿಯೊಂದು ಪಟ್ಟಣದಲ್ಲಿಯೂ ಇಂಥ ಪತಾಕೆಯು ಎದ್ದು ಕಾಣುವಂತೆ ಮಾಡಬೇಕು. ಅದಕ್ಕೆ ಪಚ್ಚಕರ್ಪೂರಾದಿ ಸುಗಂಧ ದ್ರವ್ಯಗಳನ್ನು ಲೇಪಿಸಿ, ಸುಂದರವಾಗುವಂತೆ ನಿರ್ಮಿಸಿದ ಅಲಂಕಾರ ಸಾಮಾಗ್ರಿಗಳನ್ನು ತೊಡಿಸಿ, ಕೆಂಪು ವಸ್ತ್ರವನ್ನು ಸುತ್ತಿ, ಬಳಿಕ ಹೂವಿನಮಾಲಿಕೆಗಳಿಂದ ಶೃಂಗರಿಸಬೇಕು.

೮೮. ಅದನ್ನು ಪೀಠದಮೇಲೆ ದೃಢವಾಗಿ ನಿಲ್ಲಿಸಿ ಪೂಜೆ ಮಾಡಬೇಕು. ಮಂತ್ರಜ್ಞನಾದವನು ಏಳು ರಾತ್ರಿಗಳ ಕಾಲ ಇಂದ್ರ ಮಂತ್ರಪೂರ್ವಕವಾಗಿ ಪೂಜೆ ಮಾಡಬೇಕು.

೮೯. ಕಾಗೆ ಮುಂತಾದ ಪ್ರಾಣಿಗಳು ಯಾವಾಗಲೂ ಅದನ್ನು ಮುಟ್ಟಬಾರದು. ಶತ್ರುವನ್ನು ಜಯಿಸುವುದಕ್ಕಾಗಿ ಮಾಡುವ ಧ್ವಜ ಪೂಜಾ ಸಂದರ್ಭದಲ್ಲಂತೂ ಈ ವಿಶೇಷ ನಿಯಮ ಆವಶ್ಯಕ. ಅಂತರಿಕ್ಷಕ್ಕೆ ಎತ್ತಿ ನಿಲ್ಲಿಸಿದ್ದ ಪತಾಕೆಯೇನಾದರೂ ಸಪ್ತದಿನಗಳಲ್ಲಿ ಮಧ್ಯೆ ಬಿದ್ದುಹೋದರೆ ರಾಜ್ಯಕ್ಕೇ ಹಾನಿ ತಟ್ಟುವುದು.

ಪತಾಕೇ ನಿಸ್ಸೃತೇ ಭಗ್ನೇ ಮಹಿಷಾಣಾಂ ವಿನಾಶನಂ ।
ಸ್ಥೂಣಾಪಾತೇ ಚ ಭಗ್ನೇ ವಾ ಚಾಶ್ವಹಾನಿಂ ಸಮಾದಿಶೇತ್ ॥ ೯೦ ॥

ತಸ್ಕರಶ್ಚ ಕುಲೇ ತಸ್ಯ ಪ್ರಾಯಶ್ಚಿತ್ತಂ ಸಮಾಚರೇತ್ ।
ತದ್ವಿಷ್ಣೋರಿತಿ ಮಂತ್ರೇಣ ಶತಪದ್ಮಸಮನ್ವಿತಂ ॥ ೯೧ ॥

ವಿಷ್ಣುಮುದ್ದಿಶ್ಯ ಜುಹುಯಾದಯುತಂ ಪಿಪ್ಪಲಸ್ಯ ಚ ।
ಗ್ರಹಾಣಾಂ ಚ ತ್ರಿಭಾಗೇನ ಚಾಯುತಂ ಜುಹುಯಾದ್ಬುಧಃ ॥ ೯೨ ॥

ಆದಿತ್ಯಸ್ಯಾದ್ಭುತಮಿದಂ ದ್ವಿಜಪಾತೇ ತು ಭೋ ದ್ವಿಜಾಃ ।
ಕಪೋತಪಾತೇ ಶುಕ್ರಸ್ಯ ಕಾಕಾದೌ ಭೌಮಮಾದಿಶೇತ್ ॥ ೯೩ ॥

---

೯೦. ಮತ್ತು ಪತಾಕೆಯು ಕೆಳಕ್ಕೆ ಜಾರಿದರೂ, ಭಗ್ನವಾದರೂ; ಆ ದೇಶದ ಕೋಣ, ಎಮ್ಮೆ ಇವುಗಳಿಗೆ ಹಾನಿಯುಂಟಾಗುವುದು. ಧ್ವಜದ ಕಂಭವು ಉರುಟಿಕೊಂಡರೂ ಅಥವಾ ಮುರಿದುಹೋದರೂ, ಕುದುರೆಗಳಿಗೆ ಹಾನಿಯುಂಟಾಗುವುದೆಂದು ತಿಳಿಯಬೇಕು.

೯೧. ಅಂತಹ ಸಂದರ್ಭದಲ್ಲಿ ಆ ಪುರಾಧಿಪನು ತಸ್ಕರನಂತೆ ಮನೆಯಲ್ಲಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಆ ಪ್ರಾಯಶ್ಚಿತ್ತ ಕರ್ಮದಲ್ಲಿ 'ತದ್ವಿಷ್ಣೋಃ ಪರಮಂಪದಂ' ಎಂಬ ಮಂತ್ರದಿಂದ ವಿಷ್ಣುವನ್ನುದ್ದೇಶಿಸಿ ನೂರು ಪದ್ಮಗಳನ್ನು ಹೋಮಮಾಡಬೇಕು.

೯೨. ವಿಷ್ಣುವನ್ನುದ್ದೇಶಿಸಿ ಹತ್ತು ಸಾವಿರ ಅರಳಿಯ ಸಮಿತ್ತುಗಳನ್ನು ಹೋಮ ಮಾಡಬೇಕು. ವಿದ್ವಾಂಸನಾದವನು ಇನ್ನೊಂದು ಹತ್ತು ಸಾವಿರದಲ್ಲಿ ಮೂರು ಪಾಲು ಮಾಡಿಕೊಂಡು ಗ್ರಹಗಳನ್ನು ಉದ್ದೇಶಿಸಿ ಹೋಮಮಾಡಬೇಕು.

೯೩. ಎಲೈ ಬ್ರಾಹ್ಮಣೋತ್ತಮರೇ! ಕೇಳಿ; ಯಾವುದಾದರೂ ಹಕ್ಕಿಯು ಹೊಡೆದರೆ ಅದು ಸೂರ್ಯಸಂಬಂಧವಾದ ಅದ್ಭುತವೆಂದು ತಿಳಿದು ಸೂರ್ಯಪ್ರೀತ್ಯರ್ಥವಾಗಿ ಶಾಂತಿಹೋಮ ಮಾಡಬೇಕು. ಕಪೋತವು ಹೊಡೆದರೆ ಶುಕ್ರಗ್ರಹದ ನಿಮಿತ್ತವೆಂದೂ, ಕಾಗೆ ಮುಂತಾದುವು ಹೊಡೆದರೆ ಅಂಗಾರಕ ಗ್ರಹ ದೋಷವೆಂದೂ ತಿಳಿಯಬೇಕು.

ಭೂಕಂಪೇ ಜಾಯತೇऽರಿಷ್ಟಂ ಗುರೋರದ್ಭುತಮಾದಿಶೇತ್ ।
ಕೀಟವಿದ್ಧೇ ಕೃತೇ ವಿಪ್ರಾಶ್ಚಂದ್ರಸ್ಯಾದ್ಭುತಮಾದಿಶೇತ್ ॥ ೯೪ ॥

ಪತಾಕೇ ನಿಸ್ಸೃತೇ ಭಗ್ನೇ ರಾಹೋರದ್ಭುತಮಾದಿಶೇತ್ ॥ ೯೫ ॥

ಶಿವಾ ರುವಂತಿ ಚಾಂದ್ರಸ್ಯ ವಾನರೋऽಥ ಸ್ಪೃಶೇಚ್ಛನೇಃ ।
ಕೇತೋರದ್ಭುತಮುದ್ದಿಷ್ಟಂ ಭೂಮಿಃಕಂಪೇ ತು ತೇ ದ್ವಿಜಾಃ ॥ ೯೬ ॥

ತ್ರಯೋದಶೀಂ ಸಿತಾಂ ಪ್ರಾಪ್ಯ ಪುಷ್ಪೈರ್ನಾನಾವಿಧೈರಪಿ ।
ಕಾಮದೇವಂ ಸಮಭ್ಯರ್ಚೇದ್ಗಂಧಾದ್ಯೈಃ ಸುಮನೋಹರೈಃ ॥ ೯೭ ॥

ಚೈತ್ರೇ ಮಾಸಿ ಸಿತಾಷ್ಟಮ್ಯಾಂ ಶನೌ ಶತಭಿಷಾ ಯದಿ ।
ಗಂಗಾಯಾ ಯದಿ ಲಭ್ಯೇತ ಸೂರ್ಯಗ್ರಹಶತೈಃ ಸಮಾ ॥ ೯೮ ॥

---

೯೪. ಭೂಕಂಪವುಂಟಾದರೆ ಬೃಹಸ್ಪತಿ ಗ್ರಹ ಸಂಬಂಧವಾದ ಅದ್ಭುತ ಅರಿಷ್ಟವೆಂದು ತಿಳಿಯಬೇಕು. ಎಲೈ ಬ್ರಾಹ್ಮಣರೇ! ಕೇಳಿ; ಹುಳು ಕಚ್ಚಿದರೆ ಚಂದ್ರ ಸಂಬಂಧವಾದ ಅದ್ಭುತವೆಂದು ತಿಳಿಯಬೇಕು.

೯೫. ಪತಾಕೆಯು ಮುರಿದರೆ ಅಥವಾ ಜಾರಿದರೆ ರಾಹು ಸಂಬಂಧವಾದ ಅರಿಷ್ಟವೆಂದು ತಿಳಿಯಬೇಕು.

೯೬. ನರಿಗಳು ಅರಿಚಿಕೊಂಡರೆ ಬುಧನ ಅರಿಷ್ಟವೆಂದೂ; ಕಪಿಗಳು ಬಂದು ಮುಟ್ಟಿದರೆ ಅದು ಶನಿಯು ಸಂಬಂಧವಾದ ಅರಿಷ್ಟವೆಂದೂ ತಿಳಿಯಬೇಕು. ಎಲೈ ಬ್ರಾಹ್ಮಣರೇ! ಕೇಳಿ; ಭೂಮಿಯು ಕಂಪನವಾದರೆ ಅದು ಕೇತುವಿನ ಅರಿಷ್ಟವೆಂದು ತಿಳಿಯಬೇಕು.

೯೭. ಚೈತ್ರಶುಕ್ಲ ತ್ರಯೋದಶಿಯ ದಿನ ಕಾಮದೇವನನ್ನು ಗಂಧ ಮುಂತಾದವುಗಳಿಂದಲೂ ಬಗೆಬಗೆಯ ಮನೋಹರವಾದ ಹೂವುಗಳಿಂದಲೂ ಪೂಜಿಸಬೇಕು.

೯೮. ಚೈತ್ರಶುದ್ಧ ಅಷ್ಟಮಿಯು ಶನಿವಾರವಾಗಿ ಆ ದಿವಸ ಶತಭಿಷ ನಕ್ಷತ್ರವೂ ಯುಕ್ತವಾಗಿದ್ದಾಗ, ಗಂಗಾತೀರದಲ್ಲಿ ಪೂಜೆಯನ್ನು ನಡೆಸುವ ಯೋಗವು ಒದಗಿದರೆ ನೂರು ಸೂರ್ಯಗ್ರಹಣ ಕಾಲದಲ್ಲಿ ಪೂಜಾದಿಗಳನ್ನು ಮಾಡಿದಷ್ಟು ಪುಣ್ಯವು ಬರುವುದೆಂದು ತಿಳಿಯಬೇಕು.

ಸೇಯಂ ಮಹಾವಾರುಣೀತಿ ಖ್ಯಾತಾ ಕೃಷ್ಣತ್ರಯೋದಶೀ ।
ಅಸ್ಯಾಂ ಸ್ನಾನಂ ಚ ದಾನಂ ಚ ಶ್ರಾದ್ಧಂ ವ್ಯಾಕ್ಷಯಮುಚ್ಯತೆ ॥ ೯೯ ॥

ಮಧುಮಾಸೇ ಸಿತೇಪಕ್ಷೇ ದಂಭಭಂಜೀ ಚತುರ್ದಶೀ ।
ತಸ್ಯಾಂ ಮದನಮೂಲೇ ಚ ಅಕ್ಷರಂ ಕಾಮಮರ್ಚಯೇತ್ ॥ ೧೦೦ ॥

ಸ ಯಾತಿ ಪರಮಂ ಸ್ಥಾನಂ ಮದನಸ್ಯ ಪ್ರಭಾವತಃ ।
ಜುಗುಪ್ಸಿತವಚೋಭಿಸ್ತು ಸಮ್ಯಕ್ತುಷ್ಟೋ ಮನೋಭವಃ ॥ ೧೦೧ ॥

ಅನಂತಸ್ಯ ವ್ರತಂ ವಕ್ಷ್ಯೇ ಸರ್ವಪಾಪಪ್ರಣಾಶನಂ ।
ಅನಂತಂ ಸುಖಮಾಪ್ನೋತಿ ಯಃ ಕುರ್ಯಾದ್ಭಕ್ತಿಮಾನ್ನರಃ ॥ ೧೦೨ ॥

---

೯೯. ಪ್ರಸಕ್ತವಾದ ಶತಭಿಷಾ ನಕ್ಷತ್ರವು ಕೃಷ್ಣ ತ್ರಯೋದಶಿಯಲ್ಲಿ ಕೂಡಿ ಬಂದರೆ ಅದು " ಮಹಾ ವಾರುಣಿ ಯೋಗ " ವೆಂದು ಪ್ರಸಿದ್ಧವಾಗಿದೆ. ಆ ದಿವಸ ಮಾಡುವ ಸ್ನಾನ, ದಾನ, ಶ್ರಾದ್ಧ, ಇವು ಅಕ್ಷಯವಾದ ಫಲವನ್ನು ಕೊಡುವುವು.

೧೦೦. ಚೈತ್ರಶುದ್ಧ ಚತುರ್ದಶಿಯು ದಂಭಾಸುರನನ್ನು ಸಂಹಾರ ಮಾಡಿದ ದಿವಸ. ಆ ದಿನ ನಾಶರಹಿತನಾದ ಮನ್ಮಥನನ್ನು ದವನದ ಗಿಡದ ಬುಡದಲ್ಲಿ ಪೂಜಿಸಬೇಕು.

೧೦೧. ಹೀಗೆ ಪೂಜಿಸಿದವನು ಮನ್ಮಥನ ಮಹಿಮೆಯಿಂದ ಶ್ರೇಷ್ಠವಾದ ಸ್ಥಾನವನ್ನು ಪಡೆಯುತ್ತಾನೆ. ಮನೋಭವನ ಸನ್ನಿಧಿಯಲ್ಲಿ ಅಶ್ಲೀಲವಾದ ಬೈಗಳವೇ ಮೊದಲಾದ ಮಾತುಗಳನ್ನಾಡುವುದರಿಂದ ಅವನಿಗೆ ಬಹು ತೃಪ್ತಿ ಯುಂಟಾಗುವುದೆಂದು ಭಾವನೆಯಿದೆ.

೧೦೨. ಇನ್ನು ಮುಂದೆ ಚತುರ್ದಶಿ ತಿಥಿಯಲ್ಲಿ ಮಾಡತಕ್ಕುದಾಗಿ ಸಮಸ್ತ ಪಾಪವನ್ನೂ ನಾಶಮಾಡುವ ಅನಂತನ ವ್ರತ ವಿಚಾರವನ್ನು ಹೇಳುತ್ತೇನೆ. ಯಾವ ಮಾನವನು ಭಕ್ತಿಯುಕ್ತನಾಗಿ ಈ ವ್ರತವನ್ನು ಮಾಡುವನೋ ಅವನು ಅನಂತವಾದ ಸುಖವನ್ನು ಪಡೆಯುವನು.

**ದ್ವಾದಶ್ಯಾಂ ಪೂಜಿತೇ ಶಕ್ರೇ ಧ್ವಜಕೇ ವಾಸ್ತುಯಷ್ಟಿಷು ।**
**ತತಃ ಶುಕ್ಲಚತುರ್ದಶ್ಯಾಮನಂತಂ ಪೂಜಯೇದ್ಧರಿಂ ॥ ೧೦೩ ॥**

**ಕೃತ್ವಾ ದರ್ಭಮಯಾನಂತಂ ವಾರಿಧಾನ್ಯಾನ್ವಿತಂ ಯಥಾ ।**
**ಪೂಜಯೇಚ್ಚಂದನೈರ್ಗಂಧೈರ್ನೈವೇದ್ಯೈರ್ವಿವಿಧೈರಪಿ ॥ ೧೦೪ ॥**

**ಚತುರ್ದಶಫಲೈರ್ಮೂಲೈರ್ಜಲಜೈಃ ಕುಸುಮೈರಪಿ ।**
**ಯವಗೋಧೂಮಶಾಲೀನಾಂ ಚೂರ್ಣೈರ್ನೈಕತಮಸ್ಯ ಚ ॥ ೧೦೫ ॥**

**ಕೃತ್ವಾ ಪೂಪಾಹ್ವಯಂ ತಸ್ಮೈ ದದ್ಯಾದೇಕಂ ಶ್ರುತೇಕ್ಷಿತಂ ।**
**ಸ್ವಯಮೇಕಂ ತು ಭುಂಜೀತ ದದ್ಯಾತ್ಸೂತ್ರಸ್ಯ ದೋರಕಂ ॥ ೧೦೬ ॥**

---

೧೦೩. ಶುಕ್ಲ ದ್ವಾದಶಿಯಲ್ಲಿ ವಾಸ್ತುಪುರುಷನನ್ನು ಆವಾಹಿಸಿದ ಸ್ತಂಭಗಳಲ್ಲಿ ಶಕ್ರಧ್ವಜ ಪೂಜೆಯನ್ನು ಮಾಡಬೇಕು. ಶುಕ್ಲ ಚತುರ್ದಶಿಯಲ್ಲಿ ಅನಂತನೆಂಬ ಹೆಸರುಳ್ಳ (ಪದ್ಮನಾಭ) ವಿಷ್ಣುವನ್ನು ಪೂಜಿಸಬೇಕು.

೧೦೪. ದರ್ಭೆಗಳಿಂದ ಅನಂತ ಪದ್ಮನಾಭನನ್ನು ರಚಿಸಿಕೊಳ್ಳಬೇಕು. ಬಳಿಕ ಅಕ್ಕಿಯನ್ನು ಹರಡಿ ಅದರ ಮೇಲೆ ಜಲಪೂರ್ಣವಾದ ಕಲಶವನ್ನು ಇರಿಸಿ ಆ ಕಲಶದ ಮೇಲೆ ಈ ಅನಂತನನ್ನಿರಿಸಬೇಕು. ಗಂಧ, ಚಂದನ, ಪುಷ್ಪಗಳು, ನಾನಾವಿಧವಾದ ನೈವೇದ್ಯ ಪದಾರ್ಥಗಳು ಇವುಗಳನ್ನೂ ಸಿದ್ಧಪಡಿಸಬೇಕು.

೧೦೫. ಹೀಗೆ ಹದಿನಾಲ್ಕು ಬಗೆಯ ಹಣ್ಣುಗಳು, ಗೆಡ್ಡೆಗೆಣಸುಗಳು, ಇವುಗಳ ನೈವೈದ್ಯದಿಂದಲೂ, ಕಮಲಗಳು ಮತ್ತು ಇತರ ಪುಷ್ಪಗಳಿಂದಲೂ ಅನಂತನನ್ನು ಪೂಜಿಸಬೇಕು. ಅಕ್ಕಿ, ಗೋಧಿ, ಶಾಲಿ ಧಾನ್ಯ, ಇವುಗಳಲ್ಲಿ ಯಾವುದಾದರೂ ಒಂದರ ಹಿಟ್ಟಿನಿಂದ,

೧೦೬. ಅಪೂಪವೆಂಬ ಭಕ್ಷ್ಯವನ್ನು ಮಾಡಿ ಸ್ವಾಮಿಗೆ ನಿವೇದನ ಮಾಡಬೇಕು. ಅನಂತರ ಅದರಲ್ಲಿ ಒಂದು ಸ್ವಲ್ಪವನ್ನೂ, ವ್ರತಾಂಗವಾದ ದಾರವನ್ನೂ ಬ್ರಾಹ್ಮಣನಿಗೆ ದಾನ ಮಾಡಿ, ಕೊನೆಗೆ ತಾನೂ ಒಂದು ಅಪೂಪವನ್ನು ಸೇವಿಸಬೇಕು, ಮತ್ತು ವ್ರತಾಂಗವಾಗಿ ದಾರವನ್ನು ಕಟ್ಟಿಕೊಳ್ಳಬೇಕು.

ಚತುರ್ದಶಗ್ರಂಥಿಯುತಂ ಕುಂಕುಮೇನ ವಿಲೇಪಿತಂ ।
ಚತುರ್ದಶಸೂತ್ರಮಯಂ ಸೂತ್ರಂ ಕಾರ್ಪಾಸಮೇವ ಚ ॥ ೧೦೭ ॥

ಅತಃ ಪ್ರೇತಚತುರ್ದಶ್ಯಾಂ ಭೋಜಯಿತ್ವಾ ತಪೋಧನಾನ್ ।
ದಾನಂ ದತ್ವಾ ದ್ವಿಜೇಭ್ಯಶ್ಚ ಯಮಲೋಕಂ ನ ಗಚ್ಛತಿ ॥ ೧೦೮ ॥

ತತಃ ಪ್ರೇತಕಥಾಂ ಶ್ರುತ್ವಾ ಶಾಕೈರ್ನಕ್ತಂ ಸಮಾಚರೇತ್ ।
ಚತುರ್ದಶಂ ದ್ವಾದಶಂ ವಾ ಸಪ್ತಮಂ ವಾಪಿ ಪಂಚಮಂ ॥ ೧೦೯ ॥

ಮಾನಮಾತ್ರಾದಿಕಂ ಕೃತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೧೧೦ ॥

ಮಾಘೇ ಮಾಸಿ ವಟಾಪಾಯೇಃ ಕಸ್ಯ ಪಾಪಂ ಪುನೀಮಹೆ ।
ಸ್ನಾತ್ವಾ ತತ್ರ ಚತುರ್ದಶ್ಯಾಂ ಸಮಯೇ ತಾರಕಾಮಯೇ ॥ ೧೧೧ ॥

---

೧೦೭. ಹತ್ತಿಯ ನೂಲಿನ ಹದಿನಾಲ್ಕು ಎಳೆಗಳನ್ನು ಸೇರಿಸಿ ಹೆಣೆದು ಅದಕ್ಕೆ ಹದಿನಾಲ್ಕು ಗಂಟುಗಳನ್ನು ಹಾಕಿ ಕುಂಕುಮವನ್ನು ಲೇಪನ ಮಾಡಿ ಸಿದ್ಧಪಡಿಸಿದ ದಾರವನ್ನು ಕೈಗೆ ಕಟ್ಟಿಕೊಳ್ಳಬೇಕು.

೧೦೮. ಪ್ರೇತ ಚತುರ್ದಶೀ ತಿಥಿಯಲ್ಲಿ ಋಷಿಗಳಿಗೆ ಭೋಜನ ಮಾಡಿಸಿ ಬ್ರಾಹ್ಮಣರಿಗೆ ವಸ್ತ್ರ ಧನ ಕನಕಾದಿಗಳನ್ನು ದಾನ ಮಾಡಿದರೆ, ಅವನಿಗೆ ಯಮ ಲೋಕ ಪ್ರಾಪ್ತಿಯಾಗುವುದಿಲ್ಲ.

೧೦೯-೧೧೦. ಆ ಮೇಲೆ ಪ್ರೇತ ಕಥೆಯನ್ನು ಶ್ರವಣ ಮಾಡಿ ಕಾಯಿಪಲ್ಯ ಗಳ ಪಾಕ ಭಕ್ಷಣದಿಂದ ನಕ್ತವ್ರತವನ್ನು ಮಾಡಬೇಕು. ಹೀಗೆ ಹದಿನಾಲ್ಕು ದಿನ, ಹನ್ನೆರಡು ದಿನ, ಏಳು ದಿನ ಅಥವಾ ಐದು ದಿನಗಳಾದರೂ ಈ ವ್ರತವನ್ನು ಆಚರಿಸಿ ದರೆ, ಆತನ ಸಮಸ್ತ ಪಾಪಗಳು ಪರಿಹಾರವಾಗುವುವು.

೧೧೧. ಮಾಘಮಾಸದ ಚತುರ್ದಶಿಯಲ್ಲಿ, ಸಂಜೆ ನಕ್ಷತ್ರೋದಯ ಕಾಲದಲ್ಲಿ ಸ್ನಾನಮಾಡಿ ವಟಮೂಲದಲ್ಲಿ ಪರಮಾತ್ಮನನ್ನು ಪೂಜಿಸಿದರೆ ಯಾರ ಪಾಪವು ತಾನೇ ಪರಿಹಾರವಾಗುವುದಿಲ್ಲ ? ಈ ರೀತಿ ಮಾಡಿದರೆ ಸಕಲ ಜನಗಳ ಪಾಪವೂ ಖಂಡಿತ ವಾಗಿ ಪರಿಹಾರವಾಗುವುವು.

ಸಂಭವೇತ್ಫಾಲ್ಗುನೇ ಮಾಸಿ ಯಾ ಚ ಕೃಷ್ಣಾ ಚತುರ್ದಶೀ ।
ಶಿವರಾತ್ರಿರಿತಿ ಖ್ಯಾತಾ ಸಾ ಜಗತ್ಸರ್ವಕಾಮದಾ　　॥ ೧೧೨ ॥

ದಿವಾ ತಸ್ಯಾ ಅಲಾಭೇ ತು ರಾತ್ರಿಯೋಗೇ ವ್ರತಂ ಚರೇತ್ ।
ಚತುರ್ದಶೀ ಅಮಾವಿದ್ಧಾ ತದ್ವ್ರತಂ ಪರಿವರ್ಜಯೇತ್　　॥ ೧೧೩ ॥

ತಿಥಿಯೋಗೇ ಚ ಶರ್ವರ್ಯಾಂ ಸಂಪೂರ್ಣೇ ವ್ರತಮಾಚರೇತ್ ।
ಕಾಮವಿದ್ಧಾ ಸಾ ಚ ಪೂಜ್ಯಾ ರಾತ್ರಿಯೋಗೇ ಚರೇದ್ವ್ರತೀ　　॥ ೧೧೪ ॥

ಪ್ರಹರೇಪ್ರಹರೇ ಸ್ನಾನಂ ಸ್ವಯಂ ಸ್ನಾತ್ವಾ ಶಿವಸ್ಯ ಚ ।
ಕಾರಯೇದ್ವಿಧಿವದ್ಭಕ್ತ್ಯಾ ಹೋಮಂ ಕುರ್ಯಾದ್ಯಥಾವಿಧಿ ।　　॥ ೧೧೫ ॥

ಅಥ ವಕ್ಷ್ಯಾಮಿ ಚೈತ್ರಾದಿಮಾಸೇ ತು ಪೂರ್ಣಿಮಾ ಯಥಾ ।
ಚಿತ್ರಾನಕ್ಷತ್ರಸಂಯುಕ್ತೋ ಗುರುಪೂರ್ಣೋ ವಿಧುರ್ಯದಿ ॥
ಮಹಾಚೈತ್ರೀತಿ ಸಾ ಜ್ಞೇಯಾ ಪೂರ್ಣಿಮಾಕ್ಷಯಪುಣ್ಯದಾ　　॥ ೧೧೬ ॥

---

೧೧೨. ಫಾಲ್ಗುಣ ಬಹುಳದಲ್ಲಿ ಬರುವ ಚತುರ್ದಶಿಯು ಜಗತ್ತಿನಲ್ಲಿ ಸಮಸ್ತ ಇಷ್ಟಾರ್ಥಪ್ರದವಾದ ಶಿವರಾತ್ರಿಯೆಂದು ಪ್ರಸಿದ್ಧವಾಗಿವೆ. (ಈ ದೇಶದಲ್ಲಿ ಮಾಘ ಬಹುಳ ಚತುರ್ದಶಿಯು ಶಿವರಾತ್ರಿ ಎಂದು ಆಚರಣೆಯಲ್ಲಿದೆ.)

೧೧೩. ಹಗಲಿನಲ್ಲಿ ಆ ಚತುರ್ದಶೀ ಯೋಗವಿಲ್ಲದಿದ್ದರೆ ರಾತ್ರಿಯಲ್ಲಿ ಯೋಗ ವಿದ್ದಾಗಲೇ ಈ ವ್ರತವನ್ನು ಮಾಡಬೇಕು. ಆದರೆ ಅಮಾವಾಸ್ಯೆಯಿಂದ ವಿದ್ಧವಾಗಿದ್ದ ಚತುರ್ದಶಿಯಲ್ಲಿ ಈ ವ್ರತವನ್ನು ಮಾಡಬಾರದು.

೧೧೪. ವ್ರತಿಯಾದವನು ಸಂಪೂರ್ಣ ಚತುರ್ದಶಿಯು ಪೂರ್ತಾ ರಾತ್ರಿಯಲ್ಲಿ ಬಂದರೆ ಈ ವ್ರತವನ್ನು ಮಾಡಬೇಕು. ಎಂದರೆ ಹಗಲು ತ್ರಯೋದಶೀ ವಿದ್ಧವಾಗಿ ರಾತ್ರಿಯಲ್ಲಿ ಚತುರ್ದಶಿ ಪ್ರಾಪ್ತವಾಗುವಲ್ಲಿ ಈ ವ್ರತವನ್ನು ಮಾಡಬೇಕು.

೧೧೫. ವ್ರತಿಯು ಪ್ರತಿ ಯಾಮದಲ್ಲಿಯೂ ತಾನೂ ಸ್ನಾನಮಾಡಿ, ಶಿವನಿಗೂ ಅಭಿಷೇಕಾದಿಗಳನ್ನು ಮಾಡಬೇಕು. ವಿಧಿಪ್ರಕಾರ ಭಕ್ತಿಯಿಂದ ಅಭಿಷೇಕ ಮಾಡಿ ಆ ಮೇಲೆ ವಿಧಿಗನುಸಾರವಾಗಿ ಹೋಮ ಮಾಡಬೇಕು.

೧೧೬. ಇನ್ನು ಚೈತ್ರಶುದ್ಧ ಪೂರ್ಣಿಮಾ ಮುಂತಾದ ಪೂರ್ಣಿಮೆಗಳಲ್ಲಿ ಮಾಡಬೇಕಾದ ವ್ರತಗಳನ್ನು ಹೇಳುತ್ತೇನೆ; ಚಿತ್ತಾನಕ್ಷತ್ರಯುಕ್ತವಾದ ಪೂರ್ಣಿ

ವಿಶಾಖಾದಿಷು ಭೇದೇಷು ಪೂರ್ಣಚಂದ್ರೋ ಗುರುಶ್ಚರೇತ್ ।
ಮಹಾವೈಶಾಖಿಕಾದ್ಯಾಸ್ತು ಪೂರ್ಣಿಮಾ ದ್ವಾದಶ ಸ್ಮೃತಾಃ ॥ ೧೧೭ ॥

ಮಹಾಜ್ಯೈಷ್ಠೀ ವಿಶೇಷೋಽಯಂ ಪ್ರಾಜಾಪತ್ಯೇ ಯಥಾ ರವಿಃ ।
ಗುರುಪೂರ್ಣಚಂದ್ರೋ ಜ್ಯೇಷ್ಠಾಯಾಂ ಮಹಾಜ್ಯೈಷ್ಠೀತಿ ಸಾ ಸ್ಮೃತಾ ॥ ೧೧೮ ॥

ವಿನಾಪಿ ಗುರುಣಾ ಚಂದ್ರಃ ಕೃತ್ತಿಕಾ ಪೂರ್ಣಿಮಾ ತಥಾ ।
ತಥಾ ಮಹಾಕಾರ್ತಿಕೀ ಸಾ ತಿಥಿಃ ಪುಣ್ಯತಮಾ ಭವೇತ್ ॥ ೧೧೯ ॥

ರೋಹಿಣ್ಯಾಂ ತು ಸ್ಥಿತಶ್ಚಂದ್ರಃ ಪೌರ್ಣಮಾಸ್ಯಾಂ ತು ಕಾರ್ತಿಕೇ ।
ಮಹಾಕಾರ್ತಿಕೀ ತಥಾಪಿ ಸ್ಯಾತ್ಸ್ವರ್ಗಲೋಕೇಽಪಿ ದುರ್ಲಭಾ ॥ ೧೨೦ ॥

---

ಮೆಯ ದಿನ ಗುರುವಾರವೂ ಕೂಡಿದ್ದರೆ ಅದು ಮಹಾಚೈತ್ರೀ ಎಂದು ಪ್ರಸಿದ್ಧವೂ ಅಕ್ಷಯ ಪುಣ್ಯಪ್ರದವೂ ಆಗಿರುವುದು.

೧೧೭. ವಿಶಾಖಾ ಮೊದಲಾದ ನಕ್ಷತ್ರಗಳಿಂದ ಯುಕ್ತಗಳಾದ ಪೂರ್ಣಿಮೆಗಳಲ್ಲಿ ಗುರುವಾರವೂ ಸೇರಿದರೆ ಮಹಾವೈಶಾಖೀ ಎನಿಸುವುದು. ಇದೇ ರೀತಿ ವಿವಿದವಾದ ನಕ್ಷತ್ರಗಳಿಂದ ಕೂಡಿದ್ದರೆ ಪುಣ್ಯತಮವಾದ ಹನ್ನೆರಡು ಪೂರ್ಣಿಮೆಗಳಾಗುವುವೆಂದು ತಿಳಿಯಬೇಕು.

೧೧೮. ಜ್ಯೈಷ್ಠ ಶುಕ್ಲ ಪೂರ್ಣಿಮೆಯು ರೋಹಿಣೀ ನಕ್ಷತ್ರಯುಕ್ತವಾಗಿದ್ದು ಗುರುವಾರದೊಡಗೂಡಿ ಬಂದರೆ, ಅದು ಮಹಾ ಜ್ಯೇಷ್ಠೀ ಎನಿಸಿಕೊಳ್ಳುವುದು. ಅದೇ ರೋಹಿಣೀ ನಕ್ಷತ್ರಯುತವಾದ ಜ್ಯೇಷ್ಠ ಶುಕ್ಲ ಪೂರ್ಣಿಮೆಯು ಭಾನುವಾರ ಬಂದರೆ ವಿಶೇಷ ಪ್ರಕಾರದ ಮಹಾಜ್ಯೇಷ್ಠೀ ಎನಿಸುವುದು.

೧೧೯. ಗುರು ಚಂದ್ರಸಮಾಗಮವಿಲ್ಲದೆ ಪೂರ್ಣಿಮೆಯು ಕೃತ್ತಿಕಾ ನಕ್ಷತ್ರಯುಕ್ತವಾಗಿದ್ದರೆ, ಆ ತಿಥಿಯನ್ನು ಪುಣ್ಯತಮವಾದ ಮಹಾ ಕಾರ್ತಿಕೀ ಎಂದು ಕರೆಯುವರು.

೧೨೦. ಕಾರ್ತಿಕ ಮಾಸದ ಪೂರ್ಣಿಮೆಯಲ್ಲಿ ರೋಹಿಣೀ ನಕ್ಷತ್ರವು ಸೇರಿದ್ದರೆ, ಸ್ವರ್ಗಲೋಕದಲ್ಲಿಯೂ ದುರ್ಲಭವಾದ ಮಹಾ ಕಾರ್ತಿಕೀ ಯೆನಿಸುವುದು.

**ಚಿತ್ರಾ ವಾ ಯದಿ ವಾ ಪೂರ್ಣಾ ಯದಾ ಸ್ಯಾತ್ಪೂರ್ಣಿಮಾತಿಥಿಃ ।**
**ಮಹಾಚೈತ್ರೀ ತಥಾಪಿ ಸ್ಯಾದಶ್ವಮೇಧಫಲಪ್ರದಾ ॥ ೧೨೧ ॥**

**ರವಿಣಾ ಕೃತ್ತಿಕಾಯೋಗಾದ್ರವಿವಾರೇ ಚ ಪೂರ್ಣಿಮಾ ।**
**ಮಹಾಚೈತ್ರೀ ತಥಾಪಿ ಸ್ಯಾದ್ದತ್ತಸ್ಯಾಕ್ಷಯಕಾರಿಕಾ ॥ ೧೨೨ ॥**

**ಏವಂ ಗುರೌ ಗುರೋರ್ಯೋಗೇ ಮಹಾಚೈತ್ರೀ ಪ್ರಕೀರ್ತಿತಾ ।**
**ತತ್ರ ಸ್ನಾನಂ ಚ ದಾನಂ ಚ ಜಪೋ ನಿಯಮ ಏವ ಚ ॥ ೧೨೩ ॥**

**ಸರ್ವಮಕ್ಷಯತಾಂ ಯಾತಿ ಫಲಂ ಚೈವಾಶ್ವಮೇಧಿಕಂ ।**
**ಪಿತರಸ್ತರ್ಪಿತಾ ಯಾಂತಿ ವೈಷ್ಣವಂ ಲೋಕಮಕ್ಷಯಂ ॥ ೧೨೪ ॥**

**ಭರಣ್ಯಾಂ ಕಾರ್ತಿಕೇ ಮಾಸಿ ಯದಿ ಸ್ಯಾತ್ಪೂರ್ಣಿಮಾ ತಿಥಿಃ ।**
**ಗಂಗಾದ್ವಾರೇ ತು ಮಹತೀ ವೈಶಾಖೀ ಪುಣ್ಯದಾ ಸ್ಮೃತಾ ॥ ೧೨೫ ॥**

---

೧೨೧. ಚೈತ್ರಪೂರ್ಣಿಮೆಯ ದಿನ ಚಿತ್ತಾನಕ್ಷತ್ರವು ಸಂಪೂರ್ಣವಾಗಿದ್ದರೆ, ಅಶ್ವಮೇಧ ಯಜ್ಞವನ್ನು ಮಾಡಿದಷ್ಟು ಫಲವನ್ನು ಕೊಡುವ ಮಹಾಚೈತ್ರೀ ಎಂಬದಾಗಿ ತಿಳಿಯಬೇಕು.

೧೨೨. ಕೃತ್ತಿಕಾ ನಕ್ಷತ್ರದಲ್ಲಿ ಸೂರ್ಯನಿರುವ ದಿನ ಭಾನುವಾರವೂ, ಪೂರ್ಣಿಮೆಯೂ, ಸೇರಿದ್ದರೆ; ಆಗಲೂ ಮಹಾ ಚೈತ್ರೀ ಎಂದು ಹೆಸರು. ಆ ದಿನ ದಾನಾದಿಗಳನ್ನು ಮಾಡಿದರೆ ಅದರಿಂದ ಅಕ್ಷಯವಾದ ಫಲವು ಬರುವುದು.

೧೨೩. ಹೀಗೆ ಗುರುವಾರದ ದಿನ ಪ್ರಾಪ್ತವಾದ ಪೂರ್ಣಿಮಾದಲ್ಲಿ ಗುರು ಗ್ರಹವು ಅವನ ಸಂಚಾರದ ಕ್ರಮದಲ್ಲಿ ಅಲ್ಲಿಗೆ ಸೇರಿದ್ದರೆ ಅದೂ ಮಹಾ ಚೈತ್ರೀ ಎನಿಸುವುದು.

೧೨೪. ಆ ಪೂರ್ಣಿಮೆಯಲ್ಲಿ ಮಾಡಿದ ಸ್ನಾನ ದಾನ ಜಪ ಹೋಮ ಇವುಗಳೆಲ್ಲವೂ ಅಕ್ಷಯವಾಗುವುವಲ್ಲದೆ ಅಶ್ವಮೇಧ ಯಜ್ಞವನ್ನು ಮಾಡಿದಷ್ಟು ಫಲವು ಬರುವುದು. ಆ ದಿನ ತರ್ಪಣ ಮಾಡಿದರೆ ಪಿತೃಗಳು ತೃಪ್ತರಾಗಿ ಅಕ್ಷಯವಾದ ವಿಷ್ಣು ಲೋಕವನ್ನು ಹೊಂದುತ್ತಾರೆ.

೧೨೫. ಕಾರ್ತಿಕ ಶುದ್ಧ ಪೂರ್ಣಿಮಾ ದಿನ ಭರಣೀ ನಕ್ಷತ್ರದ ಯೋಗವಿದ್ದು ಅದೂ ಗಂಗಾಸಾನ್ನಿಧ್ಯದಲ್ಲಿರುವಂತೆ ಸಂಘಟಿಸಿದರೆ; ಅಥವಾ ಅಂತಹ ನಕ್ಷತ್ರಯೋಗವು ಪುಣ್ಯಕರವಾದ ಮಹಾವೈಶಾಖೀ ಎಂದು ತಿಳಿಯಬೇಕು.

ಶಾಲಗ್ರಾಮೋ ಮಹಾಚೈತ್ರೀ ಕೃತಪುಣ್ಯಾ ಮಹಾತಿಥಿಃ ।
ಗಂಗಾದ್ವಾರೇ ತು ಮಹತೀ ವೈಶಾಖೀ ಪುಣ್ಯದಾ ಸ್ಮೃತಾ ॥ ೧೨೬ ॥

ಪುರುಷೋತ್ತಮೇ ಮಹಾಜ್ಯೈಷ್ಠೀ ಮಹಾಷಾಢೀ ತು ಶೃಂಖಲೇ ।
ಮಹಾಶ್ರಾವಣೀ ಕೇದಾರೇ ಮಹಾಪುಣ್ಯತಮಾ ಮತಾ ॥ ೧೨೭ ॥

ಮಹಾಭಾದ್ರೀ ಬದರ್ಯಾಂ ಚ ಕುಜೋಽಪಿ ಸ್ಯಾನ್ನರಸ್ತಥಾ ।
ಮಹಾಕಾರ್ತಿಕೀ ಪುಷ್ಕರೇ ಚ ಕಾನ್ಯಕುಬ್ಜೇ ತಥೋತ್ತರೇ ॥ ೧೨೮ ॥

ಮಹತೀ ಮಾರ್ಗಶೀರ್ಷೀ ಸ್ಯಾದಯೋಧ್ಯಾಯಾಂ ತಥೋತ್ತರೇ ।
ಮಹಾಪೌಷೀ ಪುಣ್ಯತಮಾ ಮಹಾಮಾಘೀ ಪ್ರಯಾಗತಃ ॥ ೧೨೯ ॥

---

೧೨೬. ಆ ಮಹಾಚೈತ್ರಿ ಶುಭದಿನದಲ್ಲಿ ಸಾಲಗ್ರಾಮ ಕ್ಷೇತ್ರವಾಸಮಾಡಿದರೆ ಅದು ಮಹಾಪುಣ್ಯಪ್ರದವೆನಿಸಿಕೊಳ್ಳುವುದು. ಮಹಾ ವೈಶಾಖೀ ತಿಥಿಯಲ್ಲಿ ಗಂಗಾ ನದೀ ಮೂಲವಾದ ಹರಿದ್ವಾರಕ್ಷೇತ್ರವಾಸವು ಮಹಾಪುಣ್ಯಪ್ರದವೆಂದು ಹೇಳಲ್ಪಟ್ಟಿದೆ.

೧೨೭. ಮಹಾ ಜ್ಯೈಷ್ಠೀ ಪೂರ್ಣಿಮೆಯಲ್ಲಿ ಪುರುಷೋತ್ತಮಕ್ಷೇತ್ರವಾಸವು ಮಹಾ ಪುಣ್ಯಕರವೆಂದು ತಿಳಿಯಬೇಕು. ಮಹಾಷಾಢೀ ಪೂರ್ಣಿಮೆಯಲ್ಲಿ ಶೃಂಖಲಾಕ್ಷೇತ್ರವಾಸವು ಪುಣ್ಯತಮವಾದುದು.

೧೨೮. ಮಹಾಶ್ರಾವಣೀ ಪೂರ್ಣಿಮೆಯಲ್ಲಿ ಕೇದಾರ ಕ್ಷೇತ್ರವಾಸವು ತುಂಬಾ ಪುಣ್ಯಪ್ರದವಾದುದು. ಭಾದ್ರಪದ ಮಾಸದಲ್ಲಿ ಬರುವ ಮಹಾ ಭಾದ್ರೀ ಪೂರ್ಣಿಮೆಯಲ್ಲಿ ಬದರೀ ಕ್ಷೇತ್ರದಲ್ಲಿ ವಾಸಿಸುವುದು ಬಹು ಪುಣ್ಯಪ್ರದವಾದುದು. ಮಾನವನು ದುಷ್ಕುಲಜನಾದರೂ ಈ ಕಾರ್ಯಾಚರಣೆಯಿಂದ ಶ್ರೇಷ್ಠನಾಗುವನು. ಮಹಾ ಕಾರ್ತಿಕೀ ಪೂರ್ಣಿಮೆಯಲ್ಲಿ ಪುಷ್ಕರ ಕ್ಷೇತ್ರದಲ್ಲಿಯೂ ಉತ್ತರ ಕನ್ಯಾಕುಬ್ಜ ಕ್ಷೇತ್ರದಲ್ಲಿಯ ೂ ವಾಸಿಸುವುದು ಪುಣ್ಯಕರವಾದುದು.

೧೨೯. ಮಹತೀ ಮಾರ್ಗಶೀರ್ಷೀ ಪೂರ್ಣಿಮೆಯಲ್ಲಿ ಉತ್ತರ ಅಯೋಧ್ಯೆಯಲ್ಲಿ ವಾಸಿಸುವುದು ಪುಣ್ಯಕರವು. ಮಹಾ ಪೌಷೀ ಪೂರ್ಣಿಮೆಯಲ್ಲಿ ಉತ್ತರ ಕುರುಕ್ಷೇತ್ರದಲ್ಲಿ ವಾಸಿಸುವುದೂ ; ಮಹಾಮಾಘೀ ಪೌರ್ಣಿಮೆಯಲ್ಲಿ ಪ್ರಯಾಗ ಕ್ಷೇತ್ರದಲ್ಲಿ ವಾಸಿಸುವುದೂ ಪುಣ್ಯಕರವು.

**ಮಹಾಫಾಲ್ಗುನೀ ನೈಮಿಷೇ ಚ ನಿರ್ದಿಷ್ಟಾಃ ಸ್ಯುರ್ಮಹಾಫಲಾಃ ॥ ೧೩೦ ॥**

**ಅತ್ರ ಸ್ಮ ವಿಹಿತಂ ಕರ್ಮ ಶುಭಂ ವಾ ಯದಿ ವಾಶುಭಂ ।**
**ಸರ್ವಮಕ್ಷಯತಾಂ ಯಾತಿ ವರ್ಧತೇ ಚಾಧಿಕಂ ಫಲಂ ॥ ೧೩೧ ॥**

**ಆಶ್ವಿನೇ ಪೌರ್ಣಮಾಸೀ ತು ಕೌಮುದೀತಿ ಪ್ರಕೀರ್ತಿತಾ ।**
**ಅಸ್ಯಾಂ ಚಂದ್ರೋದಯೇ ಲಕ್ಷ್ಮೀಂ ಪೂಜಯೇದ್ವಿಧಿವನ್ನರಃ ॥ ೧೩೨ ॥**

**ನಿರ್ವರ್ತಯೇನ್ನ ಯಃ ಶ್ರಾದ್ಧಂ ಪ್ರಭಾತೇ ಪೈತೃಕಂ ದ್ವಿಜಃ ।**
**ಇಂದುಕ್ಷಯೇ ಮಾಸಿ ಮಾಸಿ ಪ್ರಾಯಶ್ಚಿತ್ತೀಯತೆ ತು ಸಃ ॥ ೧೩೩ ॥**

**ಚಂದ್ರಾಶ್ವಿನೇ ತು ಕೃಷ್ಣಾಯಾಂ ಪಂಚದಶ್ಯಾಂ ಯಥಾವಿಧಿ ।**
**ಕೃತ್ವಾ ಸ್ನಾನಾದಿಕಂ ಕರ್ಮ ಸೋಪವಾಸೋ ದಿನಂ ನಯೇತ್ ॥ ೧೩೪ ॥**

---

೧೩೦. ಮಹಾ ಫಾಲ್ಗುನೀ ಪೌರ್ಣಿಮೆಯಲ್ಲಿ ನೈಮಿಷ ಕ್ಷೇತ್ರವಾಸವು ಮಹಾ ಫಲಗಳನ್ನು ಕೊಡುವುದೆಂದು ತಿಳಿಯಬೇಕು.

೧೩೧. ಅಲ್ಲಿ ಮಾಡಿದ ಶುಭ ಕರ್ಮವಾಗಲಿ ಅಶುಭ ಕರ್ಮವಾಗಲಿ ಎಲ್ಲವೂ ಅಕ್ಷಯವಾಗುವುದು. ಅಲ್ಲದೆ ಫಲವು ಹೆಚ್ಚಾಗಿ ವೃದ್ಧಿಯಾಗುವುದು.

೧೩೨. ಆಶ್ವಯುಜ ಶುದ್ಧ ಪೂರ್ಣಿಮೆಯು ಕೌಮುದೀ ಪೂರ್ಣಿಮಾ ಎಂದು ಹೇಳಲ್ಪಟ್ಟಿದೆ. ವ್ರತವನ್ನು ಮಾಡುವ ಮನುಷ್ಯನು ಈ ಪೂರ್ಣಿಮೆಯ ದಿನ ಚಂದ್ರೋದಯದ ವೇಳೆಗೆ ಸರಿಯಾಗಿ ವಿಧಿ ಪ್ರಕಾರವಾಗಿ ಮಹಾ ಲಕ್ಷ್ಮಿಯನ್ನು ಪೂಜಿಸಬೇಕು.

೧೩೩-೧೩೪. ಪ್ರತಿ ತಿಂಗಳ ಅಮಾವಾಸ್ಯೆಯ ದಿನ ಪ್ರಾತಃಕಾಲದಲ್ಲಿ ಪೈತೃಕ ಶ್ರಾದ್ಧ ಮಾಡದೇ ಇರುವ ಬ್ರಾಹ್ಮಣನು ಪ್ರಾಯಶ್ಚಿತ್ತಾರ್ಹನಾಗುತ್ತಾನೆ. ಆಶ್ವಯುಜ ಕೃಷ್ಣಪಕ್ಷದ ಹದಿನೈದನೆಯ ತಿಥಿ ಎಂದರೆ ಅಮಾವಾಸ್ಯೆಯಲ್ಲಿ ವಿಧಿಪ್ರಕಾರ ಸ್ನಾನ ಮುಂತಾದ್ದನ್ನು ಮಾಡಿಕೊಂಡು ಉಪವಾಸವಿದ್ದು ಹಗಲನ್ನು ಕಳೆಯಬೇಕು.

ಪ್ರದೋಷಸಮಯೇ ಲಕ್ಷ್ಮೀಂ ಪೂಜಯಿತ್ವಾ ಯಥಾವಿಧಿ ।
ದೀಪವೃಕ್ಷಾನ್ಯಥಾವೃಕ್ಷಾನ್ ಲಕ್ಷ್ಮೀಪ್ರೀತ್ಯೈ ಸಮುತ್ಸೃಜೇತ್ ॥ ೧೩೫ ॥

ನದೀತೀರೇ ಗಿರೌ ಗೋಷ್ಠೇ ಸ್ಮಶಾನೇ ವೃಕ್ಷಮೂಲತಃ ।
ಚತುಷ್ಪಥೇ ನಿಜಾಗಾರೇ ಚತ್ವರೇ ತನ್ನಿಧಾಪಯೇತ್ ॥ ೧೩೬ ॥

ದ್ವಿರ್ಭೋಜನಮಮಾಯಾಂತು ನ ಕರ್ತವ್ಯಂ ಕದಾಚನ ।
ಶರ್ವರ್ಯಾಂ ಚ ವಿಶೇಷೇಣ ಮಾಘಫಾಲ್ಗುನಯೋರ್ನರೈಃ ॥ ೧೩೭ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ ಅಷ್ಟಮೋಽಧ್ಯಾಯಃ.**



---

೧೩೫. ಆ ರೀತಿ ಹಗಲು ಉಪವಾಸವಿದ್ದು ಸಂಧ್ಯಾಕಾಲದಲ್ಲಿ ವಿಧಿವಿಧಾನದಂತೆ ಲಕ್ಷ್ಮಿಯನ್ನು ಪೂಜಿಸಿ ವೃಕ್ಷಾಕೃತಿಯಾಗಿ ದೀಪಗುಚ್ಛವನ್ನು ರಚಿಸಿ ಲಕ್ಷ್ಮೀ ಪ್ರೀತಿಗಾಗಿ ಸಮರ್ಪಿಸಬೇಕು.

೧೩೬. ಮತ್ತು ನದಿಯ ದಡ, ಬೆಟ್ಟದ ಮೇಲ್ಭಾಗ, ದನದ ಕೊಟ್ಟಿಗೆಗಳು ಸ್ಮಶಾನ, ಮರದ ಬುಡ, ನಾಲ್ಕು ಬೀದಿಗಳು ಕೂಡುವ ಚೌಕ, ಮನೆಯ ಅಂಗಳ, ಬಾಗಿಲು, ಇವುಗಳಲ್ಲಿ ದೀಪಗುಚ್ಛವನ್ನು ಆರೋಪಣ ಮಾಡಬೇಕು.

೧೩೭. ಆಚಾರ ಶೀಲರು ಅಮಾವಾಸ್ಯೆಯ ದಿನ ಯಾವಾಗಲೂ ಎರಡು ಹೊತ್ತು ಊಟ ಮಾಡಬಾರದು. ಮಾಘ, ಫಾಲ್ಗುನ ಈ ಮಾಸಗಳಲ್ಲಂತೂ ವಿಶೇಷತಃ ರಾತ್ರಿಯಲ್ಲಿ ಭೋಜನವನ್ನು ಮಾಡಲೇ ಬಾರದು.

ಇಲ್ಲಿಗೆ ಶ್ರೀ ಭವಿಷ್ಯ ಮಹಾ ಪುರಾಣದಲ್ಲಿ ಮಧ್ಯಮ ಪರ್ವದ
ಎರಡನೆಯ ಭಾಗದಲ್ಲಿ ಎಂಟನೆಯ ಅಧ್ಯಾಯವು
ಮುಗಿದುದು.

 

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ದ್ವಿತೀಯಭಾಗೇ
## ನವಮೋಽಧ್ಯಾಯಃ

॥ ಸೂತ ಉವಾಚ ॥

ವಕ್ಷ್ಯೇ ಪ್ರವರಸಂತಾನಂ ಯಥಾಕ್ರಮಮಿತಿ ದ್ವಿಜಾಃ ।
ಯದ್ವಿನಾ ವ್ಯತ್ಯಯೋ ಯಸ್ಮಾತ್ತಸ್ಮಾಚ್ಛಾಸ್ತ್ರಾನುಸಾರತಃ ॥ ೧ ॥

ಪ್ರವರತ್ರಯಂ ಕಾಶ್ಯಪಸ್ಯ ಕಾಶ್ಯಪಾಶಾವನೈಧ್ರುವಂ ।
ಪಂಚಾಶ್ವಗೌತಮಸ್ಯಾದ್ಯ ಗೌತಮಶ್ಚೋಽಯ ಏವ ಚ ॥ ೨ ॥

---

### ಒಂಭತ್ತನೆಯ ಅಧ್ಯಾಯ

೧. ಸೂತರು ಮುಂದುವರಿಸಿ ಹೇಳುತ್ತಾರೆ—ಎಲೈ ಬ್ರಾಹ್ಮಣರೇ! ಕೇಳಿ; ಒಂದೊಂದು ಗೋತ್ರದ ಪ್ರವರಕ್ಕೆ ಸೇರಿದ ಋಷಿ ಸಮೂಹವನ್ನು ಕ್ರಮವಾಗಿ ಹೇಳುತ್ತೇನೆ. ಋಷಿ ಪರಂಪರೆಯು ವ್ಯತ್ಯಾಸವಾದರೆ ಗೋತ್ರ ಪ್ರವರವೇ ವ್ಯತ್ಯಾಸವಾಗುವುದು. ಆದುದರಿಂದ ಶಾಸ್ತ್ರಾನುಸಾರವಾಗಿ ಆ ವಿವರವನ್ನು ತಿಳಿಯಬೇಕು.

೨ ಕಾಶ್ಯಪ ಗೋತ್ರಕ್ಕೆ ಕಾಶ್ಯಪ, ಆಶಾವ, ನೈಧ್ರುವ ಎಂಬ ಮೂವರು ಪ್ರವದವರು. ಪಂಚಾಶ್ವಗೌತಮ ಗೋತ್ರಪ್ರವರಕ್ಕೆ ಆದ್ಯನೂ ಗೌತಮನೂ ಊಯನೂ ಸೇರಿದವರು.

ಚ್ಯವನೋ ಜಾಮದಗ್ನ್ಯಶ್ಚ ಆಪ್ಲವಾಯನಮೇವ ಚ ।
ಮೋಕುನ್ಯಾಂಗಿರಸಭಾಸ್ಯಾಜ್ಜಾಮದಗ್ನ್ಯಾಪ್ಲವಾಯನಂ ॥ ೩ ॥

ಶಾಂಡಿಲ್ಯಾಸಿತದೈವಲಾಃ ಪ್ರವರತ್ರಯಮೇವ ಚ ।
ಪರಾಶರಸ್ಯ ಚ ತಥಾ ಸ್ವಯಂ ಶಾಂಬವಶಿಷ್ಠಕಂ ॥ ೪ ॥

ಆತ್ರೇಯಮಾಚಾರ್ಯಣಸ್ಯಾಬಾಲಪ್ರವರಮೇವ ಹಿ ।
ವಾತ್ಸ್ಯವಾತ್ಸ್ಯಾಯನೌ ಚೈವ ಉರುಕಂಟಕ ಏವ ಚ ॥ ೫ ॥

ಅರ್ಧಕ್ಷೀರಮಿತ್ರಾವರುಣಂ ಪಂಚಮಂ ಪರಿಕೀರ್ತಿತಂ ।
ಔತಥ್ಯಸ್ಯ ತ್ರಯಂ ವಿದ್ಯಾದ್ವಾಲ್ಮೀಕೋಽವರಮೇವ ಹಿ ॥ ೬ ॥

ಔತಥ್ಯಸ್ಯ ವಶಿಷ್ಠೇಂದ್ರ ಚಕ್ರೈಃ ಕ್ರೌಂಚಾಯನಂ ತಥಾ ।
ಔತಥ್ಯೇತಿ ಸಮಾಖ್ಯಾತಂ ಮಾಹಿಷ್ಯಂ ಚ್ಯವನಂ ತಥಾ ॥ ೭ ॥

---

೩. ಚ್ಯವನ, ಜಾಮದಗ್ನ್ಯ, ಆಪ್ಲವಾಯನ, ಇವರು ಒಂದು ಪ್ರವರದವರು. ಮೋಕುನಿ, ಆಂಗಿರಸ, ಭಾಸ್ಯ, ಇವರೂ ಜಾಮದಗ್ನ್ಯ, ಆಪ್ಲವಾಯನ, ಇವರೂ ಸಹ ಒಂದೇ ಗೋತ್ರಪ್ರವರಕ್ಕೆ ಸೇರಿದವರು.

೪. ಶಾಂಡಿಲ್ಯ, ಅಸಿತ, ದೇವಲ, ಈ ಮೂವರೂ ಒಂದು ಪ್ರವರದವರು. ಸ್ವಯಂ, ಶಾಂಬ, ವಶಿಷ್ಠ, ಇವರು ಪರಾಶರ ಗೋತ್ರಪ್ರವರಕ್ಕೆ ಸೇರಿದವರು.

೫-೬. ಆತ್ರೇಯ, ಬಾಲಪ್ರವರ, (ಶಾವಾಸ್ಯ) ಆಚಾರ್ಯಣ (ಅರ್ಚನಾನಸ), ಇವರು ಒಂದೇ ಪ್ರವರದವರೆಂದು ತಿಳಿಯಬೇಕು. ವಾತ್ಸ್ಯ, ವಾತ್ಸ್ಯಾಯನ, ಉರು ಕಂಟಕ, ಅರ್ಧಕ್ಷೀರ, ಮಿತ್ರಾವರುಣ, ಈ ಐದು ಜನ ಋಷಿಗಳೂ ಒಂದು ಪ್ರವರ (ಪಂಚಾರ್ಷೇಯ). ಔತಥ್ಯ ಗೋತ್ರದ ಪ್ರವರದವರಲ್ಲಿ ಮೂರು ಋಷಿಗಳಿದ್ದಾರೆ. ವಾಲ್ಮೀಕನು ಅಷ್ಟು ಶ್ರೇಷ್ಠನಲ್ಲ.

೭, ಔತಥ್ಯ ಗೋತ್ರಕ್ಕೆ ವಾಶಿಷ್ಠ, ಐಂದ್ರ, ಚಕ್ರ, ಕ್ರೌಂಚಾಯನ, ಔತಥ್ಯ, ಎಂಬ ಐದು ಋಷಿಗಳ ಪ್ರವರ ಉಂಟು. ಔತಥ್ಯನಿಗೆ ಮಾಹಿಷ್ಯ, ಚ್ಯವನ, ಎಂಬ ಹೆಸರುಗಳೂ ಕೆಲವು ವೇಳೆ ಹೇಳಲ್ಪಡುವುವು.

**ಉರುಕಂಟಿತ್ರಯಂ ವಿದ್ಯಾತ್ಕೌಶಿಕಸ್ಯ ತ್ರಯಂ ತಥಾ ।**
**ಯದ್ಗಾಲೋ ದೇವರಾಟ್‌ಖ್ಯಾತಃ ಕುಶಿಕಾದ್ಯಾಶ್ಚ ಭೋ ದ್ವಿಜಾಃ ॥ ೮ ॥**

**ವಿಶ್ವಾಮಿತ್ರೋ ದೇವರಾಟ್ಚ ಸ್ವಯಂ ಚೈವ ತ್ರಯಂ ಮತಂ ।**
**ಘೃತಕೌಶಿಕಸ್ಯ ಕುಶಿಕಾ ವಿಶ್ವಾಮಿತ್ರಾಘಮರ್ಷಣಂ ॥ ೯ ॥**

**ಚಂಡಕೌಶಿಕಸ್ಯ ಚ ತಥಾ ದೇವರಾಟ್‌ದೇವರಾತಕಂ ।**
**ವಿಶ್ವಾಮಿತ್ರೇ ತು ವಿಖ್ಯಾತಃ ಸುಮಂತೋರೇವ ಏವ ಹಿ ॥ ೧೦ ॥**

**ತರುಂಕಶಾಕಟಾಯನಃ ಸ್ವಯಮೇವ ಪ್ರವರತ್ರಯಂ ।**
**ಭ್ರಮದ್ವಯಂ ಜೈಮಿನೇಶ್ಚ ಸ್ವಯಂ ವಾಶಿಷ್ಠಮೇವ ಚ ॥ ೧೧ ॥**

**ಶಂಖಮಾಂಗಿರಸಚ್ಯವನಂ ಶಂಖಭಸ್ಯ ತ್ರಯಂ ಮತಂ ।**
**ವಾತ್ಸ್ಯಸ್ಯ ಚ್ಯವನೋ ನಾಮ ಆಪ್ಲವಾಯನಕಸ್ತಥಾ ॥ ೧೨ ॥**

---

೮. ಕೌಶಿಕನಿಗೆ ಉರುಕಂಟಿಕ ಮೊದಲಾದ ಮೂರು ಜನ ಸಂಬಂಧಿಗಳು ಇರುವರು. ಎಲೈ ಬ್ರಾಹ್ಮಣರೇ! ಗಾಲವ, ದೇವರಾಟ್, ಕುಶಿಕ, ಮೊದಲಾದವರು ಒಂದು ವಂಶದಲ್ಲಿ ಪ್ರಸಿದ್ಧರು.

೯. ವಿಶ್ವಾಮಿತ್ರ ದೇವರಾಟ್, ಸ್ವಯಂ, ಎಂಬ ಮೂವರು ಈ ಪ್ರವರದವ ರೆಂದು ಬೇರೆಯವರು ಅಭಿಪ್ರಾಯ ಪಡುತ್ತಾರೆ. ಘೃತಕೌಶಿಕ ಗೋತ್ರದ ಪ್ರವರಕ್ಕೆ ಕೌಶಿಕ, ವಿಶ್ವಾಮಿತ್ರ, ಅಘಮರ್ಷಣ, ಈ ಮೂವರೂ ಸೇರಿದವರು.

೧೦. ಚಂಡಕೌಶಿಕ ಗೋತ್ರಕ್ಕೆ ಹಾಗೆಯೇ ದೇವರಾಟ್, ದೇವರಾತಕ ಎಂಬ ವರೂ, ವಿಶ್ವಾಮಿತ್ರ ಗೋತ್ರದಲ್ಲಿ ಸುಮಂತು, ರೇವ ಎಂಬವರೂ ವಿಖ್ಯಾತರಾದ ಗೋತ್ರ ಪ್ರವರ್ತಕರು.

೧೧. ತರುಂಕ, ಶಾಕಟಾಯನ, ಸ್ವಯಂ, ಇವರು ಮೂವರೂ ಒಂದು ಪ್ರವ ರದಲ್ಲಿ ಬರುವರು. ಭ್ರಮನಾಮಕರಿಬ್ಬರೂ ಜೈಮಿನಿ ವಂಶೀಯರು. ಸ್ವಯಂ ಎಂಬುವನು ವಾಶಿಷ್ಠವಂಶದವನು.

೧೨. ಶಂಖ, ಆಂಗಿರಸ, ಚ್ಯವನ, ಈ ಮೂವರೂ ಶಂಖಭ ಗೋತ್ರದ ಋಷಿ ಗಳೆಂದು ಅಭಿಪ್ರಾಯ ಪಡುವರು. ಚ್ಯವನ, ಆಪ್ಲವಾಯನ, ವಾತ್ಸ್ಯ, ಇವರು ವಾತ್ಸ್ಯಗೋತ್ರಪ್ರವರದ ಋಷಿಗಳು.

ಸಾವರ್ಣಸ್ಯ ಸಾವರ್ಣ್ಯಶ್ಚ್ಯವನಜಾಮದಗ್ನಿ ಭಾರ್ಗವಂ ।
ಆಪ್ಲವಾಯನೇತಿ ಪಾಠೀನೇ ಏಕ ಏವ ತು ಸತ್ತಮಾಃ ॥ ೧೩ ॥

ಕೃಷ್ಣಾಜಿನಸ್ಯ ಕೃಷ್ಣಾಜಿನಂ ವಿಶ್ವಾಮಿತ್ರಸ್ಯ ಜೈಮಿನಂ ।
ಕಾತ್ಯಾಯನಸ್ಯ ಕಾತ್ಯಾಯನಗಾರ್ಗ್ಯಾಯಣತ್ರಯಂ ತಥಾ ॥ ೧೪ ॥

ವಾತ್ಸ್ಯಾಯನೇತಿ ವಿಖ್ಯಾತಂ ಕುಶಿಕಸ್ಯ ಚ ಪಂಚಮಂ ।
ಅಮುಂ ಚ ವಿಶ್ವಾಮಿತ್ರಂ ಚ ಜಾಮದಗ್ನ್ಯಾಪ್ಲವಾಯನಂ ॥ ೧೫ ॥

ಗಾರ್ಗ್ಯಸ್ಯ ಗಾರ್ಗ್ಯಸಾಮುಂಚ ತಥಾಂಗಿರಸ ಏವ ಚ ।
ಬಾರ್ಹಸ್ಪತ್ಯ ಭರದ್ವಾಜ ಇತಿ ಪಂಚ ಪ್ರಕೀರ್ತಿತಂ ॥ ೧೬ ॥

ವಶಿಷ್ಠಸ್ಯ ಚ ವಾಶಿಷ್ಠಂ ತಥಾಂಗಿರಸ ಏವ ಚ ।
ಮಿತ್ರಾವರುಣಸಂಯುಕ್ತಂ ತಾವತ್ತಸ್ಯ ಪ್ರಕೀರ್ತಿತಂ ॥ ೧೬ ॥

---

೧೩. ಸಾವರ್ಣ ಗೋತ್ರಕ್ಕೆ ಸಾವರ್ಣ್ಯ, ಚ್ಯವನ, ಜಾಮದಗ್ನಿ ಭಾರ್ಗವ ಆಪ್ಲವಾಯನ ಇವರು ಐವರೂ ಪ್ರವರದಲ್ಲಿ ಬರತಕ್ಕವರು. ಪಾಠೀನ ಗೋತ್ರಕ್ಕೆ ಆವನೊಬ್ಬನೇ ಋಷಿಯೆಂದು ತಿಳಿಯಬೇಕು.

೧೪. ಕೃಷ್ಣಾಜಿನನು ಕೃಷ್ಣಾಜಿನ ಗೋತ್ರಕ್ಕೂ, ಜೈಮಿನನು ವಿಶ್ವಾಮಿತ್ರ ಗೋತ್ರಕ್ಕೂ, ಕಾತ್ಯಾಯನಗಾರ್ಗ್ಯಾಯಣನು ಕಾತ್ಯಾಯನ ಗೋತ್ರಕ್ಕೂ ಈ ಮೂವರೂ ಗೋತ್ರಪ್ರವರ್ತಕರಾದ ಋಷಿಗಳು.

೧೫. ಕುಶಿಕ ಗೋತ್ರಕ್ಕೆ ಅಮುಂ, ವಿಶ್ವಾಮಿತ್ರ, ಜಾಮದಗ್ನ್ಯ, ಆಪ್ಲವಾಯನ, ಐದನೆಯವನಾಗಿ ವಾತ್ಸ್ಯಾಯನ, ಈ ಐದು ಮಂದಿ ಋಷಿವರ್ಯರು ಗೋತ್ರ ಪ್ರವರ್ತಕರು.

೧೬ ಗಾರ್ಗ್ಯ ಗೋತ್ರಕ್ಕೆ ಗಾರ್ಗ್ಯಸಾಮುಂಚ, ಅಂಗಿರಸ, ಬಾರ್ಹಸ್ಪತ್ಯ, ಭರಧ್ವಾಜ, ಎಂಬ ಐವರು ಋಷಿಗಳು ಗೋತ್ರಪ್ರವರ್ತಕರು ಎಂದು ಹೇಳಲ್ಪಟ್ಟಿದೆ.

೧೬. ವಶಿಷ್ಠ ಗೋತ್ರಕ್ಕೆ ವಾಶಿಷ್ಠ, ಅಂಗಿರಸ, ಮಿತ್ರಾವರುಣ, ಇವರು ಮೂರು ಮಂದಿಯೂ ಕೂಡಿರಬೇಕೆಂದು ಹೇಳಿದೆ. (ಅಂಗಿರಸನ ಬದಲು ಕಾಂಡಿನ್ಯನೆಂದು ಕೆಲವರ ಪಾಠವಿದೆ)

**ಜಾಹ್ವಕರ್ಣಭವಕರ್ಣೌ ಪ್ರವರೌ ಪರಿಕೀರ್ತಿತೌ ।**
**ಉಪಮನ್ಯುರುಪಮನ್ಯೋಃ ತಥೇಂದ್ರಃ ಸಹ ಏವ ಚ ॥ ೧೮ ॥**

**ತದುತ್ತಮೇತಿ ತ್ರಿತಯಂ ಮಿತ್ರಾವರುಣಸ್ಯ ಚ ತ್ರಯಂ ।**
**ಆತ್ರೇಯಗೌತಮಾಂಗಿರಸಪ್ರವರತ್ರಯಮೇವ ಹಿ ॥ ೧೯ ॥**

**ಕಮಂಡಲೋತ್ಪಲಮಿತ್ರಾಮಿತ್ರಾವರುಣ ಏವ ಚ ।**
**ಕಮಂಡಲುಶ್ಚೇತಿ ತ್ರಿತಯಂ ಪ್ರವರತ್ರಯಮೇವ ಚ ॥ ೨೦ ॥**

**ಚ್ಯವನಸ್ಯ ತಥಾ ಜ್ಞೇಯಮೂರ್ವಚ್ಯವನಾಪ್ಲವಾಯನಂ ।**
**ಅಥ ಸ ಕಸ್ಯಾಂಗಿರಸಬಾರ್ಹಸ್ಪತ್ಯ ಏವ ತ್ರಯಂ ॥ ೨೧ ॥**

**ಅಗಸ್ತ್ಯಸ್ಯ ಅಗಸ್ತಿಶ್ಚ ಮಾಹಶ್ಚ ಚ್ಯವನೇತಿ ಚ ।**
**ವಿಶ್ವಾಮಿತ್ರೇ ದೇವರಾತ ಔತಥ್ಯೇತಿ ತಥೈವ ಚ ॥ ೨೨ ॥**

---

೧೮. ಉಪಮನ್ಯು ಗೋತ್ರಕ್ಕೆ, ಜಾಹ್ವಕರ್ಣ ಭವಕರ್ಣ, ಉಪಮನ್ಯು ಇವರು ಪ್ರವರದಲ್ಲಿ ಸೇರಿ ಬರುವರು. ಇಂದ್ರ, ಸಹ, ಉತ್ತಮ, ಇವರು ಮೂವರು ಒಂದು ಗುಂಪಿಗೆ ಸೇರಿದವರು.

೧೯. ಆತ್ರೇಯ, ಅಂಗೀರಸ, ಗೌತಮ ಇವರು ಮೂವರೂ ಮಿತ್ರಾವರುಣ ಯುಕ್ತವಾದ ಪ್ರವರಕ್ಕೆ ಸಂಬಂಧಿಸಿದವರು.

೨೦. ಉತ್ಪಲಮಿತ್ರ, ಮಿತ್ರಾವರುಣ, ಕಮಂಡಲು ಈ ಮೂವರೂ ಕಮಂಡಲುಯುಕ್ತವಾದ ಪ್ರವರದವರು.

೨೧. ಊರ್ವ, ಚ್ಯವನ, ಆಪ್ಲವಾಯನ, ಇವರುಗಳು ಚ್ಯವನ ಗೋತ್ರಕ್ಕೆ ಸೇರಿದವರೆಂದು ತಿಳಿಯಬೇಕು. ಆತ್ರೇಯ, ಆಂಗಿರಸ, ಬಾರ್ಹಸ್ಪತ್ಯ ಎಂಬ ಮೂವರೂ ಒಂದು ಪ್ರವರಕ್ಕೆ ಸೇರಿದವರು.

೨೨. ಅಗಸ್ತಿ, ಮಾಹ, ಚ್ಯವನ, ಈ ಮೂವರೂ ಅಗಸ್ತ್ಯ ಗೋತ್ರದವರು. ವಿಶ್ವಾಮಿತ್ರ ಗೋತ್ರಕ್ಕೆ ವೈಶ್ವಾಮಿತ್ರ, ದೇವರಾತ, ಔತಥ್ಯ (ಔದಲ), ಇವರು ಮೂರು ಮಂದಿ ಋಷಿಗಳೆಂದು ತಿಳಿಯಬೇಕು.

ಯೇ ನೋಕ್ತಾ ಯೇಽ ಪ್ಯವಿಜ್ಞಾತಾಸ್ತೇ ಪ್ರೋಕ್ತಾಃ ಕಾಶ್ಯಪಾಜ್ಜಗತ್
॥ ೨೩ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ
ನವಮೋಽಧ್ಯಾಯಃ



---

೨೩. ಇದುವರೆಗೆ ಹೇಳಿಲ್ಲದ ಗೋತ್ರಗಳ ಋಷಿಗಳೂ, ನಮಗೆ ಗೊತ್ತಿಲ್ಲದವರಾದ ಜಗತ್ತಿನ ಎಲ್ಲಾ ಋಷಿಗಳೂ ಕಶ್ಯಪ ಗೋತ್ರದವರೆಂದು ಭಾವಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೆಯ ಭಾಗದಲ್ಲಿ
ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ದ್ವಿತೀಯಭಾಗೇ

## ದಶಮೋಽಧ್ಯಾಯಃ

॥ ಸೂತ ಉವಾಚ ॥

ವಾಸ್ತುಯೋಗಮಥೋ ವಕ್ಷ್ಯೇ ಬಲಿಮಂಡಲಪೂರ್ವಕಂ ।
ಅಂಕುರಾರ್ಪಣಕಂ ಕೃತ್ವಾ ಮಧ್ಯೇ ಕುರ್ಯಾಚ್ಚ ಮಂಡಲಂ ॥ ೧ ॥

ತ್ರಿಹಸ್ತಾ ಪಿಂಡಿಕಾ ಕಾರ್ಯಾ ಚತುರಸ್ರಾ ಉದಕ್ಪ್ಲವಾ ।
ಪ್ರಾದೇಶಮಾತ್ರ ಉತ್ಸೇಧೋ ದರ್ಪಣಾಂತರ್ನಿಭೋ ಭವೇತ್ ॥ ೨ ॥

---

## ಹತ್ತನೆಯ ಅಧ್ಯಾಯ

೧. ಸೂತರು ಶೌನಕಾದಿ ಋಷಿಗಳಿಗೆ ಹೇಳುತ್ತಾರೆ—ಈಗ ವಾಸ್ತುಮಂಡಲ, ವಾಸ್ತುಬಲಿ, ಇವನ್ನು ಮೊದಲು ಹೇಳಿ ಅನಂತರ ವಾಸ್ತುಯಾಗ ವಿಧಾನವನ್ನು ಹೇಳುತ್ತೇನೆ. ಮೊದಲು ಅಂಕುರಾರ್ಪಣವೆಂಬ ಕರ್ಮವನ್ನು ನೆರವೇರಿಸಿ ಗೃಹಮಧ್ಯ ಪ್ರದೇಶದಲ್ಲಿ ವಾಸ್ತುಮಂಡಲವನ್ನು ರಚಿಸಬೇಕು.

೨ ಮೂರು ಹಸ್ತ ಪ್ರಮಾಣವುಳ್ಳದಾದ ಪಿಂಡಿಕಾ ಎಂಬ ಭಾಗವನ್ನು ಚತುಷ್ಕೋಣಾಕಾರವುಳ್ಳದ್ದಾಗಿಯೂ ಅದರಲ್ಲಿ ಬಿದ್ದ ನೀರು ಉತ್ತರಕ್ಕೆ ಹರಿಯುವಂತೆ ಇಳಿಜಾರಾಗಿಯೂ ಮಾಡಬೇಕು. ಸುತ್ತಿನ ವಟ್ಟೆಯು ಒಂದು ಚೋಟು ಎತ್ತರವುಳ್ಳದ್ದಾಗಿಯೂ, ಮಧ್ಯಭಾಗವು ಕನ್ನಡಿಯ ಒಳಭಾಗದಂತೆ ಸಮತಳವಾಗಿಯೂ, ಇರಬೇಕು.

ಮಧ್ಯೇ ಸಂಮಾರ್ಜಯೇದ್ವಿದ್ವಾನ್ ಪಾದಾನ್ನವ ಯಥಾಕ್ರಮಾತ್ ।
ಕೋಣೇ ಚತುಷ್ಟಯಂ ಜ್ಞೇಯಂ ದಿಕ್ಷು ತ್ರಿಪದಕಂ ಕ್ರಮಾತ್ ॥ ೩ ॥

ಪಂಚಕಂ ಯುಗ್ಮಪಾದೇನ ಚತುರ್ದಿಕ್ಷು ತತಃ ಪರಂ ।
ಕೋಣೇ ಚತುಷ್ಪದಂ ಸ್ಥಾಪ್ಯಂ ಚತುಷ್ಕೋಣೇ ವಿಭಾವಯೇತ್ ॥ ೪ ॥

ಚತುಷ್ಕೋಣಂ ಬಹಿಃ ಕುರ್ಯಾತ್ಕೋಣೇ ಚಾಪಿ ಚತುಷ್ಟಯಂ ।
ದ್ವಾತ್ರಿಂಶಚ್ಚ ಭವೇದ್ಬಾಹ್ಯೇ ಚಾತಶ್ಚಾಪಿ ತ್ರಯೋದಶ ॥ ೫ ॥

ಚತ್ವಾರಿಂಶತ್ಪಂಚಯುತಾ ಮಿಲಿತ್ವಾ ವಾಸ್ತುದೇವತಾಃ ।
ಶಿಖೀ ಚೈವಾಥ ಪರ್ಜನ್ಯೋ ಜಯಂತಃ ಕುಲಿಶಾಯುಧಃ ॥ ೬ ॥

ಸೂರ್ಯಃ ಸತ್ಯೋ ವೃಷಶ್ಚೈವ ಆಕಾಶಂ ವಾಯುರೇವ ಚ ।
ಪೂಷಾ ಚ ವಿತಥಶ್ಚೈವ ಗುಹಾಖ್ಯಶ್ಚ ಯಮಸ್ತಥಾ ॥ ೭ ॥

---

೩. ವಿದ್ವಾಂಸನಾದವನು ಸುತ್ತಲೂ ಹೊರಗೆ ಎಂಟು. ಒಳಗಿನದು ಒಂದು. ಈ ರೀತಿ ಒಂಬತ್ತು ಪದಕಗಳನ್ನು ಕ್ರಮವಾಗಿ ರಚಿಸಬೇಕು. ಆ ಒಂಬತ್ತು ಪದಕಗಳನ್ನು ರಚಿಸುವ ವಿಧಾನವು ಈ ರೀತಿ ಉಕ್ತವಾಗಿದೆ. ಮಧ್ಯೆ ಸಂಮಾರ್ಜನ ಮಾಡಿದ ಮಂಡಲದಲ್ಲಿ ಈಶಾನ್ಯ, ಆಗ್ನೇಯ, ನೈರುತ್ಯ, ವಾಯವ್ಯ, ಎಂಬ ನಾಲ್ಕು ಕೋಣಗಳಲ್ಲಿಯೂ ನಾಲ್ಕು ಚೌಕವಾದ ಮನೆಗಳನ್ನು ರಚಿಸಬೇಕು. ಹೀಗೆಯೇ ಪೂರ್ವಾದಿ ದಿಕ್ಕುಗಳಲ್ಲಿಯೂ ನಾಲ್ಕು ಚೌಕಗಳನ್ನು ರಚಿಸಬೇಕು. ಈ ರೀತಿ ಮಾಡಿದರೆ ಒಂದೊಂದು ದಿಕ್ಕಿನಲ್ಲಿಯೂ ಮೂರು ಮೂರು ಮನೆಗಳು ಕಾಣುತ್ತವೆ.

೪-೫ ಎರಡು ದಿಕ್ಕುಗಳಲ್ಲಿರುವ ಮನೆಯನ್ನು ಸೇರಿಸಿ ಲೆಕ್ಕ ಮಾಡುವುದರಿಂದ ಐದು ಮನೆಗಳು ಕಾಣುತ್ತವೆ. ಅನಂತರ ನಾಲ್ಕು ದಿಕ್ಕುಗಳಲ್ಲಿ ರಚಿಸಿದ ನಾಲ್ಕು ಚೌಕ; ಮತ್ತು ನಾಲ್ಕು ಕೋಣಗಳಲ್ಲಿ ರಚಿಸಿದ ನಾಲ್ಕು ಚೌಕ ಇವುಗಳನ್ನು ಪ್ರತಿಯೊಂದನ್ನೂ ನಾಲ್ಕು ನಾಲ್ಕು ಭಾಗವಾಗಿ ಮಾಡಬೇಕು. ಹೀಗೆ ಮಾಡುವುದರಿಂದ ಸುತ್ತಲೂ ಇರತಕ್ಕ ಮನೆಗಳು ಮೂವತ್ತೆರಡು ಆಗುತ್ತವೆ. ಅನಂತರ ಒಳ ಚೌಕ ಹೊರ ಚೌಕಗಳ ದೆಸೆಯಿಂದ ಉಂಟಾದ ಮಧ್ಯಪ್ರದೇಶದಲ್ಲಿ, ಹದಿಮೂರು ಮನೆಗಳನ್ನು ಮಾಡಬೇಕು. ಹೀಗೆ ಮಾಡಿದರೆ ಒಟ್ಟು ನಲವತ್ತೈದು ಮನೆಗಳಾಗುವುವು.

೬-೯. ಹೊರಗಡೆಯ ಮೂವತ್ತೆರಡು ಮನೆಗಳಲ್ಲಿಯೂ ಕ್ರಮವಾಗಿ ಶಿಖಿ, ಪರ್ಜನ್ಯ, ಜಯಂತ, ಕುಲಿಶಾಯುಧ, ಸೂರ್ಯ, ಸತ್ಯ, ವೃಷ, ಆಕಾಶ, ವಾಯು,

ಗಂಧರ್ವೋ ಮೃಗರಾಜಸ್ತು ಮೃಗಾಃ ಪಿತೃಗಣಾಸ್ತಥಾ ।
ದೌವಾರಿಕೋಽಥ ಸುಗ್ರೀವಃ ಪುಷ್ಪದಂತೋ ಜಲಾಧಿಪಃ ॥ ೮ ॥

ಅಸುರಃ ಪಶುಪಾಶೌ ಚ ರೋಗೋಹಿರ್ಮೋಕ್ಷ ಏವ ಚ ।
ಭಲ್ಲಾಟಃ ಸೋಮುಪರ್ವೌ ಚ ಅದಿತಿಶ್ಚ ದಿತಿಸ್ತಥಾ ॥ ೯ ॥

ಬಹಿರ್ದ್ವಾದಶ ಇತ್ಯೇತಾನೀಶಾನಾದೀನ್ ಯಥಾಕ್ರಮಂ ।
ಈಶಾನಾದಿ ಚತುಷ್ಕೋಣಸಂಸ್ಥಿತಾನ್ ಪೂಜಯೇದ್ಬುಧಃ ॥ ೧೦ ॥

ಅಪಶ್ಚೈವಾಥ ಸಾವಿತ್ರೋ ಜಯೋ ರುದ್ರಸ್ತಥೈವ ಚ ।
ಅರ್ಯಮಾ ಸವಿತಾ ಚೈವ ವಿವಸ್ವಾನ್ ವಿಬುಧಾಧಿಪಃ ॥ ೧೧ ॥

ಮಿತ್ರೋಽಥ ರಾಜಯಕ್ಷ್ಮಾ ಚ ಸಪ್ತಮಃ ಪೃಥವೀಶ್ವರಃ ।
ಅಷ್ಟಮಸ್ತ್ವಾಪವತ್ಸಸ್ತು ಪರಿಧೌ ಬ್ರಹ್ಮಣಃ ಸ್ಮೃತಃ ॥ ೧೨ ॥

ಪೂರ್ವಾದಿಷು ತಥಾ ಪೂಜ್ಯಾ ಗಂಧಪುಷ್ಪೈಃ ಪೃಥಗ್ವಿಧೈಃ ।
ಪಂಚಚತ್ವಾರಿಂಶದೇತಚ್ಚರಕ್ಯಾ ಚ ಚತುರ್ಥಕಂ ॥ ೧೩ ॥

---

ಪೂಷಾ, ವಿತಥ, ಗುಹ, ಯಮ, ಗಂಧರ್ವ ಮೃಗರಾಜ, ಮೃಗಾಃ; ಪಿತೃಗಣಾಃ, ದೌವಾರಿಕ, ಸುಗ್ರೀವ, ಪುಷ್ಪದಂತ, ಜಲಾಧಿಪ, ಅಸುರ, ಪಶು, ಪಾಶ, ರೋಗ, ಅಹಿ, ಮೋಕ್ಷ, ಭಲ್ಲಾಟ, ಸೋಮ, ಪರ್ವ, ಅದಿತಿ, ದಿತಿ ಎಂಬ ಮೂವತ್ತೆರಡು ದೇವತೆಗಳನ್ನು ಆವಾಹಿಸಿ ಪೂಜಿಸಬೇಕು.

೧೦. ಮಧ್ಯಪದಕದ ಹೊರಭಾಗದಲ್ಲಿ ಆಗಿರುವ ಹನ್ನೆರಡು ಮನೆಗಳಲ್ಲಿ ಈಶಾನ್ಯ ದಿಕ್ಕು ಮೊದಲುಮಾಡಿಕೊಂಡು ಪೂರ್ವಾದಿ ದಿಕ್ಕುಗಳ ಕಡೆ ಇರುವ ಹನ್ನೆರಡು ಮನೆಗಳಲ್ಲಿಯೂ ಕ್ರಮವಾಗಿ

೧೧-೧೨. ಆಪ, ಸಾವಿತ್ರ, ಜಯ, ರುದ್ರ, ಅರ್ಯಮಾ, ಸವಿತಾ, ವಿವಸ್ವಾನ್, ವಿಬುಧಾಧಿಪ, ಮಿತ್ರ, ರಾಜಯಕ್ಷ್ಮ, ಪೃಥಿವೀಶ್ವರ, ಆಪವತ್ಸ, ಎಂಬ ಹನ್ನೆರಡು ದೇವತೆಗಳನ್ನು ಆವಾಹಿಸಿ ಪೂಜಿಸಬೇಕು.

೧೩-೧೪ ಪೂರ್ವದಿಕ್ಕಿನಿಂದ ಆರಂಭಿಸಿ ಈ ದೇವತೆಗಳನ್ನು ನಾನಾವಿಧವಾದ ಗಂಧ ಹೂ ಮುಂತಾದುವುಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಪೂಜೆ ಮಾಡಬೇಕು.

**ಮಿಲಿತ್ವಾ ಊನಪಂಚಾಶದುತ್ತಮಾ ವಾಸ್ತುದೇವತಾಃ ।**
**ನಾನ್ಯತ್ರ ಯೋಜಯೇದ್ವಿಪ್ರಾಃ ಪ್ರಾಸಾದೇ ಚ ವಿಶೇಷತಃ ॥ ೧೪ ॥**

**ಬಹಿಃ ಕೋಣೇ ಚರಕ್ಯಾದಿ ಚರಕೀಂ ಚ ವಿದಾರಿಕಾಂ ।**
**ಪೂತನಾಂ ಚ ತತಃ ಪಶ್ಚಾದ್ವಾಯವ್ಯೇ ಪಾಪರಾಕ್ಷಸೀಂ ॥ ೧೫ ॥**

**ಸ್ವೈಸ್ವೈರ್ಮಂತ್ರೈಶ್ಚ ಗಂಧಾದ್ಯೈಃ ಪೂಜಯೇತ್ಕುಸುಮಾದಿನಾ ।**
**ಯಥೋಕ್ತೇನ ಬಲಿಂ ದದ್ಯಾತ್ಪಾಯಸಾನ್ನೇನ ವಾ ಪುನಃ ॥ ೧೬ ॥**

**ರೇಖಾಃ ಸರ್ವತ್ರ ಶುಕ್ಲೇನ ಪದ್ಮಂ ರಕ್ತೇನ ಭಾವಯೇತ್ ।**
**ರಂಜಯೇದೇವ ವರ್ಣೇನ ಬಹಿಷ್ಪಂಚರಜೇನ ತು ॥ ೧೭ ॥**

---

ಈ ನಲವತ್ತೈದು ಪದಕಗಳ ಜತೆಗೆ ಕೋಣಗಳ ಹೊರಗೆ ಚರಕ್ಯಾದಿ ನಾಲ್ಕು ಸಣ್ಣ ಪದಕಗಳನ್ನು ಜೋಡಿಸಿದರೆ ನಲವತ್ತೊಂಬತ್ತು ಪದಕಗಳಾಗುತ್ತವೆ, ಮೇಲೆ ಪೂಜಿತವಾದವರೇ ಆ ಮನೆಗಳಲ್ಲಿ ಆವಾಹಿತರಾಗುವ ವಾಸ್ತುದೇವತೆಗಳು. ಇದೇ ಉತ್ತಮವಾದ ವಾಸ್ತುಮಂಡಲವೆನಿಸಿದೆ. ಈ ದೇವತೆಗಳನ್ನು ದೊಡ್ಡ ಪ್ರಾಸಾದ ಮುಂತಾದುವುಗಳ ಪ್ರತಿಷ್ಠಾಕಾಲದಲ್ಲಿ ಸ್ಥಾಪಿಸಬೇಕೇ ವಿನಾ ಅದಕ್ಕಿಂತ ಅನ್ಯತ್ರದಲ್ಲಿ ನಿಯೋಜಿಸಬೇಕಾದ್ದಿಲ್ಲ.

೧೫. ಚರಕೀ ಮೊದಲಾದವರು ಎಂದರೆ ಚರಕೀ, ವಿದಾರಿಕಾ, ಪೂತನಾ ಪಾಪರಾಕ್ಷಸೀ ಎಂಬ ನಾಲ್ವರು. ಇವರನ್ನು ಈಶಾನ್ಯ, ಆಗ್ನೇಯ, ನೈಋತ್ಯ, ವಾಯವ್ಯ ಈ ಕೋಣಗಳ ಹೊರಗೆ ಸ್ಥಾಪಿಸಬೇಕು. ಹೊರಸುತ್ತಿನಲ್ಲಿ ರಚಿಸಿರುವ ಪದಕಗಳೇ ಅಷ್ಟದಳಗಳು; ಮಧ್ಯದ ಚೌಕವೇ ಕರ್ಣಿಕಾ ಕೇಸರವೆಂದು ಭಾವಿಸತಕ್ಕದ್ದು.

೧೬. ಆ ದೇವತೆಗಳನ್ನು ಆಯಾ ದೇವತಾಕವಾದ ಮಂತ್ರಪೂರ್ವಕವಾಗಿ ಗಂಧಪುಷ್ಪಾದಿದ್ರವ್ಯಗಳಿಂದ ಪೂಜಿಸಬೇಕು. ಯಥೋಕ್ತವಾದ ಕ್ರಮದಲ್ಲಿ ಪಾಯಸಾನ್ನದಿಂದ ಆ ದೇವತೆಗಳಿಗೆಲ್ಲಾ ಬಲಿಪ್ರದಾನಮಾಡಬೇಕು.

೧೭. ಸಾಮಾನ್ಯವಾಗಿ ಮಂಡಲದ ಎಲ್ಲಾ ರೇಖೆಗಳನ್ನೂ ಬಿಳಿಯ ರಂಗವಲ್ಲಿಯಿಂದ ರಚಿಸಬೇಕು. ಸುತ್ತಿನ ಅಷ್ಟದಳ ಪದ್ಮದ ರೇಖೆಗಳನ್ನು ಕೆಂಪುರಂಗೋಲಿಯಿಂದ ಬರೆಯಬೇಕು. ಅದರ ಹೊರಗೆ ಐದು ಬಣ್ಣದ ರಂಗೋಲಿಗಳಿಂದ ಅಂದವಾಗಿ ರಚಿಸಬೇಕು.

**ದೇವವರ್ಣಾನಥೋ ವಕ್ಷ್ಯೇ ಯಥಾವದನುವರ್ಣಿತಾಃ ।**
**ರಕ್ತೋ ಗೌರಸ್ತಥಾ ಶೋಣಃ ಸಿತರಕ್ತಃ ಸಿತಸ್ತಥಾ ॥ ೧೮ ॥**

**ಪೀತಃ ಶುಕ್ಲಶ್ಚ ಧರ್ಮಶ್ಚ ಪೂಷಾ ರಕ್ತಃ ಪ್ರಕೀರ್ತಿತಃ ।**
**ಶ್ಯಾಮಃ ಶುಕ್ಲಶ್ಚ ಕೃಷ್ಣಶ್ಚ ಪೀತಃ ಶುಕ್ಲೋ ಯಥಾಕ್ರಮಂ ॥ ೧೯ ॥**

**ಪೀತೋ ಭೃಂಗಃ ಪುನಃ ಶುಕ್ಲಃ ಕೃಷ್ಣಃ ಶುಕ್ಲಸ್ತಥೈವ ಚ ।**
**ರಕ್ತಃ ಶುಕ್ಲಶ್ಚ ಶೋಣಶ್ಚ ಕೃಷ್ಣರಕ್ತಸ್ತಥೈವ ಚ ॥ ೨೦ ॥**

**ಧೂಮ್ರಪೀತೋ ರಕ್ತಪೀತಃ ಶುಕ್ಲಃ ಕೃಷ್ಣಶ್ಚ ಶ್ಯಾಮಕಃ ।**
**ರಕ್ತವರ್ಣೇನ ದ್ವಾತ್ರಿಂಶದ್ದಶ ವರ್ಣಾಃ ಪ್ರಕೀರ್ತಿತಾಃ ॥ ೨೧ ॥**

**ಶುಕ್ಲಶೋಣಂ ಪುನಃ ಶ್ವೇತಂ ಸಿಂಧೂರಾಭಂ ಪ್ರಕೀರ್ತಿತಂ ।**
**ಪಾಂಡುರಂ ಕುಂಕುಮಾಭಂ ಚ ರಕ್ತಂ ಜ್ಞೇಯಂ ಚ ಪೀತಕಂ ॥ ೨೨ ॥**

---

೧೮. ದೇವರುಗಳಿಗೆ ಇಷ್ಟವಾದ ವರ್ಣಗಳಾವುವೆಂಬುದನ್ನು ಪೂರ್ವಿಕರು ಹೇಳಿರುವ ಕ್ರಮದಲ್ಲಿಯೇ ಹೇಳುತ್ತೇನೆ. ಕೆಂಪು, ಹಳದಿ, ಚಂದ್ರದಬಣ್ಣ, ಎಳಗೆಂಪು, ಬಿಳುಪು ಈ ಬಣ್ಣದ ರಂಗೋಲಿಗಳು ದೇವರಿಗೆ ಇಷ್ಟವಾದುವು.

೧೯. ಈ ಐದೈದುವರ್ಣಗಳ ರಂಗವಲ್ಲಿಗಳನ್ನು ವಿಧವಿಧವಾದ ಅನುಕ್ರಮದಲ್ಲಿ ಹಾಕಬಹುದು. ಕೆಂಪು, ಹಳದಿ, ಚಂದ್ರದಬಣ್ಣ, ಎಳಗೆಂಪು, ಬಿಳುಪು ಇದೊಂದು ಕ್ರಮ. ಧರ್ಮದೇವತೆಗೆ ಹಳದಿ, ಬಿಳಿ ಈ ಬಣ್ಣಗಳೂ, ಪೂಷನಿಗೆ ಕೆಂಪು ಬಣ್ಣವೂ ಪ್ರಿಯವಾದುವು. ಶಾಮಲ, ಬಿಳುಪು, ಕಪ್ಪು, ಹಳದಿ, ಬಿಳಿಯದು ಇದೊಂದು ಕ್ರಮ.

೨೦-೨೧. ಹಳದಿ, ಭ್ರಮರದಬಣ್ಣ, ಪುನಃ ಬಿಳುಪು, ಕಪ್ಪು, ಮತ್ತೆ ಬಿಳುಪು ಇದೊಂದು ಕ್ರಮ. ಕೆಂಪು, ಬಿಳುಪು, ಚಂದ್ರದಬಣ್ಣ, ಕಪ್ಪು, ಕೆಂಪು ಇದು ಒಂದು ಪ್ರಕಾರ. ಧೂಮ್ರಮಿಶ್ರವಾದ ಹಳದಿ, ಕೆಂಪುಮಿಶ್ರವಾದ ಹಳದಿ, ಬಿಳುಪು, ಕಪ್ಪು, ಶ್ಯಾಮವರ್ಣ ಈ ಅನುಕ್ರಮುವು ಮತ್ತೊಂದು ತರಹ. ಕೆಂಪುಬಣ್ಣದ ಜೊತೆಗೆ ಇತರ ವರ್ಣಗಳನ್ನು ಬೇರೆಬೇರೆ ಪ್ರಮಾಣದಲ್ಲಿ ಮಿಶ್ರಮಾಡುವುದರಿಂದ ಮೂವತ್ತೆರಡು ಬಗೆಯ ವರ್ಣಗಳಾಗುವುವು.

೨೨-೨೩. ಬಿಳುಪು, ಕೆಂಪು, ಮತ್ತೆ ಬಿಳುಪು, ಚಂದ್ರದಬಣ್ಣ, ಪಾಂಡುರ ವರ್ಣ, (ಎಳಗೆಂಪು) ಕುಂಕುಮದ ಕೆಂಪು, ಎಣ್ಣೆಗೆಂಪು, ಹಳದಿ, ನಸುಹಳದಿ, ಬಿಳುಪು,

**ಶುಕ್ಲಪೀತಂ ಚ ಶ್ವೇತಂ ಚ ಗೌರಂ ಚೇತ್ಯಷ್ಟವರ್ಣಕಂ ।**
**ಪೀತಂ ರಕ್ತಂ ಚ ಶ್ಯಾಮಂ ಚ ಗೌರಂ ಚೇತಿ ಚತುಷ್ಟಯಂ ॥ ೨೩ ॥**

**ಧರಣೀಸದನಂ ವಾದ್ಯೇ ಶಂಭುವರ್ಣಾದಿ ಪ್ರಕ್ರಮಾತ್ ।**
**ಶುಕ್ಲೇನ ರಂಜಯೇದ್ದ್ವಾರಾ ಪುರದ್ವಾರಂ ಚ ಮಧ್ಯಮೇ ॥ ೨೪ ॥**

**ಮಧ್ಯೇಂತೇ ಊನಪಂಚಾಶತ್ಸರ್ವಂ ಚ ವಾಸ್ತುಕರ್ಮಣಿ ।**
**ಚತ್ವಾರಿಂಶದ್ದ್ವಾರಯುತಂ ಗೃಹೆ ದೇವಕುಲೇಽಪಿ ಚ ॥ ೨೫ ॥**

**ಮಹಾಕೂಪೇ ತಥಾ ಶ್ವೇತೋ ಅನ್ಯತ್ರಾಪಿ ಪ್ರಶಸ್ಯತೆ ।**
**ಸುಲಿಪ್ತೇ ಚ ಶುಚೌ ದೇಶೇ ಸಾರ್ಧಹಸ್ತಪ್ರಮಾಣತಃ ॥ ೨೬ ॥**

**ದಶ ಪೂರ್ವಾಯತಾ ರೇಖಾ ದಶಚೈವೋತ್ತರಾಯತಾಃ ।**
**ಏಕಾದಶೀ ಪದಂ ಕುರ್ಯಾದ್ರೇಖಾಭಿಃ ಪದಕೇನ ತು ॥ ೨೭ ॥**

---

ಗೌರವರ್ಣ ಎಂದು ಎಂಟುವರ್ಣಗಳನ್ನು ಅನುಕ್ರಮದಲ್ಲಿ ಜೋಡಿಸುವುದು ಅಷ್ಟವರ್ಣ ಎನ್ನಿಸಿಕೊಳ್ಳುವುದು. ಹಳದಿ, ಕೆಂಪು, ಕಪ್ಪು, ಬಿಳುಪು, ಎಂಬ ಈ ನಾಲ್ಕೂ ಮುಖ್ಯವರ್ಣಗಳು.

೨೪. ಧರಣೀಸದನಸ್ಥಾನ ಮೊದಲುಗೊಂಡು ಶಂಭು (ಸೋಮ) ಸ್ಥಾನದ ವರೆಗೆ ಅನುಕ್ರಮವಾಗಿ ಈ ಬಣ್ಣದ ರಂಗವಲ್ಲಿಗಳನ್ನುಪಯೋಗಿಸಬೇಕು. ದ್ವಾರಸ್ಥಾನಗಳಿಗೆ ಬಿಳಿಯಬಣ್ಣ, ಮುಂಭಾಗದ ದ್ವಾರ, ಮಧ್ಯಭಾಗ ಕೊನೆಯಭಾಗ ಇವುಗಳಿಗೆ ಮಧ್ಯಮತರಹದ ಬಣ್ಣಗಳನ್ನು ಹಾಕಬೇಕು.

೨೫. ಅಂತು ಒಟ್ಟು ನಲವತ್ತೊಂಭತ್ತು ದೇವತೆಗಳನ್ನು ಪ್ರತಿಷ್ಠಾಪನಕರ್ಮದಲ್ಲಿ ವಾಸ್ತುಚಕ್ರದಲ್ಲಿ ಗುರುತಿಸಬೇಕು. ಮನೆಗಳು ದೇವಾಲಯ ಇವುಗಳ ವಾಸ್ತುಚಕ್ರದಲ್ಲಿ ನಲವತ್ತು ಪದಕ (ಮನೆ) ಗಳನ್ನು ಗುರುತಿಸಬಹುದು.

೨೬-೨೭. ದೊಡ್ಡಭಾವಿಯನ್ನು ಪ್ರತಿಷ್ಠಿಸುವಾಗಲೂ, ಇತರ ಸನ್ನಿವೇಶಗಳಲ್ಲೂ ಬಿಳಿಯ ರಂಗವಲ್ಲಿಯಿಂದ ಚಿತ್ರಿಸುವುದು ಪ್ರಶಸ್ತವು. ಚೆನ್ನಾಗಿ ಸಾರಿಸಿದ ಪರಿಶುದ್ಧವಾದ ಸ್ಥಳದಲ್ಲಿ ಒಂದೂವರೆಹಸ್ತ ಅಳತೆಯ ಚತುರಸ್ರದಲ್ಲಿ ಪೂರ್ವಾಭಿಮುಖವಾಗಿ ಹತ್ತುರೇಖೆ, ಉತ್ತರಾಭಿಮುಖವಾಗಿ ಹತ್ತುರೇಖೆಗಳನ್ನು ಹಾಕಿ ಚತುರಸ್ರದಲ್ಲಿ ಹನ್ನೊಂದುಪದಕವು ಪ್ರತಿಸಾಲಿನಲ್ಲಿಯೂ ಬರುವಂತೆ ಮಾಡಬೇಕು.

**ಸರ್ವವಾಸ್ತುವಿಭಾಗೇನ ವಿಜ್ಞೇಯಾ ನವಕಾ ನವ ।**
**ಪದಸ್ಥಾನ್ ಪೂಜಯೇದ್ದೇವಾಂಸ್ತ್ರಿಂಶತ್ಪಂಚಾಶದೇವ ತು ॥ ೨೮ ॥**

**ದ್ವಾತ್ರಿಂಶದ್ಬಾಹ್ಯತಃಪೂಜ್ಯಾಃ ಪೂಜ್ಯಾಗಾರೇ ತ್ರಯೋದಶ ।**
**ಮಧ್ಯೇ ನವ ಪದೇ ಬ್ರಹ್ಮಾ ತಸ್ಯಾಷ್ಟೌ ಸಮೀಪಗಾಃ ॥ ೨೯ ॥**

**ಚತುರ್ದಿಕ್ಷು ಷಟ್ಪದಂ ತು ತ್ರಿಪದಂ ತು ಚತುಷ್ಪದಂ ।**
**ಪದೈಕಂ ತು ಚತುಷ್ಕೋಣೇ ಏಷ ವಾಸ್ತುವಿನಿರ್ಣಯಃ ॥**
**ಚರಕ್ಯಾದಿ ತತೋ ಹಿತ್ವಾ ಚತ್ವಾರಿಂಶಚ್ಚ ಪಂಚಕಂ ॥ ೩೦ ॥**

**ಅಪರಂ ಮಂಡಲಂ ವಕ್ಷ್ಯೇ ಯಥಾವದನುಪೂರ್ವಶಃ ।**
**ನವರೇಖಾಪ್ರಯೋಗೇಣ ನವಕೋಷ್ಠಾನ್ ಪ್ರಕಲ್ಪಯೇತ್ ॥ ೩೧ ॥**

---

೨೮. ಎಲ್ಲಾ ವಾಸ್ತುಚಕ್ರರಚನೆಯಲ್ಲೂ ಪ್ರತಿಪಾರ್ಶ್ವದಲ್ಲೂ ಒಂಭತ್ತು ವಿಭಾಗಗಳಿರತಕ್ಕದ್ದು. ಆ ಹೊರಸುತ್ತಿನ ಪದಕಗಳಲ್ಲಿ ಆಯಾವಾಸ್ತುಚಕ್ರಾನುಸಾರ, ಮೇಲೆ ಹೇಳಿದಂತೆ ಮೂವತ್ತುದೇವತೆಗಳು, ಐವತ್ತುದೇವತೆಗಳು, ಮೂವತ್ತೆರಡು ದೇವತೆಗಳನ್ನು ಗುರುತಿಸಬೇಕು.

೨೯. ಬಳಗಿನ ಪದಕಗಳಲ್ಲಿ ಹದಿಮೂರು ದೇವತೆಗಳನ್ನು ಗುರುತಿಸಬೇಕು. ಮಧ್ಯೆ ಇರುವ ಚೌಕದ ಒಂಭತ್ತುಭಾಗದಲ್ಲಿ ಮಧ್ಯೆ ಬ್ರಹ್ಮನನ್ನೂ ಸುತ್ತಲೂ ಅವನ ಸಮೀಪಸ್ಥರಾದ ಎಂಟುಜನ ದೇವತೆಗಳನ್ನೂ ಗುರುತಿಸಬೇಕು.

೩೦. ಪೂರ್ವ ಮೊದಲಾದ ನಾಲ್ಕುದಿಕ್ಕುಗಳಲ್ಲೂ, ಈಶಾನ್ಯಾದಿ ನಾಲ್ಕು ಕೋಣಗಳಲ್ಲೂ; ಆರು ಮನೆಗಳುಳ್ಳದ್ದು, ಮೂರುಮನೆಗಳುಳ್ಳದ್ದು, ನಾಲ್ಕುಪದಕ (ಮನೆ) ಉಳ್ಳದ್ದು, ಅಥವಾ ಒಂದೇಮನೆಯುಳ್ಳದ್ದು ಇಂಥ ಚೌಕಗಳಿರಬಹುದು. ಇಂತಹ ಸಂದರ್ಭದಲ್ಲಿ ಚರಕ್ಯಾದಿಗಳನ್ನು ಬಿಟ್ಟುಬಿಟ್ಟು ನಲವತ್ತೈದುದೇವತೆಗಳನ್ನು ಮಾತ್ರ ಗುರುತಿಸಬೇಕು.

೩೧. ಹಿಂದೆ ಹೇಳಿದ ಕ್ರಮವನ್ನೇ ಅನುಸರಿಸಿ ಒಂಭತ್ತು ರೇಖಾ ವಿನ್ಯಾಸ ದಿಂದ ಕೂಡಿರುವ ಇನ್ನೊಂದು ಪ್ರಕಾರದ ವಾಸ್ತುಮಂಡಲ ರಚನಾಕ್ರಮವನ್ನು ಈಗ ಹೇಳುತ್ತೇನೆ.

ದ್ವಿಚತುಷ್ಕೋಷ್ಟಕೈರ್ದಿಕ್ಷು ಯುಜೀತಾರ್ಯಮಣಂ ತತಃ ।
ವಿವಸ್ವಂತಂ ತತೋ ಮಿತ್ರಂ ಮಹೀಧರಮತಃ ಪರಂ ॥ ೩೨ ॥

ಕೋಣೇಷು ಕೋಷ್ಟದ್ವಂದ್ವೇಷು ಬಾಹ್ಯಾದಿಪರಿಕೀರ್ತಿತಂ ।
ಸಾವಿತ್ರಂ ಸವಿತಾರಂ ಚ ಶಕ್ರಮಿಂದ್ರಜಯಂ ಪುನಃ ॥ ೩೩ ॥

ರುದ್ರಂ ರುದ್ರಜಯಂ ಚೈವ ಅಪ್‍ಶ್ವೇತಂ ಚಾಪವತ್ಸಕಂ
ಶರ್ವಂ ಚೈವ ಗುಹಶ್ಚಾಥ ಮಿತ್ರೋ ಜೃಂಭಕನೋವ ಚ
ಪಿಲಿಪಿಚ್ಛಂ ಚ ಚರಕೀಂ ವಿದಾರೀಂ ಪೂತನಾಂ ತಥಾ ॥ ೩೪ ॥

ಕ್ರಮಾದೀಶಾನಪರ್ಜನ್ಯೌ ಜಯಂತಃ ಶಕ್ರಭಾಸ್ಕರೌ ।
ಸತ್ಯೋ ವೃಷಾಂತ ರಿಕ್ಷಂ ಚ ದಿಶಿ ಪ್ರಾಚ್ಯಾಮವಸ್ಥಿತಾಃ ॥ ೩೫ ॥

ಅಗ್ನಿಃ ಪೂಷಾ ಚ ವಿತಥೋ ಯಮಶ್ಚ ಗೃಹರಕ್ಷಕಃ ।
ಗಂಧರ್ವೋ ಭೃಂಗರಾಜಶ್ಚ ಮೃಗೋ ದಕ್ಷಿಣಮಾಶ್ರಿತಾಃ ॥ ೩೬ ॥

---

೩೨-೩೩. ಒಂದು ಚತುರಸ್ರದ ಹೊರಸುತ್ತಿನಲ್ಲಿ ನಾಲ್ಕುದಿಕ್ಕಿನ ಬಾಹುಗಳೂ ಒಂಭತ್ತು ಭಾಗವಾಗುವಂತೆ ರೇಖೆಗಳನ್ನು ಎಳೆದು ಒಂಭತ್ತು ಪದಕಗಳಾಗುವಂತೆ ಮಾಡಬೇಕು. ಅದರೊಳಗೆ ಮಧ್ಯದ ಚೌಕದ ನಾಲ್ಕುದಿಕ್ಕಿನಲ್ಲಿಯೂ ಇರುವ ಚೌಕಗಳಲ್ಲಿ ಎಂದರೆ ಪೂರ್ವದಿಕ್ಕಿನ ಚೌಕದಲ್ಲಿ ಅರ್ಯಮಾ, ದಕ್ಷಿಣದಿಕ್ಕಿನ ಚೌಕದಲ್ಲಿ ವಿವಸ್ವಾನ್, ಪಶ್ಚಿಮದಿಕ್ಕಿನದರಲ್ಲಿ ಮಿತ್ರ, ಉತ್ತರದಿಕ್ಕಿನದರಲ್ಲಿ ಮಹೀಧರ ಈ ದೇವತೆಗಳನ್ನು ಗುರುತಿಸಬೇಕು.

೩೪–೩೫. ನಾಲ್ಕುಕೋಣದ ಹೊರಗಡೆಯಲ್ಲೂ ನಾಲ್ಕುಚೌಕಗಳನ್ನು ರಚಿಸಿ ಪ್ರತಿಯೊಂದನ್ನೂ ನಾಲ್ಕುಭಾಗಮಾಡಬೇಕು. ಅದರಲ್ಲಿ ಆಗ್ನೇಯದಿಂದ ಆರಂಭಿಸಿ ಕೋಣಗಳೆರಡರಲ್ಲಿ ಸಾವಿತ್ರ, ಸವಿತಾರ, ಶಕ್ರ, ಇಂದ್ರಜಯ, ರುದ್ರ, ರುದ್ರಜಯ, ಅಪ್‍ಶ್ವೇತ, ಆಪವತ್ಸ, ಇವರುಗಳನ್ನೂ ; ಅದೇ ನಾಲ್ಕು ಚೌಕದ ಮಿಕ್ಕ ಪದಕಗಳಲ್ಲಿ ಶರ್ವ, ಗುಹ, ಮಿತ್ರ, ಜೃಂಭಮಾಣ, ಪಿಲಿಪಿಚ್ಛ, ಚರಕಿ, ವಿದಾರಿಕಾ, ಪೂತನಾ ಇವರನ್ನೂ ಗುರುತಿಸಬೇಕು. ಪೂರ್ವದಕಡೆಯ ಹೊರಸುತ್ತಿನ ಪದಕಗಳಲ್ಲಿ ಈಶಾನ, ಪರ್ಜನ್ಯ, ಜಯಂತ, ಶಕ್ರ, ಭಾಸ್ಕರ, ಸತ್ಯ, ವೃಷ, ಅಂತರಿಕ್ಷ ಇವರುಗಳನ್ನು ಗುರುತಿಸಬೇಕು.

೩೬. ದಕ್ಷಿಣದಿಕ್ಕಿನ ಹೊರಸುತ್ತಿನ ಪದಕಗಳಲ್ಲಿ ಅಗ್ನಿ, ಪೂಷಾ, ವಿತಥ, ಯಮ, ಗೃಹರಕ್ಷ, ಗಂಧರ್ವ, ಭೃಂಗರಾಜ, ಮೃಗ ಇವರುಗಳನ್ನು ಗುರುತಿಸಬೇಕು.

**ನಿಋುಋುತಿರ್ದೌವಾರಿಕಶ್ಚ ಸುಗ್ರೀವವರುಣೌ ತತಃ ।**
**ಪುಷ್ಪದಂತಾಸುರೌ ಶೇಷರೋಗೌ ಪ್ರತ್ಯಗ್ದಿಶಿ ಸ್ಥಿತಾಃ ॥ ೩೭ ॥**

**ವಾಯುಃ ಘ್ರಾಣಶ್ಚ ನಾಗಶ್ಚ ಸೋಮೋ ಭಲ್ಲಾಟ ಏವಚ ।**
**ಮುದ್ಗಲಾಖ್ಯೋ ದಿತ್ಯದಿತೀ ಕುಬೇರಸ್ಯ ದಿಶಿ ಸ್ಥಿತಾಃ ॥ ೩೮ ॥**

**ಮಿಲಿತ್ವಾ ಚ ತ್ರಿಪಂಚಾಶತ್ತೇಭ್ಯಃ ಪೂರ್ವೇ ಬಲಿಂ ಹರೇತ್ ।**
**ಪಿಣ್ಯಾಕೈಃ ಪರಮಾನ್ನೈರ್ವಾ ಪೂರ್ವೋಕ್ತೈರ್ವಾ ಯಥಾಕ್ರಮಾತ್ ॥ ೩೯ ॥**

**ರಕ್ತಮರ್ಯಮಣಂ ಧ್ಯಾಯೇಚ್ಚತುರ್ಭಿರ್ಬಾಹುಭಿರ್ಯುತಂ ।**
**ಶ್ವೇತಾಶ್ವವಾಹನಂ ದಿವ್ಯಂ ಕಿರೀಟೈಃ ಸ್ವೈರ್ವಿಭೂಷಿತಂ ॥ ೪೦ ॥**

**ಆಕೃಷ್ಣೇನೇತಿ ಮಂತ್ರಸ್ಯ ಸ್ವರ್ಣಋುಷಿಃ ಜಗತೀಛಂದಃ ।**
**ಸವಿತ್ರರ್ಯಮಪ್ರೀತಯೇ ವಿನಿಯೋಗಃ ॥ ೪೧ ॥**

---

೩೭. ಪಶ್ಚಿಮದಕಡೆಯ ಹೊರಸುತ್ತಿನ ಪದಕಗಳಲ್ಲಿ ನಿಋುಋುತಿ, ದೌವಾರಿಕ ಸುಗ್ರೀವ, ವರುಣ, ಪುಷ್ಪದಂತ, ಅಸುರ, ಶೇಷ, ರೋಗ ಇವರುಗಳನ್ನು ಗುರುತಿಸಬೇಕು.

೩೮. ಉತ್ತರದಕಡೆಯ ಹೊರಸುತ್ತಿನಲ್ಲಿ ವಾಯು, ಘ್ರಾಣ, ನಾಗ, ಸೋಮ ಭಲ್ಲಾಟ, ಮುದ್ಗಲ, ದಿತಿ, ಅರತಿ, ಇವರುಗಳನ್ನು ಗುರುತಿಸಬೇಕು.

೩೯. ಈ ರೀತಿ ಐವತ್ತುಮೂರು ದೇವತೆಗಳನ್ನು ಒಟ್ಟುಗೂಡಿಸಿ ಹಿಂದೆ ಹೇಳಿದಂತೆ ಕ್ರಮವಾಗಿ ಪೂಜಿಸಿ, ಈ ಕ್ರಮಾನುಸರಣದಿಂದಲೇ ಹಿಂಡಿ, ಪಾಯಸ ಇವುಗಳಲ್ಲೊಂದರಿಂದ ಬಲಿಗಳನ್ನು ಸಮರ್ಪಿಸಬೇಕು.

೪೦. ಅರ್ಯಮಾದೇವನನ್ನು ಅರ್ಚಿಸುವಾಗ ಚತುರ್ಬಾಹುಯುಕ್ತನೂ, ಬಿಳಿಯ ಕುದುರೆಗಳನ್ನು ವಾಹನವಾಗಿ ಉಳ್ಳವನೂ, ಸ್ವಕೀಯವಾದ ದಿವ್ಯಕಿರೀಟದಿಂದ ಭೂಷಿತನೂ ಆಗಿರುವನೆಂದು ಧ್ಯಾನಮಾಡಬೇಕು

೪೧. 'ಆಕೃಷ್ಣೇನ' ಎಂಬ ಮಂತ್ರಕ್ಕೆ ಸ್ವರ್ಣನೆಂಬವನೇ ಋುಷಿ, ಜಗತೀ ಎಂಬುದು ಛಂದಸ್ಸು, ಅರ್ಯಮನೇ ದೇವತೆ, ಸವಿತೃವಿನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

ವಿವಸ್ವಂತಂ ಪೀತವರ್ಣಂ ಪೀತಾಂಬರಧರಂ ಶುಭಂ ।
ಮೇಷಸ್ಥಂ ಚ ಮಹಾಕಾಯಂ ದೇವಗಂಧರ್ವಸೇವಿತಂ ॥ ೪೨ ॥

ಏತಾತವಿಷಂತೀತಿ ಮಂತ್ರಸ್ಯ ಕರ್ದಮಋಷಿಃ ಪಂಕ್ತಿಶ್ಛಂದಃ ।
ಕಮಲಾದೇವತಾ ವಿವಸ್ವತ್ಪ್ರೀತಯೇ ವಿನಿಯೋಗಃ ॥ ೪೩ ॥

ಮಿತ್ರಂ ಧ್ಯಾಯೇಚ್ಛುಕ್ಲವರ್ಣಂ ಶ್ವೇತಹಂಸೋಪರಿಸ್ಥಿತಂ ।
ತ್ರಿನೇತ್ರಂ ತ್ರಿಭುಜಂ ಚೈವ ಶ್ವೇತಾಂಬರಧರಂ ಶುಭಂ ॥ ೪೪ ॥

ಕಯಾನಶ್ವೀತಿ ಮಂತ್ರಸ್ಯ ಜಯಂತಋಷಿರ್ಗಾಯತ್ರೀಛಂದಃ ।
ಶಂಕರೋದೇವತಾ ಮಿತ್ರಪ್ರೀತಯೇ ವಿನಿಯೋಗಃ ॥ ೪೫ ॥

ಪ್ರೀತಂ ಮಹೀಧರಂ ಧ್ಯಾಯೇದ್ವೃಷಭೋಪರಿ ಸಂಸ್ಥಿತಂ ।
ತ್ರಿಭುಜಂ ಪದ್ಮಹಸ್ತಂ ಚ ವ್ಯಾಲಯಜ್ಞೋಪವೀತಿನಂ ॥ ೪೬ ॥

---

೪೨. ಅನಂತರ ವಿವಸ್ವಂತನನ್ನು ಅರ್ಚಿಸುವಾಗ ಬಿಳಿಯಬಣ್ಣವುಳ್ಳವನೂ, ಶುಭಕರನೂ, ಪೀತವರ್ಣದ ವಸ್ತ್ರವನ್ನು ಧರಿಸಿರುವವನೂ, ಮೇಷವಾಹನನೂ, ದಪ್ಪ ಶರೀರವುಳ್ಳವನೂ, ದೇವತೆಗಳಿಂದಲೂ ಗಂಧರ್ವರಿಂದಲೂ ಸೇವೆಮಾಡಿಸಿಕೊಳ್ಳುವವನೂ ಆಗಿರುವನೆಂದು ಧ್ಯಾನಮಾಡಬೇಕು.

೪೩. 'ಏತಾತವಿಷಂತೀ' ಎಂಬ ಮಂತ್ರಕ್ಕೆ ಕರ್ದಮನು ಋಷಿ; ಪಂಕ್ತಿ ಎಂಬುದು ಛಂದಸ್ಸು; ಕಮಲಾ ಎಂಬುದೇ ದೇವತೆ; ವಿವಸ್ವಂತನ ಪ್ರೀತ್ಯರ್ಥವಾಗಿ ಈ ಮಂತ್ರವು ವಿನಿಯೋಗವಾಗತಕ್ಕದ್ದು.

೪೪. ಅನಂತರ ಮಿತ್ರನನ್ನು ಪೂಜಿಸತೊಡಗಿ; ಬಿಳಿಯಬಣ್ಣವುಳ್ಳವನೂ, ಬಿಳಿಯಹಂಸವನ್ನೇರಿರುವವನೂ, ಬಿಳಿಯವಸ್ತ್ರವನ್ನು ಧರಿಸಿರುವವನೂ, ಮೂರು ಕಣ್ಣು ಮೂರುಭುಜವುಳ್ಳವನೂ, ಶುಭಕರನೂ ಆಗಿರುವನೆಂದು ಧ್ಯಾನಮಾಡಬೇಕು.

೪೫. 'ಕಯಾನಶ್ಚಿತ್ರ' ಎಂಬ ಮಂತ್ರಕ್ಕೆ ಜಯಂತನೇ ಋಷಿ, ಗಾಯತ್ರೀ ಎಂಬುದು ಛಂದಸ್ಸು, ಶಂಕರನು ದೇವತೆ, ಮಿತ್ರನ ಪ್ರೀತ್ಯರ್ಥವಾಗಿ ಈ ಮಂತ್ರವು ವಿನಿಯೋಗವಾಗಬೇಕು.

೪೬. ಅನಂತರ ಮಹೀಧರನನ್ನು ಅರ್ಚಿಸತೊಡಗಿ; ವೃಷಭವಾಹನನೂ, ತ್ರಿಭುಜವುಳ್ಳವನೂ, ಹಸ್ತದಲ್ಲಿ ಪದ್ಮವನ್ನು ಹಿಡಿದವನೂ, ಸರ್ಪವನ್ನೇ ಯಜ್ಞೋಪವೀತವಾಗಿ ಧರಿಸಿರುವವನೂ, ಸುಪ್ರೀತನೂ ಆದವನೆಂದು ಧ್ಯಾನಮಾಡಬೇಕು.

ತ್ರ್ಯಂಬಕಮಿತಿ ಮಂತ್ರಸ್ಯ ಗರ್ಗಋಷಿಃ ತ್ರಿಷ್ಟುಪ್‌ಛಂದಃ ।
ಹರೋದೇವತಾ ಮಹೀಧರಪ್ರೀತಯೇ ವಿನಿಯೋಗಃ ॥ ೪೭ ॥

ಸಾವಿತ್ರೀಂ ಶ್ವೇತವರ್ಣಾಂ ಚ ಸರ್ವಲಕ್ಷಣಸಂಯುತಾಂ ।
ದ್ವಿಭುಜಾಂ ಪೀತವಸ್ತ್ರಾಂ ಚ ಶ್ವೇತಸಿಂಹಾಸನೇ ಸ್ಥಿತಾಂ ॥ ೪೮ ॥

ರಕ್ತಾಂಬರಧರಾಂ ರಕ್ತಾಂ ರಕ್ತಮಾಲ್ಯೋಪಶೋಭಿತಾಂ ॥ ೪೯ ॥

ತದ್ವರ್ಷಇತಿ ಮಂತ್ರಸ್ಯ ಗೌತಮಋಷಿಃ ವಿರಾಟ್‌ಛಂದಃ ।
ಸೂರ್ಯೋದೇವತಾ ಸವಿತೃಪ್ರೀತಯೇ ವಿನಿಯೋಗಃ ॥ ೫೦ ॥

ಶಕ್ರಂ ಧ್ಯಾಯೇತ್ಪೀತವರ್ಣಂ ಶುಕ್ಲಕ್ಯೈರಾವತಸ್ಥಿತಂ ।
ಸರ್ವದೇವೈಃ ಸ್ತೂಯಮಾನಂ ದ್ವಿಭುಜಂ ಪೀತವಾಸಸಂ ॥ ೫೧ ॥

---

೪೭. 'ತ್ರ್ಯಂಬಕಂ' ಎಂಬ ಮಂತ್ರಕ್ಕೆ ಗರ್ಗನೆಂಬುವನು ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ಹರನೇ ದೇವತೆ, ಮಹೀಧರಪ್ರೀತ್ಯರ್ಥವಾಗಿ ಈ ಮಂತ್ರವನ್ನು ಹೇಳಬೇಕು.

೪೮. ಅನಂತರ ಸಾವಿತ್ರಿಯನ್ನು ಅರ್ಚಿಸುವಾಗ ಬಿಳಿಯಬಣ್ಣವುಳ್ಳವಳೂ, ಸಮಸ್ತ ಶುಭಲಕ್ಷಣಗಳಿಂದ ಕೂಡಿದವಳೂ, ಎರಡು ಭುಜಗಳುಳ್ಳವಳೂ, ಹಳದಿಯ ವಸ್ತ್ರವನ್ನು ಧರಿಸಿರುವವಳೂ, ಶ್ವೇತವರ್ಣದ ಸಿಂಹಾಸನದಲ್ಲಿ ಮಂಡಿಸಿರುವವಳೂ ಆಗಿರುವಳೆಂದು ಧ್ಯಾನಿಸಬೇಕು.

೪೯. ಈ ಸಾವಿತ್ರಿಯು ಕೆಂಪುಬಣ್ಣವಾಗಿರುವಳೆಂದೂ, ಕೆಂಪುವಸ್ತ್ರವನ್ನು ಧರಿಸಿರುವಳೆಂದೂ, ಕೆಂಪುಹೂಮಾಲಿಕೆಯನ್ನು ಧರಿಸಿ ಶೋಭಿಸುವಳೆಂದೂ ಹೇಳುವುದು ಕೆಲವರ ಮತ.

೫೦. 'ತದ್ವರ್ಷ' ಎಂಬ ಮಂತ್ರದ್ರಷ್ಟನು ಗೌತಮಋಷಿ, ವಿರಾಟ್ ಎಂಬುದು ಛಂದಸ್ಸು, ಸೂರ್ಯನೇ ದೇವತೆ. ಸವಿತೃವಿನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೫೧. ಅನಂತರ ಶಕ್ರನನ್ನು ಪೂಜಿಸುವಾಗ; ಹಳದಿಯಬಣ್ಣದ ದೇಹವುಳ್ಳವನೂ, ಬಿಳಿಯ ಐರಾವತವಾಹನನೂ, ಎರಡುಭುಜಗಳುಳ್ಳವನೂ, ಹಳದಿಯವಸ್ತ್ರ

ತ್ರಾತಾರಮಿತಿ ಮಂತ್ರಸ್ಯ ಭಾರ್ಗವಋಷಿಃ ತ್ರಿಷ್ಟುಪ್‌ಛಂದಃ ।
ನರಸಿಂಹೋ ದೇವತಾ ಇಂದ್ರಜಯಪ್ರೀತಯೇ ವಿನಿಯೋಗಃ ॥ ೫೨ ॥

ರುದ್ರಂ ಧ್ಯಾಯೇಚ್ಛ್ವೇತವರ್ಣಂ ವೃಷಭಾರೂಢವಿಗ್ರಹಂ ।
ನಾಗಯಜ್ಞೋಪವೀತಂ ಚ ಸರ್ವಲಕ್ಷಣಸಂಯುತಂ ॥ ೫೩ ॥

ನಮಸ್ತೇ ರುದ್ರೇತಿ ಮಂತ್ರಸ್ಯ ಅಘೋರಋಷಿಃ ಗಾಯತ್ರೀಛಂದಃ ।
ತ್ರ್ಯಂಬಕೋದೇವತಾ ರುದ್ರಪ್ರೀತಯೇ ವಿನಿಯೋಗಃ ॥ ೫೪ ॥

ರಕ್ತಂ ರುದ್ರಜಯಂ ಧ್ಯಾಯೇದ್ರಕ್ತಪದ್ಮೋಪರಿ ಸ್ಥಿತಂ ।
ರಕ್ತಶ್ಯಾಮಾಂಬರಧರಂ ದ್ವಿಭುಜಂ ರಕ್ತವಾಸಸಂ ॥ ೫೫ ॥

---

ವನ್ನು ಧರಿಸಿರುವವನೂ, ಸಮಸ್ತದೇವತೆಗಳಿಂದ ಸ್ತುತಿಮಾಡಿಸಿಕೊಳ್ಳತಕ್ಕವನೂ ಎಂದು ಧ್ಯಾನಮಾಡಬೇಕು.

೫೨. 'ತ್ರಾತಾರಮಿಂದ್ರ' ಎಂಬ ಮಂತ್ರಕ್ಕೆ ಭಾರ್ಗವನು ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ನರಸಿಂಹನು ದೇವತೆ, ಇಂದ್ರಜಯನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೫೩. ಬಳಿಕ ರುದ್ರನನ್ನು ಪೂಜಿಸುವಾಗ ಶುಭ್ರವಾದ ಮೈಬಣ್ಣವುಳ್ಳವನೂ, ವೃಷಭವನ್ನೇರಿ ಕುಳಿತಿರುವವನೂ, ಸರ್ಪವನ್ನೇ ಯಜ್ಞೋಪವೀತವಾಗಿ ಧರಿಸಿದ ವನೂ, ಸಮಸ್ತಲಕ್ಷಣಯುಕ್ತನೂ ಆದವನೆಂದು ಧ್ಯಾನಮಾಡಬೇಕು.

೫೪. 'ನಮಸ್ತೇರುದ್ರ' ಎಂಬ ಮಂತ್ರಕ್ಕೆ ಅಘೋರನು ಋಷಿ, ಗಾಯತ್ರಿಯು ಛಂದಸ್ಸು, ತ್ರ್ಯಂಬಕನೇ ದೇವತೆ, ರುದ್ರಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿ ಯೋಗಮಾಡಬೇಕು.

೫೫. ಅನಂತರ ರುದ್ರಜಯನನ್ನು ಪೂಜಿಸುವಾಗ; ಕೆಂಪಾದ ಮೈಬಣ್ಣವುಳ್ಳ ವನೂ, ಕೆಂಪುಕಮಲದ ಮೇಲೆ ಕುಳಿತಿರುವವನೂ, ಕೆಂಪುವಸ್ತ್ರವನ್ನಾಗಲಿ ಕಪ್ಪುಮಿಶ್ರ ವಾದ ಕೆಂಪುವಸ್ತ್ರವನ್ನಾಗಲಿ ಧರಿಸಿದವನೂ ಎರಡು ಭುಜಗಳುಳ್ಳವನೂ ಆಗಿರುವ ನೆಂದು ಧ್ಯಾನಿಸಬೇಕು.

**ತ್ರ್ಯಂಬಕಮಿತಿ ಮಂತ್ರಸ್ಯ ಪರಮೇಷ್ಠಿ ಋಷಿಃ ಗಾಯತ್ರೀಚ್ಛಂದಃ ।**
**ಮಹೇಶೋ ದೇವತಾ ರುದ್ರಜಯಪ್ರೀತಯೇ ವಿನಿಯೋಗಃ ॥ ೫೬ ॥**

**ಅಪ್‌ಶ್ವೇತಂ ಚ ತತೋ ಧ್ಯಾಯೇದ್ವರಾಭಯಕರಂ ಪರಂ ।**
**ಸರ್ವಲಕ್ಷಣಸಂಪನ್ನಂ ಶ್ವೇತಪದ್ಮೋಪರಿಸ್ಥಿತಂ ॥ ೫೭ ॥**

**ಈಶಾನ ಇತಿಮಂತ್ರಸ್ಯ ಮರೀಚಿಋಷಿಃ ಪಂಕ್ತಿಶ್ಛಂದೋ ।**
**ವಾಯುರ್ದೇವತಾ ಅಪಾಂಪ್ರೀತಯೇ ವಿನಿಯೋಗಃ ॥ ೫೮ ॥**

**ಆಪವತ್ಸಂ ಪೀತವರ್ಣಂ ಮೇಷಾರೂಢಂ ಚತುರ್ಭುಜಂ ।**
**ಪದ್ಮಶಂಖಧರಂ ವಾಮೇ ವರಾಭಯಕರಂ ಪರಂ ॥ ೫೯ ॥**

**ವರುಣಸ್ಯೋತ್ತಂಭನಮಸೀತಿ ಮಂತ್ರಸ್ಯ ನರೋತ್ತಮಋಷಿಃ ।**
**ವಿರಾಟ್‌ಛಂದೋ ವರುಣೋದೇವತಾ ಆಪಯಃಪ್ರೀತಯೇ ವಿನಿಯೋಗಃ ॥ ೬೦ ॥**

---

೫೬. 'ತ್ರ್ಯಂಬಕಂಯಜಾಮಹೆ' ಎಂಬ ಮಂತ್ರಕ್ಕೆ ಪರಮೇಷ್ಠಿಯು ಋಷಿ, ಗಾಯತ್ರಿಯೇ ಛಂದಸ್ಸು, ಪರಮೇಶ್ವರನೇ ದೇವತೆ, ರುದ್ರಜಯನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸತಕ್ಕದ್ದು.

೫೭. ಅನಂತರ ಅಪ್‌ಶ್ವೇತನನ್ನು ಪೂಜಿಸುವಾಗ ಅಭಯ ಮತ್ತು ವರದ ಹಸ್ತ ಉಳ್ಳವನೂ, ಶ್ರೇಷ್ಠನೂ, ಬಿಳಿಯಕಮಲದ ಮೇಲೆ ಕುಳಿತಿರುವವನೂ ಸಮಸ್ತ ಶುಭಲಕ್ಷಣಗಳಿಂದ ಕೂಡಿದವನೂ ಆಗಿರುವನೆಂದು ಧ್ಯಾನಿಸಬೇಕು.

೫೮. 'ಈಶಾನ' ಎಂಬ ಮಂತ್ರಕ್ಕೆ ಮರೀಚಿಯು ಋಷಿ, ಪಂಕ್ತಿ ಎಂಬುದು ಛಂದಸ್ಸು,ವಾಯುವೇ ದೇವತೆ,ಅಪಶ್ವೇತಪ್ರೀತಿಗಾಗಿ ಈ ಮಂತ್ರವನ್ನು ಹೇಳಬೇಕು.

೫೯. ಅನಂತರ ಆಪವತ್ಸನನ್ನು ಪೂಜಿಸತೊಡಗಿ; ಹಳದಿಯಬಣ್ಣದ ದೇಹವುಳ್ಳವನೂ, ಮೇಷವಾಹನನೂ, ನಾಲ್ಕುಭುಜಗಳುಳ್ಳವನೂ, ಎಡಗೈಯಲ್ಲಿ ಶಂಖ, ಬಲಗೈಯಲ್ಲಿ ಪದ್ಮ, ಇನ್ನೊಂದು ವರದಹಸ್ತ, ಮತ್ತೊಂದು ಅಭಯಹಸ್ತವುಳ್ಳವನೂ ಆಗಿರುವನೆಂದು ಧ್ಯಾನಿಸಬೇಕು.

೬೦. 'ವರುಣಸ್ಯೋತ್ತಂಭನಮಸಿ' ಎಂಬ ಮಂತ್ರಕ್ಕೆ ನರೋತ್ತಮನು ಋಷಿ, ವಿರಾಟ್ ಎಂಬುದು ಛಂದಸ್ಸು, ವರುಣನು ದೇವತೆ ಆಪಯನ (ಆಪವತ್ಸನ) ಪ್ರೀತ್ಯರ್ಥವಾಗಿ ಈ ಮಂತ್ರವನ್ನು ಹೇಳಬೇಕು.

**ಕೋಣಸೂತ್ರಸ್ಯೋಭಯತಃ ಶ್ವೇತಕೋಷ್ಠದ್ವಯೇ ಪುನಃ ।**
**ಶರ್ವಂ ಧ್ಯಾಯೇದ್ರಕ್ತವರ್ಣಂ ವೃಷಭೋಪರಿ ಸಂಸ್ಥಿತಂ ॥ ೬೧ ॥**

**ದ್ವಿಭುಜಂ ಚ ತ್ರಿಣೇತ್ರಂ ಚ ಜಟಾಭಾರೋಪಶೋಭಿತಂ ॥ ೬೨ ॥**

**ಮಾಲಾಸ್ವಾಹೇತಿ ಮಂತ್ರಸ್ಯ ಭಾರ್ಗವಋಷಿಃ ಗಾಯತ್ರೀಚ್ಛಂದೋ ।**
**ಮಹಾದೇವೋ ದೇವತಾ ಶರ್ವಪ್ರೀತಯೇ ವಿನಿಯೋಗಃ ॥ ೬೩ ॥**

**ಗುಹಂ ಧ್ಯಾಯೇತ್ಪೀತವರ್ಣಂ ಪೀತಪದ್ಮಾಸನಸ್ಥಿತಂ ।**
**ನಾನಾಭರಣಶೋಭಾಢ್ಯಂ ಕುಂಡಲಾದ್ಯೈರಲಂಕೃತಂ ॥ ೬೪ ॥**

**ಸ ಬೋಧ ಇತಿಮಂತ್ರಸ್ಯ ಅಗಸ್ತಿಋಷಿರ್ಗಾಯತ್ರೀಛಂದೋ ।**
**ಹರೋದೇವತಾ ಗುಹಪ್ರೀತಯೇ ವಿನಿಯೋಗಃ ॥ ೬೫ ॥**

---

೬೧. ಅನಂತರ ಆಗ್ನೇಯಕೋಣಸೂತ್ರದ ಎರಡುಕಡೆಗಳಲ್ಲಿಯೂ ಶ್ವೇತ ಕೋಷ್ಠ (ಪದಕ) ಗಳೆರಡರೊಳಗೆ ಒಂದರಲ್ಲಿ ಶರ್ವನನ್ನು ಪೂಜಿಸುವವನಾಗಿ ಜಟಾ ಭಾರದಿಂದ ಶೋಭಿಸತಕ್ಕವನೂ, ರಕ್ತವರ್ಣನೂ, ವೃಷಭವಾಹನನೂ ಎರಡು ಭುಜ ಗಳುಳ್ಳವನೂ, ತ್ರೀನೇತ್ರಗಳುಳ್ಳವನೂ ಆಗಿರುವನೆಂದು ಧ್ಯಾನಿಸಬೇಕು.

೬೩. 'ಮಾಲಾಸ್ವಾಹಾ' ಎಂಬ ಮಂತ್ರಕ್ಕೆ ಭಾರ್ಗವನು ಋಷಿ,ಗಾಯತ್ರಿಯು ಛಂದಸ್ಸು, ಮಹಾದೇವನೇ ದೇವತೆ, ಶರ್ವನಪ್ರೀತ್ಯರ್ಥವಾಗಿ ಈ ಮಂತ್ರವು ವಿನಿ ಯೋಗವಾಗಬೇಕು.

೬೪. ಆ ಬಳಿಕ ಇನ್ನೊಂದು ಶ್ವೇತಕೋಷ್ಠದಲ್ಲಿ ಗುಹನನ್ನು ಪೂಜಿಸುವ ನಾಗಿ, ಹೊಂಬಣ್ಣದ ದೇಹವುಳ್ಳವನೂ, ಹಳದಿಯ ಪದ್ಮದಮೇಲೆ ಕುಳಿತಿರುವವನೂ, ಬಗೆಬಗೆಯ ಆಭರಣಗಳನ್ನು ಧರಿಸಿ ಶೋಭಿಸತಕ್ಕವನೂ, ಕುಂಡಲ ಮೊದಲಾದುವು ಗಳಿಂದ ಅಲಂಕೃತನೂ ಆಗಿರುವನೆಂದು ಧ್ಯಾನಿಸಬೇಕು.

೬೫. 'ಸಬೋಧ' ಎಂಬ ಮಂತ್ರಕ್ಕೆ ಅಗಸ್ತಿಯು ಋಷಿ, ಗಾಯತ್ರಿಯು ಛಂದಸ್ಸು, ಹರನೇ ದೇವತೆ, ಗುಹಪ್ರೀತಿಗಾಗಿ ಈ ಮಂತ್ರವನ್ನು ಹೇಳಬೇಕು.

**ಅರ್ಯಮ್ಣಂ ದ್ವಿಭುಜಂ ರಕ್ತಂ ರಕ್ತಮಾಲ್ಯೋಪಶೋಭಿತಂ ।**
**ರಕ್ತಪದ್ಮಾಸನಸ್ಥಂ ಚ ದೇವಗಂಧರ್ವಸೇವಿತಂ　　　॥ ೬೬ ॥**

**ವಾತೋವಾರೇತಿಮಂತ್ರಸ್ಯ ಕಾಶ್ಯಪಋುಷಿರನುಷ್ಟುಪ್‌ಛಂದೋ ।**
**ವಾಯುರ್ದೇವತಾ ಅರ್ಯಮಪ್ರೀತಯೇ ವಿನಿಯೋಗಃ　　　॥ ೬೭ ॥**

**ಧ್ಯಾಯೇಚ್ಚ ಜೃಂಭಕಂ ಶ್ವೇತಂ ದ್ವಿಭುಜಂ ಕುಟಿಲಾನನಂ ।**
**ಕರಾಲವದನಂ ಘೋರಂ ವರಾಹೋಪರಿಸಂಸ್ಥಿತಂ　　　॥ ೬೮ ॥**

**ಕುವಿದೋಗವಯ ಇತಿ ಮಂತ್ರಸ್ಯ ವಿಶ್ವಾಮಿತ್ರಋುಷಿಃ ಜಗತೀಛಂದಃ ।**
**ಸೋಮೋದೇವತಾ ಜೃಂಭಕಪ್ರೀತಯೇ ವಿನಿಯೋಗಃ　　　॥ ೬೯ ॥**

---

೬೬. ಅನಂತರ ನೈಋುತ್ಯಕೋಣಸೂತ್ರದ ಉಭಯಪಾರ್ಶ್ವಗಳೊಳಗೆ ಮೇಲ್ಗಡೆ ಒಂದರಲ್ಲಿ ಅರ್ಯಮನನ್ನು ಆರಾಧಿಸುವವನಾಗಿ, ಕೆಂಪುಬಣ್ಣದ ದೇಹವುಳ್ಳವನೂ, ಎರಡುಬಾಹುಗಳುಳ್ಳವನೂ, ಕೆಂಪುಬಣ್ಣದ ಕಮಲದಮೇಲೆ ಕುಳಿತುಕೊಂಡಿರುವವನೂ, ಕೆಂಪುಹೂವಿನ ಮಾಲಿಕೆಗಳಿಂದ ಶೋಭಿಸತಕ್ಕವನೂ, ದೇವತೆಗಳಿಂದಲೂ ಗಂಧರ್ವರಿಂದಲೂ ಸೇವೆಮಾಡಿಸಿಕೊಳ್ಳತಕ್ಕವನೂ ಆಗಿರುವನೆಂದು ಧ್ಯಾನಿಸಬೇಕು. (ಕೋಣಸೂತ್ರವು ಕರ್ಣರೇಖೆಯಾಗಿರುವುದರಿಂದ ಬಲ ಎಡ ಎಂದು ವಿಭಾಗಿಸುವುದಕ್ಕಿಂತ ಮೇಲೆ ಕೆಳಗೆ ಎಂದು ಹೇಳುವುದು ಸ್ಪಷ್ಟವು.)

೬೭. 'ವಾತೋವಾರಾ' ಎಂಬ ಮಂತ್ರಕ್ಕೆ ಕಾಶ್ಯಪನೇ ಋುಷಿ, ಅನುಷ್ಟುಪ್ ಎಂಬುದು ಛಂದಸ್ಸು, ವಾಯುವೇ ದೇವತೆ, ಅರ್ಯಮನಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೬೮. ಆ ಬಳಿಕ ಅದರ ಇನ್ನೊಂದು ಪಾರ್ಶ್ವದ (ಕೆಳಗಡೆಯ) ಪದಕದಲ್ಲಿ ಜೃಂಭಕನನ್ನು ಅರ್ಚಿಸುವಾಗ; ಶ್ವೇತವಾದ ಮೈಬಣ್ಣವುಳ್ಳವನೂ, ಎರಡು ಭುಜಗಳುಳ್ಳವನೂ, ವಕ್ರವೂ ಭಯಂಕರವೂ ಆದ ಮುಖವುಳ್ಳವನೂ, ಘೋರಸ್ವರೂಪನೂ, ಹಂದಿಯನ್ನು ಏರಿ ಕುಳಿತವನೂ ಆಗಿರುವನೆಂದು ಧ್ಯಾನಮಾಡಬೇಕು.

೬೯. 'ಕುವಿದೋಗವಯ' ಎಂಬ ಮಂತ್ರಕ್ಕೆ ವಿಶ್ವಾಮಿತ್ರನು ಋುಷಿ, ಜಗತಿಯೆಂಬುದೇ ಛಂದಸ್ಸು, ಸೋಮನೇ ದೇವತೆ, ಜೃಂಭಕನಪ್ರೀತ್ಯರ್ಥವಾಗಿ ಈ ಮಂತ್ರವನ್ನು ಹೇಳತಕ್ಕದ್ದು.

ಪಿಲಿಪಿಚ್ಛಂ ರಕ್ತವರ್ಣಂ ರಕ್ತಮಾಲ್ಯೈರಲಂಕೃತಂ ।
ರಕ್ತಪದ್ಮಾಸನಸ್ಥಂ ಚ ರಕ್ತಾಭರಣಶೋಭಿತಂ ॥ ೭೦ ॥

ದೇವಸ್ಯಹೇತಿಮಂತ್ರಸ್ಯ ಗೌತಮಋಷಿಃ ಪಂಕ್ತಿಶ್ಛಂದಃ ಶಚೀದೇವತಾ ।
ಪಿಲಪಿಚ್ಛಪ್ರೀತಯೇ ವಿನಿಯೋಗಃ ॥ ೭೧ ॥

ಪೀತಾಂ ಚ ಚರಕೀಂ ಧ್ಯಾಯೇದ್ರಕ್ತಮಾಲ್ಯೈರಲಂಕೃತಾಂ ।
ಸುಚಾರುವದನಾಂ ಭವ್ಯಾಂ ಗುಂಜಾಹಾರೋಪಶೋಭಿತಾಂ ॥ ೭೨ ॥

ತದ್ವರ್ಷ ಇತಿಮಂತ್ರಸ್ಯ ಜಟಿಲಋಷಿರ್ಬೃಹತೀಛಂದೋ ।
ಭವೋದೇವತಾ ಚರಕೀಪ್ರೀತಯೇ ವಿನಿಯೋಗಃ ॥ ೭೩ ॥

---

೭೦. ಆ ಬಳಿಕ ವಾಯುವ್ಯ ಕೋಣಸೂತ್ರದ ಅಕ್ಕಪಕ್ಕದ ಪದಕಗಳಲ್ಲಿ ಕೆಳ ಭಾಗದಲ್ಲಿ ಪಿಲಪಿಚ್ಛನೆಂಬವನನ್ನು ಆರಾಧಿಸುವಾಗ; ಕೆಂಪಾದ ಮೈಬಣ್ಣವುಳ್ಳವನೂ ಕೆಂಪುಹೂವಿನ ಮಾಲಿಕೆಗಳಿಂದ ಅಲಂಕರಿಸಲ್ಪಟ್ಟವನೂ, ಕೆಂಪುಕಮಲದ ಮೇಲೆ ಕುಳಿತು, ಕೆಂಪಗಿರುವ ಆಭರಣಗಳಿಂದ ಶೋಭಿಸುತ್ತಿರುವನೂ ಎಂದು ಧ್ಯಾನಮಾಡ ಬೇಕು.

೭೧. 'ದೇವಸ್ಯಹಾ' ಎಂಬ ಮಂತ್ರಕ್ಕೆ ಗೌತಮನು ಋಷಿ, ಶಚಿಯು ದೇವತೆ, ಪಂಕ್ತಿ ಎಂಬುದು ಛಂದಸ್ಸು, ಪಿಲಪಿಚ್ಛನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ಪಠಿಸ ಬೇಕು.

೭೨. ಅದೇ ಕೋಣಸೂತ್ರದ ಮೇಲ್ಭಾಗದ ಪದಕದಲ್ಲಿ ಚರಕೀ ಎಂಬ ದೇವ ತೆಯನ್ನು ಆರಾಧಿಸುವಾಗ; ಹಳದಿಯಬಣ್ಣದ ದೇಹವುಳ್ಳವಳೂ, ಕೆಂಪುಹೂಗಳ ಮಾಲಿಕೆಯಿಂದ ಅಲಂಕೃತೆಯಾದವಳೂ, ಮನೋಹರವಾದ ಮುಖ, ಎತ್ತರವಾದ ಮೈಕಟ್ಟುಉಳ್ಳವಳೂ, ಗುಲಗಂಜಿಯಮಣಿಯ ಸರಗಳಿಂದ ಶೋಭಿಸತಕ್ಕವಳೂ ಆಗಿ ಇರುವಳೆಂದು ಧ್ಯಾನಿಸಬೇಕು.

೭೩. 'ತದ್ವರ್ಷ' ಎಂಬ ಮಂತ್ರಕ್ಕೆ ಜಟಿಲನೆಂಬುವನು ಋಷಿ, ಬೃಹತೀಯೆಂ ಬುದು ಛಂದಸ್ಸು, ಭವನೇ ದೇವತೆ; ಚರಕೀಪ್ರೀತ್ಯರ್ಥವಾಗಿ ಈ ಮಂತ್ರವನ್ನು ಉಪ ಯೋಗಿಸಬೇಕು.

**ಶ್ಯಾಮಾಂ ವಿದಾರಿಕಾಂ ಧ್ಯಾಯೇತ್ತ್ರಿಣೇತ್ರಾಂ ಚ ಚತುರ್ಭುಜಾಂ ।**
**ನಾನಾಗಣಯುತಾಂ ದೇವೀಂ ಪಂಕಜದ್ವಯಧಾರಿಣೀಂ　　॥ ೭೪ ॥**

**ಶ್ರೀಶ್ಚತೇ ಇತಿಮಂತ್ರಸ್ಯ ವರುಣಋಷಿಃ ನೃಸಿಂಹೋದೇವತಾ ।**
**ಜಗತೀಛಂದಃ ವಿದಾರಿಕಾಪ್ರೀತಯೇ ವಿನಿಯೋಗಃ　　॥ ೭೫ ॥**

**ರಕ್ತಾಂ ಚ ಪೂತನಾಂ ಧ್ಯಾಯೇತ್ಪಂಕಜಸ್ಥಾಂ ಸುಶೋಭನಾಂ ।**
**ಸರ್ವಾಭರಣಸಂಪನ್ನಾಂ ಸರ್ವಾಲಂಕಾರಶೋಭಿತಾಂ　　॥ ೭೬ ॥**

**ಮಯಿಗೃಹ್ಣಾಮೀತಿ ಮಂತ್ರಸ್ಯ ವಿವಸ್ವಾನ್‌ಋಷಿಃ ಬೃಹತೀಛಂದಃ ।**
**ನಾರಾಯಣೋದೇವತಾ ಪೂತನಾಪ್ರೀತಯೇ ವಿನಿಯೋಗಃ　　॥ ೭೭ ॥**

---

೭೪. ಆ ಬಳಿಕ ಈಶಾನ್ಯಕೋಣಸೂತ್ರದ ಎರಡುಪಾರ್ಶ್ವಗಳಲ್ಲಿ ಕೆಳಭಾಗದ ಪದಕದಲ್ಲಿ ವಿದಾರಿಕಾದೇವತೆಯನ್ನು ಆರಾಧಿಸುವಾಗ ; ಶ್ಯಾಮವಾದ ಮೈಬಣ್ಣವುಳ್ಳವಳೂ, ಮೂರುಕಣ್ಣುಗಳನ್ನುಳ್ಳವಳೂ, ನಾಲ್ಕುಭುಜಗಳುಳ್ಳವಳೂ ನಾನಾಗಣಗಳಿಂದ ಕೂಡಿ ಇರುವವಳೂ, ಎರಡುಕೈಗಳಲ್ಲೂ ಕಮಲಗಳನ್ನು ಧರಿಸಿದವಳೂ ಆಗಿರುವಳೆಂದು ಧ್ಯಾನಿಸಬೇಕು.

೭೫ 'ಶ್ರೀಶ್ಚತೇ ಲಕ್ಷ್ಮೀಶ್ಚ' ಎಂಬ ಮಂತ್ರಕ್ಕೆ ವರುಣನೇ ಋಷಿ, ನರಸಿಂಹನೇ ದೇವತೆ ; ವಿದಾರಿಕಾದೇವತಾಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೭೬. ಅದೇ ಕೋಣಸೂತ್ರದ ಮೇಲುಪಾರ್ಶ್ವದ ಪದಕದಲ್ಲಿ ಪೂತನಾ ಎಂಬ ದೇವತೆಯನ್ನು ಅರ್ಚಿಸುವನಾಗಿ ; ಕೆಂಪಾದ ಮೈಬಣ್ಣವುಳ್ಳವಳೂ, ಕಮಲದಮೇಲೆ ಕುಳಿತಿರುವವಳೂ, ಚೆನ್ನಾಗಿ ಶೋಭಿಸತಕ್ಕವಳೂ, ಸಮಸ್ತಆಭರಣಗಳನ್ನೂ ಧರಿಸಿರುವಳೂ ನಾನಾಲಂಕಾರಗಳಿಂದ ಶೋಭಾಯಮಾನೆಯೂ ಆಗಿರುವಳೆಂದು ಧ್ಯಾನ ಮಾಡಬೇಕು.

೭೭. 'ಮಯಿಗೃಹ್ಣಾಮಿ' ಎಂಬ ಮಂತ್ರಕ್ಕೆ ವಿವಸ್ವಂತನೇ ಋಷಿ, ಬೃಹತಿ ಎಂಬ ಛಂದಸ್ಸು, ನಾರಾಯಣನೇ ದೇವತೆ ; ಪೂತನಾಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

ಪೂರ್ವಾದಿದಿಕ್ಷು ಸರ್ವಾಸು ಸಾರ್ಧ್ಯಂತಪದೇಷು ಚ ।
ಈಶಾನಂ ಜಟಿಲಂ ಶ್ವೇತಂ ಶೂಲಹಸ್ತಂ ಮಹಾಭುಜಂ ॥ ೭೮ ॥

ತ್ರಿಣೇತ್ರಂ ವೃಷಭಾರೂಢಂ ನಾಗಹಾರೋಪಶೋಭಿತಂ ॥ ೭೯ ॥

ಆಯುಃಶೀರ್ಷಾಣ ಇತಿಮಂತ್ರಸ್ಯ ವಾಮದೇವಋಷಿಃ ।
ಬೃಹತೀಛಂದೋ ಧರಣೀಧರೋದೇವತಾ ಈಶಾನಪ್ರೀತಯೇ ವಿನಿಯೋಗಃ ॥ ೮೦ ॥

ರಕ್ತಂ ಧ್ಯಾಯೇಚ್ಚ ಪರ್ಜನ್ಯಂ ದ್ವಿಭುಜಂ ಪೀತವಾಸಸಂ ।
ದಕ್ಷಿಣೇ ಪರಶುಂ ಧ್ಯಾಯೇದೋಂಕಾರಂ ಚ ತಥಾಪರೇ ॥ ೮೧ ॥

ಕಯಾನಶ್ಚಿತ್ರಿಮಂತ್ರಸ್ಯ ಧರ್ಮಋಷಿರ್ಬೃಹತೀಛಂದೋ ।
ಭವೋದೇವತಾ ಪರ್ಜನ್ಯಪ್ರೀತಯೇ ವಿನಿಯೋಗಃ ॥ ೮೨ ॥

---

೭೮. ಅನಂತರ ಪೂರ್ವವೇ ಮೊದಲಾದ ಒಂದೊಂದು ದಿಕ್ಕಿನಲ್ಲಿಯೂ ಮೊದಲಿನಿಂದ ಕೊನೆಯವರೆಗೆ ಮಾಡಿರುವ ಪದಕಗಳಲ್ಲಿ ಒಂಬನೆಯದರಲ್ಲಿ ಈಶಾನನನ್ನು ಪೂಜಿಸುತ್ತಾ, ಜಟಾಯುಕ್ತನೂ, ಶ್ವೇತವರ್ಣನೂ, ಕೈಯಲ್ಲಿ ತ್ರಿಶೂಲವನ್ನು ಧರಿಸಿರುವವನೂ, ಮಹಾಭುಜಪರಾಕ್ರಮಿಯೂ, ತ್ರಿನೇತ್ರನೂ, ವೃಷಭವನ್ನು ಏರಿ ಕುಳಿತಿರುವವನೂ, ಸರ್ಪಗಳನ್ನು ಆಭರಣವಾಗಿ ಮಾಡಿಕೊಂಡು ಶೋಭಿಸುತ್ತಿರುವನೂ ಆಗಿರುವನೆಂದು ಧ್ಯಾನಿಸಬೇಕು.

೮೦. 'ಆಯುಃಶೀರ್ಷಾಣ' ಎಂಬ ಮಂತ್ರಕ್ಕೆ ವಾಮದೇವನೇ ಮಂತ್ರದ್ರಷ್ಟನು, ಬೃಹತಿಯೇ ಛಂದಸ್ಸು, ಧರಣೀಧರನೇ ದೇವತೆ ಈಶಾನಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೮೧. ಅದೇ ಸಾಲಿನ ಎರಡನೆಯಪದಕದಲ್ಲಿ ಪರ್ಜನ್ಯದೇವನನ್ನು ಅರ್ಚಿಸುವಾಗ; ಕೆಂಪಾದ ಮೈಬಣ್ಣವುಳ್ಳವನೂ, ಹಳದಿಯವಸ್ತ್ರವನ್ನು ಧರಿಸಿದವನೂ, ದಕ್ಷಿಣಹಸ್ತದಲ್ಲಿ ಪರಶು, ವಾಮಹಸ್ತದಲ್ಲಿ ಓಂಕಾರ, ಇವನ್ನು ಧರಿಸಿದವನೂ; ಆಗಿರುವನೆಂದು ಧ್ಯಾನಿಸಬೇಕು.

೮೨. 'ಕಯಾನಶ್ಚಿತ್ರ' ಎಂಬ ಮಂತ್ರಕ್ಕೆ ಧರ್ಮನೆಂಬುವನು ಋಷಿ, ಬೃಹತೀ ಎಂಬುದು ಛಂದಸ್ಸು, ಭವನೇ ದೇವತೆ, ಪರ್ಜನ್ಯಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

**ಜಯಂತಂ ಶ್ವೇತಂ ಶ್ವೇತವೃಷಭಾರೂಢಂ ಧ್ಯಾತ್ವಾ ।**
**ಮಾನಸ್ತೋಕೇತಿಮಂತ್ರಸ್ಯ ಶಕ್ತ್ಯೃಷಿಸ್ತ್ರಿಷ್ಟುಪ್‌ಛಂದಃ ॥**
**ಶಂಕರೋದೇವತಾ ಜಯಂತಪ್ರೀತಯೇ ವಿನಿಯೋಗಃ ॥ ೮೩ ॥**

**ಶುಕ್ಲಂ ಪೀತಂ ದ್ವಿಭುಜಮೈರಾವತಸ್ಥಂ ವಜ್ರಧರಂ ಧ್ಯಾತ್ವಾ ।**
**ಮೂಲಬೀಜೇನ ಸ್ಥಾಪಯೇತ್ ॥ ೮೪ ॥**

**ಭಾಸ್ಕರಂ ರಕ್ತಂ ದ್ವಿಭುಜಂ ರಕ್ತಾಶ್ವಸ್ಥಂ ಧ್ಯಾತ್ವಾ ।**
**ಮಾಯಾಬೀಜೇನ ಪೂಜಯೇತ್ ॥ ೮೫ ॥**

**ಸತ್ಯಂ ಚ ದ್ವಿಭುಜಂ ಶ್ವೇತಂ ತ್ರಿಣೇತ್ರಂ ಪೀತವಾಸಸಂ ।**
**ಮಂದಕುಂದಬೀಜೇನ ಪೂಜಯೇತ್ ॥**
**ವೃಷಂ ಪೀತಂ ವೃಷಭಾರೂಢಮಾಕಾಶಬೀಜೇನ ಪೂಜಯೇತ್ ॥ ೮೬ ॥**

---

೮೩. ಅನಂತರ ಅದರ ಪಕ್ಕಮನೆ ಎಂದರೆ ಮೂರನೆಯಪದಕದಲ್ಲಿ ಜಯಂತನನ್ನು ಆರಾಧಿಸುವನಾಗಿ ಬಿಳಿಯಮೈಬಣ್ಣವುಳ್ಳವನೂ, ಬಿಳಿಯಎತ್ತನ್ನು ಏರಿದವನೂ, ಆಗಿರುವನೆಂದು ಧ್ಯಾನಿಸಬೇಕು. 'ಮಾನಸ್ತೋಕೇ' ಎಂಬ ಮಂತ್ರಕ್ಕೆ ಶಕ್ತಿ ಎಂಬವನು ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ಶಂಕರನೇ ದೇವತೆ, ಜಯಂತನಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೮೪. ನಾಲ್ಕನೆಯಪದಕದಲ್ಲಿ ಶಕ್ರನನ್ನು ಪೂಜಿಸುವನಾಗಿ ಶುಭ್ರ ಮತ್ತು ಹಳದಿಯಬಣ್ಣದ ದೇಹವುಳ್ಳವನೂ,ಎರಡುಬಾಹುವುಳ್ಳವನೂ,ಐರಾವತವನ್ನು ವಾಹನಮಾಡಿಕೊಂಡವನೂ, ಆಗಿರುವನೆಂದು ಧ್ಯಾನಮಾಡಿ ಮೂಲಮಂತ್ರ ಅಥವಾ ಬೀಜಮಂತ್ರದಿಂದ ಸ್ಥಾಪನಮಾಡಬೇಕು.

೮೫. ಅದರ ಮುಂದಿನ ಪದಕದಲ್ಲಿ ಭಾಸ್ಕರನನ್ನು ಪೂಜಿಸುವಾಗ ಕೆಂಪಾದ ಮೈಬಣ್ಣವುಳ್ಳವನೂ, ಎರಡುಭುಜಗಳುಳ್ಳವನೂ, ಕೆಂಪುಬಣ್ಣದ ಕುದುರೆಯನ್ನೇರಿದವನೂ, ಆಗಿರುವನೆಂದು ಧ್ಯಾನಮಾಡಬೇಕು. ಮಾಯಾಬೀಜದಿಂದ ಸ್ಥಾಪನಮಾಡಬೇಕು.

೮೬. ಅದರ ಮುಂದಿನಪದಕದಲ್ಲಿ ಸತ್ಯನನ್ನು ಪೂಜಿಸುತ್ತಾ ಬಿಳಿಯದೇಹ, ಎರಡುಭುಜಗಳೂ, ಮೂರುಕಣ್ಣುಗಳೂ ಉಳ್ಳವನೂ, ಹಳದಿಯವಸ್ತ್ರವನ್ನು ಧರಿಸಿದವನೂ ಆಗಿರುವನೆಂದು ಧ್ಯಾನಮಾಡಿ ಮಂದಕುಂದ ಬೀಜಮಂತ್ರದಿಂದ ಪೂಜಿಸ

ಋುಕ್ಷಂ ನೀಲಂ ಚತುರ್ಭುಜಂ ಮಹಿಷಾರೂಢಂ ಧ್ಯಾಯೇತ್ ।
ಆಚ್ಛೀಮ ಇತಿಮಂತ್ರಸ್ಯ ಹೋತಾಯಕ್ಷಋುಷಿಃ ತ್ರಿಷ್ಟುಪ್‌ಛಂದಃ ॥
ಶಂಕರೋದೇವತಾ ಋುಕ್ಷಪ್ರೀತಯೇ ವಿನಿಯೋಗಃ ॥ ೮೭ ॥

ಅಗ್ನಿಮಾರಭ್ಯ ಪೂಜಯೇತ್ ।
ಆಗ್ನಿಂ ರಕ್ತಂ ಸಪ್ತಜಿಹ್ವಂ ರಕ್ತವಾಸಸಂ ಪಿಂಗಾಕ್ಷಂ ಧ್ಯಾತ್ವಾ ।
ಅಗ್ನಿಂದೂತಮಿತಿ ಮಂತ್ರಸ್ಯ ಭರದ್ವಾಜಋುಷಿಃ ತ್ರಿಷ್ಟುಪ್‌ಛಂದಃ ।
ಶಂಕರೋ ದೇವತಾ ಆಗ್ನಿಪ್ರೀತಯೇ ವಿನಿಯೋಗಃ ॥ ೮೮ ॥

ವಿತಥಂ ರಕ್ತಮಜವಾಹನಂ ದ್ವಿಭುಜಂ ಧ್ಯಾತ್ವಾ ಗಾಯತ್ರ್ಯಾ ಪೂಜಯೇತ್ ॥ ೮೯ ॥

---

ಬೇಕು. ಅದರ ಮುಂದಿನಪದಕದಲ್ಲಿ ವೃಷನನ್ನು ಅರ್ಚಿಸುವನಾಗಿ, ಹಳದಿಬಣ್ಣದ ದೇಹವುಳ್ಳವನೂ, ವೃಷಭವಾಹನನೂ ಆಗಿರುವನೆಂದು ಧ್ಯಾನಿಸಿ ಆಕಾಶಬೀಜಮಂತ್ರದಿಂದ ಪೂಜಿಸಬೇಕು.

೮೭. ಆದರ ಮುಂದಿನ ಪದಕದಲ್ಲಿ ಎಂದರೆ ಆ ದಿಕ್ಕಿನಲ್ಲಿ ಕೊನೆಯದಾಗಿ ಋುಕ್ಷನನ್ನು ಪೂಜಿಸುವಾಗ ನೀಲವರ್ಣನೂ, ನಾಲ್ಕುಬಾಹುಗಳುಳ್ಳವನೂ, ಕೋಣದ ಮೇಲೆ ಕುಳಿತವನೂ ಆಗಿರುವನೆಂದು ಧ್ಯಾನಿಸಬೇಕು. 'ಆಚ್ಛೀಮ' ಎಂಬ ಮಂತ್ರಕ್ಕೆ ಹೋತಾಯಕ್ಷನು ಋುಷಿ, 'ತ್ರಿಷ್ಟುಪ್' ಎಂಬುದು ಛಂದಸ್ಸು, ಶಂಕರನೇ ದೇವತೆ ಋುಕ್ಷಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೮೮. ದಕ್ಷಿಣದಿಕ್ಕಿನ ಎಂಟುಪದಕಗಳಲ್ಲಿ ಆಗ್ನೇಯದಿಂದ ಆರಂಭಿಸಿ ಕ್ರಮವಾಗಿ ಪೂಜಿಸಬೇಕು. ಒಂದನೆಯಪದಕದಲ್ಲಿ ಅಗ್ನಿಯನ್ನು ಪೂಜಿಸುವನಾಗಿ ರಕ್ತವರ್ಣನೂ, ಸಪ್ತಜಿಹ್ವೆಗಳುಳ್ಳವನೂ, ಕೆಂಪುಬಣ್ಣದ ವಸ್ತ್ರವನ್ನು ಧರಿಸಿದವನೂ, ಹೊಂಬಣ್ಣದ ಕಣ್ಣುಳ್ಳವನೂ, ಆಗಿರುವನೆಂದು ಧ್ಯಾನಿಸಬೇಕು. 'ಅಗ್ನಿಂದೂತಂ' ಎಂಬ ಮಂತ್ರವನ್ನು ಭರದ್ವಾಜನು ಮೊದಲು ತಿಳಿದನು. ತ್ರಿಷ್ಟುಪ್ಪೆಂಬುದು ಅದರ ಛಂದಸ್ಸು, ಶಂಕರನೇ ಆ ಮಂತ್ರದೇವತೆ, ಅಗ್ನಿಪ್ರೀತ್ಯರ್ಥವಾಗಿ ಈ ಮಂತ್ರವನ್ನು ಹೇಳಬೇಕು.

೮೯. ಅದರ ಮುಂದಿನಪದಕದಲ್ಲಿ 'ಪೂಷಾ' ದೇವತೆಯನ್ನು ಪೂಜಿಸಬೇಕು. ಅದರ ಮುಂದಿನಪದಕದಲ್ಲಿ ವಿತಥನನ್ನು ಆರಾಧಿಸುವನಾಗಿ ರಕ್ತವರ್ಣನೂ, ಅಜ

**ಗಾಯತ್ರ್ಯಾ ವಿಶ್ವಾಮಿತ್ರಋಷಿಃ ಸವಿತಾ ದೇವತಾ ಗಾಯತ್ರೀ ಛಂದಃ ।**
**ವಿತಥಪ್ರೀತಯೇ ವಿನಿಯೋಗಃ ॥ ೯೦ ॥**

**ಯಮಂ ಕೃಷ್ಣಮಹಿಷಾರೂಢಂ ದಂಡಹಸ್ತಂ ಧ್ಯಾಯೇತ್ ।**
**ಆಚ್ಛಿಯ ಇತಿಮಂತ್ರಸ್ಯ ತ್ರಿಷ್ಟುಪ್‌ಛಂದೋ ಭವಾನೀದೇವತಾ ॥**
**ಯಮಪ್ರೀತಯೇ ವಿನಿಯೋಗಃ ॥ ೯೧ ॥**

**ಗೃಹರಕ್ಷಂ ರಕ್ತಮೂರ್ಧ್ವಕೇಶಂ ಮಹಾಭುಜಂ ರಕ್ತವಾಸಸಂ ಧ್ಯಾತ್ವಾ ।**
**ವಹ್ನಿ ಬೀಜೇನ ಪೂಜಯೇತ್ ॥ ೯೨ ॥**

**ಗಂಧರ್ವಂ ಶ್ವೇತಂ ದ್ವಿಭುಜಂ ಪದ್ಮಾಸನಸ್ಥಂ ಧ್ಯಾತ್ವಾ ।**
**ಯಮಬೀಜೇನ ಪೂಜಯೇತ್ ॥ ೯೩ ॥**

---

ವಾಹನನೂ, ಎರಡುಭುಜಗಳುಳ್ಳವನೂ ಆಗಿರುವನೆಂದು ಧ್ಯಾನಿಸಿ ಗಾಯತ್ರೀಮಂತ್ರ ಪೂರ್ವಕ ಪೂಜಿಸಬೇಕು.

೯೦. ಗಾಯತ್ರೀಮಂತ್ರಕ್ಕೆ ವಿಶ್ವಾಮಿತ್ರನೇ ಋಷಿ, ಸವಿತೃವೇ ದೇವತೆ, ಗಾಯತ್ರೀ ಎಂಬುದೇ ಛಂದಸ್ಸು, ವಿತಥನಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೯೧. ಅದರ ಮುಂದಿನಪದಕದಲ್ಲಿ ಯಮನನ್ನು ಪೂಜಿಸುವಾಗ; ಕಪ್ಪಾದ ಮೈಬಣ್ಣವುಳ್ಳವನೂ, ಮಹಿಷವಾಹನನೂ, ಹಸ್ತದಲ್ಲಿ ದಂಡಾಯುಧವನ್ನು ಧರಿಸಿದವನೂ ಆಗಿರುವನೆಂದು ಧ್ಯಾನಿಸಬೇಕು. 'ಆಚ್ಛಿಯ' ಎಂಬ ಮಂತ್ರಕ್ಕೆ ಭವಾನಿಯು ದೇವತೆ, ತ್ರಿಷ್ಟುಪ್ ಎಂಬುದೇ ಛಂದಸ್ಸು. ಯಮಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೯೨. ಅನಂತರ ಅದರ ಮುಂದಿನಪದಕದಲ್ಲಿ ಗೃಹರಕ್ಷನನ್ನು ಅರ್ಚಿಸುವನಾಗಿ; ರಕ್ತವರ್ಣವುಳ್ಳವನೂ, ಊರ್ಧ್ವಕೇಶವುಳ್ಳವನೂ, ಪರಾಕ್ರಮವೂ, ಬಾಹುಬಲವೂ ಉಳ್ಳವನೂ, ಕೆಂಪುಬಣ್ಣದ ವಸ್ತ್ರವನ್ನು ಧರಿಸಿದವನೂ ಆಗಿರುವನೆಂದು ಧ್ಯಾನಿಸಿ ಅಗ್ನಿ ಬೀಜಮಂತ್ರದಿಂದ ಪೂಜಿಸಬೇಕು.

೯೩. ಅದರ ಮುಂದಿನಪದಕದಲ್ಲಿ ಗಂಧರ್ವನನ್ನು ಪೂಜಿಸತೊಡಗಿ; ಶ್ವೇತ ವರ್ಣದ ದೇಹವುಳ್ಳವನೂ, ಎರಡುಭುಜಗಳುಳ್ಳವನೂ, ಕಮಲವೆಂಬ ಪೀಠದಲ್ಲಿ

ಭೃಂಗರಾಜಂ ರಕ್ತಸಿಂಹಾಸನಾರೂಢಂ ದಿವ್ಯಯಜ್ಞೋಪವೀತಿನಂ
ಧ್ಯಾಯೇತ್ ॥ ೯೪ ॥

ಹೋತಾ ಯಸ್ಕೇತಿ ಮಂತ್ರಸ್ಯ ಭಾರ್ಗವಋಷಿರ್ಗಾಯತ್ರೀಛಂದೋ ।
ಯಶೋ ದೇವತಾ ಭೃಂಗರಾಜಪ್ರೀತಯೇ ವಿನಿಯೋಗಃ ॥
ಮೃಗಂ ಪೀತಂ ಮೃಗಾರೂಢಂ ಪೀತವಾಸಸಂ ಧ್ಯಾತ್ವಾ ॥ ೯೫ ॥

ಕದಾಚನೇತಿಮಂತ್ರಸ್ಯ ವಾಮದೇವಋಷಿಃ ಬೃಹತೀಛಂದೋ ।
ವಾಮದೇವೋ ದೇವತಾ ಮೃಗಪ್ರೀತಯೇ ವಿನಿಯೋಗಃ ॥ ೯೬ ॥

ನೈಋತಾರ್ಥಪದೇಷು ಚ ।
ನಿರ್ಋತಿಂ ಪೀತಂ ಶ್ವೇತಪದ್ಮಾಸನಸ್ಥಂ ಧ್ಯಾತ್ವಾ ॥

---

ಕುಳಿತಿರುವವನೂ ಎಂಬದಾಗಿ ಧ್ಯಾನಮಾಡಿ ಯಮಬೀಜಮಂತ್ರದಿಂದ ಆ ದೇವನನ್ನು ಪೂಜಿಸಬೇಕು.

೯೪. ಬಳಿಕ ಅದರ ಮುಂದಿನಪದಕದಲ್ಲಿ ಭೃಂಗರಾಜನನ್ನು ಆರಾಧಿಸುವನಾಗಿ; ರಕ್ತವರ್ಣದ ಸಿಂಹಾಸನವನ್ನೇರಿದವನೂ ದಿವ್ಯಯಜ್ಞೋಪವೀತವನ್ನು ಧರಿಸಿದವನೂ ಆಗಿರುವನೆಂದು ಧ್ಯಾನಮಾಡಬೇಕು.

೯೫. "ಹೋತಾಯಸ್ಕ" ಎಂಬ ಮಂತ್ರಕ್ಕೆ ಭಾರ್ಗವನೇ ಋಷಿ, ಗಾಯತ್ರಿಯು ಛಂದಸ್ಸು, ಯಶ ಎಂಬುದು ದೇವತೆ, ಭೃಂಗರಾಜನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು. ಅದರ ಮುಂದಿನಪದಕದಲ್ಲಿ ಮೃಗನೆಂಬ ದೇವತೆಯನ್ನು ಪೂಜಿಸುವ ಆದಿಯಲ್ಲಿ ಹಳದಿಯಾದ ಮೈಬಣ್ಣವುಳ್ಳವನೂ, ಜಿಂಕೆಯನ್ನು ಏರಿದವನೂ ಹಳದಿಯವಸ್ತ್ರವನ್ನು ಧರಿಸಿದವನೂ ಆಗಿರುವನೆಂದು ಧ್ಯಾನಿಸಬೇಕು.

೯೬. 'ಕದಾಚನ' ಎಂಬ ಮಂತ್ರವನ್ನು ಮೊದಲು ತಿಳಿದವನು ವಾಮದೇವನೆಂಬ ಋಷಿ, ಬೃಹತೀಯೆಂಬುದು ಛಂದಸ್ಸು, ವಾಮದೇವನೇ ದೇವತೆ, ಮೃಗಪ್ರೀತ್ಯರ್ಥವಾಗಿ ಈ ಮಂತ್ರವನ್ನು ಪಠಿಸಬೇಕು.

ಕ್ಷೈದಾಚನೇತಿಮಂತ್ರಸ್ಯ ಪಂಕ್ತಿಶ್ಛಂದಃ ಸವಿತಾ ದೇವತಾ ।
ನಿರ್ಋತಿ ಪ್ರೀತಯೇ ವಿನಿಯೋಗಃ ॥ ೯೭ ॥

ನೈರುತಾರ್ಧಪದೇಷು ಚ ದೌವಾರಿಕಂ ಶ್ವೇತಶರಭಾರೂಢಂ ತ್ರಿನೇತ್ರಂ
ಸರ್ವಾಭರಣಭೂಷಿತಂ ಧ್ಯಾತ್ವಾ ।
ಹೋತಸ್ವೇತಿಮಂತ್ರಸ್ಯ ನರಸಿಂಹಋಷಿರ್ಬೃಹತೀ ಛಂದೋ ॥
ಗಣೇಶೋ ದೇವತಾ ದೌವಾರಿಕಪ್ರೀತಯೇ ವಿನಿಯೋಗಃ ॥ ೯೮ ॥

ಶ್ಯಾಮಂ ಸುಗ್ರೀವಂ ಕೃಷ್ಣಮೇಷಾರೂಢಂ ಪೀತವಾಸಸಂ ಧ್ಯಾತ್ವಾ ।
ಸ್ವಾದಿತ್ಯೇತಿಮಂತ್ರಸ್ಯ ತ್ರಿಷ್ಟುಪ್‌ಛಂದೋ ವಾಮನೋ ದೇವತಾ ॥
ಸುಗ್ರೀವಪ್ರೀತಯೇ ವಿನಿಯೋಗಃ ॥ ೯೯ ॥

---

೯೭. ಇನ್ನು ಪಶ್ಚಿಮದಿಕ್ಕಿನ ಎಂಟುಪದಕಗಳಲ್ಲಿ ನೈಋತ್ಯದಿಂದಾರಂಭಿಸಿ ಪೂಜಿಸತಕ್ಕದ್ದು. ಒಂದನೆಯದರಲ್ಲಿ ನಿಋಋತಿಯನ್ನು ಹಳದಿಯ ವೈಬಣ್ಣವುಳ್ಳವನಾಗಿ ಶ್ವೇತಪದ್ಮಾಸನದಲ್ಲಿ ಕುಳಿತು ಶೋಭಿಸುವನೆಂದು ಧ್ಯಾನಿಸಬೇಕು.

೯೮. 'ಕ್ಷೈದಾಚನ' ಎಂಬ ಮಂತ್ರಕ್ಕೆ ಸವಿತೃವು ದೇವತೆ, ಪಂಕ್ತಿಯೆಂಬುದು ಛಂದಸ್ಸು, ನಿಋಋತಿಯ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು. ಎರಡನೆಯಪದಕದಲ್ಲಿ ದೌವಾರಿಕನನ್ನು ಆವಾಹಿಸುವ ಮೊದಲು; ಬಿಳಿಯಶರಭ ಮೃಗವನ್ನು ಏರಿರುವವನೂ, ಮೂರುಕಣ್ಣುಗಳುಳ್ಳವನೂ, ಸಮಸ್ತಒಡವೆಗಳಿಂದ ಶೋಭಿಸುವವನೂ ಆಗಿರುವನೆಂದು ಧ್ಯಾನಿಸಬೇಕು. 'ಹೋತಸ್ವ' ಎಂಬ ಮಂತ್ರವನ್ನು ಮೊದಲು ತಿಳಿದವನು ನರಸಿಂಹ ಎಂಬ ಋಷಿ, ಬೃಹತೀ ಎಂಬುದು ಛಂದಸ್ಸು, ಗಣೇಶನೇ ದೇವತೆ, ದೌವಾರಿಕದೇವತಾ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ಹೇಳಬೇಕು

೯೯. ಅದರ ಮುಂದಿನಪದಕದಲ್ಲಿ ಸುಗ್ರೀವ ಎಂಬ ದೇವತೆಯನ್ನು ಆವಾಹಿಸುವ ಮುನ್ನ; ಶ್ಯಾಮವಾದ ದೇಹವರ್ಣವುಳ್ಳವನೂ, ಕರಿಯಮೇಕೆಯ ಮೇಲೆ ಏರಿ ಕುಳಿತಿರುವವನೂ, ಹಳದಿಯುವಸ್ತ್ರವನ್ನು ಧರಿಸಿದವನೂ ಆಗಿರುವನೆಂದು ಧ್ಯಾನಮಾಡಬೇಕು. 'ಸ್ವಾದಿತ್ಯಾ' ಎಂಬ ಮಂತ್ರಕ್ಕೆ ವಾಮನನು ದೇವತೆ, ತ್ರಿಷ್ಟುಪ್ ಎಂಬುದು ಛಂದಸ್ಸು, ಸುಗ್ರೀವನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ಹೇಳಬೇಕು.

**ಸುಮಿತ್ರ್ಯಯಾ ನ ಇತಿ ಮಂತ್ರಸ್ಯ ಕಂದರ್ಪಋಷಿಃ ।**
**ಪಂಕ್ತಿಶ್ಛಂದಃ ಸೂರ್ಯೋದೇವತಾ ವರುಣಪ್ರೀತಯೇ ವಿನಿಯೋಗಃ ॥೧೦೦॥**

**ಪುಷ್ಪದಂತಂ ಪೀತಂ ಮೇಷಾರೂಢಂ ಪೀತವಾಸಸಂ ಧ್ಯಾತ್ವಾ ।**
**ಯಾಔಷಧೀರಿತಿಮಂತ್ರಸ್ಯ ಮನ್ಮಥಋಷಿರ್ಜಗತೀ ಛಂದೋ ॥**
**ವಾಯುರ್ದೇವತಾ ಪುಷ್ಪದಂತಪ್ರೀತಯೇ ವಿನಿಯೋಗಃ ॥ ೧೦೧ ॥**

**ಅಸುರಂ ಕೃಷ್ಣಂ ಕೃಷ್ಣಮಾಲ್ಯೈರಲಂಕೃತಂ ಧ್ಯಾತ್ವಾ ।**
**ಆಕೃಷ್ಣೇತಿ ಮಂತ್ರಸ್ಯ ಹಿರಣ್ಯಸ್ತೂಪಋಷಿಃ ತ್ರಿಷ್ಟುಪ್‌ಛಂದಃ ॥**
**ಸವಿತಾದೇವತಾ ಅಸುರಪ್ರೀತಯೇ ವಿನಿಯೋಗಃ ॥ ೧೦೨ ॥**

**ಶೇಷಂ ಕೃಷ್ಣಂ ನಾಗಹಾರಾನ್ವಿತಂ ಪದ್ಮಾಸನಸ್ಥಂ ಧ್ಯಾತ್ವಾ ।**

---

೧೦೦. ಅದರ ಮುಂದಿನಪದಕದಲ್ಲಿ ವರುಣನನ್ನು ಪೂಜಿಸುವ ಮುನ್ನ ಶುಭ್ರ ವಸ್ತ್ರಧಾರಿಯೂ, ಜಲಾಧಿಪನೂ ಆಗಿರುವನೆಂದು ಧ್ಯಾನಿಸಬೇಕು. 'ಸುಮಿತ್ರ್ಯಯಾನ' ಎಂಬ ಮಂತ್ರಕ್ಕೆ ಕಂದರ್ಪನೆಂಬವನು ಋಷಿ, ಪಂಕ್ತಿ ಎಂಬುದು ಛಂದಸ್ಸು, ಸೂರ್ಯನೇ ದೇವತೆ, ವರುಣನಪ್ರೀತ್ಯರ್ಥವಾಗಿ ಈ ಮಂತ್ರವನ್ನು ಪಠಿಸಬೇಕು.

೧೦೧. ಅದರ ಮುಂದಿನಪದಕದಲ್ಲಿ ಪುಷ್ಪದಂತನನ್ನು ಪೂಜಿಸುವಾಗ ಅವನು ಹಳದಿಯಾದ ಮೈಬಣ್ಣವುಳ್ಳವನೂ, ಮೇಷವಾಹನನೂ, ಹಳದಿಯವಸ್ತ್ರವನ್ನು ಧರಿಸಿದವನೂ ಆಗಿರುವನೆಂದು ಧ್ಯಾನಮಾಡಬೇಕು. 'ಯಾ ಔಷಧೀಃ' ಎಂಬ ಮಂತ್ರಕ್ಕೆ ಮನ್ಮಥನು ಋಷಿ, ಜಗತಿ ಎಂಬುದು ಛಂದಸ್ಸು, ವಾಯುವೇ ದೇವತೆ, ಪುಷ್ಪದಂತನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೦೨. ಅದರ ಮುಂದಿನ ಪದಕದಲ್ಲಿ ಅಸುರನೆಂಬವನನ್ನು ಪೂಜಿಸುವಾಗ ಅವನು ನೀಲವರ್ಣದ ದೇಹವುಳ್ಳವನೂ, ನೀಲಪುಷ್ಪಮಾಲೆಗಳಿಂದ ಶೃಂಗರಿಸಿಕೊಂಡವನೂ, ಆಗಿರುವನೆಂದು ಧ್ಯಾನಿಸಬೇಕು. 'ಆಕೃಷ್ಣೇನ' ಎಂಬ ಮಂತ್ರಕ್ಕೆ ಹಿರಣ್ಯಸ್ತೂಪನು ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು; ಸವಿತೃವು ದೇವತೆ, ಅಸುರಪ್ರೀತ್ಯರ್ಥವಾಗಿ ಈ ಮಂತ್ರವನ್ನು ಉಪಯೋಗಿಸಬೇಕು.

೧೦೩. ಬಳಿಕ ಅದರ ಮುಂದಿನಪದಕದಲ್ಲಿ ಶೇಷನನ್ನು ಪೂಜಿಸುವಾಗ ಅವನು ಕೃಷ್ಣವರ್ಣದ ದೇಹವುಳ್ಳವನೂ, ಸರ್ಪಗಳನ್ನು ಆಭರಣವಾಗಿ ಧರಿಸಿರುವವನೂ

**ಆಬ್ರಹ್ಮನ್ನಿತಿ ಮಂತ್ರಸ್ಯ ನಲಿನಋಷಿಃ ತ್ರಿಷ್ಟುಪ್‌ಛಂದೋ ಭವಾನೀ ದೇವತಾ ಶೇಷಪ್ರೀತಯೇ ವಿನಿಯೋಗಃ ॥ ೧೦೩ ॥**

**ರೋಗಂ ಕೃಷ್ಣಂ ನೀಲೇಂದೀವರಧರಂ ಶ್ವೇತವೃಷಭಾರೂಢಂ ಧ್ಯಾತ್ವಾ ।**
**ನಮಸ್ತೇ ರುದ್ರ ಇತಿಮಂತ್ರಸ್ಯ ನಾರದಋಷಿಃ ಪಂಕ್ತಿಶ್ಛಂದಃ ॥**
**ಶ್ರೀರ್ದೇವತಾ ರೋಗಪ್ರೀತಯೇ ವಿನಿಯೋಗಃ ॥ ೧೦೪ ॥**

**ವಾಯುಕೋಣಾದಾರಭ್ಯ ಪೂಜಯೇತ್ ।**
**ವಾಯುಂ ಧೂಮ್ರವರ್ಣಂ ಧ್ವಜಹಸ್ತಂ ಮೃಗಾರೂಢಂ ಧ್ಯಾತ್ವಾ**
**ತವ ವಾಯೇತಿ ಮಂತ್ರೇಣ ಪೂಜಯೇತ್ ॥**
**ತತೋ ನಾಗಂ ಧ್ಯಾತ್ವಾ, ದೇವಾಇತಿಮಂತ್ರಸ್ಯ ಬೃಹತೀಛಂದೋ ।**
**ಯಮೋ ದೇವತಾ ನಾಗಪ್ರೀತಯೇ ವಿನಿಯೋಗಃ ॥ ೧೦೫ ॥**

---

ಪದ್ಮವೆಂಬ ಪೀಠದಮೇಲೆ ಕುಳಿತಿರುವವನೂ ಆಗಿದ್ದಾನೆಂದು ಧ್ಯಾನಿಸಬೇಕು. ಆ ಬ್ರಹ್ಮನ್ ಎಂಬ ಮಂತ್ರಕ್ಕೆ ನಲಿನನೆಂಬುವನು ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ಭವಾನಿಯೇ ದೇವತೆ; ಶೇಷಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೦೪. ಅದರ ಮುಂದಿನಪದಕದಲ್ಲಿ (ಚೌಕದಲ್ಲಿ) ರೋಗವೆಂಬ ದೇವತೆಯನ್ನು ಆವಾಹಿಸುವ ಮುನ್ನ; ಕೃಷ್ಣವರ್ಣದ ದೇಹವುಳ್ಳವನೂ, ನೀಲೋತ್ಪಲವನ್ನು ಧರಿಸಿದವನೂ, ಬಿಳಿಯ ವೃಷಭವನ್ನು ಏರಿದವನೂ, ಆಗಿರುವನೆಂದು ಧ್ಯಾನಿಸಬೇಕು. 'ನಮಸ್ತೇರುದ್ರ' ಎಂಬ ಮಂತ್ರಕ್ಕೆ ನಾರದನು ಋಷಿ, ಪಂಕ್ತಿಯೇ ಛಂದಸ್ಸು, ಶ್ರೀಯೇ ದೇವತೆ; ರೋಗ ಎಂಬ ದೇವನಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೦೫. ಇನ್ನು ಉತ್ತರದಿಕ್ಕಿನ ಎಂಟುಪದಕಗಳಲ್ಲಿ ಪೂಜಿಸುವಾಗ ವಾಯವ್ಯ ಮೂಲೆಯಿಂದ ಆರಂಭಿಸಿ ಪೂಜಿಸಬೇಕು. ಒಂದನೆಯಪದಕದಲ್ಲಿ ವಾಯುವನ್ನು ಪೂಜಿಸುವ ಮುನ್ನ, ಧೂಮ್ರವಾದ ಮೈಬಣ್ಣವುಳ್ಳವನೂ, ಹಸ್ತದಲ್ಲಿ ಧ್ವಜವನ್ನು ಧರಿಸಿದವನೂ, ಮೃಗ (ಜಿಂಕೆ) ವಾಹನನೂ ಆಗಿರುವನೆಂದು ಧ್ಯಾನಮಾಡಬೇಕು. ಮತ್ತು "ತವವಾಯವೃತಸ್ಪತೆ" ಎಂಬ ಮಂತ್ರವನ್ನು ಹೇಳಿ ಪೂಜಿಸಬೇಕು. ಬಳಿಕ ಅದರ ಮುಂದಿನಪದಕದಲ್ಲಿ ನಾಗನನ್ನು ಆವಾಹಿಸುವ ಮುನ್ನ ಧ್ಯಾನಮಾಡಬೇಕು. 'ದೇವಾ' ಎಂಬ ಮಂತ್ರಕ್ಕೆ ಯಮನೇ ದೇವತೆ, "ಬೃಹತೀ" ಎಂಬುದು ಛಂದಸ್ಸು, ನಾಗಪ್ರೀತ್ಯರ್ಥವಾಗಿ ಈ ಮಂತ್ರವು ವಿನಿಯೋಗವಾಗತಕ್ಕದ್ದು.

**ಶ್ವೇತಂ ಸೋಮಂ ಶ್ವೇತವರ್ಣಾಸನಸ್ಥಂ ಧ್ಯಾತ್ವಾ ಭದ್ರಬೀಜೇನ**
**ಪೂಜಯೇತ್ ॥ ೧೦೬ ॥**

**ರಕ್ತಂ ಭಲ್ಲಾಟಂ ಪೀತವಾಸಸಂ ಧ್ಯಾತ್ವಾ ವಹ್ನಿಬೀಜೇನ ಪೂಜಯೇತ್ ।**
**ಪೀತವಾಸಸಮಜವಾಹನಂ ಹಾರಕೇಯೂರಾನ್ವಿತಂ ॥**
**ವಾಯುಬೀಜೇನ ಮಂದರಾದ್ಯೈಃ ಪೂಜಯೇತ್ ॥ ೧೦೭ ॥**

**ರಕ್ತಾಂ ದಿತಿಂ ನಾಗಹಾರಾನ್ವಿತಾಂ ರಕ್ತಪದ್ಮಾಸನಸ್ಥಾಂ ಧ್ಯಾತ್ವಾ ।**
**ಮಾನಾರ್ಯ ಇತಿಮಂತ್ರೇಣ ಪೂಜಯೇತ್ ॥ ೧೦೮ ॥**

**ಮಾನೋತ್ವಾ ಇತಿಮಂತ್ರಸ್ಯ ಭಾರ್ಗವಋಷಿಃ ಪಂಕ್ತಿಶ್ಛಂದಃ ।**
**ಪೃಥಿವೀದೇವತಾ ದಿತಿಪ್ರೀತಯೇ ವಿನಿಯೋಗಃ ॥ ೧೦೯ ॥**

---

೧೦೬. ಮುಂದಿನಮನೆಯಲ್ಲಿ ಸೋಮನೆಂಬವನನ್ನು ಆವಾಹಿಸುವುದಕ್ಕೆ ಮುಂಚೆ ಅವನು ಬಿಳಿಯಬಣ್ಣದ ದೇಹವುಳ್ಳವನೂ, ಬಿಳಿಯದಾದ ಪೀಠದಮೇಲೆ ಕುಳಿತಿರುವವನೂ ಆಗಿರುವನೆಂದು ಧ್ಯಾನಮಾಡಬೇಕು ಮತ್ತು ಭದ್ರ ಎಂಬ ಬೀಜಮಂತ್ರದಿಂದ ಪೂಜಿಸಬೇಕು.

೧೦೭. ಅದರ ಮುಂದಿನಪದಕದಲ್ಲಿ ಭಲ್ಲಾಟನೆಂಬ ದೇವತೆಯನ್ನು ಆವಾಹಿಸುವ ಮುನ್ನ ಕೆಂಪುಬಣ್ಣದದೇಹವುಳ್ಳವನೂ, ಹಳದಿಯವಸ್ತ್ರವನ್ನು ಧರಿಸಿದವನೂ ಅಜವಾಹನನೂ,ಹಾರಕೇಯೂರಾದಿ ಆಭರಣಾಲಂಕೃತನೂ ಆಗಿರುವನೆಂದು ಧ್ಯಾನಿಸಿ, ವಹ್ನಿಬೀಜಮಂತ್ರದಿಂದ ಪೂಜಿಸಬೇಕು. ಮತ್ತೆ ವಾಯುಬೀಜಮಂತ್ರದಿಂದ ಮಂದಾರ ಮುಂತಾದ ಪುಷ್ಪಗಳನ್ನು ಪೂಜಿಸಬೇಕು.

೧೦೮. ಅದರ ಮುಂದಿನಮನೆಯಲ್ಲಿ (ಪದಕದಲ್ಲಿ) ದಿತಿಯನ್ನು ಕೆಂಪುಬಣ್ಣದ ದೇಹವುಳ್ಳವಳೂ, ಸರ್ವಾಭರಣವನ್ನು ಧರಿಸಿದವಳೂ, ಕೆಂಪುಕಮಲದ ಪೀಠದಲ್ಲಿ ಕುಳಿತಿರುವವಳೂ ಆಗಿರುವಳೆಂದು ಧ್ಯಾನಿಸಿ 'ಮಾನಾರ್ಯ' ಎಂಬ ಮಂತ್ರದಿಂದ ಪೂಜಿಸಬೇಕು.

೧೦೯. 'ಮಾನೋತ್ವಾ' ಎಂಬ ಮಂತ್ರಕ್ಕೆ ಭಾರ್ಗವನೇ ಋಷಿ, ಪಂಕ್ತಿ ಎಂಬುದೇ ಛಂದಸ್ಸು, ಪೃಥ್ವಿಯೇ ದೇವತೆ, ದಿತಿಯಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

**ಅದಿತಿಂ ಪೀತವರ್ಣಾಂ ಸಿಂಹಾರೂಢಾಂ ಪೀತಾಂಬರಧರಾಂ ಧ್ಯಾತ್ವಾ ।**
**ಹಿರಣ್ಯವರ್ಣ ಇತಿಮಂತ್ರಸ್ಯ ಜನಾರ್ದನಋಷಿರ್ಬೃಹತೀಛಂದಃ ॥**
**ಸೋಮೋದೇವತಾ ಅದಿತಿಪ್ರೀತಯೇ ವಿನಿಯೋಗಃ ॥ ೧೧೦ ॥**

**ಏವಂ ಯಥಾವಿಧಾಯಾಥ ಹೋಮಂ ಕುರ್ಯಾದ್ಯಥಾವಿಧಿ ।**
**ಹೋಮಾಂತೇ ದಕ್ಷಿಣಾಂ ದದ್ಯಾತ್ಕಾಂಚನಂ ಹೇಮಸಂಯುತಂ ॥ ೧೧೧ ॥**

**ತಡಾಗಯಾಗಪಕ್ಷೇ ತು ಸುವರ್ಣಂ ಚಾರ್ಧಮೇವ ವಾ ॥ ೧೧೨ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ**
**ದಶಮೋಽಧ್ಯಾಯಃ.**



---

೧೧೦. ಇದರ ಮುಂದಿನಪದಕದಲ್ಲಿ ಹಳದಿಬಣ್ಣದ ದೇಹವುಳ್ಳವಳೂ, ಸಿಂಹವಾಹಿನಿಯೂ, ಹಳದಿಯವಸ್ತ್ರವನ್ನು ಧರಿಸಿದವಳೂ ಆದ, ಅದಿತಿ ಎಂಬ ದೇವತೆಯನ್ನು ಧ್ಯಾನಿಸಬೇಕು. 'ಹಿರಣ್ಯವರ್ಣ' ಎಂಬ ಮಂತ್ರಕ್ಕೆ ಜನಾರ್ದನನು ಋಷಿ, ಬೃಹತೀ ಎಂಬುದು ಛಂದಸ್ಸು, ಸೋಮನೇ ದೇವತೆ, ಅದಿತಿಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು

೧೧೧. ಈ ರೀತಿಯಾಗಿ ಪೂಜಿಸಿದಮೇಲೆ, ವಿಧಾಯಕವಾಗಿರುವ ಕ್ರಮವನ್ನು ಅತಿಕ್ರಮಿಸದೆ ವಿಧಿಪ್ರಕಾರ ಹೋಮವನ್ನು ಮಾಡಬೇಕು. ಹೋಮದ ಕೊನೆಯಲ್ಲಿ ಚಿನ್ನ ಸಮೇತವಾದ ಕಾಂಚನವನ್ನು ದಕ್ಷಿಣೆಕೊಡಬೇಕು.

೧೧೨. ತಡಾಗಪ್ರತಿಷ್ಠಾ ಮುಂತಾದ ಪೂಜಾಸಂದರ್ಭದಲ್ಲಿ ಅರ್ಧ ಸುವರ್ಣ ನಾಣ್ಯವನ್ನಾದರೂ ದಕ್ಷಿಣೆಕೊಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೇ ಭಾಗದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.

